# ಶ್ರೀ ಮನ್ಮಹಾಭಾರತ ಕಾವ್ಯ

## (ಆದಿಪರ್ವ ಮತ್ತು ಸಭಾಪರ್ವ)



ರಚನಕಾರರು:ಲಕ್ಷ್ಮಣ.ವಿರುಪಾಕ್ಷ.ಜೋಶಿ,ಧಾರವಾಡ.೧೯೫

ಈ ಹೊತ್ತಿಗೆಯು
ತಿರುಮಲ ತಿರುಪತಿ ದೇವಸ್ಥಾನದವರ
"ಧಾರ್ಮಿಕ ಕೃತಿಗಳಿಗಾಗಿ ಸಹಾಯ ಧನ
ಎಂಬ ಯೋಜನೆಯ ಮೇರೆಗೆ
ಅವರು ನೀಡಿರುವ ಸಹಾಯ ಧನದಿಂದ
ಪ್ರಕಟಿಸಲ್ಪಟ್ಟಿದೆ



"THIS BOOK IS PUBLISHED
WITH
THE FINANCIAL ASSISTANCE OF
TIRUMALA TIRUPATI DEVASTHANAMS
UNDER THEIR SCHEME
AID TO
PUBLISH RELIGIOUS BOOKS"

# ಶ್ರೀಮನ್ಮಹಾಭಾರತ ಕಾವ್ಯ

## ( ಆದಿಪರ್ವ ಮತ್ತು ಸಭಾಪರ್ವ )

( ಸಂಪುಟ–೧ )

ರಚಿಸಿದವರು :

**ಲಕ್ಷ್ಮಣ ವಿರೂಪಾಕ್ಷ ಜೋಶಿ**

ಪ್ರಕಾಶಕರು :

**ಶ್ರೀ ಲಕ್ಷ್ಮಣ ವಿರೂಪಾಕ್ಷ ಜೋಶಿ**

ಶ್ರೀರಾಮ ಪ್ರಕಾಶನ ಧಾರವಾಡ

**ಧಾರವಾಡ**

**೧೯೭೫**

**ಶ್ರೀಮನ್ಮಹಾಭಾರತ ಕಾವ್ಯ**

( ಆದಿಪರ್ವ ಮತ್ತು ಸಭಾಪರ್ವ )

( ಸಂಪುಟ-೧ )

ರಚಿಸಿದವರು : **ಲಕ್ಷ್ಮಣ ವಿರೂಪಾಕ್ಷ ಜೋಶಿ**
ಜೋಶಿ ಕಂಪೌಂಡ, ಮಾಳಮಡ್ಡಿ
ಧಾರವಾಡ-೫೮೦೦೦೭

ಪ್ರಕಾಶಕರು : **ಲಕ್ಷ್ಮಣ ವಿರೂಪಾಕ್ಷ ಜೋಶಿ**
ಶ್ರೀರಾಮ ಪ್ರಕಾಶನ, ಧಾರವಾಡ-೫೮೦೦೦೭



ಪ್ರಥಮ ಮುದ್ರಣ : ನವಂಬರ ೧೯೯೫

ಪ್ರತಿಗಳು : ೧೦೦೦

ಮುದ್ರಕರು : **ಶ್ರೀ ಎಸ್. ಟಿ. ತಡಕೋಡ**
ರಾಜಶ್ರೀ ಪ್ರಿಂಟಿಂಗ ಪ್ರೆಸ್, ತಡಕೋಡಗಲ್ಲಿ,
ಧಾರವಾಡ-೫೮೦೦೦೧

**ಬೆಲೆ : ರೂ॥ ೮೦/-**

'SHREMANMAHA BHARATHA KAVYA'

(Kannada Epic)

( ADI PARVA AND SABHAPARVA )

( Volume-1 )

Author : LAXMAN VIRUPAX JOSHI
Joshi compound, Malamaddi
DHARWAD-

Publisher : Srı Laxman Virupax Joshi
Shree Rama Prakashana,
Joshi compound Malamaddi
DHAWAD-580007

Printed by : Sri S. T. Tadkod
Rajshri Printing Press
Tadakod Galli, DHARWAD-580001

# ಮುನ್ನುಡಿ



## 'ಕುಮಾರವ್ಯಾಸ ಕುಮಾರ'ರಿಗೆ ಕುಶಲಮುಕ್ಕೆ

ತಮ್ಮ 'ಕಾವ್ಯರಾಮಾಯಣ'ದ ಮೂರು ಭಾಗಗಳ ಮಹಾಕಾವ್ಯದಿಂದ ಕನ್ನಡ ನಾಡು–ನುಡಿಗೆ ಮಹೋಪಕೃತಿ ಸಲ್ಲಿಸಿದ ಕವಿ ಲಕ್ಷ್ಮಣ ಜೋಶಿ ಅವರು ಈಗಾಗಲೆ ಕನ್ನಡ ವಾಚಕ ಲೋಕಕ್ಕೆ ಚಿರಪರಿಚಿತರು ಚಿ. ಸೌ. ಶ್ರೀಮತಿ ಜಯಲಕ್ಷ್ಮಿ ಇನಾಂದಾರ್ ಗಮಕ ವಿದುಷಿ ಈ ಮಹಾಕಾವ್ಯದ ಗಮಕ ವಾಚನದಿಂದ ಈ ಕಾವ್ಯರಾಮಾಯಣಕ್ಕೆ, ತತ್‌ಕರ್ತೃವಿಗೆ ಅಮೋಘ ಕೀರ್ತಿ, ಜನಪ್ರಿಯತೆಗಳನ್ನು ತಂದುಕೊಟ್ಟು ತಮ್ಮ ಘನತೆ, ವಿದ್ವತ್ತು, ಗಮಕ ಕಲಾವೈಖರಿಗಳನ್ನು ಹೆಚ್ಚಿಸಿಕೊಂಡಿದ್ದಾರೆ.

ಇಂದಿನ ಕಾವ್ಯಸಾಹಿತ್ಯದಲ್ಲಿ ನನ್ನ ವಿಶೇಷ ಮೆಚ್ಚುಗೆ ಈ ನೆಚ್ಚಿನ ಕವಿ, ತಮ್ಮದೇ ಆದ ಒಂದು ಅಪರೂಪದ ಮಾರ್ಗವನ್ನು ನಿರ್ಮಿಸಿಕೊಂಡಿದ್ದಾರೆ. ನವೋದಯ ನವ್ಯ, ಬಂಡಾಯಗಳ ಚೀಟಿ ಹಚ್ಚಿಕೊಂಡು ಪೇಟೆಯ ಸರಕಾಗಿ, ಸಮ್ಮೇಳನ ವೇದಿಕೆಗಳ ಪ್ರದರ್ಶನೀಯ ವಸ್ತುಗಳಾಗಿ ಮೆರೆದ ಕವಿಕಾವ್ಯ ಮಹಾಭಾರತದಲ್ಲಿ 'ತಿಣುಕಿದನು ಫಣಿರಾಯ', ಎಂದುಕೊಂಡು ಉಪನಿಷತ್‌ವಾಙ್ಮಯದ ಸರಳ ಪದ್ಯರೂಪೀ ಅನುವಾದಕ್ಕೆ ಕೈಕೊಂಡರು. ಅದರಿಂದಾಗಿ ಭಾರತೀಯ ಪ್ರಾಚೀನ ಮಹರ್ಷಿಗಳ ಮಹೋನ್ನತ ಮೌಲ್ಯಗಳನ್ನು ಆಧುನಿಕರಿಗೆ ಅರಿಕೆ ಮಾಡಿಕೊಟ್ಟರು. ಪೂಜ್ಯ ಶ್ರೀ ಶಂಕರಾಚಾರ್ಯರ ಕೆಲವು ಗೇಯ ಭಕ್ತಿಪರ ಗೀತೆಗಳನ್ನು ಕನ್ನಡದ ಛಂದೋಬಂಧಕ್ಕೆ ಚೆಂದವಾಗಿ ಸುಂದರವಾಗಿ ಅಳವಡಿಸಿದ್ದಾರೆ.

ಪ್ರಸ್ತುತದಲ್ಲಿ 'ಕುಮಾರವ್ಯಾಸಕುಮಾರ'ರಾಗಿ ಆತನ ಭಾರತ ಕಥಾಮಂಜರಿಯನ್ನು ತಮ್ಮದೇ ಆದ ಸರಳ ವಾಕ್‌ಚತುರ ಚೌಪದಿ ರೂಪದಲ್ಲಿ ಎರಕಹೊಯ್ದು 'ಕುಮಾರವ್ಯಾಸನ ಕಡಲನೀಸಿ, ಆತನ ಬೆಡಗು ಬಿನ್ನಾಣಗಳನ್ನು ಸರಳ ಕನ್ನಡಕ್ಕೆ ಸೋಸಿ, ಆತನ ರೂಪಕ ರಸಾಯನವನ್ನು, ಕಿರಿದಾದ ಪಿರಿದರ್ಥದ ನಿರೂಪಣ ಕಥನ ಕುತೂಹಲದ ಕೌತುಕಕಾರಿ ಕಥಾನಕವನ್ನ ತಿಳಿಯಾದ ಸುಲಿದ ಬಾಳೆಯ ಹಣ್ಣಿನಂತಹ ಸುಲಭ ಶೈಲಿಗೆ ಅಳವಡಿಸಿ ಅಮೋಘವಾದ ತಮ್ಮದೇ ಒಂದುಕೊಡುಗೆಯನ್ನು ಕನ್ನಡಕ್ಕೆ ನೀಡಿದ್ದಾರೆ.

ಮುದ್ರಣವು ರಾಯಲ್ ¼ ಆಕಾರದ ಎರಡು ಅಂಕಣದ ಒಂದೊಂದು ಪುಟದಲ್ಲಿ ಹದಿನಾರು ಪದ್ಯಗಳು ಅಂದವಾಗಿ ಮೂಡಿಬಂದು ವಿನ್ಯಾಸದ ಚೆಲುವಿನೊಂದಿಗೆ ಸುಲಭವಾಚನಕ್ಕೆ ಅನುಕೂಲವಾದ ಲಾಲಿತ್ಯವನ್ನು ಒದಗಿಸುತ್ತವೆ.

ಪ್ರಸ್ತುತ ಸಂಪುಟದಲ್ಲಿ ಆದಿಪರ್ವ ಸಭಾಪರ್ವಗಳ ಮೂರು ಸಾವಿರಕ್ಕೂ ಮಿಕ್ಕ ಪದ್ಯಗಳು ಅಡಕವಾಗಿವೆ. 'ಕುಮಾರವ್ಯಾಸನ ಕುಮಾರ'ನೆಂಬ ಬಿರುದು ಧರಿಸಿ ಕುಮಾರವ್ಯಾಸನ ಗಮಗಿನ ಗಂಡು ಧಾಟಿಯ ಜಾಡನ್ನೆ ಅನುಸರಿಸಿದರೂ ಮೂಲದಲ್ಲಿ ಕುಮಾರವ್ಯಾಸನು ಸಂಕ್ಷಿಪ್ತಗೊಳಿಸಿದ ಆದಿಪರ್ವದ ಕಲ್ಮಾಷಪಾದ ರಾಜನ ಕಥೆಯನ್ನಾಗಲಿ ಖಾಂಡವದಹನದ ಕಥೆಯನ್ನಾಗಲಿ ಮೂಲಮಹಾಭಾರತದ ಕಥಾನಕವನ್ನು ನೋಡಿ ಅದರಂತೆಯೆ ಚಿತ್ರಿಸಿ ಕುಮಾರವ್ಯಾಸ ಸಂಗ್ರಾಹಕತೆಯನ್ನು ಸವಿಸ್ತರಿಸಿದ್ದಾರೆ. ಮುಂದೆಯೂ ನಳದಮಯಂತಿಯ ಕಥೆಯಂತಹ ಉಪಕಥೆಗಳು ಕುಮಾರವ್ಯಾಸನು ಬರಿ ಕೆಲವೆ ಸಾಲುಗಳಲ್ಲಿ ಸಂಕ್ಷೇಪಿಸಿದ್ದರೂ ಈ ಕುಮಾರವ್ಯಾಸರ ಕುಮಾರರು ಅದನ್ನು ವಿಸ್ತರಿಸಿ ಹೇಳಿ ತಮ್ಮ ಸ್ವಂತಿಕೆಯನ್ನು ಹೆಚ್ಚಿಸಿಕೊಂಡಿದ್ದಾರೆ.

'ಕುಮಾರವ್ಯಾಸನ ಕುಮಾರ' ಎಂಬ ಕಾವ್ಯನಾಮವನ್ನು ತಾಳಿರುವಲ್ಲಿ ಕವಿ ಲಕ್ಷ್ಮಣ ಜೋಶಿಯವರು ಈ ಗದುಗಿನ ವೀರನಾರಾಯಣನ ಕಿಂಕರನ ಕೈಂಕರ್ಯದಲ್ಲಿಯೆ ತನ್ನ ಸಾರ್ಥಕ್ಯವನ್ನು ವ್ಯಕ್ತಪಡಿಸಿದ್ದಾರೆ. ಮೊದಲಿನಿಂದಲೂ ಮಿತ್ರ ಲಕ್ಷ್ಮಣ ಜೋಶಿಯವರು ಕುಮಾರವ್ಯಾಸನ ಕಾವ್ಯಕಮಲಗರ್ಭದ ಭೃಂಗವಾಗಿ ಆತನ ರಸಾಸ್ವಾದನೆಯನ್ನೆ ಉಪಾಸನೆ ಮಾಡಿದವರು. ತುಳಸಿಯ ಉದಕದಂತೆ ಅದನ್ನು ತೀರ್ಥರೂಪವಾಗಿ ಸ್ವೀಕರಿಸಿ, ಸೇವನೆ ಮಾಡಿ ಕಣ್ಣೊತ್ತಿಕೊಂಡಿರುವವರು ಈಗ ಈ 'ಮಹಾಭಾರತ ಕಾವ್ಯದ್ವಾರಾ ತಮ್ಮ ಕುಮಾರವ್ಯಾಸನ ಭಕ್ತಿಯನ್ನು, ಕುಮಾರವ್ಯಾಸನ ಕಾವ್ಯ ಪ್ರೇಮವನ್ನು ತೋರ್ಪಡಿಸುತ್ತಲೆ ತಮ್ಮ ಸ್ವಂತಿಕೆಯನ್ನು ಸ್ವಕಲ್ಪನಾವಿಲಾಸವನ್ನು ಅಭಿವ್ಯಕ್ತಿಸಿದ್ದಾರೆ.

ಶ್ರೀವರಸ ನರಯಣನ ಚರಣವನು ಎರಗುತಲಿ
ಪಾವನನ ನರನನ್ನು ವಾಗ್ದೇವಿ ಸರಸತಿಯ
ಘನಮಹಿಮ ವ್ಯಾಸಮುನಿ ಶ್ರೇಷ್ಠನನು ನಮಿಸುವೆನು
ಮಂಗಲವ ಸಿರಿಜಯವ ಈಯುತಲಿ ರಕ್ಷಿಸಲಿ ||

ಎಂಬ ಪ್ರಾಂಜಲ ಪ್ರಾರ್ಥನೆಯೊಂದಿಗೆ ಕಾವ್ಯದ ನಾಂದಿಗೆ ಮೊದಲಾಗುತ್ತದೆ. 'ಶ್ರೀವರಸ ನರಯಣ'ನ ಎಂಬ ಪ್ರಥಮ ಪದ ಪ್ರಯೋಗದಲ್ಲಿಯೆ ಕುಮಾರವ್ಯಾಸನ ಪ್ರಭಾವ ಕಂಡು ಬರುತ್ತದೆ.

ಆದಿಪರ್ವದಲ್ಲಿಯೆ ಆಗಲಿ ಮುಂದಿನ ಪರ್ವಗಳಲ್ಲಿಯೆ ಆಗಲಿ ಸಂಧಿಗಳು ಕಥಾವಿರಾಮವನ್ನು ಕಲ್ಪಿಸದೆ ಉದ್ದಕ್ಕೂ ಪದ್ಯದಿಂದ ಸದ್ಯಕ್ಕೆ ಭಾರತಕಥೆ ವಿಸ್ತರಿಸುತ್ತ ಹೋಗುತ್ತದೆ. ಇದರ ಇನ್ನೊಂದು ವೈಶಿಷ್ಟ್ಯವೆಂದ ಈ ಕಾವ್ಯ ಚೌಪದಿಯ ಸಾಲುಗಳು ಆದಿಪ್ರಾಸವನ್ನಾಗಲಿ ಅಂತ್ಯಪ್ರಾಸವನ್ನಾಗಲಿ ಹೊಂದಿರದೆ ಮುಕ್ತವಾಗಿ ಮುಂದುವರಿದಿವೆ. ಪದ್ಯಗಳ ಮಧ್ಯೆ ಅಲ್ಲಲ್ಲಿ ಬರುವ ಸುಂದರ ಶೀರ್ಷಿಕೆಗಳಿಂದಲೆ ಕಥಾವಸ್ತುವಿನ ಜಾಡನ್ನು ಗುರುತಿಸಬಹುದಾಗಿದೆ. ಸೃಷ್ಟಿಸ್ಥಿತಿಲಯನಿರೂಪಣೆ, ಸೂರ್ಯ-ಚಂದ್ರವಂಶಗಳ ಉತ್ಪತ್ತಿ, ಜಾಹ್ನವಿಯ ಶಾಪದಕಥೆ, ಶಂತನು ಮತ್ಸ್ಯಗಂಧಿಯ ಪ್ರಣಯ ಪ್ರಕರಣಾದಿಗಳು ಶೀರ್ಷಿಕೆಗಳಿಂದ ಸೂಚಿತವಾಗಿ ವಾಚಕನಿಗೆ ಕಥೆಯ ಮೈಲುಗಲ್ಲುಗಳನ್ನು ಕೈಮಾಡಿ ತೋರಿಸುತ್ತವೆ.

ಇದರಿಂದ ಕಥಾಸೂತ್ರವನ್ನು ಅನುಸರಿಸುವುದು ತುಂಬ ಸುಲಭ. ಕೌರವ ಪಾಂಡವರ ಜನನ, ಶ್ರೀಕೃಷ್ಣನ ಜನನ, ಕೌರವ-ಪಾಂಡವರ ದಾಯಾದಿಮತ್ಸರದ ವಿಷವೃಕ್ಷ ಬೆಳೆದು ಹಬ್ಬುವ ರೀತಿ ಮುಂದೆ ಅದಕ್ಕೆ ಶಕುನಿ, ಕರ್ಣ, ದುರ್ಯೋಧನ, ದುಶ್ಶಾಸನಾದಿಗಳಿಂದ ನೀರೆರೆಯುವಿಕೆ, ಪಾಂಡವರ ಅರಗಿನಮನೆಯ ಹುನ್ನಾರ, ಅವರ ವನವಾಸ, ಬಕಾಸುರಸಂಹಾರ, ದ್ರೌಪದೀ ಸ್ವಯಂವರಗಳಂತಹ ಘಟ್ಟಗಳು ಕಾವ್ಯದ ಘನತೆಯ ಸ್ಥಾನಗಳಾಗಿ ವಿಜೃಂಭಿಸುತ್ತವೆ. ಗುರುದ್ರೋಣಾಚಾರ್ಯರ ಧನುವಿದ್ಯಾಬೋಧೆ, ಏಕಲವ್ಯನ ಸಾಧನೆ, ಗುರುಭಕ್ತಿ, ತ್ಯಾಗದ ಸನ್ನಿವೇಶಗಳು ರಸವತ್ತಾಗಿ ಬಂದಿವೆ. ಬೃಹಸ್ಪತಿನೀತಿ, ಶುಕ್ರನೀತಿಗಳಿಗೆ ಹೊರತಾದ ಕಣಿಕನ ದುಷ್ಟ ಉಪದೇಶ ದಾಯಾದಿ ವಿಷವೃಕ್ಷಕ್ಕೆ ಹೇಗೆ ಗೊಬ್ಬರವಾಯಿತೆಂಬ ಅಂಶವನ್ನು ಪ್ರಶಂಸನೀಯವಾಗಿ ನಿರೂಪಿಸಿದ್ದಾರೆ :

ಧೃತರಾಷ್ಟ್ರ ಭೂಪತಿಯೆ ರಾಜನಿಗೆ ಹಿತವಿರುವ
ಅತಿಕಠಿಣ ಅತಿಕ್ರೂರ ನಿರ್ದಯೆಯ ನೀತಿಯನು
ನಿನಗೊರೆವೆ—

ಎನ್ನುತ್ತ ಕಣಿಕನು ಧೃತರಾಷ್ಟ್ರನ ಮನದಲ್ಲಿ ಬಿತ್ತುವ ಕಹಿಬೀಜಗಳು, ಅದರ ಫಲವಾಗಿ ಪಾಂಡವರು ಅನುಭವಿಸುವ ಕಷ್ಟಪರಂಪರೆ ಕರ್ಣಸಹ್ಯತೆಯನ್ನು ಮೀರುತ್ತವೆ. ಆದರೆ ಆಗುವುದೆಲ್ಲ ಪಾಂಡವರ ಒಳಿತಿಗೇ ಎನ್ನುವಂತೆ ವನವಾಸವನುಭವಿಸುವ ಪಾಂಡವರು

ದ್ವಿಜನೋರ್ವನ ಮೂಲಕ ದ್ರುಪದಪುತ್ರಿಯ ಸ್ವಯಂವರದ ಸುದ್ದಿಯನ್ನು ತಿಳಿದು ಪಾಂಚಾಲ ಪಟ್ಟಣಕ್ಕೆ ಪಾದಬೆಳೆಸುತ್ತಾರೆ. ಮಾರ್ಗ ಮಧ್ಯದಲ್ಲಿ ಗಂಧರ್ವರಾಜನನ್ನು ಗೆಲಿದು, ಆತನು ಇವರ ನಿಜಸ್ಥಿತಿಯನರಿತು ಪಾಂಡವರಿಗನುಕೂಲಮಿತ್ರನಾಗಿ ಸಹಾಯಕನಾಗಿ ನಡೆಯುತ್ತಾನೆ.

ಮುಂದೆ ಬರುವ ಕಲ್ಮಾಷಪಾದ ರಾಜನ ವೃತ್ತಾಂತವು ಕುಮಾರವ್ಯಾಸನ ನಿರೂಪಣೆಯಿಂದ ಬೇರೆಯಾಗಿ ಮೂಲದ ಕಥೆಯ ಜಾಡುಹಿಡಿದು ವಿಸ್ತರಿಸಲ್ಪಟ್ಟಿರುವದು ಕವಿಯ ಸ್ವಂತಿಕೆಗೆ ಪುಷ್ಟಿ ನೀಡುತ್ತದೆ. ದ್ರೌಪದೀಸ್ವಯಂವರದ ವರ್ಣನೆಯು ಕುಮಾರವ್ಯಾಸನ ಅನುಕರಣೆಯು ಆಗಿಯೂ ಅದ್ವಿತೀಯವಾಗಿ ಸ್ವಂತದ ರಚನೆಗಳಿಂದಲೆ ವಿಜೃಂಭಿಸಿದೆ 'ಆಸೆಯ ಮೀಸೆಯ ತಿರುಹುತ' ಹಕಾಂಭೋಜಕೋಸಲದ ಅಧಿಪತಿಯ ಕೌಶಲ, ಮಾಗಧನ ಮಾನಭಂಗ ಸ್ತ್ರೀಯರ ನಗೆಗೆಡುವ ಅಪಹಾಸ್ಯ ವಿಪ್ರರ ಸರದಿ ಬಂದಾಗ ಕುಮಾರವ್ಯಾಸನಂತೆಯೆ ತಮ್ಮ ಪಾಂಡಿತ್ಯವನ್ನು ವೇದ-ತರ್ಕಗಳಲ್ಲಿ ಇಲ್ಲವಾದರೆ ತರತರದ ವಾದಗಳಲ್ಲಿ ನೋಳ್ಪುದೆಂಬ ಸಂದರ್ಭವನ್ನು ಅನುಸರಿಸಿದರೂ ತಿಂಡಿ ತಿನಿಸುಗಳಲ್ಲಿ ಶ್ರೀಖಂಡ ಚಕ್ಕುಲಿ, ಬಾದಾಮಿಹಾಲು ಹಪ್ಪಳ ಸಂಡಿಗೆಗಳ ಖಾದ್ಯ-ಪೇಯಗಳ ನೈಪುಣ್ಯ ನಿರೂಪಿತವಾಗಿದೆ. ದ್ರೌಪದೀ ಸ್ವಯಂವರ, ಸುಭದ್ರಾಪಹರಣ-ತತ್ಪೂರ್ವದ ಉಲೂಪಿ-ಚಿತ್ರಾಗದೆಯರ ವಿವಾಹ ಪುತ್ರೋತ್ಸವ ಸುಭದ್ರೆಯನು ಮೋಹಿಸಿದ ಸನ್ಯಾಸಿ ವೇಷದ ಅರ್ಜುನನ್ನು ಶ್ರೀ ಕೃಷ್ಣನು ಅಪಹಾಸ್ಯಕ್ಕೆ ಗುರಿಪಡಿಸಿ ವಿನೋದಗೈಯುವ ಪದ್ಯಗಳು ಸೊಗಸಾಗಿಬಂದಿವೆ. ಒಂದನ್ನಿಲ್ಲಿ ನೋಡಬಹುದು :

ಮೂಲೋಕ ಗೆಲ್ಲುವಾ ವೀರ ನೀ ಸನ್ಯಾಸಿ
ಮನ್ಮಥನ ಬಾಣಕ್ಕೆ ಸಿಲುಕುವುದು ಯೋಗ್ಯವೆ ?

ಎನ್ನುತ್ತ ಶ್ರೀಕೃಷ್ಣನು—

ನಿನ್ನಯಾ ಇಂಗಿತವನರಿತಿಹೆನು ಕಲಿಪಾರ್ಥ
ಎನ್ನಯಾ ಸೋದರಿಯು ಸುಭದ್ರೆ ಇವಳೆಂದು ನುಡಿದಾಗ ಪಾರ್ಥನಾಚಿಕೆ

ಯಿಂದ ಮುಖತಗ್ಗಿಸುತ್ತಾನೆ. ಆಗ ಪಾರ್ಥನು ನಿಜಸಂಗತಿಯನ್ನು ಶ್ರೀಕೃಷ್ಣನ ಮುಂದೆ ಅರುಹಿದಾಗ ಶ್ರೀಕೃಷ್ಣ ಇದು ತನಗೇನೊ ಆನಂದ ಆದರೆ ಸ್ವಯಂವರವಿಧಿಸಿಹುದು 'ಆದೊಡೆಯು ಸ್ತ್ರೀಯರ ಹೃದಯವದು ತಿಳಿಯದಿದೆ' ಎಂದು ನುಡಿದ ನಯವಾದ ಹರಿತದ ಹಾಸ್ಯ ಈ ಕವಿಯ ವಿನೋದ ಜಾಣ್ಮೆಗೆ ಉದಾಹರಣೆ.

ಖಾಂಡವವನ ದಹನ ಪ್ರಸಂಗದೊಂದಿಗೆ ಮುಕ್ತಾಯವಾಗುವ ಆದಿಪರ್ವದ ಅಂತಿಮ ಉಪಕಥೆ ತುಂಬ ನಿಚ್ಚಳವಾಗಿ, ಮಾರ್ಮಿಕವಾಗಿ ನಿರೂಪಿಸಲ್ಪಟ್ಟಿದೆ. ಕುಮಾರವ್ಯಾಸನಲ್ಲಿ ಧ್ವನಿಪೂರ್ವಕವಾಗಿ, ಸಾಂಕೇತಿಕವಾಗಿ ಬಂದ ಕಥೆ ಇಲ್ಲಿ ವಿವರವಾಗಿ ವಿಶದವಾಗಿಬಂದಿದೆ.

ಸಭಾಪರ್ವವು ಸುರಶಿಲ್ಪಿ ಮಯದನುಜನು ಇಂದ್ರ ಸಭೆಯನ್ನುನಾಚಿಸುವಂಥ ರಾಜಸೂಯಾಧ್ವರದ ಸಭಾಮಂಟಪವನ್ನು ನಿರ್ಮಿಸಿದುದರ ವರ್ಣನೆ ಕವಿ ಲಕ್ಷ್ಮ ಜೋಶಿಯವರ ನಿರೂಪಣ ಕೌಶಲಕ್ಕೆ ನಿದರ್ಶನವಾಗಿದೆ. ಶ್ರೀಕೃಷ್ಣನನ್ನು ಧೃಷ್ಟದ್ಯುಮ್ನನಿಗೆ ಸರಿ ಎಂದು ಭಾವಿಸುವ ದ್ರೌಪದಿ 'ಎಮ್ಮನ್ನು ರಕ್ಷಿಸುವ ಭಾರವದು ನಿನ್ನದಿದೆ' ಎಂದು ನುಡಿದಾಗ ಶ್ರೀಕೃಷ್ಣನು ದ್ರೌಪದಿಯನೆಬ್ಬಿಸುತ 'ಮಮಪ್ರಾಣ ಪಾಂಡವರ ರಕ್ಷಿಸುವ ಭಾರವದು ನನ್ನದಿದೆ' ಎಂದು ನೀಡುವ ವಚನ ಹೃದಯಸ್ಪರ್ಶಿಯಾಗಿದೆ. 'ಭಂಟರಾಂ ಭಕ್ತರ್ಗೆ' ಎಂದು ನುಡಿಯುವ ಕುಮಾರವ್ಯಾಸನ ಕೃಷ್ಣನ ಮಾತು ನೆನಪಿಗೆಬರುತ್ತದೆ.

ರಾಜಸೂಯಾಧ್ವರವ ಸಂಕಲ್ಪಿಸಿದ ಪಾಂಡವರಿಗೆ ಶ್ರೀಕೃಷ್ಣನು ಬೆನ್ನಿಗೆ [illegible] ನಿಂತು ಅದನ್ನು ನೆರವೇರಿಸಿಕೊಡಲು ಮೊದಲು ಜರಾಸಂಧನ ವಧೆಗೈದು ಅಧ್ವರದ ಪ್ರಥಮ ವಿಘ್ನವನ್ನು ನಿವಾರಿಸುತ್ತಾನೆ. ಮುರಹರ ಮಾರುತಜರು, ಅರ್ಜುನ ಮೂವರೂ ಮಾಗಧನ ಪಟ್ಟಣಕೆ ದಾಳಿಯಿಟ್ಟು ಆತನನ್ನು ಕೆಣಕಿ, ಭೀಮನಿಂದ ವಧೆಗೈಸಿ ಶ್ರೀಕೃಷ್ಣನು ಪಾಂಡವರಿಗೆ ಪ್ರಥಮ ದಿಗ್ವಿಜಯವನ್ನುಂಟು

ಮಾಡುತ್ತಾನೆ. ಜರಾಸಂಧವಧೆಯ ಪ್ರಸಂಗವು ಇಲ್ಲಿ ಮೂಲಕ್ಕೆ ಎಂದು ಕುಮಾರವ್ಯಾಸನಂತೆ ಯಥಾವತ್ತಾಗಿ ಬಂದಿದೆ, ಶ್ರೀಕೃಷ್ಣನ ಅಗ್ರಪೂಜೆ, ಶಿಶುಪಾಲನ ಬೈಗುಳಗಳ ನೂರನ್ನು ಸಹಿಸಿ ನೂರಾಒಂದನೆಯ ಬೈಗುಳಕ್ಕೆ ಶಿಶುಪಾಲನ ತಲೆಯನ್ನು ಸುದರ್ಶನ ಚಕ್ರದಿಂದ ಕತ್ತರಿಸುವುದು, ಭೀಷ್ಮನಿಂದ ಶ್ರೀಕೃಷ್ಣನ ಮಹಿಮಾಕಥನ ಇವೆಲ್ಲವೂ ಕೌತುಕಕಾರಿಯಾಗಿ ಬಂದಿವೆ.

ಇಲ್ಲಿಯ ದ್ಯೂತಪರ್ವ ಸಭಾಪರ್ವದ ಶಿಖರಪ್ರಾಯವಾದ ಕಾವ್ಯಮಯ, ರಸಮಯ, ನಾಟ್ಯಮಯ ಭಾಗವಾಗಿದೆ. ದ್ರೌಪದಿಯ ವಸ್ತ್ರಾಪಹರಣ ಪ್ರಸಂಗ, ದ್ರೌಪದಿಯ ಶ್ರೀಕೃಷ್ಣ ಸ್ತುತಿ, ಆಕೆಯ ಆರ್ತಭಾವದ ಪ್ರಾರ್ಥನೆ ಈ ಪ್ರಸಂಗದಲ್ಲಿ ಸೂಸಿರುವ ಭಕ್ತಿಕರುಣೆಗಳ ಕರುಳನ್ನು ಮಿಡಿಯುವಂತಹವು.

'ಭೀಮಾರ್ಜುನರೀರ್ವರೂ ಕೌರವರು ನೂರ್ವರಾ ಶಿರಗಳನು ತರಿಯುವರು ಎಂದು ಭೀಷ್ಮನಾಡುವ ಮಾತು ಬಹಳ ಮಾರ್ಮಿಕ ಕವಿ ಲಕ್ಷ್ಮಣ ಜೋಶಿಯವರ ಕಾವ್ಯಪ್ರತಿಭೆಗಿದು ಪ್ರಥಮ ನಿದರ್ಶನ.

'ಧರ್ಮವನು ಸತ್ಯವನು ಮೀರದಲೆ ತೊರೆಯದಲೆ । ಸುಮ್ಮನೇ ಧರ್ಮಜನು ಸಹಿಸುತಲಿ ಕುಳಿತಿಹನು ।...ದ್ರೌಪದಿಯ ಈ ಬಿಡುವುದೆಂದಿಹನು ಗಾಂಗೇಯ ! ಎಂಬ ಗಾಂಗೇಯೋಪದೇಶ ತುಂಬ ಮನಂಬಗುವಂತೆ ಬಂದಿದೆ, ಆದರೆ ಗಾಂಗೇಯನ ಮಾತಿಗೆ ಕೌರವನು ಕೆಣಕಿ ಕಿಡಿ ನುಡಿಯುವ ಮಾತು ಗಮನಿಸಿ :

"ಮುಪ್ಪಿನಲಿ ಮುದಿಹುಚ್ಚು ಮರುಳತನ ಸೇರಿಹುದು । ದ್ಯೂತದಲಿ ಧರ್ಮಜನು ದ್ರೌಪದಿಯ ಸೋತಿಹನು । ಇವಳೆಮ್ಮ ಅರಮನೆಯ ಕಸಗುಡಿವ ತೊತ್ತಿಹಳು । ನೀವುಗಳು ಸುಮ್ಮನಿರಿ ಎಂದಿಹನು ಕೌರವನು ಈ ಕೊಳಕುಮಾತುಗಳು ಕೌರವನ ದುಷ್ಟತನಕ್ಕೆ ಪುಷ್ಟಿನೀಡುತ್ತವೆ.

ಕೊನೆಯ ಆಟದಲ್ಲಿ ಧರ್ಮ ದ್ರೌಪದಿಯನ್ನೆ ಪಣ ಹಚ್ಚುವುದು, ದ್ರೌಪದಿಯ ಮಾನಭಂಗ, ಶ್ರೀ ಕೃಷ್ಣಸ್ತುತಿ, ದ್ರೌಪದಿಗೆ ವಸ್ತ್ರದಾನ ಇವೆಲ್ಲ ಕುಮಾರವ್ಯಾಸನ ಪ್ರತಿಭೆ. ರಸೋತ್ಕರ್ಷಕ್ಕೆ ಅಷ್ಟೊಂದು ನಾಟಿಯೆನಿಸದಿದ್ದರೂ ತಮ್ಮ ಸರಳತೆಯಿಂದಾಗಿ ಈ ಹೃದಯ ಸ್ಪರ್ಶಿ ಪದ್ಯಗಳು ಕವಿ ಲಕ್ಷ್ಮಣ ಜೋಶಿಯವರ ಪ್ರಶಂಸನೀಯ ಪ್ರಯತ್ನವೆಂಬ ಮಾತನ್ನು ದೃಢಪಡಿಸುತ್ತವೆ. ಕೌರವರ ಸಭೆಯಲ್ಲಿದ್ದ ಗುರುಹಿರಿಯರೆಲ್ಲಾ ನಿರ್ಜೀವ ಸಾಕ್ಷಿಗಳಾಗಿರುವ ಚಿತ್ರಣ ಕುಮಾರವ್ಯಾಸನ ಕುರಪತ್ರದ ಸಾಲುಗಳು ಶಬ್ದ ಚಿತ್ರ ಬರೆಯುತ್ತವೆ. ನಮ್ಮ ಕವಿ ಲಕ್ಷ್ಮಣ ಜೋಶಿಯವರ ಬಾಲ್‌ಪೆನ್ನಿನ ಈ ಚಿತ್ರಣ ಯೋಗ್ಯ ಅನುಸರಣೆ ಆಗಿದೆ.

ಹೀಗೆ ಶ್ರೀಕೃಷ್ಣನ ಅಕ್ಷಯ ವಸ್ತ್ರದಾನದಿಂದ ಭಕ್ತಿ-ಕರುಣೆಗಳ ಶಿಖರಪ್ರಾಯದ ಸನ್ನಿವೇಶ, ಸಭಾಪರ್ವದ ಪ್ರತಿಭೆಯ ಪ್ರಭಾಪರ್ವವೆನಿಸುತ್ತದೆ. ಕವಿ ಲಕ್ಷ್ಮಣ ಜೋಶಿ ಅವರು ಸ್ತುತ್ಯಪ್ರ ಯತ್ನಮಾಡಿದ್ದಾರೆ.

ಒಮ್ಮೊಮ್ಮೆ ಇನ್ನಷ್ಟು ಬಲಗೊಂಡು ಬಣ್ಣಗೊಂಡು, ಕಣ್ಗೆ ಗಡ್ಡಮಾಗಿ ವರ್ಣನೆಗಳು ಬರಬೇಕಿತ್ತು ಜೋಶಿಯವರ ಈ ಕಾವ್ಯದಲ್ಲಿ ಎಂಬಅನಿಸಿಕೆ ಅಲ್ಲಲ್ಲಿ ಉಂಟಾದರ ಅದೇನು ಮಹಾಕಾವ್ಯಚ್ಯುತಿ ಎನಿಸಲಾರದೆಂದೆ ಹೇಳಬೇಕು. ಒಮ್ಮೆಲೇ ಒಂದಿಷ್ಟು ಅವಸರದ ಯತ್ನದಲ್ಲಿ ಅಲ್ಪಸ್ವಲ್ಪ ಎಡಹುವಿಗೆ ಕಂಡುಬರಬಹುದು. ಆದರೆ ಹತ್ತುಕಡ ಏಕಚಿತ್ತವನ್ನು, ಸಮಗ್ರಗಮನವನ್ನು ಪೂರೈಸಬೇಕಾದಾಗ ಇಂತಹ ದೋಷಗಳು ಕ್ಷಮ್ಯವೇ ಎನ್ನಬೇಕು. 'ನಡೆವರೆಡಹದೆ ಕುಳಿತವರೆಡಹುವರೆ ?' ಎಂದು ಕವಿ ರಾಘವಾಂಕನೇ ಪ್ರಶ್ನಿಸಿಲ್ಲವೆ ?

ಆಧುನಿಕ ಕಾವ್ಯಸಾಹಿತ್ಯದಲ್ಲಿ ಹೊಸಕನ್ನಡದ ಹೊಸ ಛಂದಸ್ಸಿನಲ್ಲಿ ಮಹಾಭಾರತವನ್ನು ಕಥನಮಾಡುವ ಕಾವ್ಯಯತ್ನಗಳು ಇನ್ನು ಒಬ್ಬಿಬ್ಬರು ಆಧುನಿಕ ಕವಿಗಳಿಂದ ನಡೆದಿರುವುದು ಸ್ವಾಗತಾರ್ಹವೇ ಸರಿ. ಕವಿ ಲಕ್ಷ್ಮಣ ಜೋಶಿ ಅವರಿಗೆ ನಮ್ಮ ಹಾರ್ದಿಕ ಅಭಿನಂದನೆಗಳು.

ಧಾರವಾಡ
೧೭-೧೦-೯೫

ಎನ್ಕೆ

# ಗ್ರಂಥಕಾರರ ನುಡಿ

ಶ್ರೀ ವೇದವ್ಯಾಸ ಮಹರ್ಷಿಗಳು ರಚಿಸಿದ ಶ್ರೀಮನ್ಮಹಾಭಾರತವು ವಿಶ್ವದ ಮಹಾಕಾವ್ಯಗಳ ಮೂಲೆಯಲ್ಲಿ ಒಂದಾಗಿದೆ. ಅದು ಧಾರ್ಮಿಕ, ಆಧ್ಯಾತ್ಮಿಕ, ಸಾಂಸ್ಕೃತಿಕ, ವ್ಯವಹಾರಿಕ, ರಾಜನೀತಿ, ಸಮಾಜ ಮೊದಲಾದ ಎಲ್ಲ ವಿಷಯಗಳನ್ನು ಒಳಗೊಂಡಿರುತ್ತದೆ. ಆದಕ್ಕೆ ಪಂಚಮವೇದ ಎಂದು ಕರೆಯುತ್ತಾರೆ. ಪ್ರಪಂಚದಲ್ಲಿ ಇರುವುದೆಲ್ಲವೂ ಅದರಲ್ಲಿದೆ. ವ್ಯಾಸರು ಹೇಳದೇ ಇದ್ದದ್ದು ಯಾವುದೂ ಇಲ್ಲ ಎನ್ನುತ್ತಾರೆ. ಅಂತೆಯೇ 'ವ್ಯಾಸೋಚ್ಛಿಷ್ಟಂ ಜಗತ್ಸರ್ವಂ' ಎಂಬ ಉಕ್ತಿಯೂ ಪ್ರಸಿದ್ಧವಿದೆ. ಮಹಾಭಾರತವು ಒಂದು ಇತಿಹಾಸ, ಕಥೆಯಾಗದೇ, ಅದು ದುಷ್ಟಶಕ್ತಿಯ ಮೇಲೆ ಶಿಷ್ಟಶಕ್ತಿಯ ಜಯ ಎಂಬುದರ ಸಂಕೇತವಾಗಿದೆ ದುಷ್ಟಶಕ್ತಿಗೆ ಮೊದಲಿಗೆ ಜಯ ಸುಖ ಎನಿಸಿದರೂ ಕೊನೆಯಲ್ಲಿ ದುಃಖಾಂತವಾಗಿ ಪರಿಣಮಿಸುತ್ತದೆ. ಕೌರವರು ಮೊದಲು ದುಷ್ಟ ಪ್ರವೃತ್ತಿಯಿಂದ ಸುಖವನ್ನು ಭೋಗಿಸಿದರೂ, ಪಾಂಡವರು ಶಿಷ್ಟ ಪ್ರವೃತ್ತಿಯಿಂದ ದುಃಖವನ್ನು ಅನುಭವಿಸಿದರೂ, ಕೊನೆಯಲ್ಲಿ ಧರ್ಮಕ್ಕೆ ಜಯ ಎಂಬಂತೆ ಎಲ್ಲ ಕಷ್ಟಗಳು ಪರಿಹಾರವಾಗಿ, ರಾಜ್ಯವನ್ನು ಪಡೆದು ಸುಖವನ್ನು ಭೋಗಿಸುತ್ತಾರೆ. ಎಂದಿಗೂ ಧರ್ಮಕ್ಕೆ ಜಯ, ಅಧರ್ಮಕ್ಕೆ ಅಪಜಯ, ಪುಣ್ಯಕ್ಕೆ ಸುಖ ಪಾಪಕ್ಕೆ ನಾಶ ಎಂದು ಮಹಾಭಾರತವು ಸಾರಿ ಹೇಳುತ್ತದೆ.

ಮಹಾಭಾರತದ ಕಥೆಯು ನಮ್ಮ ಇಂದಿನ ನಿತ್ಯ ಜೀವನಕ್ಕೆ ಬಹುಸಮೀಪವಾಗಿದೆ. ಅದರಲ್ಲಿಯ ಕೆಲವು ವರ್ಣನಾತ್ಮಕ ಅಲೌಕಿಕ ಘಟನೆಗಳನ್ನು ಬಿಟ್ಟರೆ, ಅದು ನಮ್ಮ ನಿಮ್ಮ ನಿತ್ಯ ಜೀವನದ ಕಥೆಯಾಗಿದೆ. ಅದು ಇಂದಿಗೂ ಪ್ರಸ್ತುತವಾಗಿದೆ. ಇಂದಿನ ಸಮಾಜದಲ್ಲಿ, ಎಲ್ಲ ಕಡೆಗಳಲ್ಲಿ, ಅಣ್ಣ ತಮ್ಮಂದಿರ ಜಗಳ, ಆಸ್ತಿ ಪಾಸ್ತಿಗಾಗಿ ಕಲಹ, ದ್ವೇಷ, ಬಂಧು ಬಾಂಧವರ ಕೊಲೆ, ಸ್ತ್ರೀಯರ ಮೇಲೆ ದೌರ್ಜನ್ಯ ಇಂಥಹ ದುಷ್ಕೃತ್ಯಗಳು ಇಂದಿಗೂ ಸಹ ನಡೆಯುತ್ತವೆ. ದಿನ ನಿತ್ಯ, ಪತ್ರಿಕೆಗಳಲ್ಲಿ, ಸ್ತ್ರೀಯರ ಅಪಹರಣ, ಮಾನಭಂಗ, ಕೊಲೆ, ಸುಲಿಗೆ ಮೊದಲಾದ ಕ್ರೂರ ಘಟನೆಗಳು ಜರುಗುತ್ತಿರುವದನ್ನು ಓದುತ್ತಿರುತ್ತೇವೆ. ದ್ರೌಪದಿಯಂತೆ ಕಷ್ಟಕ್ಕೊಳಗಾದ ಶೋಷಣೆಗೊಂಡ ಸಾವಿರಾರು ಸ್ತ್ರೀಯರು ನಮ್ಮಲ್ಲಿ ಇದ್ದಾರೆ. ದುರ್ಯೋಧನನಂಥ ದುಷ್ಟವೃತ್ತಿಯ ಜನರು ಸಾವಿರಾರು ಇದ್ದಾರೆ. ಇಂಥಹ ದುರ್ಯೋಧನರನ್ನು ಸನ್ಮಾರ್ಗಕ್ಕೆ ಒಯ್ಯಲು ಸಾವಿರಾರು ಶ್ರೀಕೃಷ್ಣ ಪರಮಾತ್ಮರೇ ಜನ್ಮತಾಳಿ ಬರಬೇಕಾಗುತ್ತದೆ. ಆದುದರಿಂದ ಇಂಥಹ ಮಹಾಭಾರತ ಗ್ರಂಥಗಳನ್ನು, ಕಾವ್ಯಗಳನ್ನು ಓದುವದರಿಂದ ಜನರು ಸನ್ಮಾರ್ಗದಲ್ಲಿ ನಡೆಯುವಂತೆ ಪ್ರೇರಣೆ ಉಂಟಾಗುತ್ತದೆ ಮತ್ತು ಜನರ ಆಚಾರ ವಿಚಾರಗಳಲ್ಲಿ ಸತ್ಪ್ರವೃತ್ತಿಯು ಉಂಟಾಗಿ, ನೈತಿಕಮಟ್ಟವು ಸುಧಾರಿಸುತ್ತದೆ. ಮತ್ತು ದೇಶದಲ್ಲಿ ಉತ್ತಮ ಸಮಾಜ ನಿರ್ಮಾಣಕ್ಕೆ ಸಹಕಾರಿಯಾಗುತ್ತದೆ. ಈ ದೃಷ್ಟಿಯಿಂದ ಮಹಾಭಾರತವು ಇಂದು ಪ್ರಚಾರವಾಗುವದು ಅವಶ್ಯಕವಾಗಿದೆ.

ಕನ್ನಡದಲ್ಲಿಯೂ ಸಹ ಈಗ ಅನೇಕರು ಮಹಾಭಾರತ ಗ್ರಂಥಗಳನ್ನು ರಚಿಸಿದ್ದಾರೆ. ಕುಮಾರವ್ಯಾಸ 'ತಿಣುಕಿದನು ಫಣಿರಾಯ ರಾಮಾಯಣದ ಕವಿಗಳ ಭಾರದಲಿ ಎಂದು ಹೇಳಿದರೆ, ಇಂದು ನಾವು ಅದನ್ನೇ ತಿಣುಕಿದನು ಫಣಿರಾಯ ಭಾರತದ ಕವಿಗಳ ಭಾರದಲಿ ಎಂದು ಹೇಳುವಷ್ಟರ ಮಟ್ಟಿಗೆ ಕನ್ನಡದಲ್ಲಿ ಮಹಾಭಾರತ ಗ್ರಂಥಗಳು ಪ್ರಕಟವಾಗಿದೆ. ಆದರೆ ಅವುಗಳಲ್ಲಿ ಪಂಪನ ಮಹಾಭಾರತ ಮತ್ತು ಕುಮಾರವ್ಯಾಸನ ಭಾರತ ಈ ಎರಡು ಕಾವ್ಯಗಳು ಶ್ರೇಷ್ಠಮಟ್ಟದ ಅಗ್ರಪಂಕ್ತಿಯ ಕಾವ್ಯಗಳು. ಈ ಕಾವ್ಯಗಳನ್ನು ಮೀರಿಸುವ ಕಾವ್ಯವನ್ನು ಇಲ್ಲಿಯವರೆಗೆ ಯಾರೂ ಬರೆದಿಲ್ಲವೆಂದರೆ ಅತಿಯೋಕ್ತಿ ಆಗಲಾರದು. ಅವರು ಭಾರತವನ್ನು ಬರೆದ ಮೇಲೆ ಬೇರೆಯವರು ಭಾರತವನ್ನು ಬರೆಯುವ ಅವಶ್ಯಕತೆ ಇಲ್ಲವೆನ್ನುವಷ್ಟರ ಮಟ್ಟಿಗೆ ಶ್ರೇಷ್ಠಮಟ್ಟದಲ್ಲಿ ಕಾವ್ಯಗಳನ್ನು ರಚಿಸಿದ್ದಾರೆ. ಆದರೆ ಅವರು ಒಂಭತ್ತನೇ ಮತ್ತು ಹದಿನೈದನೆಯ ಶತಮಾನಗಳ ಕಾಲದ ಕನ್ನಡ ಭಾಷೆ, ಶೈಲಿ, ಛಂದಸ್ಸು, ವ್ಯಾಕರಣ ಮೊದಲಾದ ಕಠಿಣತರ ನಿಯಮಗಳಿಗೆ, ಕಟ್ಟುಪಾಡುಗಳಿಗೆ ಒಳಗಾಗಿ ವಿದ್ವಾಂಸರಿಗೆ ಮಾತ್ರ ಅರ್ಥವಾಗುವಂತೆ ಕಾವ್ಯಗಳನ್ನು ರಚಿಸಿದ್ದಾರೆ. ಪ್ರೌಢವಾದ ಸಂಸ್ಕೃತಮಿಶ್ರಿತ ಹಳಗನ್ನಡ ಭಾಷೆ ಇಂದಿನ ಜನರಿಗೆ ಅರ್ಥವಾಗುವದಿಲ್ಲ. ಆ ಕಾವ್ಯಗಳು ಈಗ ಜನರಿಗೆ ಕಬ್ಬಿಣದ ಕಡಲೆಕಾಯಿಗಳಾಗಿವೆ. ಅದಕ್ಕೆ ನಮ್ಮ ಶಿಕ್ಷಣಕ್ರಮದಲ್ಲಿ ಹಳೆಗನ್ನಡ ಮತ್ತು ಸಂಸ್ಕೃತಕ್ಕೆ ಪ್ರಾಮುಖ್ಯತೆಯು ಇಲ್ಲದಿರುವದೇ ಕಾರಣವಾಗಿದೆ. ಆದುದರಿಂದ ಆ ಮಹಾಭಾರತದ ಕಾವ್ಯಾಮೃತ

ಸವಿಯನ್ನು, ಇಂದಿನ ಜನಸಾಮಾನ್ಯರಿಗೂ ಸಹ ಸವಿಯಲಿಕ್ಕೆ ಅನುಕೂಲವಾಗುವಂತೆ, ಬಹು ಸರಳವಾದ ಭಾಷೆಯಲ್ಲಿ, ಲಲಿತವಾದ ಶೈಲಿಯಲ್ಲಿ, ಲಲಿತ ಪದಪುಂಜಗಳಿಂದ, ಯಾವ ಕ್ಲಿಷ್ಟಪದವಿಲ್ಲದೆ, ಮನಸ್ಸಿಗೆ ನೇರವಾಗಿ ಅರ್ಥವಾಗುವಂತೆ, ಆಹ್ಲಾದಕರವೆನಿಸುವಂತೆ, ಬಯಲುಸೀಮೆಯ ನದಿಯಂತೆ, ಯಾವ ಅಡೆತಡೆಯಿಲ್ಲದೆ ನಿರರ್ಗಳವಾಗಿ ಹರಿಯುವ ಛಂದೋಬದ್ಧ ಶೈಲಿಯಲ್ಲಿ ರಚಿಸಲಾಗಿದೆ. ಇದು ಹಳಗನ್ನಡ ಮತ್ತು ಹೊಸಗನ್ನಡ ನಡುವಣ ಭಾಷೆ ಮತ್ತು ಶೈಲಿಯಲ್ಲಿ ಬರೆಯಲಾಗಿದೆ. ಈಗಿನ ಕಾಲದ ಕಾವ್ಯದಲ್ಲಿ ಭಾಷೆಗೆ ಛಂದಸ್ಸಿಗೆ ಮಹತ್ವವಿಲ್ಲ. ಆದರೆ ಕಾವ್ಯಕ್ಕೂ ಒಂದು ಸೌಂದರ್ಯ ಇದೆ. ಅದನ್ನು ಲಲಿತಪದ, ಕ್ರಮಬದ್ಧ ಛಂದಸ್ಸಿನಲ್ಲಿ ರಚಿಸಿದರೆ, ಕಾವ್ಯದ ಸೌಂದರ್ಯ ಹೆಚ್ಚುತ್ತದೆ. ಆ ದೃಷ್ಟಿಯಿಂದ ನಾನು ೫ ಮಾತ್ರೆಗಳುಳ್ಳ ೪ ಲಲಿತ ಪದಗಳ ೪ ಸಾಲುಗಳ ಚೌಪದಿಗಳಲ್ಲಿ ದಿನ ನಿತ್ಯದ ಆಡುನುಡಿಗೆ ಸಮೀಪವಾಗಿ ಛಂದೋಬದ್ಧ ಶೈಲಿಯಲ್ಲಿ ಈ ಕಾವ್ಯವನ್ನು ರಚಿಸಿದ್ದೇನೆ ಕುಮಾರವ್ಯಾಸ ಭಾರತದಂತೆ ಗಮಕ ವಾಚನಕ್ಕೂ ಸಹ ಅನುಕೂಲಕರವಾಗಿದೆ. ಯಾವಶಬ್ದಕೋಶದ ಸಹಾಯವಿಲ್ಲದೇ, ಶಾಲೆಯ ಬಾಲಕರು, ಪಂಡಿತರು, ಪಾಮರರು ಸ್ತ್ರೀ ಪುರುಷರು, ಆಬಾಲವೃದ್ಧರು ಸುಲಭವಾಗಿ ಓದಿ ಆನಂದಿಸಬಹುದು.

೬೦೦೦ ಪದ್ಯಗಳ ಕಾವ್ಯರಾಮಾಯಣ ಎಂಬ ಮಹಾಕಾವ್ಯವನ್ನು ಬರೆದು ಮುಗಿಸಿದ ಬಳಿಕ, ಕನ್ನಡದ ಹಿರಿಯ ಕವಿಗಳು, ವಿದ್ವಾಂಸರು, ವಿಮರ್ಶಕರು, ಜನರುಗಳು ಆ ಕಾವ್ಯವನ್ನು ಬಹಳಷ್ಟು ಮೆಚ್ಚಿ ಪ್ರಶಂಸಿಸಿದರು, ಆದರಿಂದ ಹೆಚ್ಚು ಉತ್ಸಾಹಗೊಂಡು ಮಹಾಭಾರತವನ್ನು ಬರೆಯಲು ಪ್ರಾರಂಭಿಸಿದ್ದೇನೆ. ಈಗ ಇದರ 'ಆದಿಪರ್ವದ' ೧೬೦೦ ಪದ್ಯಗಳನ್ನು ಮತ್ತು 'ಸಭಾಪರ್ವದ' ೧೫೦೦ ಪದ್ಯಗಳನ್ನು ಪ್ರಕಟಿಸುತ್ತಿದ್ದೇನೆ. ಆರಣ್ಯಪರ್ವ ಮತ್ತು ವಿರಾಟಪರ್ವವನ್ನು ಸಹ ಬರೆದಿದ್ದೇನೆ. ಈ ಗ್ರಂಥಕ್ಕೆ ಪ್ರೋತ್ಸಾಹ ದೊರೆತರೆ, ಮತ್ತು ದಾನಿಗಳ ಧನಸಹಾಯ ಮಾಡಿದರೆ, ಅವುಗಳನ್ನು ಕೆಲವು ದಿವಸಗಳಲ್ಲಿ ಪ್ರಕಟಿಸಲಾಗುವದು. ಕುಮಾರವ್ಯಾಸ ಭಾರತವನ್ನು ಮತ್ತು ಭಾರತ ದರ್ಶನ ಪ್ರಕಾಶನದವರ ಭಾರತಗಳನ್ನು ಓದಿ, ಆ ಬಳಿಕ ನನಗೆ ಹೊಳೆದಂತೆ ರಚಿಸಿದ್ದೇನೆ. ಶಬ್ದಶಃ ಅನುವಾದವಲ್ಲ. ಸ್ವತಂತ್ರ ಕೃತಿಯಾಗಿದೆ. ಕುಮಾರವ್ಯಾಸ ನನ್ನ ಅಚ್ಚು ಮೆಚ್ಚಿನ ಕವಿ ಅವನಿಂದಲೇ ಸ್ಫೂರ್ತಿಗೊಂಡು ಈ ಕಾವ್ಯವನ್ನು ರಚಿಸಿದ್ದೇನೆ. ಅವನ ಭಾರತವನ್ನು ನಾನು ಅನೇಕಸಲ ಓದಿದ್ದೇನೆ ಮತ್ತು ಪ್ರಭಾವಿತನಾಗಿದ್ದೇನೆ. ಅಲ್ಲಲ್ಲಿ ಅವನ ಶೈಲಿಯನ್ನು ಪದ ಪಂಕ್ತಿಗಳನ್ನು ಕಾಣಬಹುದು. ಅದು ಅವನು ನನ್ನ ಮೇಲೆ ಬೀರಿದ ಪ್ರಭಾವ ಎಂದು ತಿಳಿಯಬೇಕಾಗಿ ನಮ್ರ ವಿನಂತಿ ಈ ಕಾರಣಗಳಿಂದಲೇ 'ನಾನು ಕುಮಾರವ್ಯಾಸ ಕುಮಾರ ಲಕ್ಷ್ಮಣ ಕವಿ' ಎಂಬ ಅಂಕಿತನಾಮವನ್ನು ಇಟ್ಟುಕೊಂಡಿದ್ದೇನೆ. ನಾನು ತೊದಲ್ನುಡಿಯ ಕಾವ್ಯವನ್ನು ಬರೆಯುವ ಕುಮಾರನೇ ಹೊರತು ಕುಮಾರವ್ಯಾಸನ ಮಟ್ಟಕ್ಕೆ ಎಂದಿಗೂ ಏರಲಾರೆ. ಇದು ನಾನು ಅವನಿಗೆ ಸಲ್ಲಿಸುವ ಗೌರವ ಎಂದು ತಿಳಿದು–ಕೊಂಡಿದ್ದೇನೆ. ಕುಮಾರವ್ಯಾಸ ಕುಮಾರ ಎಂದು ಹೇಳಿಕೊಳ್ಳುವದರಲ್ಲಿ ನನಗೆ ಹೆಮ್ಮೆ ಇದೆ. ಇದು ಎಷ್ಟರ ಮಟ್ಟಿಗೆ ಅನ್ವರ್ಥವಾಗಿದ ಎಂಬುದನ್ನು ವಿಮರ್ಶಿಸುವದು ಕನ್ನಡದ ವಿದ್ವಾಂಸರಿಗೆ, ಜನತೆಗೆ ಬಿಟ್ಟ ವಿಷಯವಾಗಿದೆ. ಪಂಪ, ರನ್ನ, ಕುಮಾರವ್ಯಾಸರ ಘನಪರಂಪರೆಯ ಕನ್ನಡ ಕಾವ್ಯಪ್ರಪಂಚಕ್ಕೆ ಅಳಿಲು ಸೇವೆಯ ರೂಪದಲ್ಲಿ ಈ ನನ್ನ ಶ್ರೀಮನ್ಮಹಾಭಾರತ ಕಾವ್ಯವನ್ನು ಸಲ್ಲಿಸಲು ಸಂತೋಷವೆನಿಸುತ್ತದೆ. ಕನ್ನಡದ ಮಹಾಜನರು ಈ ಮಹಾಕಾವ್ಯದನ್ನು ಓದಿ ದೈವಿಕ ಆನಂದವನ್ನು ಪಡೆಯಲಿ ಎಂದು ಹಾರೈಸುತ್ತೇನೆ. ಈ ಮಹಾಕಾವ್ಯ ಕುಸುಮವನ್ನು ಕನ್ನಡ ತಾಯಿಯ ಅಡಿದಾವರೆಯಲ್ಲಿ ಬಹುನಮ್ರ ಪೂರ್ವಕವಾಗಿ ಅರ್ಪಿಸುತ್ತೇನೆ. ಶ್ರೀ ಮನ್ಮಹಾಭಾರತಾಂತರ್ಗತನಾದ ಶ್ರೀ ಕೃಷ್ಣ ಪರಮಾತ್ಮನು ಎಲ್ಲರಿಗೂ, ಭದ್ರಂ, ಶುಭಂ, ಮಂಗಳಂ ಉಂಟುಮಾಡಲಿ ಎಂದು ಪ್ರಾರ್ಥಿಸುತ್ತೇನೆ.

ಮೊದಲಿನಿಂದಲೂ ಈ ಕಾವ್ಯದಲ್ಲಿ ಆಸಕ್ತಿಯನ್ನು ತಳೆದು, ಆಮೂಲಾಗ್ರವಾಗಿ ಓದಿ, ಮೆಚ್ಚಿ, ಆಗಾಗ್ಗೆ ಸೂಕ್ತ ಸಲಹೆಗಳನ್ನು ಮಾಡಿ ಸರಸವಾದ ಮುನ್ನುಡಿಯನ್ನು ಬರೆದುಕೊಟ್ಟಿರುವ ಖ್ಯಾತ ಸಾಹಿತಿಗಳಾದ ಶ್ರೀ ಎನ್ಕೆ ಕುಲಕರ್ಣಿಯವರಿಗೆ ನಾನು ಚಿರಋಣಿಯಾಗಿ

ದ್ದೇನೆ. ಕುಮಾರವ್ಯಾಸ ಭಾರತವನ್ನು ಸಮಗ್ರವಾಗಿ ಓದಿ ಅರಗಿಸಿಕೊಂಡು ಗದ್ಯದಲ್ಲಿ ಬರೆದವರಾದ ಶ್ರೀ ಎನ್ಕೆಯವರು ಈ ನನ್ನ ಮಹಾಭಾರತ ಕಾವ್ಯಕ್ಕೆ ಮುನ್ನುಡಿಯನ್ನು ಬರೆದುಕೊಟ್ಟು ಶೋಭೆಯನ್ನು ಉಂಟುಮಾಡಿದುದಕ್ಕೆ ನಾನು ಅವರಿಗೆ ತುಂಬ ಕೃತಜ್ಞನಾಗಿದ್ದೇನೆ, ಇದು ನನ್ನ ಸೌಭಾಗ್ಯವೆಂದು ಭಾವಿಸುತ್ತೇನೆ. ದೇವರು ಅವರಿಗೆ ಆಯುರಾರೋಗ್ಯವನ್ನು ದಯಪಾಲಿಸಲಿ ಎಂದು ಪ್ರಾರ್ಥಿಸುತ್ತೇನೆ.

ಈ ಗ್ರಂಥ ಪ್ರಕಟಣೆಗಾಗಿ ಶ್ರೀ ತಿರುಮಲ ತಿರುಪತಿ ದೇವಸ್ಥಾನ, ತಿರುಪತಿ ಇವರು ೧೫೦೦೦/-ಗಳನ್ನು ಧನ ಸಹಾಯ ಮಾಡಿದ್ದಾರೆ. ಇವರಿಗೆ ನಾನು ತುಂಬ ಕೃತಜ್ಞನಾಗಿರುತ್ತೇನೆ.

ಶ್ರೀ ಶ್ರೀ ಜಗದ್ಗುರು ಶಂಕರಾಚಾರ್ಯರು, ಭಾರತಿ ತೀರ್ಥಮಹಾಸ್ವಾಮಿಗಳು, ಶೃಂಗೇರಿ, ಇವರು ರೂ ೩,೦೦೦/-ಗಳನ್ನು ದನಸಹಾಯ ಮಾಡಿದ್ದಾರೆ ಇವರಿಗೆ ನಾನು ತುಂಬ ಕೃತಜ್ಞನಾಗಿದ್ದೇನೆ

ಕೆಲವು ಮಹನೀಯರು ಕೆಳಗಿನಂತೆ ಧನಸಹಾಯ ಮಾಡಿದ್ದಾರೆ ಇವರೆಲ್ಲರಿಗೂ ನನ್ನ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

೧) ಶ್ರೀ ರವಿ ದೇಶಪಾಂಡೆ, ಧಾರವಾಡ ರೂ. ೫೦೦—
೨) ಶ್ರೀ ಬಿ. ವ್ಹಿ. ಜೋಶಿ ಧಾರವಾಡ ರೂ. ೫೦೦—
೩) ಶ್ರೀ ಜಿ. ಎಮ್. ಗುಮಾಸ್ತೆ ಔರಂಗಾಬಾದ ರೂ. ೫೦೦—
೪) ಶ್ರೀ ಕೆ. ಆರ್. ಜೋಶಿ ಆಲಮಟ್ಟಿ ರೂ. ೨೫೦—
೫) ಶ್ರೀ ಎಸ್. ಎಮ್. ಶೇಟ ಬೆಂಗಳೂರು ರೂ. ೧೨೫—
೬) ಶ್ರೀ ಎನ್. ಎಲ್. ಹಳಿಪ್ಪನವರ, ಧಾರವಾಡ ರೂ. ೧೦೧—
೭) ಶ್ರೀ ಎಸ್. ಕೆ. ಆಚಾರ ಉಡುಪಿ ರೂ ೧೦೦—

ಈ ಧನ ಸಹಾಯದಿಂದ ಮತ್ತು ನನ್ನ ಸ್ವಂತ ರಕಮಿನಿಂದ ಗ್ರಂಥವನ್ನು ಪ್ರಕಟಿಸಲಾಗಿದೆ. ಕನ್ನಡದ ಜನತೆಯು ಮತ್ತು ದಾನಿಗಳು ಪ್ರೋತ್ಸಾಹಿಸಬೇಕಾಗಿ ವಿನಂತಿ—

ವಾಚಕರಲ್ಲಿ ಒಂದು ನಮ್ರ ವಿನಂತಿ ಪುಟ ೧೯ರಲ್ಲಿ, ಮತ್ತು ೨೦ರಲ್ಲಿ ಕುಂತಿಯ ಬದಲಾಗಿ ಮಾದ್ರಿ ಎಂದು, ಮಾದ್ರಿಯ ಬದಲಾಗಿ ಕುಂತಿ ಎಂದು, ತಿದ್ದಿಕೊಂಡು ಓದಬೇಕಾಗಿ ವಿನಂತಿ. ಅಚಾತುರ್ಯದಿಂದ ಆದ ದೋಷಕ್ಕೆ ವಿಷಾದಿಸುತೇನೆ. ಮತ್ತು ಇದರ ಬಗ್ಗೆ ಪುಟ (xi )ರಲ್ಲಿ ಒಪ್ಪೋಲೆಯನ್ನು ಕೊಟ್ಟಿರಂತ್ತದೆ.

ಈ ಗ್ರಂಥದ ೧ರಿಂದ ೧೨೮ರ ವರೆಗಿನ ಪುಟಗಳನ್ನು ಅಂದವಾಗಿ ಮುದ್ರಿಸಿಕೊಟ್ಟ ಸಾಧನಾ ಪ್ರಿಂಟಿಂಗ ಪ್ರೆಸ್, ಧಾರವಾಡ ಇವರಿಗೆ ಮತ್ತು ೧೨೯ ರಿಂದ ೨೦೮ರ ಪುಟಗಳವರೆಗೆ ಮುನ್ನುಡಿ ಮೊದಲಾದ ಇತರ ಪುಟಗಳನ್ನು ಅಂದವಾಗಿ ಮುದ್ರಿಸಿಕೊಟ್ಟ ರಾಜಶ್ರೀ ಪ್ರಿಂಟಿಂಗ ಪ್ರೆಸ್,ಧಾರವಾಡ ಇವರಿಗೆ ಮತ್ತು ಇವರ ಸಿಬ್ಬಂದಿ ವರ್ಗದವರಿಗೆ ನನ್ನ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ಅದರಂತೆ ಮುಖಪುಟದ

ಚಿತ್ರವನ್ನು ಅಂದವಾಗಿ ಬರೆದುಕೊಟ್ಟ ಶ್ರೀ ಮೋಹನ ಕಠಾರೆ, ಧಾರವಾಡ ಕಲಾವಿದರಿಗೆ ನಾನು ತುಂಬ ಕೃತಜ್ಞನಾಗಿರುತ್ತೇನೆ. ಈ ಗ್ರಂಥದ ಕಾರ್ಯದಲ್ಲಿ ನೆರವಾದ ಎಲ್ಲ ಮಹನೀಯರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ಕನ್ನಡ ಜನಕೋಟಿಗೆ ನನ್ನ ಅನಂತ ಪ್ರಣಾಮಗಳನ್ನು ಸಲ್ಲಿಸುತ್ತೇನೆ.

ಸರ್ವೇ ಜನಾಃ ಸುಖಿನೋ ಭವಂತು !

ಲಕ್ಷ್ಮಣ ವಿರೂಪಾಕ್ಷ ಜೋಶಿ

ಮಾಳಮಡ್ಡಿ,
ಧಾರವಾಡ-೭
ಯುವನಾಮ ಸಂವತ್ಸರ,
ಕಾರ್ತೀಕ ಶುದ್ಧ ಪ್ರತಿಪದ,
( ಬಲಿಪ್ರತಿಪದ )
೨೫-೧೦-೧೯೯೫

---

## ಒಪ್ಪೋಲೆ

| ನಂ. | ಪುಟ | ಪದ್ಯ | ಸಾಲು | ತಪ್ಪು | ಒಪ್ಪು |
|---|---|---|---|---|---|
| ೧) | ೧೯ | ೨೬೪ | ೪ | ಕುಂತಿಯನು | ಮಾದ್ರಿಯನು |
| ೨) | ೧೯ | ೨೬೬ | ೩ | ಕುಂತಿಯನು | ಮಾದ್ರಿಯನು |
| ೩) | ೧೯ | ೨೬೬ | ೪ | ಆ ಕುಂತಿ | ಆ ಮಾದ್ರಿ |
| ೪) | ೧೯ | ೨೬೮ | ೩ | ಸತಿ ಕುಂತಿ | ಸತಿ ಮಾದ್ರಿ |
| ೫) | ೧೯ | ೨೬೯ | ೩ | ಕುಂತಿಯನು | ಮಾದ್ರಿಯನು |
| ೬) | ೧೯ | | | ಕುಂತಿಯಶೋಕ | ಮಾದ್ರಿಯಶೋಕ |
| ೭) | ೧೯ | ೨೭೨ | ೩ | ಮಾದ್ರಿಯಾ | ಕುಂತಿಯಾ |
| ೮) | ೨೦ | ೨೭೪ | ೧ | ಕುಂತಿಯಾ | ಮಾದ್ರಿಯಾ |
| ೯) | ೨೦ | ೨೭೪ | ೩ | ಕುಂತಿಯನು | ಮಾದ್ರಿಯನು |
| ೧೦) | ೯೪ | ೧೪೫೯ | ೧ | ನಾಗಸುತೆ | ರಾಜಸುತೆ |

॥ ಶ್ರೀ ॥

# ಶ್ರೀ ಮಹಾಭಾರತ ಕಾವ್ಯ

## ಆದಿಪರ್ವ

### ಪ್ರಾರ್ಥನೆ

ಶ್ರೀವರನ ನರಯಣನ ಚರಣವನು ಎರಗುತಲಿ
ಪಾವನನ ನರನನ್ನು ವಾಗ್ದೇವಿ ಸರಸತಿಯು
ಘನಮುನಿವ ವ್ಯಾಸಮುನಿ ಶ್ರೇಷ್ಠನನು ನಮಿಸುವೆನು
ಮಂಗಲವ ಸಿರಿಜಯವ ಈಯುತಲಿ ರಕ್ಷಿಸಲಿ ॥೧॥

ಶ್ರೀರಮೆಯ ವರರಮಣ ವಾಮನ ತ್ರಿವಿಕ್ರಮನೆ
ದಶಶಿರನ ಶಿರಹಣ ನುತಚರಿತ ರಾಘವನೆ
ಭೂರಮೆಯ ರಕ್ಷಿಸುತ ಶರಣಜನ ಭಕುತರನು
ಪೊರೆಯುತಿಹ ಸುರವಂದ್ಯ ನರಯಣನೆ ಕರುಣಿಪುದು ॥೨॥

ಜಗದಾದಿ ಸೃಷ್ಟಿಯಲಿ ಜಲರಾಶಿ ಮಧ್ಯದಲಿ
ಆಲದಲಿ ಮಲಗಿರುವ ಶ್ರೀ ಆದಿ ನರಯಣನ
ನಾಭಿಯಲಿ ಉದಿಸಿರುವ ನೀರಜದಿ ಜನಿಸಿರುವ
ವೇದಗಳನುಸಿರಿರುವ ವರಅಜನೆ ರಕ್ಷಿಪುದು ॥೩॥

ಶ್ರೀಗೌರಿವಲ್ಲಭನೆ ವರಗಂಗೆ ಮಂಡಿತನೆ
ಭಸ್ಮಾಂಗಭೂಷಿತನೆ ಚರ್ಮಾಂಬರಾನ್ವಿತನೆ
ಸರ್ಪಗಳ ಹಾರಗಳ ಶಶಿಕಳೆಯ ಶೋಭಿತನೆ
ಕೈಲಾಸದಧಿಪತಿಯೆ ಶಂಕರನೆ ಕರುಣಿಪುದು ॥೪॥

ಆಕ್ಷೀರಸಾಗರದ ಮಥನದಲಿ ಜನಿಸಿರುವ
ನರಯಣನ ವರಪತ್ನಿ ಇಂದ್ರಾದಿ ಸುರವಿನುತೆ
ಶ್ರೀಲಕುಮಿ ಸಂಪದವ ಸೌಭಾಗ್ಯವೀಯುತಲಿ
ಲೋಕವನು ಸಲಹುವುದು ಕೃಪೆದೋರಿ ಕರುಣೆಯಲಿ ॥೫॥

ಪರ್ವತನ ಸುತಸುತೆಯೆ ಹರಸತಿಯೆ ಪಾರ್ವತಿಯೆ
ಗಣಪತಿಯ ವರಮಾತೆ ನುತಚರಿತೆ ಘನಮಹಿತೆ
ರಕ್ಕಸರ ಮರ್ದಿಸಿದ ಶಕ್ತಿ ಸ್ವರೂಪಿಣಿಯೆ
ಮಂಗಲಪ್ರದಾಯಕಿಯೆ ಶಂಕರಿಯೆ ರಕ್ಷಿಪುದು ॥೬॥

ವೇದಗಳ ಶಾಸ್ತ್ರಗಳ ಮೀಮಾಂಸ ತರ್ಕಗಳ
ಪೌರಾಣ ಕಾವ್ಯಗಳ ಆರ್ಣವದಿ ಜನಿಸಿರುವ
ಅಜಸತಿಯೆ ಸರಸತಿಯೆ ಕವಿಮನ ವಿಹಾರಿಣಿಯೆ
ಶಾರದೆಯೆ ಸುಮತಿಯನು ಎನಗಿತ್ತು ಹರಸುವುದು ॥೭॥

ಗಜಮುಖನೆ ಗಣಪತಿಯೆ ಪಾರ್ವತಿಯ ಸುತಸುತನೆ!
ವಿಘ್ನಗಳ ನಾಶಕನೆ ಭವದುಃಖ ತಾರಕನೆ
ವೇದಾಂತವೇದ್ಯನೇ ಸಿದ್ಧಿಪ್ರದಾಯಕನೆ
ಬುದ್ಧಿಯನು ಸಿದ್ಧಿಯನು ಮಂಗಲವ ನೀಯುವುದು ॥೮॥

ಘೋರ್ಗರೆವ ತೆರೆಗಳಾ ಸಾಗರದ ಪರಿಯಲ್ಲಿ
ಪ್ರೌಢದಲಿ ಗಂಭೀರ ಚಂಪುವಿನ ಶೈಲಿಯಲಿ
ಮುನ್ನಿನಲಿ ಭಾರತವ ಬರೆದಿರುವ ಆದಿಕವಿ
ಕವಿತಾ ಗುಣಾರ್ಣವನ ಪಂಪನನು ನೆನೆಯುವೆನು ॥೯॥

ಸವಿಜೇನ ಸುಮಧುರದ ಭಾಮಿನಿಯ ಷಟ್ಪದಿಯ
ಮೃದುಪದದ ಝೇಂಕಾರದಪ್ರತಿಮ ಶೈಲಿಯಲಿ
ಭಾರತವ ಬರೆದಿರುವ ಕವಿ ಸಾರ್ವಭೌಮನನು
ಶ್ರೀ ಕುವರವ್ಯಾಸನನು ಅನವರತ ನೆನೆಯುವೆನು ॥೧೦॥

ಕವಿರನ್ನ ಜನ್ನನನ ವರಪೊನ್ನ ನಾಗನನ
ಹರಿಹರ ಷಡಕ್ಷರಿಯ ಚಾಮರಸ ರಾಘವರ
ಲಕ್ಷ್ಮೀಶ ನರಹರಿಯ ರತ್ನಾಕರಾದಿಗಳ
ಮುನ್ನಿನಾ ಕವಿತಿಲಕ ರತ್ನರನು ನೆನೆಯುವೆನು ॥೧೧॥

ಪಂಚಮದ ವೇದವಿದು ಪುಣ್ಯಕಥೆ ಭಾರತವು
ಹಿಂದಣದ ಜನ್ಮಗಳ ಸಂಚಿತದ ಪಾಪಗಳ
ತೊಳೆಯುತಿಹ ಪಾವನದ ಗಂಗೆಯಾ ಉದಕವಿದು
ಮೇಲ್ವರ್ಗ ಕೀಳ್ವರ್ಗ ಮುಕುತಿಯನು ಈಯುವದು ॥೧೨॥

ಪಂಡಿತರು ಪಾಮರರು ಸ್ತ್ರೀ ಪುರುಷರೆಲ್ಲರು
ಆಬಾಲವೃದ್ಧರೂ ಸುಲಭದಲಿ ಅರಿಯುತಲಿ
ಆನಂದ ಸಾಗರದಿ ತೇಲುವಾ ಪರಿಯಲ್ಲಿ
ತಣಿಸುತಿದೆ ಸುಮಧುರದ ಕಾವ್ಯವಿದು ಭಾರತವು ॥೧೩॥

ಮಂಜುಳ ನಿನಾದದಲಿ ಅಡತಡೆಯು ಇಲ್ಲದೆಯೆ
ಸರಸದಲಿ ಹರಿಯುತಿಹ ಬೆಳುವೊಲದ ತೊರೆಯಂತೆ
ಲಲಿತಪದಬಂಧದಲಿ ಸುಸ್ವರದ ನುಡಿಗಳಲಿ
ರಚಿಸಿರುವ ಕಾವ್ಯವಿದು ಸಂತಸವನೀಯುವದು ॥೧೪॥

ಅಧ್ಯಾತ್ಮ ಸಾಹಿತ್ಯ ಭಕ್ತಿಗಳ ಸ್ತೋತ್ರಗಳ
ಪಾವನದ ತ್ರಿವೇಣಿಯಾ ಸಂಗಮದ ಪರಿಯಲ್ಲಿ
ಭಾರತದ ಕಾವ್ಯವಿದು ಚಂದ್ರಾರ್ಕ ಪರ್ಯಂತ
ಮೆರೆಯಲ್ಕೆ ರಚಿಸಿದನು ಕವಿವರನು ಲಕ್ಷ್ಮಣನು ॥೧೫॥

ಇಂದಿನಾ ಕಥೆಕವನ ನಾಟಕ ಪ್ರಬಂಧಗಳ
ರಾಶಿಗಳ ಭಾರದಲಿ ಫಣಿರಾಯ ತಿಣುಕುತಿರೆ
ಚಂದ್ರಾರ್ಕ ಪರ್ಯಂತ ಮೆರೆಯುತಿಹ ಪುಣ್ಯವೀ
ಭಾರತವ ರಚಿಸಿದನು ಕವಿವರನು ಲಕ್ಷ್ಮಣನು ॥೧೬॥

ನುತಚರಿತ ಪಾವನನ ರಾಘವನ ಚರಿತೆಯನು
ಸರಸದಲಿ ಪೇಳಿದನು ಕಾವ್ಯ ರಾಮಾಯಣದಿ
ದುಷ್ಟರನು ಶಿಕ್ಷಿಸುತ ಶಿಷ್ಟರನು ರಕ್ಷಿಸಿದ
ಶ್ರೀಕೃಷ್ಣ ಚರಿತೆಯನು ಭಾರತದಿ ಉಲಿದಿಹನು ॥೧೭॥

ಅರಸುಗಳು ಮಂತ್ರಿಗಳು ಕವಿವೃಂದ ಪಂಡಿತರು
ಶರಣಜನ ಸಜ್ಜನರು ಭಕುತಜನ ಭಾವುಕರು
ನವರಸದ ಕಾವ್ಯವೀ ಭಾರತದ ಅಮೃತವನು
ಸವಿಸವಿದು ದೈವಿಕದ ಆನಂದ ಪಡೆಯುವರು ॥೧೮॥

ಭಾರತವ ಹೇಳುತಿಹ ಕೇಳುತಿಹ ಮಾನವರ
ಅಗಣಿತದ ಪಾಪಗಳ ಜಾಹ್ನವಿಯ ಜಲದಂತೆ
ತೊಳೆಯುತಲಿ ಇಹದಲ್ಲಿ ಸುಖಶಾಂತಿ ಆಯುವನು
ಪರದಲ್ಲಿ ಮಂಗಲದ ಮುಕುತಿಯನು ಈಯುವದು ॥೧೯॥

ಭವದುರಿತ ದುಗುಡಗಳ ಪಾಪಗಳ ಕಳೆಯುತಲಿ
ಮುಕುತಿಯನು ಕರುಣಿಸುವ ಪುಣ್ಯವೀ ಭಾರತವ
ಧಾರಪುರ ಜೋಶಿಕುಲ ವಿರುಪಾಕ್ಷ ಸುತ ನುತನು
ಲಕ್ಷ್ಮಣನು ರಚಿಸಿದನು ನರಯಣನ ಕೃಪೆಯಲ್ಲಿ ॥೨೦॥

---

## ಆದಿಪರ್ವ

ಮೆರೆಯುತಿಹ ಉತ್ತರದ ದೆಸೆಯೊಳಗೆ ಚೆಲುವಿನಲಿ
ಮೂಡಣದ ತುದಿಯಿಂದ ಪಡುವಣದ ಪರ್ಯಂತ
ಹಬ್ಬಿರುವ ಹಿಮಗಿರಿಯ ತುದಿಯಿಂದ ಧರೆಗಿಳಿವ
ಪಾವನಳ ಗಂಗೆಯಾ ಒಯಲಿನಲಿ ಹರಿಯುತಿಹ ॥೧॥

ಗೋಮತಿಯ ನದಿತಟದಿ ಸೊಗಯಿಸುವ ಪುಣ್ಯತರ
ಭವದುಃಖ ತರಿಯುತಿಹ ಶೌನಕ ಮಹರ್ಷಿಗಳ
ಆಶ್ರಮವು ಕಂಗೊಳಿಪ ನೈಮಿಷಾರಣ್ಯಕ್ಕೆ
ಸೂತಮುನಿ ಸಂಚರಿಸುತ್ತೈತಂದನೊಂದು ದಿನ ॥೨॥

ಯಜ್ಞವನು ಗೈಯ್ಯುತಲಿ ಕುಳಿತಿರ್ದ ಶೌನಕನು
ಋಷಿನಿಕರ ಸಕಲರೂ ಸೂತನನು ಕಾಣುತಲಿ
ಏಳುತಲಿ ನಮಿಸುತಲಿ ಆಸನವನೀಯುತಲಿ
ಹಣ್ಣುಗಳನೀಯುತಲಿ ಸತ್ಕಾರಗೈದಿಹರು ॥೩॥

ಕುಶಲವನು ಕೇಳುತಲಿ ಶೌನಕನು ಋಷಿವರನು
ಆವಾವ ದೇಶಗಳ ಕ್ಷೇತ್ರಗಳ ಸಂಚರಿಸಿ
ಎಲ್ಲಿಂದ ಬಂದಿಹಿರಿ ವಿಷಯಗಳ ತಿಳುಹುವುದು
ಎನ್ನುತಿರೆ ಸೂತಮುನಿ ಸಂತಸದಿ ಇಂತೆಂದ ॥೪॥

ಕೇಳುವುದು ಶೌನಕನೆ ಋಷಿವರ್ಯ ನಿಕರವೆ
ವಿಧವಿಧದ ದೇಶಗಳ ಕ್ಷೇತ್ರಗಳ ಚರಿಸುತಲಿ
ಜನಮೇಜಯರಸಂಗೆ ಭಾರತದ ಕಥೆಯನ್ನು
ವೈಶಂಪಾಯನುಸುರುತಿಹ ತಾಣಕ್ಕೆ ಐತಂದೆ ॥೫॥

ಆವ ವ್ರತ ನಿಯಮಗಳು ಕಳೆಯದಿಹ ಘೋರತರ
ಸರ್ಪದಾಯಾಗದಲಿ ಸೋಂಕಿರುವ ಪಾಪವನು
ತೊಳೆಯಲಿಕೆ ಪುಣ್ಯತರ ಭಾರತವ ವಿಸ್ತರದಿ
ಮುನಿವರ್ಯ ವೈಶಂಪಾಯನುಸುರಿದುದ ಕೇಳಿದೆನು ॥೬॥

ಮಾರ್ಗದಲಿ ಬರುತಲಿರೆ ಕೌರವರ ಪಾಂಡವರ
ರಾಜ್ಯದಾ ಕಲಹದಲಿ ಬಂಧುಗಳ ದ್ವೇಷದಲಿ
ಘನಘೋರ ಯುದ್ಧವನು ಗೈದಿರುವ ಭೀಕರದ
ಕುರುಕ್ಷೇತ್ರ ನೋಡುತಲಿ ಬಂದಿಹೆನು ನಾನಿಲ್ಲಿ ॥೭॥

ಕೌತುಕವು ಅತುಳವೀ ಭಾರತದ ಕಥೆಯಿದುವು
ಓಂದಣದ ಜನ್ಮಗಳ ಪಾಪಗಳ ಕಲ್ಮಷವ
ತೊಳೆಯುತಿಹ ಪಾವನಳ ಗಂಗೆಯಾ ಜಲವಿದುವು
ಮುಕುತಿಯನು ಈಯುತಿಹ ಕಲ್ಪತರು ಎಂದಿಹನು. ॥೮॥

ಶೌನಕನು ಮುನಿನಿಕರ ಸಕಲರೂ ಆಲಿಸುತ
ತವಕದಲಿ ಹರ್ಷದಲಿ ಪಾಪಗಳ ತೊಲಗಿಸುತ
ಶಾಂತಿಯನು ಮುಕುತಿಯನು ಈಯುತಿಹ ಪುಣ್ಯವೀ
ಭಾರತ ಕಥಾಮೃತವ ಪೇಳುವದು ಎಂದಿಹರು ॥೯॥

ವೇದಗಳ ಶಾಸ್ತ್ರಗಳ ಉಪನಿಷದ ತರ್ಕಗಳ
ಪೌರಾಣ ಸಾರಗಳ ತತ್ವಗಳ ಸಾರುತಿಹ
ಮರುಜನ್ಮವೀಯದಲೆ ಮೋಕ್ಷವನು ಈಯುತಿಹ
ಗಣ್ಯವೀ ಭಾರತವ ವಿಸ್ತರದಿ ಪೇಳುವೆನು ॥೧೦॥

## ಸೃಷ್ಟಿ–ಸ್ಥಿತಿ–ಲಯ–ವಿವರಣೆ

ಜಗದಾದಿ ಸೃಷ್ಟಿಯಲಿ ಎಲ್ಲೆಡೆಗು ಕತ್ತಲಿರೆ
ಪರಬ್ರಹ್ಮ ಏಕೈಕ ಒಬ್ಬನೇ ಇರುತಿರಲು
ವಿಧವಿಧದ ರೂಪಗಳ ಜಗವಾವುದಿಲ್ಲದಿರೆ
ಲೋಕವನು ಸೃಷ್ಟಿಸಲು ಸಂಕಲ್ಪ ಗೈಯ್ಯುತಲಿ ॥೧೧॥

ಮೇಲಕ್ಕೆ ಅಂಭೋ ಮರೀಚಗಳ ಲೋಕಗಳ
ಮಧ್ಯದಲಿ ದ್ಯುಲೋಕ ಮತ್ತೆ ಈ ಮರ್ತ್ಯವನು
ಕೆಳಗಡೆಗೆ ಅಪೋಲೋಕಗಳ ಸೃಷ್ಟಿಸುತ
ಆಕಾಶ ದಶದಿಸೆಗಳೆಲ್ಲವನು ಸೃಜಿಸಿದನು ॥೧೨॥

ಲೋಕಗಳ ರಕ್ಷಿಸಲು ಲೋಕದಾ ಪಾಲಕರ
ಸೃಜಿಸುವೆನು ಎನ್ನುತಲಿ ಮನದೊಳಗೆ ಯೋಚಿಸುತ
ಜಲದಿಂದ ಪುರುಷನಾಕಾರದಲಿ ಭವ್ಯವಿಹ
ವಿರಾಟನಾ ಪಿಂಡವನು ಮೇಲಕ್ಕೆ ಎತ್ತಿದನು ॥೧೩॥

ವಾಯುಗಳ ಪ್ರಾಣಗಳ ಪಂಚೇಂದ್ರಿಯಾದಿಗಳ
ಹೃದಯವನು ಬುದ್ಧಿಯನು ಮನಸುಗಳ ಪ್ರಜ್ಞೆಯನು
ಪಿಂಡದಲಿ ಸೇರಿಸುತ ಪರಬ್ರಹ್ಮ ತಾನೆಯೇ
ನೆತ್ತಿಯನು ಒಡೆಯುತಲಿ ಪಿಂಡದಲಿ ಸೇರಿದನು ॥೧೪॥

ಅಂಡವದು ಒಡೆಯುತಲಿ ಹೊರಬರುವ ಪರಿಯಲ್ಲಿ
ಪ್ರಜೆಗಳನು ಸೃಷ್ಟಿಸಲು ವರಬ್ರಹ್ಮ ಹೊರಬಂದ
ಲೋಕವನು ಪಾಲಿಸಲು ಮಹವಿಷ್ಣು ಮೂಡಿಹನು
ಲಯಗೈಯ್ಯಲೊಸುಗವೆ ಆ ರುದ್ರ ಉದಿಸಿದನು ॥೧೫॥

ಅಗ್ನಿಯನು ಸೂರ್ಯನನು ಚಂದ್ರನನು ಇಂದ್ರನನು
ದಿವಿಜರನು ದಕ್ಷನನು ಪ್ರಜಾಪತಿಯನ್ನು
ಕೋಟಿಗಳ ಪ್ರಾಣಿಗಳ ಸಕಲ ಸಚರಾಚರದ
ವಸ್ತುಗಳ ಏಕೈಕ ಪರಬ್ರಹ್ಮ ಸೃಜಿಸಿದನು ॥೧೬॥

ಎಂಬತ್ತು ನಾಲ್ಕರಾ ಕೋಟಿಗಳ ಯೋನಿಗಳ
ಜೀವಿಗಳು ಪಶುಪಕ್ಷಿ ಪ್ರಾಣಿಗಳ ಸಕಲರೂ
ಜನನಗಳ ಮರಣಗಳ ಚಕ್ರದಲಿ ತಿರುಗುತಲಿ
ಅಂತ್ಯದಲಿ ಬ್ರಹ್ಮದಲಿ ಐಕ್ಯವನು ಹೊಂದುವವು ॥೧೭॥

ಗೋಚರಿಪ ವಸ್ತುಗಳ ಬ್ರಹ್ಮಾಂಡ ಸಕಲವಿದು
ಸಕಲನದಿ ಸಾಗರವ ಸೇರುವಾ ಪರಿಯಲ್ಲಿ
ಪ್ರಲಯದಲಿ ನಶಿಸುತಲಿ ಬ್ರಹ್ಮದಲಿ ಸೇರುವುದು
ಪರಬ್ರಹ್ಮ ಪುನರಪಿಯು ಸೃಷ್ಟಿಯನು ಸೃಜಿಸುವನು ॥೧೮॥

ದಿನರಾತ್ರಿ ಪಕ್ಷಗಳು ಮಾಸಗಳು ವರ್ಷಗಳು
ಯುಗಕಲ್ಪ ಕೋಟಿಗಳು ಉರುಳುತಲಿ ಸಾಗುತಿರೆ
ಪರಬ್ರಹ್ಮ ಲೀಲೆಯಲಿ ಲೋಕವನು ಲಯಗೈದು
ಸೃಜಿಸುವನು ಈ ತೆರದಿ ಸಾಗಿಹುದನಂತದಲಿ ॥೧೯॥

ಬ್ರಹ್ಮನಾ ರೂಪದಲಿ ವಿಶ್ವವನು ಸೃಷ್ಟಿಸುತ
ವಿಷ್ಣುವಿನ ರೂಪದಲಿ ಲೋಕವನು ರಕ್ಷಿಸುತ
ರುದ್ರನಾ ರೂಪದಲಿ ನಾಶವನು ಗೈಸುತಿಹ
ಏಕೈಕ ಪುರುಷನೀ ಪರಬ್ರಹ್ಮನೆನಿಸುವನು ॥೨೦॥

## ಸೂರ್ಯವಂಶದ ಉತ್ಪತ್ತಿ

ಪ್ರಜೆಗಳಾ ವೃದ್ಧಿಂಗೆ ಸೂರ್ಯನೇ ಕಾರಣನು
ಸೂರ್ಯನಾ ತೇಜಸದಿ ಕೋಟಿ ಪ್ರಜೆ ಜನಿಸಿದರು
ಜಗದೊಳಿಹ ಜೀವರಿಗೆ ಪಶುಪಕ್ಷಿ ಮೃಗಗಳಿಗೆ
ಮರಗಳಿಗೆ ಔಷಧಿಗೆ ಸೂರ್ಯನೇ ಪ್ರಾಣನಿಹ ॥೨೦॥

ಸೂರ್ಯನಾ ಪುತ್ರರಲಿ ಪುತ್ರಿಯಲಿ ಪೌತ್ರರಲಿ
ಲಕ್ಷೋಪಲಕ್ಷದಾ ಮಕ್ಕಳುಗಳುದಿಸಿದರು
ಕುರುವಂಶ ಯದುವಂಶ ಭರತಕುಲಕಿವರುಗಳು
ಮೂಲದಾ ಪುರುಷರುಗಳಾಗುತಲಿ ಮೆರೆದಿಹರು ॥೨೨॥

ಸೂರ್ಯಕುಲದರಸುಗಳ ವಂಶಲತೆ ವೃದ್ಧಿಸುತ
ಇಕ್ಷ್ವಾಕು ಯಯಾತಿ ವಂಶಗಳ ಕುಡಿಪರಿದು
ಸತ್ಯಕ್ಕೆ ಧರ್ಮಕ್ಕೆ ಪ್ರಾಣಗಳ ತೆತ್ತಿರುವ
ಘನಮಹಿಮ ನುತಚರಿತ ನೃಪರುಗಳು ಜನಿಸಿದರು ॥೨೩॥

ವರನಹುಷಮಾಂಧಾತ ಭಗೀರಥ ಹರಿಶ್ಚಂದ್ರ
ರಘುವು ಅಜದಶರಥನು ಶ್ರೀರಾಮ ಪಾವನನು
ಇನಕುಲದಿ ಜನಿಸುತಲಿ ಸತ್ಯವನು ಪಾಲಿಸುತ
ಚಂದ್ರಾರ್ಕ ಪರ್ಯಂತ ಬೆಳಗಿಹರು ಜಗದೊಳಗೆ ॥೨೪॥

## ಚಂದ್ರವಂಶದ ಉತ್ಪತ್ತಿ

ಕೇಳುವುದು ಶೌನಕನೆ ಕೌರವರ ವಂಶದಾ
ಮೂಲವನು ವಿಸ್ತಾರಗೊಂಡಿರುವ ಪರಿಯನ್ನು
ಬ್ರಹ್ಮದಿಂದುದಿಸಿದರು ದಕ್ಷ ಪ್ರಜಾಪತಿಯು
ಕಶ್ಯಪ ಅಗಸ್ತ್ಯಾದಿ ಋಷಿನಿಕರ ಸಹಿತದಲಿ ॥೨೫॥

ಮೆರೆಯುತಿಹ ಸಪ್ತರ್ಷಿ ಮಂಡಲದಿ ಬೆಳಗುತಿಹ
ಅತ್ರಿಋಷಿ ನೇತ್ರದಲಿ ಚಂದ್ರಮನು ಜನಿಸಿದನು
ಚಂದ್ರನಿಗೆ ಬುಧಜನಿಸೆ ಬುಧನಿಂಗೆ ಪುರುರವನು
ಪುರುರವನು ಊರ್ವಶಿಯ ಮೋಹಿಸುತ ರಮಿಸುತಿರೆ ॥೨೬॥

ಆಯುಸನು ಜನಿಸಿದನು ಆಯುಸಗೆ ವರನಹುಷ
ನಹುಷನಿಂ ಯಯಾತಿ–ಯಯಾತಿಯಾ ನೃಪನಿಂದ
ಸತಿದೇವಯಾನಿಯಲಿ ಯದುವೆಂಬ ವರಸುತನು
ಶರ್ಮಿಷ್ಠೆ ಸತಿಯಲ್ಲಿ ಪುರುಪುತ್ರ ಜನಿಸಿದರು ॥೨೭॥

ಯದುವಿಂದ ಯದುಕುಲವು ವೃದ್ಧಿಸುತ ಯಾದವರು
ವಸುದೇವ ಶ್ರೀಕೃಷ್ಣ ಬಲರಾಮ ಮೊದಲಾದ
ಐವತ್ತಾರು ಕೋಟಿಯಲಿ ವಿಸ್ತಾರಗೊಳ್ಳುತಲಿ
ಯದುವಂಶ ಮೆರೆದಿಹುದು ವಸುದೇವ ಸುತನಿಂದ ॥೨೮॥

ಪುರುನೃಪಗೆ ದುಷ್ಯಂತ ದುಷ್ಯಂತಗಾ ಭರತ
ಭರತನಲಿ ಸುಹೋತ್ರ ಸುಹೋತ್ರನಲಿ ಹಸ್ತಿನೃಪ
ಕೌರವರು ಪಾಂಡವರು ವೈಭವದಿ ಆಳಿರುವ
ಹಸ್ತಿನಾಪುರವನ್ನು ಹಸ್ತಿನೃಪ ನಿರ್ಮಿಸಿದ. ॥೨೯॥

ಹಸ್ತಿಯಲಿ ಸಂವರಣ ಸಂವರಣನರಸಿಯಲಿ
ತಪತಿಯಲಿ ವರಸುತನು ಕುರುನೃಪನು ಜನಿಸಿದನು
ಘೋರತಪಗೈಯ್ಯುತಲಿ ನುತಚರಿತ ಕುರುನೃಪನು
ಪುಣ್ಯದೆಡೆ ಕುರುಕ್ಷೇತ್ರ ರಚಿಸಿದನು ತಪಸಿನಲಿ ॥೩೦॥

ಕುರುವಿನಾ ವಂಶಲತೆ ಕುಡಿವರಿದು ಹಬ್ಬುತಲಿ
ವೀರಪ್ರತೀಪನಾ ಭೂಪತಿಯ ಉದರದಲಿ
ದೇವಾಪಿ ಶಾಂತನುವು ಬಾಹ್ಲೀಕ ಎಂಬುವಾ
ಖ್ಯಾತಮಿಹ ಮೂವರಾ ಪುತ್ರರುಗಳುದಿಸಿದರು ॥೩೧॥

## ಶಂತನುವು ಸತ್ಯವತಿಯನ್ನು ವರಿಸಿದುದು

ವೀರನಾ ಶಂತನುವು ಸಿಂಹಾಸನೇರುತಲಿ
ರಾಜ್ಯವನು ಆಳುತಲಿ ಕಾಲವನು ಕಳೆಯುತಿರೆ,
ಗಂಗೆಯಾ ತೀರದಲಿ ವಿಹರಿಸುತಲಿರುತಿರಲು
ಅಪ್ರತಿಮ ಸುಂದರಿಯ ಒ ವೆಯನು ಕಾಣುತಲಿ ॥೩೨॥

ಬೆರಗಾಗಿ ಕಣ್ಣಿವೆಯ ನಿಕ್ಕದಲೆ ನೋಡುತಲಿ
ಸ್ವರ್ಗದಾ ಸುರಲಲನೆ ಧರೆಗಿಳಿದು ಬಂದಿಹಳೊ
ಎನ್ನುತಲಿ ಸೌಂದರ್ಯ ರೂಪಸಿಯ ನೋಡುತಲಿ
ಮದನೆಸೆದ ಬಾಣದಲಿ ಮನಮೃಗವು ಸಿಲುಕಿದುದು ॥೩೩॥

ನೀನಾರು ಹೇಳುವುದು ನಿನ್ನಂಥ ಚೆಲುವೆಯನು
ಮುನ್ನಿನಲಿ ಕಂಡಿಲ್ಲ ಎನ್ನಮನ ಸೋತಿಹುದು
ಎನ್ನಕರ ಪಿಡಿಯುತಲಿ ಹೃದಯವನು ತಣಿಸುವುದು
ಎನ್ನುತಲಿ ಶಂತನುವು ದೈನ್ಯದಲಿ ನುಡಿಯುತಿರೆ ॥೩೪॥

ಎನ್ನಯಾ ಮಾತನ್ನು ನಡೆಸಲಿಕೆ ಒಪ್ಪಿದರೆ
ನಿನ್ನಯಾ ಸತಿಯಾಗಲೆನಗಹುದು ಸಮ್ಮತವು
ನಾನಾವ ಕಾರ್ಯಗಳ ಎಸಗಿದರು ನೀನೆಂದು
ನನ್ನನ್ನು ನಿಂದಿಸದೆ ಮರುನುಡಿಯಲಾಗದದು ॥೩೫॥

ಎನ್ನನ್ನು ಪ್ರಶ್ನಿಸಿದೊಡಾಗಲೇ ನಿನ್ನನ್ನು
ತೊರೆಯುತಲಿ ಹೋಗುವೆನು ಎನ್ನುತಿರೆ ಆ ವನಿತೆ
ಶಂತನುವು ಆಲಿಸುತ ಒಪ್ಪಿಗೆಯನೀಯುತಲಿ
ಸುಂದರಿಯ ಕರವಿಡಿದ ಮದುವೆಯ ವಿಧಾನದಲಿ ॥೩೬॥

## ಹುಟ್ಟಿದ ಶಿಶುವನ್ನು ಗಂಗೆಯು ನದಿಯಲ್ಲಿ ಚೆಲ್ಲುವದು

ವರುಷವದು ಉರುಳುತಿರೆ ಶಿಶುವೊಂದು ಜನಿಸುತಿರೆ
ಆ ಲಲನೆ ಶಿಶುವನ್ನು ಗಂಗೆಯಲಿ ಎಸೆದಿಹಳು
ಈ ಪರಿಯೆ ಜನಿಸಿರುವ ಶಿಶುಗಳನು ಏಳನ್ನು
ಗಂಗೆಯಾ ಮಡಿಲಿನಲಿ ಹಾಯ್ಕಿದಳು ನಿರ್ದಯದಿ ॥೩೭॥

ಎಂಟನೆಯ ಮುದ್ದಾದ ಮಗುವೊಂದು ಜನಿಸುತಿರೆ
ಆ ಸ್ತ್ರೀಯು ಶಿಶುವನ್ನು ಗಂಗೆಯಲಿ ಚೆಲ್ಲಲಿಕೆ
ಕೊಳ್ಳುತಲಿ ತೆರಳುತಿರೆ ಶಂತನುವು ನೋಡುತಲಿ
ನೋಯುತಲಿ ಮರುಗುತಲಿ ದುಃಖದಲಿ ನುಡಿದಿಹನು ॥೩೮॥

ನವಮಾಸ ಗರ್ಭದಲಿ ಶಿಶುವನ್ನು ಧರಿಸುತಲಿ
ಧರೆಗೀದ ಶಿಶುವನ್ನು ಜನಿಸಿದಾಕ್ಷಣದಲ್ಲಿ
ನದಿಯೊಳಗೆ ಚೆಲ್ಲುವುದು ನಿನಗದುವು ಯೋಗ್ಯವೇ
ನಿನ್ನ ತೆರ ನಾರಿಯನು ಜಗದೊಳಗೆ ಕಂಡಿಲ್ಲ ॥೩೯॥

ಈ ತೆರದಿ ಪಾಪದಾ ಕೃತ್ಯವನು ಗೈಯ್ಯುತಿಹ
ನಿಷ್ಕರುಣ ಮಹತಾಯೆ ನೀನಾರು ಹೇಳುವುದು
ಎನ್ನುತಲಿ ಸ್ತ್ರೀಯನ್ನು ತಡೆಯುತಲಿ ಕೇಳುತಿರೆ
ಆ ಸ್ತ್ರೀಯು ನುಡಿದಿಹಳು ಶಂತನುಗೆ ಇಂತೆಂದು ॥೪೦॥

ಇಂದು ನೀ ಎನ್ನಯಾ ಕಾರ್ಯವನು ಪ್ರಶ್ನಿಸಿದೆ
ನೀ ಕೊಟ್ಟ ವಚನವನು ಭಂಗವನುಗೊಳಿಸಿರುವೆ
ನಿನ್ನನ್ನು ತ್ಯಜಿಸುತಲಿ ನಾನಿನ್ನು ಹೋಗುವೆನು
ಎನ್ನಯಾ ಶಾಪವದು ಹಿಂಗಿದುದು ಇಂದಿನಲಿ ॥೪೧॥

ಜಾಹ್ನವಿಯು ನಾನಿಹೆನು ಹೋಗುವೆನು ಎನ್ನುತಿರೆ
ಶಂತನುವು ಕೌತುಕದಿ ನಿನಗಾರು ಶಾಪವನು
ಇತ್ತಿಹರು ಎಂಬುದನು ವಿಶದದಲಿ ಪೇಳುವುದು
ಎನ್ನುತಿರೆ ಜಾಹ್ನವಿಯು ವಿಸ್ತರದಿ ಅರುಹಿದಳು ॥೪೨॥

**ಜಾಹ್ನವಿಯು ತನ್ನ ಶಾಪದ ಕಥೆಯನ್ನು ವಿವರಿಸುವದು**

ಪೂರ್ವದಲಿ ಇಕ್ಷ್ವಾಕು ವಂಶದಲಿ ಜನಿಸಿರುವ
ಮಹಾಭಿಷ ಮಹಿಪತಿಯು ಬ್ರಹ್ಮನೆಡೆ ಬರುತಿಲು
ಗಂಧರ್ವ ಕಿನ್ನರರು ಸುರವೃಂದ ನೆರೆದಿರಲು
ಗಂಗೆಯೂ ಸಭೆಯಲ್ಲಿ ಮಧ್ಯದಲಿ ಬರುತಿರಲು ॥೪೩॥

ಭರದಿಂದ ಬೀಸುತಿಹ ಗಾಳಿಯಾ ರಭಸಕ್ಕೆ
ಜಾಹ್ನವಿಯ ವಸನವದು ಕಳಚುತಲಿ ಹಾರುತಿರೆ
ಸುರರೆಲ್ಲ ಕಣ್ಮುಚ್ಚಿ ಈಕ್ಷಿಸದೆ ಕುಳಿತಿರಲು
ಮಹಾಭಿಷ ಗಂಗೆಯನು ಹೇಸದಲೆ ನೋಡಿಹನು ॥೪೪॥

ಬ್ರಹ್ಮನಿದ ಅರಿಯುತಲಿ ಮಹಾಭಿಷ ಭೂಪತಿಗೆ
ಜಾಹ್ನವಿಗೆ ಈರ್ವರಿಗೆ ಮರ್ತ್ಯದಲಿ ಜನಿಸಲಿಕೆ
ಶಾಪವನು ಕೊಡುತಿರಲು ಸ್ವರ್ಗದಿಂ ಬೀಳುತಿರೆ
ಮಧ್ಯದಲಿ ಆ ಗಂಗೆ ವಸುಗಳನು ಕಂಡಿಹಳು ॥೪೫॥

ನೀವಾರು ನೆಲಕೇಕೆ ಬೀಳುವಿರಿ ಎನ್ನುತಿರೆ
ಅಷ್ಟವಸು ಶಾಪದಾ ವಿಷಯವನು ತಿಳಿಸಿದರು
ವಸಿಷ್ಠಋಷಿ ಪಾವನನ ವರ ಕಾಮಧೇನುವನು
ಅಪಹರಣ ಗೈಯ್ಯುತಿರೆ ಧರಣಿಯೊಳು ಜನಿಸುವುದು ॥೪೬॥

ಎನ್ನುತಲಿ ಶಾಪವನು ಇತ್ತಿಹರು ಕೋಪದಲಿ
ನಿನ್ನಯಾ ಗರ್ಭದಲಿ ಜನಿಸುವವು ನಮಗಿಷ್ಟ
ಹುಟ್ಟಿದಾಕ್ಷಣದಲ್ಲಿ ನಿನ್ನಯಾ ನೀರಿನಲಿ
ನಮ್ಮನ್ನು ಚೆಲ್ಲುತಲಿ ಕಳುಹಿಪುದು ಎನ್ನುತಿರೆ ॥೪೭॥

ನಿಮ್ಮಿಷ್ಟಕೊಪ್ಪಿದೆನು ಸಂತಸದಿ ಎನ್ನುತಲಿ
ವಸುಗಳಿಗೆ ಉಸುರುತಲಿ ನಿನ್ನಯಾ ಕರವಿಡಿದ
ವರಸುದತಿ ಆ ಗಂಗೆ ನಾನಿಹೆನು ಆ ಮೇಲೆ
ಅಷ್ಟವಸು ನಿನ್ನಯಾ ಸುತರಾಗಿ ಹುಟ್ಟಿದರು ॥೪೮॥

ನೀನಿಂದು ಎನ್ನಯಾ ಕಾರ್ಯವನು ಪ್ರಶ್ನಿಸಿದೆ
ಶಾಪವದು ತೊಲಗುತಲಿ ನಾಮುಕ್ತಳಾಗಿಹೆನು
ನಾನೀಗ ಸುತನೊಡನೆ ನನ್ನೆಡೆಗೆ ತೆರಳುವೆನು
ಶಿಶುವಿದುವು ಬೆಳೆಯುತಲಿ ದೊಡ್ಡವನು ಆಗುತಿರೆ ॥೪೯॥

ನಿನ್ನೆಡೆಗೆ ನಾಬರುವೆ ಮತ್ತೊಮ್ಮೆ ಎನ್ನುತಲಿ
ಆ ಗಂಗೆ ತನ್ನಯಾ ಸ್ಥಾನಕ್ಕೆ ತೆರಳಿದಳು
ದಿನದಿನದಿ ಚಂದ್ರಮನ ತೆರದಲ್ಲಿ ಬೆಳೆಯುತಲಿ
ದೇವವ್ರತ ಗಾಂಗೇಯ ನಾಮದಲಿ ಬೆಳಗಿದನು ॥೫೦॥

ಬಳಿಕಲಾ ಶಂತನುವು ವೈರಾಗ್ಯ ಭಾವದಲಿ
ಋಷಿ ಸದೃಶ ಜೀವನದಿ ರಾಜ್ಯವನು ಆಳುತಿರೆ
ಎರಡು ಹದಿನೆಂಟುಗಳ ವರ್ಷಗಳು ಉರುಳುತಿರೆ
ಗಾಂಗೇಯ ಬೆಳೆದಿಹನು ಅಪ್ರತಿಮ ತೇಜದಲಿ ॥೫೧॥

ಗುರುವರ ವಸಿಷ್ಠನಲಿ ವೇದಗಳ ಕಲಿತಿಹನು
ಭಾರ್ಗವನ ಬಳಿಯಲ್ಲಿ ಬಿಲುವಿದ್ಯೆಯರಿತಿಹನು
ಯುದ್ಧದಲಿ ಇಂದ್ರಂಗೆ ಸರಿಸಮನು ಗಾಂಗೇಯ
ಆ ಬ್ರಹ್ಮ ಕ್ಷತ್ರಿಯದ ತೇಜದಲಿ ತೊಳಗಿದನು ॥೫೨॥

ಗಂಗೆಯಾ ತೀರದಲಿ ಒಂದುದಿನ ಶಂತನುವು
ಚಲಿಸುತಿರೆ ಗಂಗೆಯಲಿ ಕಡಿಮೆ ಜಲ ಕಾಣುತಲಿ
ಕೌತುಕದಿ ಕಾರಣವ ತಿಳಿಯಲಿಕೆ ಸಾಗುತಿರೆ
ಗಂಗೆಯನು ಶರಗಳಲಿ ಹೀರುತಲಿ ಹಿಡಿದಿರುವ ॥೫೩॥

ಶೌರ್ಯ ಪ್ರತಾಪಗಳ ತೇಜದಲಿ ಹೊಳೆಯುತಿಹ
ರಾಜಕಳೆ ಉಕ್ಕುತಿಹ ಧೃಢಕಾಯ ಸುಂದರನ
ಕಾಣುತಲಿ ಹರುಷದಲಿ ಈ ಪರಿಯ ಸುತನೊಬ್ಬ
ಎನಗಿರ್ದುದಾದೊಡೆಯು ನಾ ಧನ್ಯ ಎನ್ನುತಿರೆ ॥೫೪॥

ಜಾಹ್ನವಿಯು ಕೇಳುತಲಿ ಮುದದಿಂದ ಐತಂದು
ಎನ್ನಯಾ ಉದರದಲಿ ಜನಿಸಿರುವ ನಿನ್ನಯಾ
ಕುವರನೇ ಇವನಿಹನು ದೇವವ್ರತ ಗಾಂಗೇಯ
ಇವನನ್ನು ನಿನಗೀವೆ ಸ್ವೀಕರಿಪುದೊಲವಿನಲಿ ॥೫೫॥

ವೇದಗಳ ಉಪನಿಷದ ಶಾಸ್ತ್ರಗಳನರಿತಿಹನು
ಶಸ್ತ್ರಾಸ್ತ್ರ ವಿದ್ಯೆಯಲಿ ಪರಿಣತನು ವೀರನಿಹ
ಆ ರಾಜನೀತಿಯಲಿ ಅತಿನಿಪುಣ ಇವನನ್ನು
ನಿನ್ನಯಾ ನಗರಕ್ಕೆ ಕರೆದೊಯ್ಯುದೆನ್ನುತಿರೆ ॥೫೬॥

ಶಂತನುವು ಕೇಳುತಲಿ ಸಂತಸವು ಉಕ್ಕುತಲಿ
ತನ್ನಯಾ ತನಯನನು ಗಾಂಗೇಯನಪ್ಪುತಲಿ
ಆನಂದ ಬಾಷ್ಪಗಳ ಧಾರೆಯನು ಸುರಿಸುತಲಿ
ದೇವವ್ರತ ಸಹಿತದಲಿ ಅರಮನೆಗೆ ಐತಂದ ॥೫೭॥

ವರುಷಗಳು ನಾಲ್ಕುಗಳು ಕಳೆಯುತಿರೆ ಶಂತನುವು
ಗಾಂಗೇಯ ಕುವರಂಗೆ ಯುವರಾಜ ಪಟ್ಟವನು
ಸಂಭ್ರಮದಿ ಕಟ್ಟುತಲಿ ರಾಜ್ಯವನು ಆಳುವಾ
ಜಾಣ್ಮೆಯನು ಕೌಶಲವ ಗೂಢವನು ಅರುಹಿದನು ॥೫೮॥

**ಶಂತನುವು ಮತ್ಸ್ಯಗಂಧಿಯನ್ನು ನೋಡಿದುದು**

ಇಂತಿರಲು ಒಂದು ದಿನ ವಸಂತಋತು ಸಮಯದಲಿ
ಯಮುನೆಯಾ ತೀರದಲಿ ಸುಂದರದ ವನದಲ್ಲಿ
ಪುಷ್ಪಗಳು ಅರಳಿರಲು ತಂಗಾಳಿ ಸೂಸಿರಲು
ಮಕರಂದ ಎಲ್ಲೆಡೆಗೆ ದೆಸೆದೆಸೆಗೆ ಪಸರಿರಲು ॥೫೯॥

ಶುಕಪಿಕವು ಖಗಕುಲವು ಇಂಚರದಿ ಉಲಿಯುತಿರೆ
ನವಿಲುಗಳು ಗರಿಗೆದರಿ ನರ್ತನವ ಗೈಯ್ಯುತಿರೆ
ಮಂಜುಳದ ಸ್ವರದಿಂದ ಆ ಯಮುನೆ ಹರಿಯುತಿರೆ
ಶಂತನುವು ಸಂತಸದಿ ವಿಹರಿಸುತ ಬರುತಲಿರೆ ॥೬೦॥

ನಾಸಿಕವನರಳಿಸುವ ಹೃದಯವನು ಪುಲಕಿಸುವ
ಮನವನ್ನು ತಣಿಸುತಿಹ ದೂರದಿಂ ಬರುತಿರುವ
ಗಂಧವನು ಸವಿಯುತಲಿ ಎಲ್ಲಿಂದ ಬರುತಿಹುದು
ಎನ್ನುತಲಿ ಕೌತುಕದಿ ಅರಸುತಲಿ ನಡೆದಿಹನು ॥೬೧॥

ದೂರದಲಿ ಯೋಜನದ ಅಳತೆಯಲಿ ಬರುತಲಿರೆ
ಸುಂದರದ ರೂಪಸಿಯು ಯೋಜನಾ ಗಂಧಿಯನು
ನೋಡುತಲಿ ಮನಸೋಲ್ದು ಮದನಶರಹತಿಯಲ್ಲಿ
ಕಾಮನಾ ಬಾಧೆಯನು ಸಹಿಸದೆಲೆ ನುಡಿದಿಹನು ॥೬೨॥

ಕಡುಚೆಲುವೆ ಕೋಮಲೆಯೆ ನೀನಾರು ಹೇಳುವುದು
ಎನ್ನಯಾ ಕರವಿಡಿದು ಹೃದಯವನು ತಣಿಸುವುದು
ನಿನ್ನನ್ನು ಅರಮನೆಗೆ ಕರೆದೊಯ್ವೆ ಎನ್ನುತಿರೆ
ಆ ಕನ್ಯೆ ಬೆರಗಾಗಿ ಶಂತನುಗೆ ನುಡಿದಿಹಳು ॥೬೩॥

ಅಂಬಿಗರ ರಾಜನಿಹ ದಾಶನಾ ಮಗಳಿಹೆನು
ವರಮತ್ಸ್ಯಗಂಧಿನಿಯು ಎಂಬುವಾ ಹೆಸರಿಹುದು
ತಂದೆಯಾ ಮಾತನ್ನು ಮೀರುತಲಿ ನಾ ನಡೆಯೆ
ಇದು ಇಷ್ಟ ಎನಗಿಲ್ಲ ಎನ್ನುತಲಿ ನುಡಿಹಳು ॥೬೪॥

**ಮತ್ಸ್ಯಗಂಧಿನಿಯ ಪೂರ್ವ ವೃತ್ತಾಂತ**

ಹೇಪರೀಕ್ಷಿತ ತನಯ ಜನಮೇಜಯ ಮಹೀಪತಿ
ಈ ಮತ್ಸ್ಯ ಕನ್ಯೆಯಾ ವೃತ್ತಾಂತ ಕೇಳುವುದು
ಪೂರ್ವದಲಿ ಉಪರಿಚರ ವರವಸುವು ವಸಂತದಿ
ಗಗನದಲಿ ಚರಿಸುತಿರೆ ಸತಿಯನ್ನು ನೆನಸುತಿರೆ ॥೬೫॥

ಕಾಮಾಗ್ನಿ ತಾಪದಲಿ ವೀರ್ಯವದು ಸ್ಖಲಿಸುತಿರೆ
ಸಂತಾನಉತ್ಪತ್ತಿಗೋಸುಗವೆ ಸತಿಯಳಿಗೆ
ಈಯಲಿಕೆ ವೀರ್ಯವನು ಪತ್ರದಲಿ ಹಿಡಿಯುತಲಿ
ವಿಹಗದಿಂ ಕಳಿಸಿದನು ಆಕಾಶ ಮಾರ್ಗದಲಿ ॥೬೬॥

ಗಿಡುಗನೊಂದು ನೋಡುತಲಿ ವಿಹಗವನು ತಡೆಯುತಲಿ
ಚುಂಚುವಿನ ತುದಿಯಿಂದ ಕೆಣಕುತಿರೆ ವೀರ್ಯವದು
ಕೆಳಗಡೆಗೆ ಯಮುನೆಯಾ ನದಿಯೊಳಗೆ ಬೀಳುತಿರೆ
ಮೀನೊಂದು ನುಂಗುತಲಿ ಗರ್ಭವನು ಧರಿಸಿಹುದು ॥೬೭॥

ಒಂದು ದಿನ ಬೆಸ್ತರವ ಜಾಲವನು ಪಸರಿಸುತ
ಮತ್ಸ್ಯಗಳ ಹಿಡಿಯುತಲಿ ಮೀನೊಂದ ಸೀಳುತಿರೆ
ಸುಂದರದ ಮುದ್ದಾದ ಶಿಶುವೆರಡ ನೋಡುತಲಿ
ಕೊಂಡೊಯ್ದು ಉಪರಿಚರ ನೃಪನಿಗೆ ಇತ್ತಿಹನು ॥೬೮॥

ಭೂಪತಿಯು ಸಂತಸದಿ ಗಂಡುಮಗು ಒಂದನ್ನು
ಸ್ವೀಕರಿಸಿ ಇದು ಎನಗೆ ಇರಲೆಂದು ಹೇಳುತಲಿ
ಇನ್ನೊಂದು ಹೆಣ್ಣು ಶಿಶು ನಿನ್ನಲ್ಲಿ ರಕ್ಷಿಪುದು
ಎನ್ನುತಲಿ ಉಡುಗೊರೆಯ ಸಹಿತದಲಿ ಕಳಿಸಿದನು ॥೬೯॥

ಉಪರಿಚರ ಬಳಿಯಲ್ಲಿ ಗಂಡು ಶಿಶು ಬೆಳೆಯುತಲಿ
ಮತ್ಸ್ಯನಾ ಹೆಸರಿನಲಿ ಮೆರೆದಿಹನು ಜಗದೊಳಗೆ
ಬೆಸ್ತರವ ಸಾಕಿರುವ ಹೆಣ್ಣು ಶಿಶು ದಿನದಿನದಿ
ಬಿದಿಗೆಯಾ ಚಂದಿರನ ತೆರದಲ್ಲಿ ಬೆಳೆದಿಹಳು ॥೨೦॥

ಚೆಲುವಿನಲಿ ರೂಪದಲಿ ಸೌಂದರ್ಯ ತೇಜದಲಿ
ನಯವಿನಯ ಸದ್ಗುಣದಿ ಶೀಲದಲಿ ಸತ್ವದಲಿ
ಸಕಲಗುಣದಾಗರದ ಶ್ರೇಷ್ಠಳೆಂದೆನಿಸುತಲಿ
ಸತ್ಯವತಿ ಎಂಬುವಾ ನಾಮದಲಿ ಮೆರೆದಿಹಳು ॥೨೧॥

ಮೈಯಿಂದ ಮತ್ಸ್ಯದಾ ವಾಸನೆಯು ಹೊಮ್ಮುತಿರೆ
ವರಮತ್ಸ್ಯಗಂಧಿನಿಯು ಎಂಬುವಾ ಹೆಸರಿನಲಿ
ಯೌವ್ವನದ ಸೌಂದರ್ಯ ಲಾವಣ್ಯ ರಸದಿಂದ
ಸರ್ವಾಂಗ ಶೃಂಗಾರ ಶೋಭೆಯಲಿ ಮೆರೆದಿಹಳು ॥೨೨॥

ಹೂಚಿಗುರ ತಳಿರಿನಲಿ ಮಾಮರಗಳೆಸೆಯುತಿರೆ
ಕೋಗಿಲೆಗಳಿಂಚರದಿ ಪಂಚಮದಿ ಉಲಿಯುತಿರೆ
ಭ್ರಮರಗಳು ಸುಮಧುರದ ಝೇಂಕಾರಗೈಯ್ಯುತಿರೆ
ಜಗವೆಲ್ಲ ಸೊಗಸುತಿರೆ ವಸಂತನೃಪ ಬಂದಿಹನು ॥೨೩॥

**ಪರಾಶರರು ಮತ್ಸ್ಯಗಂಧಿನಿಯನ್ನು ನೋಡಿದುದು**

ಒಂದು ದಿನ ಆ ಮಥ್ಸ್ಯ ಗಂಧಿನಿಯು ಯಮುನೆಯಲಿ
ದೋಣಿಯನು ನಡೆಸುತಿರೆ ಋಷಿವರ ಪರಾಶರನು
ಕಾಣುತಲಿ ಮೋಹಿಸುತ ಕಾಮದಲಿ ಸಿಲುಕುತಲಿ
ತನ್ನೊಡನೆ ರಮಿಸುವುದು ಎನ್ನುತಲಿ ನುಡಿಯುತಿರೆ ॥೨೪॥

ಸುತ್ತಲೂ ಎಲ್ಲೆಡೆಗೆ ಋಷಿನಿಕರ ನೆರೆದಿಹುದು
ಸಮಯವಿದು ಸರಿಯಲ್ಲ ಎನಗಿಷ್ಟವಿಲ್ಲವಿದು
ಎನ್ನುತಿರೆ ಮುನಿವರನು ಮಂಜನ್ನು ಸುರಿಸುತಲಿ
ಕತ್ತಲನು ಕವಿಸುತಿರೆ ಆ ಮತ್ಸ್ಯ ನುಡಿದಿಹಳು ॥೨೫॥

ಮದುವೆಯಾ ಪೂರ್ವದಲಿ ಎನ್ನಯಾ ಕನ್ಯತ್ವ
ಭಂಗವದು ಆಗುತಿರೆ ತಂದೆಯಾ ಜೊತೆಯಲ್ಲಿ
ವಾಸಿಸುವದತಿಕಷ್ಟ ಎನ್ನುತಿರೆ ಋಷಿವರನು
ಮತ್ತೆ ಆ ಕನ್ಯತ್ವ ನಿನಗೀವೆ ಎಂದಿಹನು ॥೨೬॥

ಎನ್ನಯಾ ತನುವಿಂದ ಹೊಮ್ಮುತಲಿ ಸೂಸುತಿಹ
ಮತ್ಸ್ಯದಾ ವಾಸನೆಯ ಕಳೆಯುವುದು ಎನ್ನುತಿರೆ
ಋಷಿವರನು ಮೈಯಿಂದ ದುರ್ಗಂಧ ತೊಲಗಿಸುತ
ಸೌಗಂಧ ಸೂಸುವಾ ಪರಿಯಲ್ಲಿ ಗೈದಿಹನು ॥೨೭॥

ಅಂದಿನಿಂ ಗಂಧವತಿಯೆಂಬುವಾ ಹೆಸರಿನಲಿ
ಬೆಳಗುತಿರೆ ಋಷಿವರ ಪರಾಶರನು ಹರ್ಷದಲಿ
ಗಂಧವತಿ ಚೆಲುವೆಯನು ಸರಸದಲಿ ರಮಿಸುತಿರೆ
ಜಗಖ್ಯಾತ ಸುತಜ್ಞಾನಿ ವರವ್ಯಾಸ ಜನಿಸಿದನು ॥೨೮॥

ದಿನದಿನದಿ ಬೆಳೆಯುತಲಿ ಒಂದುದಿನ ಸುತವ್ಯಾಸ
ತಾಯಿಯಾ ಚರಣಕ್ಕೆ ಎರಗುತಲಿ ಭಕುತಿಯಲಿ
ಕಷ್ಟಗಳು ಬರುತಿರಲು ಎನ್ನನ್ನು ನೆನೆಯುವುದು
ತಪ್ಪದೇ ಐತಂದು ಕಷ್ಟಗಳ ಕಳೆಯುವೆನು ॥೨೯॥

ಎನ್ನುತಲಿ ಕಾನನಕೆ ತಪಸಿಂಗೆ ತೆರಳುತಲಿ
ವೇದಗಳ ಸಾರವಿಹ ವರ ಬ್ರಹ್ಮ ಸೂತ್ರವನು
ಪಂಚಮದ ವೇದವಿಹ ಜ್ಞಾನದಾ ಆಗರದ
ಮೋಕ್ಷವನು ಈಯುತಿಹ ಭಾರತವ ರಚಿಸಿದನು ॥೩೦॥

ಆ ಮತ್ಸ್ಯ ಗಂಧವತಿ ಸಮ್ಮತಿಯ ನೀಯದಿರೆ
ಶಂತನುವು ಮರಳುತಲಿ ಚಿಂತಿಸುತ ಕೊರಗುತಿರೆ
ಗಾಂಗೇಯ ಕಳವಳದ ಕಾರಣವ ಕೇಳುತಿರೆ
ನರಪತಿಯು ಸಕಲವನು ಅರುಹಿದನು ವಿಸ್ತರದಿ ॥೩೧॥

**ಗಾಂಗೇಯನು ದಾಶನೃಪನೆಡೆಗೆ ತೆರಳುವುದು**

ಗಾಂಗೇಯ ತಕ್ಷಣದಿ ದಾಶನೃಪನೆಡೆಯಲ್ಲಿ
ತೆರಳುತಲಿ ನಿನ್ನಯಾ ಕುವರಿಯನು ಶಂತನುವು
ನೋಡುತಲಿ ಬಯಸಿಹನು ನಿನ್ನಯಾ ಸುತೆಯನ್ನು
ಮದುವೆಯಲಿ ಶಂತನುಗೆ ಈಯುವುದು ಎನ್ನುತಿರೆ ॥೩೨॥

ಎನ್ನಯಾ ಮಾತನ್ನು ನಡೆಸಲಿಕೆ ಒಪ್ಪಿದರೆ
ಎನ್ನಯಾ ಮಗಳನ್ನು ಶಂತನುಗೆ ಈಯುವೆನು
ಕುವರಿಯಲಿ ಜನಿಸಿರುವ ಮಕ್ಕಳಿಗೆ ರಾಜ್ಯವನು
ಈಯಲಿಕೆ ಒಪ್ಪಿದರೆ ಮಗಳನ್ನು ಈಯುವೆನು ॥೩೩॥

ಎನ್ನುತಿರೆ ಅಂಬಿಗನು ಗಾಂಗೇಯ ಕೇಳುತಲಿ
ಎನ್ನಯಾ ಸಮ್ಮತವು ಒಪ್ಪಿದೆನು ಎನ್ನುತಿರೆ
ನಿನಗಿಹುದು ಒಪ್ಪಿಗೆಯು ನಿನ್ನಯಾ ಸತಿಸುತರು
ರಾಜ್ಯಕ್ಕೆ ಕಲಹವನು ಗೈಯ್ಯುವಾ ಭಯವಿಹುದು ॥೩೪॥

ಎನ್ನುತಿರೆ ದಾಶದೊರೆ ಗಾಂಗೇಯ ಕೇಳುತಲಿ
ಗಗನವದು ಕಳಚುತಲಿ ಶಿರದಲ್ಲಿ ಬಿದ್ದರೂ
ಭೂಮಿಯದು ಬಿರಿಯುತಲಿ ಎನ್ನನು ನುಂಗಿದರು
ನಾ ಇನ್ನು ಎಂದಿಗೂ ಮದುವೆಯನು ಆಗದಿಹೆ ॥೩೫॥

ಮರಣದಾ ಪರ್ಯಂತ ನಾ ಬ್ರಹ್ಮಚರ್ಯವನು
ತಪ್ಪದಲೆ ಪಾಲಿಸುವೆ ಜಗದೊಳಿಹ ನಾರಿಯರು
ಮುಂದಕ್ಕೆ ಜನಿಸುವಾ ವನಿತೆಯರು ಎಲ್ಲರೂ
ಎನ್ನಯಾ ಮಹತಾಯಿ ಜಾಹ್ನವಿಗೆ ಸರಿಸಮರು ॥೮೬॥

ಇದು ಎನ್ನ ಪ್ರತಿಜ್ಞೆ ಎಂದಿಗೂ ಭಂಗಿಸೆನು
ಎನ್ನುತಿರೆ ಗಾಂಗೇಯ ದಾಶನೃಪನೊಪ್ಪಿದನು
ಭೀಷಣ ಪ್ರತಿಜ್ಞೆಯನು ಗೈಯ್ಯುತಲಿ ಗಾಂಗೇಯ
ಭೀಷ್ಮನಾ ಹೆಸರಿನಲಿ ಲೋಕದಲಿ ಬೆಳಗಿದನು ॥೮೭॥

## ಶಂತನುವು ಮತ್ತು ಗಂಧವತಿಯರ ವಿವಾಹ

ಅರಮನೆಗೆ ಐತಂದು ದಾಶನೃಪನಾಶಯವ
ತನ್ನಯ ಪ್ರತಿಜ್ಞೆಯನು ವಿಸ್ತರದಿ ವಿವರಿಸಲು
ಶಂತನುವು ಸಂತಸದಿ ನಿನ್ನಯಾ ಮರಣವದು
ನಿನ್ನಿಚ್ಛೆ ಕೈವಶವು ಎನ್ನುತಲಿ ಹರಸಿದನು ॥೮೮॥

ಶಂತನುವು ಗಂಧವತಿ ಈರ್ವರಾ ಮದುವೆಯದು
ಮಂಗಳದ ವಾದ್ಯಗಳ ವೈಭವದಿ ಜರುಗಿದುದು
ನೆರೆದಿರುವ ಸಕಲಜನ ಗಾಂಗೇಯ ಗೈದಿರುವ
ಭೀಷಣ ಪ್ರತಿಜ್ಞೆಯನು ಶ್ಲಾಘಿಸುತ ತೆರಳಿದರು ॥೮೯॥

ಇಂತಿರಲು ವರುಷಗಳು ಉರುಳುತಿರೆ ಸಂತಸದಿ
ಗಂಧವತಿ ಮಕ್ಕಳುಗಳಿಬ್ಬರನು ಪಡೆಯುತಿರೆ
ಚಿತ್ರಾಂಗದ ವಿಚಿತ್ರವೀರ್ಯರೆಂಬುವಾ ಹೆಸರಿನಲಿ
ದಿನದಿನದಿ ಬೆಳೆದಿಹರು ಅಪ್ರತಿಮ ತೇಜದಲಿ ॥೯೦॥

ಕಾಲವದು ಗತಿಸುತಿರೆ ಶಂತನುವು ಸಾಯುತಿರೆ
ಚಿತ್ರಾಂಗದಾ ವೀರ ಸಿಂಹಾಸನೇರಿದನು
ಗಂಧರ್ವರವರೊಡನೆ ಯುದ್ಧವನು ಗೈಯ್ಯುತಿರೆ
ಮರಣವನು ಅಪ್ಪುತಲಿ ಸ್ವರ್ಗವನು ಸೇರಿದನು ॥೯೧॥

ಬಳಿಕಿನಲಿ ವಿಚಿತ್ರವೀರ್ಯಂಗೆ ಮಂಗಲದಿ
ಪಟ್ಟವನು ಕಟ್ಟುತಿರೆ ರಾಜ್ಯವನು ಆಳುತಿರೆ
ಗಂಧವತಿ ಭೀಷ್ಮನನು ಕರೆಯುತಲಿ ನುಡಿದಿಹಳು
ವಿಚಿತ್ರವೀರ್ಯಂಗೆ ಮದುವೆಯನು ಮಾಡಲಿಕೆ ॥೯೨॥

## ಭೀಷ್ಮನು ಕಾಶೀರಾಜನನ್ನು ಜಯಿಸಿ ಮೂವರು ಕುವರಿಯರನ್ನು ತರುವುದು

ಇದುಯೋಗ್ಯ ಸಮಯವಿದೆ ಕನ್ಯೆಯನು ನೋಡುವುದು
ಎನ್ನುತಿರೆ ಆ ವೇಳೆ ಕಾಶಿಯಾ ನರಪತಿಯು
ಕುವರಿಯರ ಸ್ವಯಂವರದ ಸಿದ್ಧತೆಯ ಗೈದುವನು
ಅರಿಯುತಲಿ ಗಾಂಗೇಯ ಕಾಶಿಗೇ ತೆರಳಿದನು ॥೯೩॥

ಸಭೆಯಲ್ಲಿ ಭೀಷ್ಮನನು ಕಾಣುತಲಿ ನಗುವಿನಲಿ
ಸಾಯುವಾ ಕಾಲದಲಿ ಇವನೇಕೆ ಬಂದಿಹನು
ಮದುವೆಯಾ ಮುದಿಹುಚ್ಚು ಹಿಡಿದಿದೆಯೆ ತ್ಯಾಗದ
ಪ್ರತಿಜ್ಞೆಯನು ಮುರಿಯುವನೆ ಎನ್ನುತಲಿ ನುಡಿದಿಹರು ॥೯೪॥

ಭೀಷ್ಮನತಿ ಕೋಪದಲಿ ಕನ್ಯೆಯರ ಮೂವರನು
ರಥದಲ್ಲಿ ಕುಳ್ಳಿರಿಸಿಕೊಂಡೊಯ್ಯುತಿರುತಿರಲು
ಸಕಲನೃಪ ನಿಕರವದು ಕಾಶೀನೃಪಸಹಿತದಲಿ
ಭೀಷ್ಮನನ ಮುತ್ತುತಲಿ ಯುದ್ಧವನು ಗೈಯ್ಯುತಿರೆ ॥೯೫॥

ಶರಗಳನು ಸುರಿಸುತಲಿ ಜಾಲದಲಿ ಮುಸುಕುತಲಿ
ಅರಸುಗಳನೆಲ್ಲರನು ಕೆಡಹುತಲಿ ಜಯಿಸುತಲಿ
ಮೂವರಾ ಕನ್ಯೆಯರ ಸಹಿತದಲಿ ಗಾಂಗೇಯ
ಅರಮನೆಗೆ ಐತಂದು ಗಂಧವತಿಗುಸುರಿದನು ॥೯೬॥

## ಅಂಬೆಯ ಛಲ

ಮೊದಲನೆಯ ಆ ಅಂಬೆ ಭೀಷ್ಮನನು ಮೋಹಿಸುತ
ಮದುವೆಯನು ಆಗುವೆನು ಎನ್ನುತಲಿ ಹಟಹಿಡಿಯೆ
ಅಂಬರವೆ ಬಿದ್ದರೂ ಲಗ್ನವನು ಆಗದಿಹೆ
ಎಂಬುವ ಪ್ರತಿಜ್ಞೆಯನು ಎಂದಿಗೂ ಮುರಿಯದಿಹೆ ॥೯೭॥

ಇದು ದಿಟವು ಎನ್ನುತಲಿ ಗಾಂಗೇಯ ಒಲ್ಲೆನಲು
ಕೋಪದಲಿ ಆ ಅಂಬೆ ನಿನ್ನಯಾ ಮರಣಕ್ಕೆ
ಕಾರಣಳು ನಾನಾಗಿ ಮುಂದೆ ಬಹೆನೆನ್ನುತಲಿ
ಕ್ರೋಧದಲಿ ಅರಮನೆಯ ತ್ಯಜಿಸುತಲಿ ತೆರಳಿದಳು ॥೯೮॥

ಆ ಅಂಬೆ ಶಿಖಂಡಿಯಾ ಜನುಮವನು ತಾಳುತಲಿ
ಕೌರವರ ಪಾಂಡವರ ಯುದ್ಧದಲಿ ರಣದಲ್ಲಿ
ಭೀಷ್ಮನಾ ಎದುರಿನಲಿ ನಿಲ್ಲುತಿರೆ ಗಾಂಗೇಯ
ಶಸ್ತ್ರಗಳ ತ್ಯಜಿಸುತಲಿ ಧರಣಿಯಲಿ ಒರಗಿದನು ॥೯೯॥

### ವಿಚಿತ್ರವೀರ್ಯನ ವಿವಾಹ

ಉಳಿದಿರುವ ಅಂಬಿಕೆಯ ಅಂಬಾಲಿಕೆಯರಿಬ್ಬರನು
ವಿಚಿತ್ರವೀರ್ಯಂಗೆ ವೈವಾಹ ವೈಭವದಿ
ಈಯುತಿರೆ ಸಂತಸದಿ ಸಕಲಜನ ನಲಿಯುತಿರೆ
ವರುಷಗಳು ಏಳುಗಳು ಕಳೆದಿಹವು ಭರದಲ್ಲಿ ||೧೦೦||

ಅತಿಕಾಮದಾಸೆಯಲಿ ವಿಷಯದಲಿ ರಮಿಸುತಲಿ
ಕ್ಷಯದಿಂದ ವಿಚಿತ್ರವೀರ್ಯನತಿ ನರಳುತಲಿ
ಸಂತಾನವಿಲ್ಲದೆಯೆ ಮೃತ್ಯುವನು ಅಪ್ಪುತಿರೆ
ಗಂಧವತಿ ದುಃಖದಾ ಸಾಗರದಿ ಮುಳುಗಿದಳು ||೧೦೧||

ಕುರುವಂಶ ಜ್ಯೋತಿಯದು ಇಂದಿನಲಿ ನಂದಿಹುದು
ಕುರುಕುಲದ ಲತೆಯೊಣಗಿ ಮುರುಟಿಹುದು ಎನ್ನುತಲಿ
ಭೀಷ್ಮನನ ಕರೆಸುತಲಿ ನೀನೆಯೇ ಪಟ್ಟವನು
ಏರುತಲಿ ರಾಜ್ಯವನು ಆಳುವುದು ಎನ್ನುತಿರೆ ||೧೦೨||

ಭೂದೇವಿ ಎನ್ನನ್ನು ನುಂಗಿದೊಡೆ ಎನ್ನಯಾ
ವಚನಕ್ಕೆ ಭಂಗವನು ಮಾಡದಿಹೆ ಎನ್ನುತಿರೆ
ಗಂಧವತಿ ಯೋಚಿಸುತ ಕಷ್ಟದಲಿ ನೆನೆ ಎಂದು
ಹೇಳಿರುವ ವ್ಯಾಸನನು ಮನದೊಳಗೆ ನೆನೆದಿಹಳು ||೧೦೩||

### ವ್ಯಾಸಋಷಿಯ ಕೃಪೆಯಿಂದ ಕುರುವಂಶ ವೃದ್ಧಿಯಾದುದು ಧೃತರಾಷ್ಟ್ರ ಪಾಂಡು, ಮತ್ತು ವಿದುರರ ಜನನ

ನೆನೆಯುತಿರೆ ವ್ಯಾಸಋಷಿ ಐತರುತ ವಿನಯದಲಿ
ಗಂಧವತಿಯಂಘ್ರಿಗಳ ನಮಿಸುತಲಿ ನುಡಿದಿಹನು
ಮಾತೋಶ್ರೀ ನನ್ನನ್ನು ಚಿಂತಿಸಿದ ಕಾರಣವ
ತಿಳಿಸುವದು ನಿಮ್ಮಿಷ್ಟ ಸಲಿಸುವೆನು ಎನ್ನುತಿರೆ ||೧೦೪||

ನೀ ಎನ್ನ ಚೊಚ್ಚಲದ ಮಗನಿರುವೆ ಹಿರಿಯನಿಹೆ
ಭೀಷ್ಮನವ ಘೋರ ಪ್ರತಿಜ್ಞೆಯನು ಗೈದಿಹನು
ವಿಚಿತ್ರವೀರ್ಯನವ ಸಂತಾನವಿಲ್ಲದೆಯೆ
ಸ್ವರ್ಗವನು ಸೇರಿದನು ಕುರುವಂಶ ನಶಿಸುಹುದು ||೧೦೫||

ಕುರುಕುಲದ ವೃಕ್ಷವದು ಬರಡಾಗಿ ಉರುಳಿದುದು
ಕುರುವಂಶ ವೃದ್ಧಿಸಲು ಎನ್ನಯಾ ಸೊಸೆಗಳಿಗೆ
ಸಂತಾನವೀಯುವದು ಎನ್ನುತಿರೆ ಗಂಧವತಿ
ಆ ವ್ಯಾಸನೊಪ್ಪುತಲಿ ಗಂಧವತಿಗುಸುರಿದನು ||೧೦೬||

ತಾಯಿಯೇ ಕೇಳುವುದು ನಿನ್ನಯಾ ಸೊಸೆಗಳವರೀರ್ವರು
ವರುಷವೊಂದು ಕಠಿಣವಿಹ ವ್ರತಗಳನು ಪಾಲಿಸುತ
ಎನ್ನಯಾ ಶಕ್ತಿಯನು ಧರಿಸಲಿಕೆ ಸಶಕ್ತರು
ಆಗಿರ್ದುದಾದೊಡೆಯು ಶಿಶುಗಳನು ಪಡೆಯುವರು ||೧೦೭||

ಈ ತೆರದಿ ನುಡಿಯುತಿರೆ ಗಂಧವತಿ ಒಪ್ಪುತಿರೆ
ವರವ್ಯಾಸ ತೆರಳುತಿರೆ ಅಂಬಿಕೆಯು ಅಂಬಾಲಿಕೆ
ವರುಷವೊಂದು ವ್ರತಗಳನು ಪಾಲಿಸಲು ವ್ಯಾಸಋಷಿ
ಐತರಲು ಹರುಷದಲಿ ಸತ್ಕಾರಗೈದಿಹರು ||೧೦೮||

ವರವ್ಯಾಸ ಕೋಟಿಸೂರ್ಯರಂತೆಸೆವ ತೇಜದಲಿ
ಅಂಬಿಕೆಯ ನೋಡುತಿರೆ ನೋಡಲಿಕೆ ಆಗದಲೆ
ಭಯದಲ್ಲಿ ಅಂಬಿಕೆಯು ಕಣ್ಣುಗಳ ಮುಚ್ಚುತಿರೆ
ಗರ್ಭದಲಿ ಅಂಧ ಶಿಶು ಮೂಡಿಹುದು ಆ ಕ್ಷಣದಿ ||೧೦೯||

ಸತ್ಯವತಿ ಕೌತುಕದಿ ಎಂಥ ಶಿಶು ಜನಿಸುವುದು
ಎನ್ನುತಲಿ ಕೇಳುತಿರೆ ಸುತವ್ಯಾಸ ನುಡಿದಿಹನು
ಹುಟ್ಟನಲಿ ಅಂಧನಿಹ ವೀರಪ್ರತಾಪನಿಹ
ಈರೈದು ಸಾವಿರದ ಆನೆಗಳ ಶಕ್ತಿಯುತ ||೧೧೦||

ಬಲಯುತನು ನೂರೊಂದು ಮಕ್ಕಳನು ಪಡೆಯುತಲಿ
ಶಸ್ತ್ರಗಳ ಶಾಸ್ತ್ರಗಳ ತರ್ಕಗಳ ವಿದ್ಯೆಗಳ
ರಾಜ್ಯವನು ಆಳುವಾ ನೀತಿಗಳ ಪರಿಣತನು
ರಾಜರ್ಷಿ ಎನಿಸುತಲಿ ಧರೆಯೊಳಗೆ ಮೆರೆಯುವನು ||೧೧೧||

ಕೇಳುತಲಿ ಸತ್ಯವತಿ ಮನದೊಳಗೆ ನೋಯುತಲಿ
ಕುರುಡಾದ ಇವನೆಂದು ಘನಭರತವರ್ಷವನು
ಆಳುವನು ಎನ್ನುತಲಿ ಇನ್ನೊಬ್ಬ ಪುತ್ರನನು
ಕರುಣಿಪುದು ಎನ್ನುತಿರೆ ವರವ್ಯಾಸನೊಪ್ಪಿದನು ||೧೧೨||

ಅಂಬಿಕೆಯು ಕುರುಡಾದ ಶಿಶುವೊಂದು ಪ್ರಸವಿಸಲು
ಗಂಧವತಿ ವ್ಯಾಸನನು ನೆನೆಯುತಿರೆ ಐತಂದು
ದಿವ್ಯದಾ ಪ್ರಭೆಯಲ್ಲಿ ಅಂಬಾಲಿಕೆಯನೀಕ್ಷಿಸಲು
ಬಾಲಿಕೆಯು ಭಯದಲ್ಲಿ ಅಂಜುತಿರೆ ತನುವೆಲ್ಲ ||೧೧೩||

ಬೆಳ್ಪನೆಯೆ ಆಗುತಿರೆ ಬೆಳ್ಪಗಿನ ಮಗುವೊಂದು
ಜನಿಸುತಿರೆ ಪಾಂಡುವಿನ ನಾಮವನು ಇಟ್ಟಿಹರು
ಗಂಧವತಿ ಇನ್ನೊಬ್ಬ ಮಗುವನ್ನು ಕರುಣಿಪುದು
ಎನ್ನುತಲಿ ಇನ್ನೋರ್ವಸೊಸೆಯನ್ನು ಕಳುಹಿದಳು ||೧೧೪||

ಆ ಸೊಸೆಯು ಇಚ್ಛಿಸದೆ ದಾಸಿಯನು ಕಳುಹುತಿರೆ
ನಿರ್ಮಲದ ಚಿತ್ತದಲಿ ಶುದ್ಧದಾ ಭಾವದಲಿ
ಬರುತಲಿರೆ ವರವ್ಯಾಸ ದಿವ್ಯದಲಿ ನೋಡುತಿರೆ
ಧರ್ಮಜ್ಞ ನೀತಿಜ್ಞ ವರವಿದುರ ಜನಿಸಿದನು ||೧೧೫||

ಪೂರ್ವದಲಿ ಯಮಧರ್ಮ ಮಾಂಡವ್ಯ ಋಷಿವರಗೆ
ಕಾರಣವು ಇಲ್ಲದೆಯೆ ಶಿಕ್ಷೆಯನು ಈಯುತಿರೆ
ಕೋಪದಲಿ ಭೂಮಿಯಲಿ ಜನುಮವನು ತಾಳುವುದು
ಎನ್ನುತಲಿ ಶಾಪವನು ಯಮಧರ್ಮಗಿತ್ತಿಹನು ||೧೧೬||

ಕೆಸರಿನಲಿ ಕಮಲವದು ಜನಿಸುವಾ ಪರಿಯಲ್ಲಿ
ರಾಕ್ಷಸರ ವಂಶದಲಿ ವಿಭೀಷಣನ ಪರಿಯಲ್ಲಿ
ಕೌರವರ ಕುಲದಲ್ಲಿ ಯಮಧರ್ಮ ದಾಸಿಯಲಿ
ಧರ್ಮಜ್ಞ ವಿದುರನಾ ರೂಪದಲಿ ಜನಿಸಿದನು ||೧೧೭||

ಶುಕ್ಲದಾ ಚಂದಿರನ ಪರಿಯಲ್ಲಿ ದಿನದಿನದಿ
ಧೃತರಾಷ್ಟ್ರ ಸುತಪಾಂಡು ಚಂದ್ರಕುಲ ಕುಡಿ ಎರಡು
ಸೊಬಗಿನಲಿ ವರ್ಧಿಸುತ ರಾಜಕಳೆ ಉಕ್ಕುತಲಿ
ಬಾಲಕರು ಈರ್ವರೂ ಚೆಲುವಿನಲಿ ಹೊಳೆದಿಹರು ||೧೧೮||

ಉಪನಯನ ಗೈಯ್ಯುತಲಿ ವೇದಗಳ ಶಾಸ್ತ್ರಗಳ
ಬಿಲುವಿದ್ಯೆ ಶಸ್ತ್ರಗಳ ಅಸ್ತ್ರಗಳ ಕಲಿಯುತಲಿ
ಗಜತುರಗನೇರುವುದು ಖಡುಗಗಳ ತಿರುಹುವುದು
ರಣವಿದ್ಯೆ ಪರಿಣಿತರು ಎನಿಸುತಲಿ ಮೆರೆದಿಹರು ||೧೧೯||

### ಧೃತರಾಷ್ಟ್ರನ ವಿವಾಹ

ಕಾಲವದು ಕಳೆಯುತಿರೆ ಸತ್ಯವತಿ ಭೀಷ್ಮನನು
ಕರೆಯುತಲಿ ಧೃತರಾಷ್ಟ್ರ ಕುವರನಿಗೆ ಮದುವೆಯನು
ಮಾಡುವಾ ಸಮಯವಿದು ಸನ್ನಿಹಿತವಾಗಿಹುದು
ಎನ್ನುತಿರೆ ಮನದೊಳಗೆ ಯೋಚಿಸುತ ವರಭೀಷ್ಮ ||೧೨೦||

ಗಾಂಧಾರದವನಿಪನ ಸುಬಲನಾ ಕುವರಿಯನು
ಗಾಂಧಾರಿ ಚೆಲುವೆಯನು ಅಂಧಧೃತರಾಷ್ಟ್ರಂಗೆ
ಯೋಗ್ಯ ಮಿಹಗುಣವತಿಯು ವಧುವೆಂದು ನಿಶ್ಚಯಿಸಿ
ಸುಬಲನೃಪಗರುಹುತಿರೆ ಸುಬಲನತಿ ಸಂತಸದಿ ||೧೨೧||

ನಿಜಕುವರ ಶಕುನಿಯಾ ಸಹಿತದಲಿ ಇಭಪುರಕೆ
ಐತಂದು ಸುಗುಣೆಯಾ ಗಾಂಧಾರಿ ಕುವರಿಯನು
ಅಂಧಧೃತರಾಷ್ಟ್ರಂಗೆ ವೈಭವದಿ ಈಯುತಿರೆ
ಗಂಧವತಿ ಮೊದಲಾಗಿ ಸಕಲಜನ ನಲಿದಿಹರು ||೧೨೨||

ಬಳಿಕಲಾ ಗಾಂಧಾರಿ ನಿಜಪತಿಯು ಧೃತರಾಷ್ಟ್ರ
ಅಂಧನಿಹ ಎಂಬುದನು ಅರಿಯುತಲಿ ಗಂಡನಿಗೆ
ನೋಡಲಿಕೆ ಆಗದಾ ಭಾಗ್ಯವದು ತನಗೇಕೆ
ವರಸುದತಿ ಸುವ್ರತೆಯು ಮಹಿಳಾ ಶಿರೋಮಣಿಯು ||೧೨೩||

ಮಹಸಾಧ್ವಿ ಗಾಂಧಾರಿ ತನ್ನಯಾ ಕಂಗಳಿಗೆ
ಬಟ್ಟೆಯಾ ಪಟ್ಟಿಯನು ಬಿಗಿಯುತಲಿ ಕಟ್ಟುತಲಿ
ಕುರುಡನಿಹ ಗಂಡನಾ ಸೇವೆಯನು ಮಾಡುತಲಿ
ಜಗದೊಳಗೆ ಅಪ್ರತಿಮ ಪತಿವ್ರತೆಯು ಎನಿಸಿದಳು ||೧೨೪||

### ಕುಂತಿಯ ಜನನ

ಇತ್ತಲಾ ಯಾದವರ ವೀರನೃಪ ಶೂರನಾ
ವರತನಯ ವಸುದೇವನಾ ತಂಗಿ ಸೋದರಿಯು
ಯಾದವ ಕುಲೋತ್ತಮನ ಮಾಧವನ ವರ ಅತ್ತೆ
ಪೃಥುದೇವಿ ದಿನದಿನದಿ ಬೆಳೆಯುತಲಿ ಇರುತಿರಲು ||೧೨೫||

ಶೂರನಾ ಗೆಳೆಯಂಗೆ ದೊರೆ ಕುಂತಿ ಭೋಜನಿಗೆ
ಮಕ್ಕಳುಗಳಿಲ್ಲದಿರೆ ಚಿಂತೆಯಲಿ ಕೊರಗುತಿರೆ
ಆ ವರಕುಂತಿ ಭೋಜಂಗೆ ಪೃಥುವನ್ನು ಸಾಕಲಿಕೆ
ಈಯುತಿರೆ ಆಕೆಯನು ಸಂತಸದಿ ಬೆಳೆಸಿದನು ||೧೨೬||

### ದೂರ್ವಾಸರು ಕುಂತಿಗೆ ವರಗಳನ್ನು ಕೊಡುವುದು

ಇಂತಿರಲು ದಿನ ಒಂದು ದೂರ್ವಾಸ ಮುನಿ ಬರಲು
ಕುಂತಿನೃಪ ಕಾರ್ಯದಲಿ ಅತಿಮಗ್ನನಾಗುತಲಿ
ಆತಿಥ್ಯಗೈಯ್ಯದಿರೆ ಋಷಿವರನು ಕೋಪದಲಿ
ನಿನ್ನಯಾ ರಾಜ್ಯವದು ಐಶ್ವರ್ಯ ಸಕಲವೂ ||೧೨೭||

ನಾಶವನು ಹೊಂದುವುದು ಎನ್ನುತಲಿ ಶಾಪವನು
ಅರಸನಿಗೆ ಈಯುತಿರೆ ಆ ಕುಂತಿ ಕೇಳುತಲಿ
ಸಾಷ್ಟಾಂಗವೆರಗುತಲಿ ದೂರ್ವಾಸ ಮುನಿವರನ
ವಿವಿಧೋಪಚಾರದಲಿ ಸತ್ಕಾರಗೈದಿಹಳು ||೧೨೮||

ಋಷಿವರನು ಬಾಲಿಕೆಯು ಗೈದಿರುವ ಸತ್ಕಾರ
ನೆನೆಯುತಲಿ ಸಂತಸದಿ ನಿನಗೈದು ಮಂತ್ರಗಳ
ಉಪದೇಶ ಗೈಯ್ಯುವೆನು ಅವುಗಳನು ಜಪಿಸುತಿರೆ
ಪುತ್ರರನು ನೀ ಪಡೆವೆ ನಿಶ್ಚಿತದಿ ಎನ್ನುತಲಿ ||೧೨೯||

### ಕರ್ಣನ ಜನನ

ಆ ಕುಂತಿ ಬಾಲಕಿಗೆ ಮಂತ್ರಗಳ ನುಸುರುತಲಿ
ತನ್ನಯಾ ಆಶ್ರಮಕೆ ದೂರ್ವಾಸ ತೆರಳುತಿರೆ
ವರಕುಂತಿ ಕೌತುಕದಿ ಆಟವನು ಆಡಲಿಕೆ
ಜೀವಂತ ಬೊಂಬೆಯನು ತಹೆನೆಂದು ತವಕದಲಿ ||೧೩೦||

ಸುರನದಿಯ ತೀರದಲಿ ಸೂರ್ಯಂಗೆ ನಮಿಸುತಲಿ
ಸೂರ್ಯನಾ ಮಂತ್ರವನು ಭಕುತಿಯಲಿ ಪಠಿಸುತಿರೆ
ಹೊಳೆಹೊಳೆವ ತೇಜದಲಿ ಆ ಸೂರ್ಯ ಧರೆಗಿಳಿದು
ಕುಂತಿಯಾ ಎದುರಿನಲಿ ನಿಲ್ಲುತಲಿ ನುಡಿದಿಹನು ||೧೩೧||

ದಿನಮಣಿಯ ಕಾಣುತಲಿ ಹೆದರುತಲಿ ಬಾಲಿಕೆಯು
ಮಂತ್ರವಿದು ಸಟೆಯಹುದೊ ದಿಟವಿಹುದೊ ಎಂಬುದನು
ಅರಿಯಲಿಕೆ ಜಪಿಸಿದೆನು ನೀ ಮರಳಿ ಹೋಗುವುದು
ಮಕ್ಕಳೆನಗಾವುದೂ ಬೇಡೆಂದು ನುಡಿದಿಹಳು ||೧೩೨||

ದೂರ್ವಾಸ ಮುನಿವರನ ವರ ಎಂದು ಜಗದೊಳಗೆ
ಹುಸಿ ಎಂದು ಆಗದಿದೆ ಎನ್ನಸಮ ವಿಕ್ರಮನ
ಶಿಶುವನ್ನು ನೀಪಡೆವೆ ಇಲ್ಲದಿರೆ ದೂರ್ವಾಸ
ಎನ್ನಯಾ ತೇಜವನು ಅಳಿಸುವನು ಎನ್ನುತಿರೆ ||೧೩೩||

ನಾನಿಗ ಬಾಲಿಕೆಯು ಮದುವೆಯದು ಆಗಿಲ್ಲ
ಮಕ್ಕಳನು ಪಡೆಯುವುದು ಶಾಸ್ತ್ರದ ವಿರುದ್ಧವಿದು
ಎನ್ನುತಿರೆ ಆ ಕುಂತಿ ಮೊದಲಿನಾ ಪರಿಯಲ್ಲಿ
ಮತ್ತೆ ಆ ಕನ್ಯತ್ವ ನಿನಗೀವೆ ಎನ್ನುತಲಿ ||೧೩೪||

ಆ ತಪನು ನುಡಿಯುತಿರೆ ಆ ಕ್ಷಣದಿ ನುತಕುಂತಿ
ಹೊಳೆಯುತಿಹ ಕರ್ಣಗಳ ಕುಂಡಲದಿ ಕವಚದಲಿ
ದಿವ್ಯದಾ ತೇಜದಲಿ ಬಾಲರವಿ ಪ್ರಭೆಯಿಂದ
ಶೋಭಿಸುವ ಸುಂದರದ ಶಿಶುವನ್ನು ಪಡೆದಿಹಳು ||೧೩೫||

ಮತ್ತೆ ಆ ಕೌಮಾರ್ಯತನವನ್ನು ಗಗನಮಣಿ
ನುತಕುಂತಿಗೀಯುತಲಿ ಗಗನಕ್ಕೆ ಸರಿಯುತಿರೆ
ಮದುವೆಯಾ ಮೊದಲಿಂಗೆ ಮಗುವನ್ನು ಪಡೆದಿರುವ
ಅಪವಾದ ಚಿಂತೆಯಲಿ ಮುಳುಗುತಲಿ ಆ ಕುಂತಿ ||೧೩೬||

ಶಿಶುವನ್ನು ಬಾಳೆಯಾ ತೆಪ್ಪದಲಿ ಇರಿಸುತಲಿ
ಗಂಗೆಯಾ ನದಿಯಲ್ಲಿ ತೇಲುತಲಿ ಬಿಟ್ಟಿಹಳು
ಜಗದೊಳಿಹ ಜೀವರನು ರಕ್ಷಿಸುವ ಜಾಹ್ನವಿಯು
ಬಿಟ್ಟಿಲ್ಲದೀ ಶಿಶುವ ರಕ್ಷಿಸದೆ ಇರುತಿಹಳೆ ||೧೩೭||

ಶಿಶುವಿನಾ ಕೂದಲವ ಕೊಂಕಿಸದೆ ನೋಯಿಸದೆ
ತೊಟ್ಟಿಲನು ತೂಗುವಾ ಪರಿಯಲ್ಲಿ ತೆಪ್ಪವನು
ತೇಲಿಸುತ ಮರಳಿನಾ ದಂಡೆಯಲಿ ಇರಿಸಿಹಳು
ದೈವಬಲವಿದ್ದಲ್ಲಿ ಜೀವಕ್ಕೆ ಕೇಡಿಹುದೆ ||೧೩೮||

ಕಾಲುಗಳನಪ್ಪಳಿಸಿ ಕೈಗಳನು ಬಡಿಯುತಲಿ
ಸೂರ್ಯನನು ನೋಡುತಲಿ ನಸುನಗುತ ಮತ್ತೊಮ್ಮೆ
ರವಿಸುತನು ಭೋರೆಂದು ಚೀರುತಲಿ ಕೂಗುತಿರೆ
ಸನಿಹದಲಿ ಸೂತೋರ್ವ ಕೇಳುತಲಿ ಬೆರಗಾಗಿ ||೧೩೯||

ಎತ್ತಣದ ಸ್ವರವಿದುವು ಮಗುವಿನಾ ದನಿಯಂತೆ
ಕೇಳುವುದು ಎನ್ನುತಲಿ ಶೋಧಿಸುತ ಬರುತಿರಲು
ಮೂಲೋಕ ಮೋಹಿಸುವ ಮುದ್ದಾದ ಶಿಶುವನ್ನು
ಕಾಣುತಲಿ ಆನಂದ ಸಾಗರದಿ ಮುಳುಗಿದನು ||೧೪೦||

ದೇವೇಂದ್ರ ಗಂಧರ್ವ ಸುರರುಗಳು ಶಿಶುರೂಪ
ಧರಿಸುತಲಿ ಧರೆಗಿಳಿದು ಬಂದಿಹರೋ ಇಲ್ಲದಿರೆ
ಸಾಕ್ಷಾತ್ತು ಸೂರ್ಯನೇ ಶಿಶುವಾಗಿ ಭೂಮಿಯಲಿ
ಜನಿಸಿದನೋ ಎನ್ನುತಲಿ ಸನಿಹದಲಿ ಸಾಗುತಲಿ ||೧೪೧||

ಎನಿತಾದ ಮುದ್ದುಶಿಶು ಆರಿರಿಸಿ ಹೋಗಿಹರು
ಹಡೆದವಳು ಅವಳಾ ನಿಷ್ಕರುಣಿ ನಿರ್ದಯಿಯು
ಈ ಪರಿಯ ಸುಂದರದ ಶಿಶುವನ್ನು ಹಡೆಯುತಲಿ
ಬಿಸುಡುತಲಿ ಪೋಗಲಿಕೆ ಮನವೆಂತು ಬಂದಿಹುದು ||೧೪೨||

ಎನ್ನಯಾ ಬಹುಜನ್ಮ ಸುಕೃತದಾ ಪುಣ್ಯವಿದು
ದೈವವೇ ಮಗುವನ್ನು ಇತ್ತಿಹುದು ಎನ್ನುತಲಿ
ಶಿಶುವನ್ನು ಕೊಳ್ಳುತಲಿ ನಿಲಯಕ್ಕೆ ಐತಂದು
ನಿಜಸತಿಯ ರಾಧೆಯಾ ಕೈಯ್ಯೊಳಗೆ ಇತ್ತಿಹನು ||೧೪೩||

ಆ ರಾಧೆ ತನ್ನಯಾ ಪುತ್ರನೇ ಎನ್ನುತಲಿ
ಪ್ರೀತಿಯಲಿ ಸಲಹುತಿರೆ ರಾಧೇಯನಾಮದಲಿ
ವರ್ಧಿಸುತ ಕಲಿಕರ್ಣ ಎಂಬುವಾ ಹೆಸರಿನಲಿ
ಜಗಜನರ ಕರ್ಣದಲಿ ಮೊಳಗುತಲಿ ಮೆರೆದಿಹನು ||೧೪೪||

ಬಿಲುವಿದ್ಯೆ ಶಸ್ತ್ರಾಸ್ತ್ರ ಶೌರ್ಯಪ್ರತಾಪದಲಿ
ಇಳೆಯೊಳಗೆ ಇವಗಾರು ಸಮರಿಲ್ಲ ಎನಿಸುತಲಿ
ಕೊಡುಗೈಯ್ಯ ದೊರೆ ಎನಿಸಿ ಇನಸುತನು ಲೋಕದಲಿ
ಖ್ಯಾತಿಯಲಿ ಬೆಳಗಿದನು ಕರ್ಣಾಭಿದಾನದಲಿ ||೧೪೫||

### ಪಾಂಡುವಿನ ಜೊತೆಗೆ ಕುಂತಿಯ ವಿವಾಹ

ಯೌವ್ವನದ ಸೌಂದರ್ಯ ಸೊಬಗಿನಲಿ ಆ ಕುಂತಿ
ಸೊಗಸುತಿರೆ ಭೋಜ ನೃಪ ಮದುವೆಯನು ಮಾಡಲಿಕೆ
ಸ್ವಯಂವರವನೇರ್ಪಡಿಸೆ ನೃಪರುಗಳ ಸಭೆಯೊಳಗೆ
ಸ್ಪಟಿಕದಾ ತೇಜದಲಿ ಶುಭ್ರದಲಿ ಹೊಳೆಯುತಿಹ ॥೧೪೬॥

ಪಾಂಡುವಿನ ಕೊರಳೊಳಗೆ ಮಾಲೆಯನು ಹಾಕುತಿರೆ
ಆ ಕುಂತಿ ಭೋಜನೃಪ ಹರುಷದಲಿ ಪಾಂಡುವಿಗೆ
ಕುರುಕುಲದಯದುಕುಲದ ಬೆಸುಗೆ ಇದು ಎನ್ನುತಲಿ
ಮಂಗಲ ವಿವಾಹದಲಿ ಕುಂತಿಯನು ಇತ್ತಿಹನು ॥೧೪೭॥

ಬಳಿಕ ವರಗಾಂಗೇಯ ಮನದೊಳಗೆ ಯೋಚಿಸುತ
ಮದ್ರನೃಪ ಶಲ್ಯನಿಗೆ ಅತಿ ಚೆಲುವೆ ಸೋದರಿಯು
ಮಾದ್ರಿ ಇಹಳೆಂಬುದನು ಅರಿಯುತಲಿ ಸಾಗುತಲಿ
ಮಾದ್ರಿಯನು ಪಾಂಡುವಿಗೆ ಈಯುವುದು ಎನ್ನುತಿರೆ ॥೧೪೮॥

ಶಲ್ಯದೊರೆ ಒಪ್ಪುತಲಿ ಮುದದಿಂದ ಪಾಂಡುವಿಗೆ
ವಿಸ್ತರದ ವೈಭವದ ಮಂಗಲದ ಮದುವೆಯ
ಸುದತಿಯನು ಸುಗುಣಿಯನು ಮಾದ್ರಿಯನು ಈಯುತಿರೆ
ನೃಪನಿಕರ ಸಕಲಪ್ರಜೆ ಸಂತಸದಿ ನಲಿದಿಹರು ॥೧೪೯॥

### ಪಾಂಡುವಿಗೆ ಪಟ್ಟಾಭಿಷೇಕ ಮಾಡುವುದು

ಬಳಿಕಲಾ ವರಭೀಷ್ಮ ಸತ್ಯವತಿ ಸಹಿತದಲಿ
ಯೋಚಿಸುತ ಜ್ಯೇಷ್ಠನಿಹ ಧೃತರಾಷ್ಟ್ರ ಹುಟ್ಟನಲಿ
ಕುರುಡನಿಹ ಕಾರಣದಿ ರಾಜ್ಯವನು ಆಳಲಿಕೆ
ಅಸಮರ್ಥ ದುರ್ಬಲನು ಇರುತಿಹನು ಎನ್ನುತಲಿ ॥೧೫೦॥

ಪಾಂಡುವಿಗೆ ವೈಭವದಿ ಪಟ್ಟಾಭಿಷೇಕವನು
ಗೈಯ್ಯುತಲಿ ಗಜಪುರಿಯ ಸಾಮ್ರಾಜ್ಯವಿತ್ತಿಹರು
ಸಕಲಪ್ರಜೆ ನೃಪವೃಂದ ಧೃತರಾಷ್ಟ್ರ ಗಾಂಧಾರಿ
ವರವಿದುರ ಸರ್ವರೂ ಹರುಷದಲಿ ನಲಿದಿಹರು ॥೧೫೧॥

ಇಂತಿರಲು ಪಾಂಡುನೃಪ ಚತುರಂಗ ಸೈನ್ಯದಲಿ
ದಿಗ್ವಿಜಯಗೈಯ್ಯುತಲಿ ಮಿಥಿಲೆಯನು ಕಾಶಿಯನು
ಮಗಧವನು ಪುಂಡ್ರವನು ದಶಾರ್ಣ ದೇಶಗಳ
ಜಯಿಸುತಲಿ ಅಗಣಿತದ ಐಶ್ವರ್ಯ ತಂದಿಹನು ॥೧೫೨॥

ನಳನಹುಷ ಪುರೂರವ ಯಯಾತಿ ಅರಸುಗಳ
ಪಾರಂಪರೆಯೊಳೀ ಪಾಂಡುನೃಪ ಶೌರ್ಯದಲಿ
ಸತ್ಯದಲಿ ಧರ್ಮದಲಿ ನೀತಿಯಲಿ ನ್ಯಾಯದಲಿ
ಪ್ರಜೆಗಳನು ಪಾಲಿಸುತ ಜಗದೊಳಗೆ ಮೆರೆದಿಹನು ॥೧೫೩॥

### ಧೃತರಾಷ್ಟ್ರನಿಗೆ ಮಕ್ಕಳಿಲ್ಲದ ಚಿಂತೆ

ವರುಷಗಳು ಉರುಳುತಲಿ ಕಾಲವದು ಗತಿಸುತಿರೆ
ಸಂತಾನ ಸೌಭಾಗ್ಯವಿಲ್ಲದಾ ಚಿಂತೆಯಲಿ
ಧೃತರಾಷ್ಟ್ರ ಬೇಯುತಲಿ ಸತ್ಯವತಿಗುಸುರುತಿರೆ
ಸತ್ಯವತಿ ವ್ಯಾಸನನು ಮನದೊಳಗೆ ನೆನೆದಿಹಳು ॥೧೫೪॥

### ವ್ಯಾಸಋಷಿಯು ಮಂತ್ರಿಸಿದ ಪಿಂಡಕವನ್ನು ಕೊಡುವುದು

ಆ ಕ್ಷಣದಿ ವರವ್ಯಾಸ ಅರಮನೆಯೊಳೈತರಲು
ಧೃತರಾಷ್ಟ್ರ ಆದರದಿ ಸತ್ಕಾರಗೈಯ್ಯುತಿರೆ
ಏನರಸ ಮುಖದೊಳಗೆ ತೇಜವದು ಬತ್ತಿಹುದು
ಕಳವಳದ ಕಾರಣವ ತಿಳುಹುವುದು ಎನ್ನುತಲಿ ॥೧೫೫॥

ಮುನಿವರನು ನುಡಿಯುತಿರೆ ಧೃತರಾಷ್ಟ್ರ ಭೂಪತಿಯು
ಸಂತಾನವಿಲ್ಲದೆಯೆ ಕುರುವಂಶ ಇಂದಿನಲಿ
ಅಳಿಯುವಾ ಚಿಂತೆಯದು ಎನ್ನನ್ನು ದಹಿಸುತಿದೆ
ಸಕಲಸಿರಿ ಸಂಪದವು ಸಾಮ್ರಾಜ್ಯವೆಲ್ಲವು ॥೧೫೬॥

ಅನ್ಯರಿಗೆ ಸೇರುವಾ ಚಿಂತೆಯದು ಬಾಧಿಪುದು
ಪುತ್ರರನು ಕರುಣಿಸುತ ಕುರುವಂಶ ಬೆಳೆಸುವದು
ಸುತನೊಬ್ಬನಿಲ್ಲದಿರೆ ಮುಕುತಿಯದು ದೊರೆಯದಿದೆ
ಎಂಬುವಾ ಶೃತಿವಾಕ್ಯ ಎನ್ನನ್ನು ದಹಿಸುತಿದೆ ॥೧೫೭॥

ಎನ್ನುತಲಿ ಅಂಧನೃಪ ಧೃತರಾಷ್ಟ್ರ ದುಗುಡದಲಿ
ಕರಮುಗಿದು ನುಡಿಯುತಿರೆ ವ್ಯಾಸಋಷಿ ಅರಸಂಗೆ
ಚಿಂತೆಯನು ಬಿಡುನೃಪನೆ ನೂರೊಂದು ಮಕ್ಕಳನು
ಬಲಯುತರ ನೀ ಪಡೆವೆ ಕುರುವಂಶ ವೃದ್ಧಿಪುದು ॥೧೫೮॥

ಎನ್ನುತಲಿ ವರವ್ಯಾಸ ಮಂತ್ರಿಸಿದ ಪಿಂಡಕವ
ಏಕಾಂತ ಸ್ಥಳದೊಳಗೆ ಧೃತರಾಷ್ಟ್ರಗೀಯುತಲಿ
ಗಾಂಧಾರಿಗೀಯುವುದು ಮಕ್ಕಳನು ಪಡೆಯುವಳು
ಎನ್ನುತಲಿ ಹರಸುತಲಿ ತೆರಳಿದನು ಆಶ್ರಮಕೆ ॥೧೫೯॥

ನಿಜಸತಿಯ ಗಾಂಧಾರಿದೇವಿಯನು ಕರೆಯುತಲಿ
ಅಂಧನೃಪ ಧೃತರಾಷ್ಟ್ರ ಪಿಂಡಕವನೀಯುತಿರೆ,
ಗರ್ಭದಲಿ ಧರಿಸುತಿರೆ ಕುರುವಂಶ ಬಳ್ಳಿಯದು
ಕುಡಿವರಿದು ದಿನದಿನದಿ ಗರ್ಭದಲಿ ಬೆಳೆದಿಹುದು ॥೧೬೦॥

### ಪಾಂಡುವಿಗೆ ಮುನಿಯ ಶಾಪ ಮತ್ತು ಪಾಂಡುವು ವನಕ್ಕೆ ತೆರಳುವುದು

ಒಂದು ದಿನ ಪಾಂಡುನೃಪ ಬೇಟೆಯನು ಆಡಲಿಕೆ
ಕಾನನಕೆ ತೆರಳುತಿರೆ ಗಂಡೊಂದು ಹೆಣ್ಣೊಂದು
ಮೃಗವೆರಡು ಅಪ್ಪುತಲಿ ಭೋಗಿಸುತಲಿರುತಿರಲು
ದೂರದಲಿ ನೋಡುತಲಿ ಬಾಣವನು ಬಿಟ್ಟಿಹನು ॥೧೬೨॥

ತೀವ್ರದಲಿ ಬಾಣವದು ಗಂಡುಮೃಗವಿರಿಯುತಿರೆ
ಮೃಗರೂಪ ತೊರೆಯುತಲಿ ಋಷಿರೂಪ ಧರಿಸುತಲಿ
ಅಕಟಕಟ ನಾ ಸತ್ತೆ ಆರೆನ್ನ ಕೊಂದಿಹರು
ಅರಿಹರು ಪಾತಕಿಯು ಎನ್ನುತಲಿ ಕೂಗಿದನು ॥೧೬೩॥

ಮಾನವನ ದನಿಕೇಳಿ ಪಾಂಡುನೃಪ ಬೆರಗಾಗಿ
ಮೃಗವೆಂತು ಮಾನವನ ದನಿಯಲ್ಲಿ ನುಡಿಯುವುದು
ಎನ್ನುತಲಿ ಸನಿಹದಲಿ ಸಾಗುತಲಿ ಕಳವಳದಿ
ರಕುತದಲಿ ನನೆದಿರುವ ಮುನಿವರನ ಕಾಣುತಲಿ ॥೧೬೪॥

ಕ್ಷಮಿಸುವುದು ಋಷಿವರನೆ ಎನ್ನಿಂದ ತಿಳಿಯದಲೆ
ಅಪರಾಧ ಘಟಿಸಿಹುದು ಮೃಗಮಿಥುನ ರೂಪದಲಿ
ಹಗಲಿನಲಿ ಭೋಗಿಪುದು ನಿಮ್ಮಂಥ ಮುನಿವರಗೆ
ಯೋಗ್ಯವೇ ಎನ್ನುತಲಿ ಪಾಂಡುನೃಪ ನುಡಿಯುತಿರೆ ॥೧೬೫॥

ಹೇ ಪಾಪಿ ಭೂಪತಿಯೆ ಎಮ್ಮನ್ನು ಇರಿಯುತಲಿ
ಮತ್ತೆ ನೀ ನಮ್ಮನ್ನು ನಿಂದಿಪುದು ಯೋಗ್ಯವೇ
ನಾನಿಹೆನು ಕಿಂದಮನು ಎನ್ನುವಾ ಋಷಿವರನು
ಹರಿಣದಾ ರೂಪದಲಿ ನಿಜಸತಿಯನಪ್ಪುತಲಿ ॥೧೬೬॥

ಭೋಗಿಸುತಲಿರುತಿರಲು ಎನ್ನನ್ನು ಕೊಂದಿರುವ
ನೀನು ಸಹ ನನ್ನಂತೆ ಸತಿಯನ್ನು ಅಪ್ಪುತಲಿ
ರಮಿಸುತಿಹ ಸಮಯದಲಿ ಮರಣವನು ಅಪ್ಪುವುದು
ಎನ್ನುತಲಿ ಪಾಂಡುವಿಗೆ ಶಾಪವನು ಇತ್ತಿಹನು ॥೧೬೭॥

ಅತಿಖಿನ್ನನಾಗುತಲಿ ಪಾಂಡುದೊರೆ ದುಃಖದಲಿ
ಅರಮನೆಗೆ ಐತಂದು ಸತ್ಯವತಿ ಭೀಷ್ಮರಿಗೆ
ಅಡವಿಯಲಿ ನಡೆದಿರುವ ಘಟನೆಯನು ವಿವರಿಸುತ
ಶಾಪದಾ ವೃತ್ತಾಂತ ತಿಳಿಸಿದನು ವಿಸ್ತರದಿ ॥೧೬೮॥

ಮುನಿವರರ ಕೊಂದಿರುವ ಪಾಪವದು ಧರೆಯೊಳಗೆ
ಭೂಸುರರ ಕರೆಸುತಲಿ ಯಜ್ಞಗಳ ಗೈಯ್ಯುತಲಿ
ದಾನಗಳನೀಯುತಲಿ ನೀಗುವುದು ಎನ್ನುತಲಿ
ವರಭೀಷ್ಮ ಮೊದಲಾಗಿ ಬಾಂಧವರು ನುಡಿಯುತಿರೆ ॥೧೬೯॥

ಋಷಿವರನ ಕೊಂದಿರುವ ಶಾಪವದು ಎನ್ನನ್ನು
ಕ್ಷಣಕ್ಷಣದಿ ಸುಡುತಿಹುದು ಚಿಂತೆಯಲಿ ಬೇಯುವುದು
ಈ ಜನ್ಮ ಮಾಡಿರುವ ಪಾಪವನು ಇಲ್ಲಿಯೇ
ಆಜನ್ಮ ಭೋಗಿಸುತ ನೀಗುವೆನು ಎನ್ನುತಲಿ ॥೧೭೦॥

ರಾಜ್ಯವನು ಕೋಶವನು ಐಶ್ವರ್ಯವೆಲ್ಲವನು
ಸತ್ಯವತಿ ಭೀಷ್ಮರಿಗೆ ಧೃತರಾಷ್ಟ್ರಗೀಯುತಲಿ
ಅಗಣಿತದ ದಾನಗಳ ದ್ವಿಜರಿಂಗೆ ಈಯುತಲಿ
ಕಾನನಕೆ ತೆರಳಿದನು ವೈರಾಗ್ಯ ಭಾವದಲಿ ॥೧೭೧॥

ವರಭೀಷ್ಮ ವಿದುರಾದಿ ಬಾಂಧವರು ಪೌರಜನ
ದುಃಖದಲಿ ಧಾರೆಯಲಿ ಕಂಬನಿಯ ಸುರಿದಿಹರು
ನಳನಹುಷ ಪುರುರವರ ದಿವ್ಯದ ಪರಂಪರೆಯ
ವಿಸ್ತರದಿ ಪಾಂಡುನೃಪ ಸತ್ಯದಲಿ ಮೆರೆದಿಹನು ॥೧೭೨॥

ನಿಜಪತಿಯು ಪಾಂಡುದೊರೆ ಕಾನನಕೆ ನಡೆಯುತಿರೆ
ಮಹಸಾಧ್ವಿ ಆ ಕುಂತಿ ಸುವ್ರತೆಯು ವರಮಾದ್ರಿ
ಪತಿ ಇರುವ ಸ್ಥಾನವೇ ಸ್ವರ್ಗವದು ಎನ್ನುತಲಿ
ಪಾಂಡುವಿನ ಬೆನ್ನಿನಲಿ ನೆರಳಂತೆ ಸಾಗಿಹರು ॥೧೭೩॥

ವನವನವ ನದಿಕೊಳವ ಕೊಳ್ಳಗಳ ದಾಂಟುತಲಿ
ನಾಗರಥ ಚೈತ್ರರಥ ಗಿರಿಗಳನು ಕ್ರಮಿಸುತಲಿ
ಆ ಗಂಧಮಾದನದ ಪರ್ವತವ ಕಳೆಯುತಲಿ
ಚೆಲುವಿನಾ ಶತಶೃಂಗ ಗಿರಿಯೆಡೆಗೆ ಐತಂದು ॥೧೭೪॥

ಸುಂದರದ ಆಶ್ರಮವನೊಂದನ್ನು ರಚಿಸುತಲಿ
ಇಂದ್ರಿಯವ ಗೆಲ್ಲುತಲಿ ಕಾಮವನು ತೊರೆಯುತಲಿ
ನಿಶ್ಚಲದ ಚಿತ್ತದಲಿ ಘೋರತಪಗೈಯ್ಯುತಲಿ
ಪಾಂಡುನೃಪ ರಾಜರ್ಷಿ ಎನಿಸುತಲಿ ವಾಸಿಸಿದ ॥೧೭೫॥

### ಗಾಂಧಾರಿ ಗರ್ಭಿಣಿಯು ಆಗಿರುವ ವಾರ್ತೆಯನ್ನು ಕುಂತಿಯು ಕೇಳುವುದು

ಗಾಂಧಾರಿ ಗರ್ಭಿಣಿಯು ಆಗಿರುವ ವಾರ್ತೆಯದು
ಗಜಪುರದಿ ಹಬ್ಬುತಲಿ ಪುರಜನವು ನಲಿಯುತಿರೆ
ಸುದ್ದಿಯದು ಪಸರುತಲಿ ಕಾನನದೊಳಿರುತಿರುವ
ಕುಂತಿಯಾ ಕರ್ಣವನು ತಾಗಿದುದು ಭರದಲ್ಲಿ ॥೧೭೬॥

ಸರಿಕಳೆಹ ಗಾಂಧಾರಿ ಗರ್ಭವನು ಧರಿಸಿಹಳು
ಎಂಬುವಾ ವಾರ್ತೆಯದು ಕಾದಿರುವ ಸೀಸಕದ
ಎರಕವನು ಕರ್ಣದಲಿ ಹೊಯ್ದಂತೆ ತಾಗುತಿರೆ
ಆ ಕುಂತಿ ಕಳವಳದಿ ಪಾಂಡುವಿನ ಬಳಿ ಬಂದು ॥೧೭೭॥

**ಮಂತ್ರೋಪದೇಶದಿಂದ ಮಕ್ಕಳನ್ನು ಪಡೆಯಲಿಕ್ಕೆ**
**ಕುಂತಿಯು ಪಾಂಡುವಿನ ಒಪ್ಪಿಗೆಯನ್ನು ಪಡೆಯುವದು**

ಎನ್ನನ್ನು ವಿಷಯದಲಿ ಇಂದ್ರಿಯದ ಆಶೆಯಲಿ
ಮೋಹಿತಳು ಆಸಕ್ತಳೆನ್ನುತಲಿ ತೆಗಳದಿರಿ
ಗಾಂಧಾರಿ ಗರ್ಭಿಣಿಯು ಎಂಬುದನು ಕೇಳಿದೆನು
ಸಂತಾನ ಸೌಭಾಗ್ಯ ನಮಗಿನ್ನು ದೊರೆತಿಲ್ಲ ॥೧೭೮॥

ನಮ್ಮಯಾ ರಾಜ್ಯವದು ಸಂಪದವು ಸಕಲವೂ
ದಾಯಾದಿ ಬಂಧುಗಳ ಅನ್ಯರಾ ಪಾಲಾಗಿ
ಹೋಗುವದು ನಮ್ಮಯಾ ಕುಲವೃಕ್ಷ ಉರುಳುತಲಿ
ಬೀಳುವುದು ಎನ್ನುತಲಿ ನುಡಿದಿಹಳು ಆ ಕುಂತಿ ॥೧೭೯॥

ಹೇ ಕಾಂತೆ ಮಕ್ಕಳನು ಪಡೆಯುವಾ ಸೌಭಾಗ್ಯ
ಎಮ್ಮಯಾ ಹಣೆಯಲ್ಲಿ ಆ ಬ್ರಹ್ಮ ಬರೆದಿಲ್ಲ
ಮುನ್ನಿನಲಿ ಮುನಿವರನು ಶಾಪವನು ಇತ್ತುದನು
ನೀ ಬಲ್ಲೆ ಚೆನ್ನಾಗಿ ಎನ್ನುತಿರೆ ಪಾಂಡುದೊರೆ ॥೧೮೦॥

ನಾರಿಯರು ಸರಿಕದಾ ದಾಯಾದಿ ಬಂಧುಗಳ
ಉನ್ನತಿಯ ಸಹಿಸಬಹರೆಂಬುದಿದು ನಾಣ್ಣುಡಿಯು
ನಾರಿಯರ ಮತ್ಸರವು ನೂರು ಪರುಷಿರುತಿಹುದು
ಛಲದಿಂದ ಇಷ್ಟವನು ಸಾಧಿಸಲು ಯತ್ನಿಪರು ॥೧೮೧॥

ಎಮ್ಮಯಾ ರಾಜ್ಯವದು ಬಂಧುಗಳ ಸೇರುವುದ
ನೋಡುತಲಿ ನಾನೆಂತು ಸಹಿಸುತಲಿ ಬದುಕುವುದು
ಸುತನಿರದ ಮನುಜಂಗೆ ಮುಕುತಿಯದು ಇಲ್ಲೆಂಬ
ಶೃತಿ ಇಹುದು ನಮಗಿನ್ನು ನರಕವೇ ಗತಿ ಎಂದು ॥೧೮೨॥

ಆ ಕುಂತಿ ಕಂಬನಿಯ ಸುರಿಸುತಲಿ ನುಡಿಯುತಿರೆ
ಪಾಂಡುನೃಪ ಮನದೊಳಗೆ ನೋಯುತಲಿ ನುಡಿದಿಹನು
ಚಿಂತೆಯನು ಮಾಡದಿರು ಹೇ ಕಾಂತೆ ನುತಕುಂತಿ
ನಿನಗೊಂದುಪಾಯವನು ಹೇಳುವೆನು ಕೇಳುವುದು ॥೧೮೩॥

ಮುನಿವರನ ಕರುಣೆಯಲಿ ಮಂತ್ರೋಪದೇಶದಲಿ
ಮಕ್ಕಳನು ಪಡೆಯುವದು ಸಾಧ್ಯವಿದೆ ಜಗದೊಳಗೆ
ವರ ಅತ್ರಿ ಅಂಗಿರಸ ಜಾಬಾಲಿ ಜಮದಗ್ನಿ
ಮೊದಲಾದ ಋಷಿವರರ ಸೇವೆಯನು ಮಾಡುತಲಿ ॥೧೮೪॥

ಮಂತ್ರೋಪದೇಶದಲಿ ಮಕ್ಕಳನು ಪಡೆಯುವುದು
ಎನ್ನುತಿರೆ ಪಾಂಡುನೃಪ ವರಕುಂತಿ ನುಡಿದಿಹಳು
ನಿನ್ನಿಂದ ಸಂತಾನ ಪಡೆಯುವುದು ಯೋಗ್ಯವಿದು
ಅನ್ಯರಿಂ ಪಡೆಯುವದು ಅಪಕೀರ್ತಿಕಾರಕವು ॥೧೮೫॥

ನಳನಹುಷ ಪುರೂರವ ನುತಭರತ ಸುಹೋತ್ರ
ಮೊದಲಾದ ನುತಚರಿತ ನೃಪರುಗಳು ಜನಿಸಿರುವ
ಇಂದುಕುಲ ಕೆಡಿಸುತಲಿ ಬೇರನ್ನು ಕೊಯ್ದಿರುವ
ಪಾತಕಿಯು ಎನ್ನುತಲಿ ಎನ್ನನ್ನು ಶಪಿಸುವರು ॥೧೮೬॥

ಎನ್ನುತಲಿ ನುತಕುಂತಿ ನುಡಿಯುತಿರೆ ಪಾಂಡುದೊರೆ
ಮುನಿವರರ ದಯೆಯಿಂದ ಸಂತಾನ ಪಡೆಯುವದು
ಧರ್ಮಕ್ಕೆ ಸಮ್ಮತವು ಶಾಸ್ತ್ರಕ್ಕೆ ವಿಹಿತವಿದು
ಸಚ್ಚರಿತ ಪಾವನರು ಜನಿಸುವರು ಖಚಿತದಲಿ ॥೧೮೭॥

ಪೂರ್ವದಲಿ ವ್ಯಾಸನಾ ಮುನಿವರನ ಕರುಣೆಯಲಿ
ಪುತ್ರರನು ಪಡೆದಿಹರು ಆ ಅಂಬೆ ಅಂಬಾಲಿಕೆ
ಇದರೊಳಗೆ ಆವುದೂ ದೋಷವನು ನಾ ಕಾಣೆ
ಘನಮಹಿಮ ಋಷಿವರನ ಸೇವೆಯನು ಗೈಯ್ಯುವುದು ॥೧೮೮॥

ಎನ್ನುತಿರೆ ಪಾಂಡುದೊರೆ ಸತಿಕುಂತಿ ತವಕದಲಿ
ಕೇಳುವುದು ಮುನ್ನಿನಲಿ ದೂರ್ವಾಸ ಮುನಿವರನು
ಎನಗೈದು ಮಂತ್ರಗಳ ಉಪದೇಶ ಗೈದಿಹನು
ಒಲವಿನಲಿ ನಿಮ್ಮಯಾ ಒಪ್ಪಿಗೆಯ ನೀಡುತಿರೆ ॥೧೮೯॥

ಋಷಿವರನ ಮಂತ್ರದಲಿ ಮಕ್ಕಳನು ನಾ ಪಡೆವೆ
ಎನ್ನುತಿರೆ ಪಾಂಡುನೃಪ ಹರುಷದಲಿ ನಿಜಸತಿಗೆ
ಎಮ್ಮಯಾ ಸುಕೃತವಿದು ಭರತಕುಲ ಬೆಳವಿಗೆಯು
ಜಗಖ್ಯಾತ ವೀರರನು ಪಡೆಯುವುದು ಎಂದಿಹನು ॥೧೯೦॥

**ಧರ್ಮಜನ ಜನನ**

ವರಕುಂತಿ ಮುದದಿಂದ ಗಂಗೆಯಲಿ ಮೀಯುತಲಿ
ನಿರ್ಮಲದ ಮನದಿಂದ ಮಂತ್ರವನು ಪಠಿಸುತಲಿ
ಯಮಧರ್ಮದೇವನನು ನೆನೆಸುತಿರೆ ಕ್ಷಣದಲ್ಲಿ
ಧರೆಗಿಳಿದು ಬಂದಿಹನು ಯಮಧರ್ಮ ಎದುರಿನಲಿ ॥೧೯೧॥

ಎಮ್ಮನ್ನು ನೆನೆದಿರುವ ಕಾರಣವನರುಹುವುದು
ನಿನ್ನಯ ಅಭೀಷ್ಟವನು ತಿಳುಹುವುದು ಎನ್ನುತಿರೆ
ಪಾಂಡುಸತಿ ಆ ಕುಂತಿ ನಸುನಾಚಿ ಬೆವರುತಲಿ
ಕಂಪಿತದ ದನಿಯಿಂದ ತಲೆಬಾಗಿ ನಮಿಸುತಲಿ ॥೧೯೨॥

ಕುರುವಂಶ ವೃದ್ಧಿಸಲು ನುತಚರಿತ ಪುತ್ರನನು
ಕರುಣಿಪುದು ಎನ್ನುತಿರೆ ಯಮದೇವ ಸಂತಸದಿ
ಕುಂತಿಯಾ ತನುಮುಟ್ಟಿ ಧರ್ಮದಾ ಮೂರ್ತಿಯನು
ಸುತನನ್ನು ನೀಪಡೆವೆ ಎನ್ನುತಲಿ ತೆರಳಿದನು ॥೧೯೩॥

ಗರ್ಭವನು ಧರಿಸುತಲಿ ನವಮಾಸ ತೆರಳುತಿರೆ
ಧರ್ಮವೇ ಸಾಕಾರ ರೂಪದಲಿ ಜನಿಸಿಹುದೊ
ಎಂಬುವಾ ಪರಿಯಲ್ಲಿ ಶಾಂತಮುಖ ಮುದ್ರೆಯಲಿ
ನಿರ್ಮಳದ ತೇಜದಾ ಶಿಶುವನ್ನು ಹೆತ್ತಿಹಳು ॥೧೯೪॥

ಪಾಪಗಳ ಭಾರದಲಿ ನೊಂದಿರುವ ಭೂದೇವಿ
ಭಾರವದು ಇಳಿಯುತಲಿ ಹರ್ಷದಲಿ ನಲಿದಿಹಳು
ವೃಕ್ಷಗಳು ಪುಷ್ಪಗಳ ಫಲಗಳನು ಸುರಿದಿಹವು
ಕಮಲಗಳು ಅರಳುತಲಿ ಸೌರಭವ ಸೂಸಿಹವು ॥೧೯೫॥

ಪಕ್ಷಿಗಳು ದುಂಬಿಗಳು ಗೀತವನು ಹಾಡಿಹವು
ನವಿಲುಗಳು ಗರಿಗೆದರಿ ನರ್ತನವ ಗೈದಿಹವು
ದುಷ್ಟರಾ ಕಾಟವದು ತಪ್ಪಿಹುದು ಎನ್ನುತಲಿ
ತಪಸಿಗಳು ಮುನಿನಿಕರ ಸಂತಸದಿ ನಲಿದಿಹರು ॥೧೯೬॥

ವಿಮಳಪ್ರಭೆ ಹೊಮ್ಮುತಿಹ ಚೆಲುವಿನಲಿ ಶೋಭಿಸುವ
ಕಿಲಕಿಲನೆ ನಗುತಲಿಹ ಮುದ್ದಾದ ಶಿಶುವಿನಾ
ಮುಖವನ್ನು ನೋಡುತಲಿ ಧರ್ಮಜನು ಎನ್ನುತಲಿ
ಹೆಸರನ್ನು ಇಟ್ಟಿಹರು ಸಂಭ್ರಮದ ಉತ್ಸವದಿ ॥೧೯೭॥

**ಗಾಂಧಾರಿಯು, ಕುಂತಿಗೆ ಪುತ್ರ ಜನಿಸಿರುವ ವಾರ್ತೆಯನ್ನು ಕೇಳುವುದು**

ಕುಂತಿಗದು ಸಂತಾನ ಸೌಭಾಗ್ಯ ದೊರತಿಹುದು
ಸುತನೊಬ್ಬ ಜನಿಸಿಹನು ಎಂಬುವಾ ವಾರ್ತೆಯದು
ಜನರಿಂದ ಜನರಿಂಗೆ ಹಬ್ಬುತಲಿ ಪಸರುತಲಿ
ಗಜಪುರದಿ ಸಕಲಪ್ರಜೆ ಕೇಳುತಲಿ ನಲಿದಿಹರು ॥೧೯೮॥

ಅರಮನೆಯೊಳಿರುತಿರುವ ಗಾಂಧಾರಿ ಸುದ್ದಿಯನು
ಕೇಳುತಲಿ ಕಳವಳದಿ ಹೊಟ್ಟೆಯೊಳು ಉರಿಯುತಲಿ
ಆ ಕುಂತಿಗಿಂತಲೂ ಮೊದಲಿನಲಿ ಸಂತಾನ
ನಾ ಪಡೆವೆ ಎನ್ನುವಾ ಭರವಸೆಯು ತಳೆದಿರ್ದ ॥೧೯೯॥

ಅಕಟಕಟ ಸನ್ಯಾಸಿ ಆ ವ್ಯಾಸ ಮೋಸದಲಿ
ಎನ್ನನ್ನು ವಂಚಿಸಿಹ ಕಪಟದಾ ಮಂತ್ರದಲಿ
ವರುಷೊಂದು ಗರ್ಭವನು ಧರಿಸುತಲಿ ಬಳಲಿದೆನು
ಎನಗಿಂತ ಚಿಕ್ಕವಳು ಆ ಕುಂತಿ ಮೊದಲಿನಲಿ ॥೨೦೦॥

ಪುತ್ರನನು ಪಡೆದಿಹಳು ಸೈರಿಸೆನು ಸೈರಿಸೆನು
ಎನ್ನುತಲಿ ಮಾತ್ಸರ್ಯ ಜ್ವಾಲೆಯದು ಹೊಟ್ಟೆಯಲಿ
ಹೊತ್ತುತಲಿ ಜ್ವಲಿಸುತಲಿ ನೆತ್ತಿಯನು ಮುತ್ತಿರಲು
ಬಸುರನ್ನು ತಿಕ್ಕುತಲಿ ಹಿಸುಕುತಲಿ ಮುರಿಯುತಿರೆ ॥೨೦೧॥

ರಕ್ತದಲಿ ನನೆದಿರುವ ದುರ್ಗಂಧ ನಾರುತಿಹ
ನೂರೊಂದು ಮಾಂಸದಾ ಘಟ್ಟಿಗಳು ಉದುರುತಿರೆ
ಗಾಂಧಾರಿ ರೋಷದಲಿ ದಾಸಿಯರ ಕೂಗುತಲಿ
ಹೇಸಿಕೆಯ ಈ ಪಿಂಡವೆಲ್ಲವನು ಕೊಳ್ಳುತಲಿ ॥೨೦೨॥

ಹೊರಗಡೆಗೆ ತಿಪ್ಪೆಯಲಿ ಕಸಕೊಳೆಯ ಗುಂಡಿಯಲಿ
ಎಸೆಯುದು ಈ ಕ್ಷಣದಿ ನಾನೋಡೆ ಎನ್ನುತಲಿ
ಅಬ್ಬರದಿ ಹೇಳುತಿರೆ ಅರಮನೆಯ ನಾರಿಯರು
ಹೌಹಾರಿ ತಿಳಿಯದಲೆ ಚಿಂತಿಸುತಲಿರುತಿರಲು ॥೨೦೩॥

ಆ ದಿವ್ಯದೃಷ್ಟಿಯಲಿ ವರವ್ಯಾಸ ಅರಿಯುತಲಿ
ಆಕ್ಷಣದಿ ಐತಂದು ಗದ್ದಲವಿದೇನೆನುತ
ಅರೆಬೆಳೆದ ಮಾಂಸದಾ ಪಿಂಡಗಳ ನೋಡುತಲಿ
ಅಕಟಕಟ ಮಂತ್ರದಾ ಶಕ್ತಿಯನು ಅರಿಯದಲೆ ॥೨೦೪॥

ಈ ಹುಚ್ಚು ಮೂಢಮತಿ ಗಾಂಧಾರಿ ಕೆಡಿಸಿದಳು
ಕುರುವಂಶ ಬಳ್ಳಿಯಾ ಕುಡಿಗಳನು ಚಿವುಟಿದಳು
ಎನ್ನುತಲಿ ಮರುಗುತಲಿ ನೂರೊಂದು ತುಪ್ಪದಾ
ಕೊಡಗಳನು ತರಿಸುತಲಿ ಪಿಂಡಗಳನಿರಿಸುತಲಿ ॥೨೦೫॥

ಚಿಂತೆಯನು ಮಾಡದಿರು ಗಾಂಧಾರಿ ತಾಯಿಯೇ
ನೂರುದಿನ ಕಾಲದಲಿ ಇವುಗಳನು ರಕ್ಷಿಪುದು
ಆಮೇಲೆ ನಿನ್ನಯಾ ಮಕ್ಕಳುಗಳದ್ಭುತದ
ಶಕ್ತಿಯನು ನೀನೋಡು ಎನ್ನುತಲಿ ತೆರಳಿದನು ॥೨೦೬॥

**ಭೀಮನ ಜನನ**

ಇತ್ತಲಾ ವಿಪಿನದಲಿ ಪುನರಪಿಯು ವರಕುಂತಿ
ಸರಸದಲಿ ಸರಸಿಯಲಿ ಸ್ನಾನವನು ಗೈಯ್ಯುತಲಿ
ಶುದ್ಧದಲಿ ಭಾವದಲಿ ಮಂತ್ರವನು ಪಠಿಸುತಲಿ
ವಾಯುವನು ಸ್ಮರಿಸುತಿರೆ ಭರದಲ್ಲಿ ಐತಂದು ॥೨೦೭॥

ಕರೆದಿರುವ ಕಾರಣವ ಅರುಹುವುದು ಎನ್ನುತಿರೆ
ಕುರುಕುಲದ ಬೆಳವಿಗೆಗೆ ಕಂದನನ ಕರುಣಿಪುದು
ಎನ್ನುತಿರೆ ನಿನ್ನಿಷ್ಟ ಫಲಿಸುವದು ಎನ್ನುತಲಿ
ಕುಂತಿಯಾ ವೈನೋಂಕಿ ಮಾರುತನು ಸರಿದಿಹನು ॥೨೦೮॥

ಕುಂತಿಯಾ ಉದರದಲಿ ಗರ್ಭವದು ಬೆಳೆಯುತಲಿ
ನವಮಾಸ ಉರುಳುತಿರೆ ತ್ರಯೋದಶಿಯ ದಿವಸದಲಿ
ಆಕಾಶ ಮಧ್ಯದಲಿ ಆತಪನು ಬೆಳಗುತಿರೆ
ಶುಭಗ್ರಹದಿ ಮಘೆಯಲ್ಲಿ ಕಲಿಭೀಮ ಜನಿಸಿದನು ॥೨೦೯॥

### ದುರ್ಯೋಧನನ ಜನನ

ವರಭೀಮ ಜನಿಸಿರುವ ದಿವಸದಾ ಇರುಳಿನಲಿ
ಇಭಪುರದಿ ಕುರುಕುಲದ ಬೇರನ್ನು ಕೊಯ್ಯುವನು
ದುರ್ಯೋಧನಾ ದುರುಳ ಜನಿಸುತಿರೆ ಜಗಜನರು
ಭಯದಲ್ಲಿ ಬೆಮರಿದರು ಭೂದೇವಿ ನಡುಗಿದಳು ||೨೦೦||

ಕಾಗೆಗಳು ಆಕ್ರೋಶ ಗೈಯ್ಯುತಲಿ ಕೂಗಿದವು
ಗೂಗೆಗಳ ಬಳಗಗಳು ಘೋಂಕಾರ ಗೈದಿಹವು
ಹದ್ದುಗಳು ಮಾಂಸಗಳ ರಕ್ತಗಳ ಸುರಿದಿಹವು
ಸೆಗಣಿಯಾ ಮಳೆಯಾಯ್ತು ಕೌರವನ ಜನನದಲಿ ||೨೦೧||

ಪಕ್ಷಿಗಳು ಕಲಕಲದಿ ರೋದನವ ಗೈದಿಹವು
ಗೋವುಗಳು ಕಂಬನಿಯ ಧಾರೆಯನು ಸುರಿದಿಹವು
ಗಿರಿಶಿಖರ ಕೆಡೆದಿಹವು ಬಂಡೆಗಳು ಉರುಳಿದವು
ಅಗಣಿತದ ಅಪಶಕುನ ಗಜಪುರಿಯೊಳಾಗಿಹವು ||೨೦೨||

ಅಕಟಕಟ ಅವುದೋ ಆಪತ್ತು ಬರಲಿಹುದು
ಎನ್ನುತಲಿ ಧೃತರಾಷ್ಟ್ರ ದ್ವಿಜರನ್ನು ಕರೆಸುತಲಿ
ಕೇಳುತಿರೆ ಕಾರಣವ ಈ ಕ್ಷಣದಿ ಜನಿಸಿರುವ
ಶಿಶುವಿನಾ ಕಾರಣದಿ ಅಪಶಕುನವಾಗುತಿವೆ ||೨೦೩||

ತ್ರೇತೆಯಲಿ ರಾವಣನು ಬಾಂಧವರ ಸಹಿತದಲಿ
ನಾಶವನು ಹೊಂದಿರುವ ಪರಿಯಲ್ಲಿ ಈ ಶಿಶುವು
ತನ್ನಯಾ ಬಂಧುಗಳ ದೇಶದಾ ನೃಪರುಗಳ
ಸಹಿತದಲಿ ನಿರ್ನಾಮವಾಗುವನು ಖಚಿತವಲಿ ||೨೦೪||

ಈ ಶಿಶುವಿನೋಸುಗವೆ ದೇಶವದು ಅಳಿಯುವದು
ನಿನ್ನಯಾ ಕುಲವೆಲ್ಲ ನಿರ್ಮೂಲವಾಗುವುದು
ಈ ಕ್ಷಣದಿ ಶಿಶುವನ್ನು ತ್ಯಜಿಸುವುದು ಹಿತಕರವು
ಎನ್ನುತಲಿ ಭೂಸುರರು ಭೂಪತಿಗೆ ನುಡಿದಿಹರು ||೨೦೫||

ಹೆತ್ತವರ್ಗೆ ಹೆಗ್ಗಣವೆ ಮುದ್ದಾಗಿ ತೋರುವುದು
ಎಂಬುವಾ ನುಡಿಯಂತೆ ಮಕ್ಕಳಾ ಮೋಹದಲಿ
ಮಮತೆಯಲಿ ಕುರುಡಾದ ಕುರುಡ ನೃಪ ಧೃತರಾಷ್ಟ್ರ
ವೈಭವದಿ ಸಂಭ್ರಮದಿ ಉತ್ಸವವ ಗೈದಿಹನು ||೨೦೬||

ಹೋಮಗಳ ಹವನಗಳ ಹಲವುಗಳ ಮಾಡುತಲಿ
ಮುತ್ತುಗಳ ರತ್ನಗಳ ಧನಕನಕ ವಸ್ತ್ರಗಳ
ಗೋವುಗಳ ಅಗಣಿತದ ದಾನಗಳನೀಯುತಲಿ
ಶಿಶುಗಳಿಗೆ ಹೆಸರುಗಳ ನಿಟ್ಟಿಹನು ಹರುಷದಲಿ ||೨೦೭||

### ಧೃತರಾಷ್ಟ್ರನು ಮಕ್ಕಳುಗಳಿಗೆ ನಾಮಕರಣ ಮಾಡುವುದು

ಹಿರಿಯಂಗೆ ದುರ್ಯೋಧನನೆನ್ನುತಲಿ ಬಳಿಕಿನಲಿ
ದುಃಶ್ಶಲನು ದುರ್ಮುಖನು ದುಶ್ಶಾಸನ ವಿಕರ್ಣನು
ದುರ್ಧರ್ಷ ದುರ್ಮದನು ದುಷ್ಕರ್ಣ ದುರ್ಮರ್ಷ
ಆ ವಿಂದ ಅನುವಿಂದ ಉಪನಂದ ಜಲಸಂಧ ||೨೦೮||

ಭೀಮಬಲ ಭೀಮಶರ ಭೀಮರಥ ಧೃಢರಥನು
ಧೃಢಕ್ಷತ್ರ ಧೃಢವರ್ಮ ಧೃಢಹಸ್ತ ಧೃಢಸಂಧ
ಮತ್ತೆ ಆ ಧೃತರಾಷ್ಟ್ರ ಭೂಪತಿಗೆ ವೇಶ್ಯೆಯಲಿ
ಜನಿಸಿರುವ ಶಿಶುವಿಂಗೆ ಯುಯುತ್ಸು ಎನ್ನುತಲಿ ||೨೦೯||

ನೂರೊಂದು ಶಿಶುಗಳಿಗೆ ಹೆಸರುಗಳನಿರಿಸುತಲಿ
ನುರ್ವರಾ ಮಕ್ಕಳಿಗೆ ಸೋದರಿಯು ಆಗುತಲಿ
ಜನಿಸಿರುವ ಶಿಶುವಿಂಗೆ ದುಶ್ಶೀಲೆ ಎನ್ನುತಲಿ
ಹೆಸರಿಡುತ ಸಂಭ್ರಮದಿ ಉತ್ಸವವ ಗೈದಿಹರು ||೨೧೦||

ಇಂತು ಆ ಅಂಧನೃಪ ಧೃತರಾಷ್ಟ್ರ ಗಾಂಧಾರಿ
ನೂರೊಂದು ಶಿಶುಗಳಾ ಲೀಲಾವಿನೋದಗಳ
ಸಂಭ್ರಮದಿ ಸಂತಸದಿ ಕಾಲವನು ಕಳೆಯುತಿರೆ
ಇತ್ತಲಾ ಕಾನನದಿ ಪಾಂಡುನೃಪ ಕುಂತಿಯರು ||೨೧೧||

### ಕುಂತಿಯು ಭೀಮನ ಶಕ್ತಿಯನ್ನು ಅರಿಯುವುದು

ಧರ್ಮಜನ ಪವನಜನ ಮುದ್ದಾದ ಮುಖಗಳನು
ನೋಡುತಲಿ ಈರ್ವರು ದಿನಗಳನು ಕಳೆಯುತಿರೆ
ದಿನವೊಂದು ಪಾಂಡುದೊರೆ ಸತಿಕುಂತಿ ಶಿಶುಭೀಮ
ಸಹಿತದಲಿ ಶತಶೃಂಗ ಪರ್ವತ ಸಮೀಪದಲಿ ||೨೧೨||

ಕಲ್ಬಂಡೆ ಆಸನದಿ ಈರ್ವರೂ ಕೂಡ್ರುತಲಿ
ಶಿಶುಭೀಮ ಕುಂತಿಯಾ ತೊಡೆಯೊಳಗೆ ಇರುತಿರಲು
ಪ್ರಕೃತಿಯಾ ಸೌಂದರ್ಯ ಸೊಬಗನ್ನು ಸವಿಯುತಲಿ
ಮೈಮರೆತು ಕುಳಿತಿರಲು ಆನಂದ ಸಾಗರದಿ ||೨೧೩||

ಘನಘೋರ ಹೆಬ್ಬುಲಿಯು ಅಬ್ಬರದಿ ಗರ್ಜಿಸುತ
ನೆಗೆಯುತಲಿ ಜಿಗಿಯುತಲಿ ಧಾವಿಸುತ ಬರುತಲಿರೆ
ಪಾಂಡುನೃಪ ಖಡ್ಗವನು ಭರದಲ್ಲಿ ಹಿರಿಯುತಲಿ
ಹೆಬ್ಬುಲಿಯ ಇರಿಯುತಲಿ ಕೊಲ್ಲುತಲಿ ಬಿಸುಡಿದನು ||೨೧೪||

ಕೋಮಲೆಯು ಆ ಕುಂತಿ ವ್ಯಾಘ್ರವನು ನೋಡುತಲಿ
ಭಯದಲ್ಲಿ ಏಳುತಿರೆ ತೊಡೆಯೊಳಿಹ ಶಿಶುಭೀಮ
ಕೆಳಗಡೆಗೆ ಕಲ್ಬಂಡೆ ಮೇಲಿನಲಿ ಬೀಳುತಿರೆ
ಶಿಲೆಯದುವು ಪುಡಿಯಾಗಿ ಮಣ್ಣಿನಲಿ ಕೂಡಿಹುದು ||೨೧೫||

ವರಕುಂತಿ ಬೆರಗಾಗಿ ಶಿಶುವನ್ನು ಕೊಳ್ಳುತಲಿ
ಇದು ಭೂತ ಬೇತಾಳ ರಾಕ್ಷಸವೊ ಎನ್ನುತಲಿ
ಆಶ್ರಮಕೆ ಐತಂದು ಮುನಿವರರ ಕರೆಸುತಲಿ
ಭೀಮನ ಭವಿಷ್ಯವನು ಕೇಳಿದಳು ಕೌತುಕದಿ ॥೨೨೬॥

ಪವನಜನ ಹಸ್ತವನು ಜಾತಕವ ನೋಡುತಲಿ
ಸಾಮಾನ್ಯ ಶಿಶುವಲ್ಲ ಅದ್ಭುತ ಪರಾಕ್ರಮಿಯು
ನೂರಾರು ಆನೆಗಳ ಶಕ್ತಿಯನು ಪಡೆದಿರುವ
ಅಪ್ರತಿಮ ಬಲಯುತನು ಸಾಹಸದ ಈ ಭೀಮ ॥೨೨೭॥

ರಣದೊಳಗೆ ಪ್ರಳಯದಾ ಭೈರವನ ಪರಿಯಲ್ಲಿ
ಶತ್ರುಗಳ ರುಂಡಗಳ ಚೆಂಡಾಟವಾಡುವನು
ಪರಶಿವನ ಪರಿಯಲ್ಲಿ ಅರಿಕುಲವನರಿಯುವನು
ಈ ಭೀಮ ರುದ್ರಾಂಶನಿಹನೆಂದು ನುಡಿದಿಹರು ॥೨೨೮॥

ಕೇಳುತಲಿ ಹರುಷದಲಿ ಆ ಕುಂತಿ ಭೀಮಂಗೆ
ದೃಷ್ಟಿಯಾ ದೋಷವನು ತೆಗೆದಳು ನಿವಾಳಿಸುತ
ಋಷಿಗಳಲಿ ರಕ್ಷೆಯಾ ಕವಚವನು ಮಾಡಿಸುತ
ಭೀಮನಾ ಕೊರಳೊಳಗೆ ಕರದೊಳಗೆ ಕಟ್ಟಿದಳು ॥೨೨೯॥

## ಅರ್ಜುನನ ಜನನ

ಬಳಿಕಲಾ ವರಕುಂತಿ ಮೂಲೋಕ ಜಯಿಸುವಾ
ವಿಕ್ರಮನ ಪುತ್ರನನ ಪಡೆಯುವೆನು ಎನ್ನುತಲಿ
ಸುರನದಿಯ ನೀರೊಳಗೆ ಮೀಯುತಲಿ ಶುದ್ಧದಲಿ
ಸುರಪತಿಯ ನೆನೆದಿಹಳು ಮಂತ್ರವನು ಪಠಿಸುತಲಿ ॥೨೩೦॥

ಸೂರ್ಯಪ್ರಕಾಶದಲಿ ಹೊಳೆಹೊಳೆವ ತೇಜದಲಿ
ದೇವೇಂದ್ರನೈತಂದು ನನ್ನನ್ನು ನೆನೆದಿರುವ
ಕಾರಣವ ತಿಳುಹುವುದು ಎನ್ನುತಿರೆ ಆ ಕುಂತಿ
ಲಜ್ಜೆಯಲಿ ಬೆಮರುತಲಿ ಕರಮುಗಿದು ನುಡಿದಿಹಳು ॥೨೩೧॥

ಮೂಜಗವ ಜಯಿಸುವಾ ಶೌರ್ಯವನು ಪಡೆದಿರುವ
ವೀರನಿಹ ಪುತ್ರನನು ಕರುಣಿಪುದು ಎನ್ನುತಿರೆ
ನಿನ್ನಿಷ್ಟ ಫಲಿಸುವುದು ಪರಶಿವಗೆ ನರಯಣಗೆ
ಸರಿಮಿಗಿಲು ಎನಿಸುವಾ ಮೂಲೋಕ ವೀರನನು ॥೨೩೨॥

ನೀ ಪಡೆವೆ ಎನ್ನುತಲಿ ದೇವೇಂದ್ರ ತೆರಳುತಿರೆ
ಆ ಕುಂತಿ ಗರ್ಭವನು ಧರಿಸುತಲಿ ನವಮಾಸ
ಕಳೆಯುತಿರೆ ಸಕಲಗ್ರಹ ತಾರೆಗಳು ಶುಭವಿರಲು
ಉತ್ತರೆಯ ತಾರೆಯಲಿ ಅರ್ಜುನನ ಹೆತ್ತಿಹಳು ॥೨೩೩॥

ಗಗನದಲಿ ಮಂಗಲದ ವಾದ್ಯಗಳು ಮೊಳಗುತಿರೆ
ಗಂಧರ್ವ ಕಿನ್ನರರು ಕಿಂಪುರುಷ ಯಕ್ಷರೂ
ಸ್ವರ್ಗದಾ ಲಲನೆಯರು ದೇವೇಂದ್ರ ಸುರವೃಂದ
ಪುಷ್ಪಗಳ ಸುರಿದಿಹರು ಫಲುಗುಣನ ಜನನದಲಿ ॥೨೩೪॥

ಕೊಳದೊಳಗೆ ಕಮಲಗಳು ಬಿರಿಯುತಲಿ ಅರಳಿವವು
ತಂಬೆಲರು ಸೌರಭವ ಸೂಸುತಲಿ ಸುಳಿದಿಹುದು
ದುಂಬಿಗಳು ಝೇಂಕಾರ ಗಾಯನವ ಗೈದಿಹವು
ವಿಹಗಗಳು ಸುಸ್ವರದಿ ಗೀತೆಗಳ ಉಲಿದಿಹವು ॥೨೩೫॥

ಭೂಭಾರ ತೊಲಗುವುದು ಧರ್ಮವದು ವೃದ್ಧಿಪುದು
ದುಷ್ಟರನು ಶಿಕ್ಷಿಸುತ ಶಿಷ್ಟರನು ಸಲುಹುವನು
ಜಗದೊಳಗೆ ಸುಖಶಾಂತಿ ನೆಲೆಸುವುದು ಎನ್ನುತಲಿ
ಸಕಲಜನ ನಲಿದಿಹರು ಅರ್ಜುನ ಜನನದಲಿ ॥೨೩೬॥

ಜಿಷ್ಣು ಸಿತವಾಹನನು ಅರ್ಜುನನು ಫಲುಗುಣನು
ವರವಿಜಯ ಭೀಭತ್ಸ ಕಲಿಪಾರ್ಥ ಕಿರೀಟಿಯು
ನುತಕೃಷ್ಣ ವರಸವ್ಯಸಾಚಿ ಎಂದೆನ್ನುತಲಿ
ಈರೈದು ಹೆಸರುಗಳ ಕೀರ್ತಿಯಲಿ ಬೆಳಗಿದನು ॥೨೩೭॥

## ಶ್ರೀಕೃಷ್ಣನ ಜನನ

ಫಲಗುಣನು ಜನಿಸಿರುವ ದಿನದಂದು ತ್ರಯಮಾಸ
ಓಂದಿನಲಿ ಮಥುರೆಯಲಿ ಶ್ರಾವಣದ ಮಾಸದಲಿ
ಕೃಷ್ಣದಾ ಅಷ್ಟಮಿಯ ರಾತ್ರಿಯಲಿ ಸಕಲಗ್ರಹ
ಮಂಗಲದಿ ಶುಭವಿರಲು ರೋಹಿಣಿಯ ತಾರೆಯಲಿ ॥೨೩೮॥

ಕೇಶವನು ನರಯಣನು ಮಾಧವ ಜನಾರ್ದನನು
ಗೋವಿಂದ ಅಚ್ಯುತನು ವಾಮನ ತ್ರಿವಿಕ್ರಮನು
ವರವಿಷ್ಣು ವಸುದೇವ ಸುತನಾಗಿ ಶ್ರೀಕೃಷ್ಣ
ದೇವಕಿಯ ಜಠರದಲಿ ಜನಿಸಿದನು ಜಗದೊಳಗೆ ॥೨೩೯॥

ಪಾಪವದು ಹೆಚ್ಚುತಲಿ ಧರ್ಮವದು ನಶಿಸಿರಲು
ದುಷ್ಟರನು ಶಿಕ್ಷಿಸಲು ಶಿಷ್ಟರನು ರಕ್ಷಿಸಲು
ಭೂಭಾರ ತೊಲಗಿಸುತ ಧರ್ಮವನು ಸ್ಥಾಪಿಸಲು
ನರಯಣನು ಶ್ರೀಕೃಷ್ಣ ರೂಪದಲಿ ಜನಿಸಿಹನು ॥೨೪೦॥

ಅಜರುದ್ರ ದೇವೇಂದ್ರ ಸುರನಿಕರ ಮುನಿವೃಂದ
ಗಂಧರ್ವ ಕಿನ್ನರರು ಸುರಲಲನೆ ಚೆಲುವೆಯರು
ಸೌರಭವ ಸೂಸುತಿಹ ಸುಮಗಳನು ಸುರಿದಿಹರು
ಯಾದವ ಶಿರೋಮಣಿಯು ಶ್ರೀಕೃಷ್ಣನವತರಿಸೆ ॥೨೪೧॥

ಮೂವರಾ ಸುತರೊಡನೆ ಸುತಕುಂತಿ ಸಂತಸದಿ
ಕಾಲವನು ಕಳೆಯುತಿರೆ ಸತಿಮಾದ್ರಿ ನೋಡುತಲಿ
ತನಗೊಬ್ಬ ಸುತನಿಲ್ಲದಿರುತಿರಲು ಚಿಂತಿಸುತ
ಪಾಂಡುವಿನ ಬಳಿಸಾರಿ ನುಡಿದಿಹಳು ದುಃಖದಲಿ ॥೨೪೨॥

**ನಕುಲ ಸಹದೇವರ ಜನನ**

ಗಾಂಧಾರಿ ಕುಂತಿಯರ್ಗೆ ಸಂತಾನ ಲಭಿಸುತಲಿ
ಸಂತಸದೊಳಿರುತಿರಲು ಸುತನೊಬ್ಬ ಎನಗಿಲ್ಲ
ನಾ ಬಂಜೆ ಎಂಬುದನು ಸಹಿಸುತಲಿ ನಾನೆಂತು
ಜಗದೊಳಗೆ ಜೀವಿಪೆನು ಅಪಕೀರ್ತಿ ಹಾಸ್ಯದಲಿ ॥೨೪೩॥

ಇನ್ನೊಂದು ಮಂತ್ರವದು ಆ ಕುಂತಿಗಿರುತಿಹುದು
ಎನಗದನು ಪೇಳುವುದು ಪುತ್ರನನು ಪಡೆಯುವೆನು
ಎನ್ನುತಲಿ ನುಡಿಯುತಿರೆ ಪಾಂಡುದೊರೆ ಕುಂತಿಯನು
ಕರೆಸುತಲಿ ಮಾದ್ರಿಯು ಅಭೀಷ್ಟವನು ಅರುಹುವನು ॥೨೪೪॥

ಈ ಮೂರು ಸುತರಿಹರು ಸಾಕಿನ್ನು ನನಗೆಂದು
ಮಂತ್ರವನು ಒಂದನ್ನು ಮಾದ್ರಿಯಾ ಕಿವಿಯೊಳಗೆ
ಉಸುರುತಿರೆ ನದಿಯೊಳಗೆ ಮೀಯುತಲಿ ವರಮಾದ್ರಿ
ಮನದೊಳಗೆ ಶುದ್ಧದಲಿ ಮಂತ್ರವನು ಪಠಿಸುತಲಿ ॥೨೪೫॥

ಅಶ್ವಿನೀ ಕುವರರನು ಈರ್ವರನು ನೆನೆಯುತಿರೆ
ಆ ಕ್ಷಣದಿ ಐತಂದು ಕಾರಣವ ಕೇಳುತಿರೆ
ಪುತ್ರರನು ಕರುಣಿಪುದು ಎನ್ನುತಲಿ ಆ ಮಾದ್ರಿ
ಲಜ್ಜೆಯಲಿ ನುಡಿಯುತಿರೆ ಅಶ್ವಿನೀ ಕುಮಾರರು ॥೨೪೬॥

ನಿನ್ನಯ ಅಭೀಷ್ಟವದು ಫಲಿಸುವುದು ಖಚಿತದಲಿ
ಪುತ್ರರನು ಇಬ್ಬರನು ನೀ ಪಡೆವೆ ಎನ್ನುತಲಿ
ಸರಿಯುತಿರೆ ನವಮಾಸ ತೆರಳುತಿರೆ ಪಾಂಡುಸತಿ
ಪುತ್ರರನು ಈರ್ವರನು ಅವಳಿಗಳ ಹೆತ್ತಿಹಳು ॥೨೪೭॥

ಫಲಗುಣಾಗೆ ವರುಷೊಂದು ಕಡಿಮೆಯಲಿ ಎನಿಸುತಲಿ
ಅವಳಿ ಶಿಶು ಜನಿಸುತಿರೆ ಪಾಂಡುನೃಪ ಹರುಷದಲಿ
ಉತ್ಸವವ ಗೈಯ್ಯುತಲಿ ವರನಕುಲ ಸಹದೇವ
ಎನ್ನುತಲಿ ಶಿಶುಗಳಿಗೆ ಹೆಸರುಗಳನಿಟ್ಟಿಹನು ॥೨೪೮॥

**ವಸುದೇವನು ಉಡುಗೊರೆಗಳನ್ನು ಕಳಿಸುವುದು**

ಇತ್ತಲಾ ಮಥುರೆಯಲಿ ವಸುದೇವ ಭೂಪಾಲ
ಕಾನನದಿ ತನ್ನಯಾ ತಂಗಿಯಲಿ ಕುಂತಿಯಲಿ
ಸುತರುಗಳು ಜನಿಸಿಹರು ಎಂಬುವಾ ವಾರ್ತೆಯನು
ಕೇಳುತಲಿ ಆನಂದ ಸಾಗರದಿ ಮುಳುಗುತಲಿ ॥೨೪೯॥

ಮುತ್ತುಗಳ ರತ್ನಗಳ ವಜ್ರಗಳ ಹಾರಗಳ
ಧನಕನಕ ವಸ್ತ್ರಗಳ ಪೀತಾಂಬರಾದಿಗಳ
ಅಗಣಿತದ ಅಶ್ವಗಳ ಆನೆಗಳ ಗೋವುಗಳ
ಉಡುಗೊರೆಯ ಕಳಿಸಿದನು ಆ ಪಾಂಡು ಕುಂತಿಯರ್ಗೆ ॥೨೫೦॥

ಬಂಧುಗಳ ಬಾಂಧವರ ಯಾದವರ ಸಕಲರನು
ಕಶ್ಯಪನ ಋಷಿವರನ ಸಹಿತದಲಿ ಕಳಿಸುತಿರೆ
ಪಯಣದಲಿ ಪಾಂಡುವಿನ ಬಳಿಬರಲು ಸಕಲರೂ
ಆದರದಿ ಯಾದವರ ಬರಮಾಡಿಕೊಳ್ಳುತಲಿ ॥೨೫೧॥

ವಸುದೇವ ದೇವಕಿಯು ರೋಹಿಣಿಯು ಕುಶಲವನು
ಬಲರಾಮ ಶ್ರೀಕೃಷ್ಣ ಮೊದಲಾದ ಬಾಂಧವರ
ಕ್ಷೇಮವ ವಿಚಾರಿಸುತ ತಮ್ಮಯಾ ಸುಖದುಃಖ
ಹೇಳುತಲಿ ಕೇಳುತಲಿ ಕಾಲವನು ಕಳೆದಿಹರು ॥೨೫೨॥

ಬಾಲರವಿ ಕಿರಣಗಳ ಪರಿಯಲ್ಲಿ ಹೊಳೆಯುತಿಹ
ಧರ್ಮಜನ ಪವನಜನ ಅರ್ಜುನನ ಮತ್ತೆಯು
ವರನಕುಲ ಸಹದೇವರೈವರಾ ಬಾಲಕರ
ರಾಜಕಳೆ ಉಕ್ಕುತಿಹ ಮುಖಗಳನು ನೋಡುತಲಿ ॥೨೫೩॥

ಬಹುಜನ್ಮ ಸುಕೃತಗಳ ಪುಣ್ಯದಲಿ ಕುಂತಿಯಲಿ
ಸಾಕ್ಷಾತ್ತು ದಿವಿಜರೇ ಜನಿಸಿಹರೊ ಎನ್ನುತಲಿ
ಧನ್ಯಳೀ ವರಕುಂತಿ ಧನ್ಯನೀ ಪಾಂಡುನೃಪ
ಎನ್ನುತಲಿ ಸಕಲರೂ ಹರ್ಷದಲಿ ಹರಸಿದರು ॥೨೫೪॥

**ಪಾಂಡವರ ಚೌಲೋಪನಯನ**

ಬಳಿಕಲಾ ಪಾಂಡುದೊರೆ ಕಶ್ಯಪನ ಹಿರಿತನದಿ
ಐವರೂ ಪಾಂಡವರ ಚೌಲೋಪನಯನಾದಿ
ಶುಭಕರದ ಮಂಗಲದ ಕಾರ್ಯಗಳ ಗೈಯ್ಯುತಲಿ
ಯಾದವರ ಸಹಿತದಲಿ ಸಂತಸದಿ ನಲಿದಿಹನು ॥೨೫೫॥

ಕಶ್ಯಪಗೆ ಋಷಿಗಳಿಗೆ ಯಾದವರ್ಗೆ ಬಾಂಧವರ್ಗೆ
ಧನಕನಕ ವಸ್ತ್ರಗಳ ಕಾಣಿಕೆಯನೀಯುತಲಿ
ವಸುದೇವ ಭೂಪತಿಗೆ ದೇವಕಿಗೆ ರೋಹಿಣಿಗೆ
ಅಳಿಯಂದಿರಾಗಿರುವ ಬಲರಾಮಕೃಷ್ಣಂಗೆ ॥೨೫೬॥

ಸುತಕುಂತಿ ವರಪಾಂಡು ಸ್ವರ್ಣದಾಭರಣಗಳ
ಮುತ್ತುಗಳ ರತ್ನಗಳ ಒಡವೆಗಳ ವಸ್ತ್ರಗಳ
ಉಡುಗೊರೆಯ ಕಳುಹಿಸುತ ಯಾದವರ ಬೀಳ್ಕೊಡುತ
ಐವರಾ ಸುತರೊಡನೆ ತೋಷದಲಿ ಇರ್ದಿಹನ ॥೨೫೭॥

ಕೇಳುವುದು ಜನಮೇಜಯ ನೃಪಾಲನೆ ಮುಂದಕೆ
ಬಳಿಕ ಆ ಪಾಂಡುನೃಪ ಶತಶೃಂಗ ಶೈಲದಲಿ
ವ್ಯಾಘ್ರಗಳ ಸಿಂಹಗಳ ತೋಳುಗಳನಿರಿಯುತಲಿ
ಕಂಟಕವ ಕಳೆಯುತಲಿ ಮುನಿಜನರ ರಕ್ಷಿಸುತ ॥೨೫೮॥

ಧರ್ಮಗಳ ಶಾಸ್ತ್ರಗಳ ಪುಣ್ಯಕಥೆಯಾಲಿಸುತ
ಐವರೂ ಮುದ್ದಾದ ಸುಂದರರ ಸುತರೊಡನೆ
ಸಂತಾನ ಸೌಭಾಗ್ಯಕೆಣೆಯಿಲ್ಲ ಜಗದೊಳಗೆ
ಎಂಬಂತೆ ಸಂತಸದಿ ಕಾನನದಿ ವಾಸಿಸಿದ ॥೨೫೯॥

ಸತಿಸುತರ ಸೌಖ್ಯದಲಿ ಮುಳುಗಿರುವ ಪಾಂಡುವಿಗೆ
ಗಜಪುರದ ಐಶ್ವರ್ಯ ಹುಲ್ಲಿನಾ ಸಮವಾಯ್ತು
ಸ್ವರ್ಗದಾ ಸೌಖ್ಯಕ್ಕೆ ಬೆಂಕಿಯನು ಹಚ್ಚುವುದು
ಎನ್ನುತಲಿ ಆನಂದ ಸಾಗರದಿ ತೇಲಿದನು ॥೨೬೦॥

## ವಸಂತಾಗಮನ

ಹದಿನಾರು ವರುಷಗಳು ಧರ್ಮಜಗೆ ತುಂಬುತಿರೆ
ಹದಿನೈದು ಪವನಜಗೆ ಹದಿನಾಲ್ಕು ಅರ್ಜುನಗೆ
ಹದಿಮೂರು ವರುಷಗಳು ಯಮಳರಿಗೆ ತುಂಬುತಿರೆ
ಬಂದಿಹುದು ಸುಂದರದ ಸುಖಕರದ ಮಧುಮಾಸ ॥೨೬೧॥

## ವಸಂತಋತು ವರ್ಣನೆ

ಮಾಮರವು ಕೋಮಲದ ಪಲ್ಲವವ ತಳೆದಿಹುದು
ವೃಕ್ಷಗಳು ಪುಷ್ಪಗಳ ಸೊಬಗಿನಲಿ ಎಸೆದಿಹವು
ಕಮಲಗಳು ಅರಳುತಲಿ ಚೆಲುವಿನಲಿ ಮೆರೆದಿಹವು
ವನದೇವಿ ಸೌಂದರ್ಯ ಪ್ರಭೆಯಲ್ಲಿ ಬೆಳಗಿಹಳು ॥೨೬೨॥

ಕೋಗಿಲೆಯು ಪಂಚಮದಿ ಇಂಚರದಿ ಹಾಡಿಹವು
ವಿಹಗತತಿ ಸುಸ್ವರದ ಗಾಯನವ ಗೈದಿಹವು
ದುಂಬಿಗಳು ಮಧುರತರ ಝೇಂಕಾರ ಗೈದಿಹವು
ತಂಬೆಲರು ಸೌರಭವ ಸೂಸುತಲಿ ಬೀಸಿಹುದು ॥೨೬೩॥

ಒಂದು ದಿನಪಾಂಡುನೃಪ ವನದೊಳಗೆ ಬರುತಲಿರೆ
ಹೂಗಳನು ಮುಡಿಯುತಲಿ ಶೃಂಗಾರ ಸೊಬಗಿನಲಿ
ಸುರಲಲನೆ ಸೌಂದರ್ಯ ತೇಜದಲಿ ಶೋಭಿಸುವ
ಕೋಮಲ ಲತಾಂಗಿಯನು ಕುಂತಿಯನು ಕಾಣುತಿರೆ ॥೨೬೪॥

ಇದೆ ಸಮಯವೆನ್ನುತಲಿ ಮನ್ಮಥನು ಭರದಲ್ಲಿ
ಕುಸುಮಶರ ಪಂಚಗಳ ಸೆಳೆಯುತಲಿ ಬಿಡುತಲಿರೆ
ತೀವ್ರದಲಿ ಪಾಂಡುವಿನ ಹೃದಯವನು ಇರಿಯುತಿರೆ
ಕಾಮದಾ ಬಾಧೆಯಲಿ ಚಿತ್ತವದು ಏರುತಲಿ ॥೨೬೫॥

ಭ್ರಾಂತಿಯಲಿ ಕಳವಳದಿ ಒಂದಣದ ವಂದಣದ
ಆಗುಗಳ ಹಾಗುಗಳ ಒಂದನ್ನು ಎಣಿಸದಲೆ
ಕುಂತಿಯನು ಬರಸೆಳೆದು ದೃಢದಲ್ಲಿ ಅಪ್ಪುತಿರೆ
ಆಕ್ರೋಶ ಗೈಯುತಲಿ ಆ ಕುಂತಿ ನುಡಿದಿಹಳು ॥೨೬೬॥

ಅಕಟಕಟ ಮುನಿವರನ ಶಾಪವನು ಮರೆಯುತಲಿ
ಮೃತ್ಯುವಿನ ಪರಿ ಇರುವ ಎನ್ನನ್ನು ಅಪ್ಪಿದೆಯಾ
ಋಷಿವರನ ಶಾಪವದು ಸುಳ್ಳಾಗದೆಂದಿಗೂ
ನೀ ಮರಣವಪ್ಪುತಲಿ ಸಾಯುವುದು ಖಚಿತವಿದು ॥೨೬೭॥

ಎನ್ನನ್ನು ಮುಟ್ಟದಿರು ಅಪ್ಪದಿರು ರಮಿಸದಿರು
ಮುನಿವರನ ಶಾಪವನು ನೆನೆಯುವದು ದೂರಸರಿ
ಎನ್ನುತಲಿ ಆ ಸಾಧ್ವಿ ಸತಿಕುಂತಿ ರೋದಿಸುತ
ಪಾಂಡುವಿನ ಕರಪಿಡಿದು ನುಡಿಯುತಿರೆ ದೈನ್ಯದಲಿ ॥೨೬೮॥

## ಪಾಂಡುವಿನ ಮರಣ

ಜ್ವಲಿಸುತಿಹ ಕಾಮದಾ ಜ್ವರದಲ್ಲಿ ನರಳುತಿಹ
ಪಾಂಡುನೃಪ ಮತಿಭ್ರಮೆಯೊಳೇನೊಂದು ತಿಳಿಯದಲೆ
ನಿಜಸತಿಯು ಕುಂತಿಯನು ಅಪ್ಪುತಲಿ ರಮಿಸುತಿರೆ
ಪ್ರಾಣವದು ಹಾರುತಲಿ ತೆಕ್ಕೆಯಲಿ ಒರಗಿದನು ॥೨೬೯॥

## ಕುಂತಿಯ ಶೋಕ

ದೇಹವದು ಭಾರದಲಿ ಬೀಳುತಿರೆ ಚಿಂತೆಯಲಿ
ದಿಕ್ಕೆಟ್ಟು ದುಃಖದಲಿ ಚೀರುತಲಿ ಕೂಗುತಲಿ
ಅಕಟಕಟ ಮಕ್ಕಳನು ತಬ್ಬಲಿಯ ಮಾಡುತಲಿ
ಎನ್ನನ್ನು ಕೊಲ್ಲುತಲಿ ಮರಣವನು ಅಪ್ಪಿದೆಯಾ ॥೨೭೦॥

ಎಳೆಯರೀ ಕಂದಗಳು ಐವರೂ ಪಾಂಡವರು
ಇನ್ನಾರ ಸೇವಿಸುತ ಹೊಟ್ಟೆಯನು ಹೊರೆಯುವರು
ಇನ್ನಾರು ಗತಿಯೆಮಗೆ ಪರದೇಶಿಯಾಗಿಹೆವು
ಎನ್ನುತಲಿ ರೋದಿಸುತ ಆಕ್ರೋಶಗೈದಿಹಳು ॥೨೭೧॥

ರೋದನದ ಘೋರಸ್ವರ ಕಾನನವ ಭೇದಿಸುತ
ಮಾರ್ದನಿಯು ಗೈಯುತಲಿ ರಭಸದಲಿ ಸಾಗುತಲಿ
ದೂರವಿಹ ಮಾದ್ರಿಯಾ ಕಿವಿಗಳಿಗೆ ತಾಗುತಿರೆ
ವನಸಿರಿಯು ಆಶ್ಚರ್ಯಗೊಳ್ಳುತಲಿ ಕಳವಳದಿ ॥೨೭೨॥

ಎತ್ತಣದ ದನಿಯಿದುವು ಅರಳುತಲಿರುತಿಹರು
ಎದೆಬಿರಿವ ತೆರದಲ್ಲಿ ರೋದಿಸುತಲಿರುತಿಹರು
ಅವಳೋ ಹೆಂಗುಸಿನ ಸ್ವರವಿದುವು ಎನ್ನುತಲಿ
ಸರಪಿಡಿದು ಧಾವಿಸುತ ಓಡುತಲಿ ಬರುತಲಿರೆ ॥೨೭೩॥

ಎನ್ನುತಲಿ ತನ್ನಯಾ ಸೊಸೆಯಂದಿರೊಡಗೂಡಿ
ವೈರಾಗ್ಯ ಭಾವದಲಿ ಕಾನನಕೆ ತೆರಳಿದಳು
ಮುತ್ತಯ್ಯನಾ ಭೀಷ್ಮ ಮೊಮ್ಮಕ್ಕಳಾಗಿರುವ
ಕೌರವರ ಪಾಂಡವರ ಸಲುಹಿದನು ಪ್ರೇಮದಲಿ ॥೩೦೫॥

**ಕೌರವರ ಪಾಂಡವರ ಬಾಲ್ಯದ ಆಟಗಳು**

ಕೇಳುವುದು ಭೂಪತಿಯೆ ಊರಹೊರವಲಯದಲಿ
ಒಂದುಕಡೆ ಕೌರವರು ಬೇರೆಕಡೆ ಪಾಂಡವರು
ಚಿಣಿದಾಂಡು ಗೋಲಿಯಲಿ ಬೊಗರೆಯಲಿ ಮೊದಲಾದ
ಆಟಗಳನಾಡಿದರು ತಂಡಗಳು ಎರಡಾಗಿ ॥೩೦೬॥

ಆ ಭೀಮನೊಬ್ಬನೇ ನೂರ್ವರಾ ಕೌರವರ
ಗೋಲಿಗಳ ಕುಟ್ಟುತಲಿ ಪುಡಿಪುಡಿಯ ಗೈಯುತಲಿ
ಚಿಣಿಗೋಲು ಚಿಮ್ಮುತಲಿ ಛಟಛಟನೆ ಮುರಿಯುತಲಿ
ಕೌರವರನೆಲ್ಲರನು ಜಯಿಸಿದನು ನಿಮಿಷದಲಿ ॥೩೦೭॥

ಕುದುರೆಗಳ ಆನೆಗಳ ಏರಾಟ ಓಡಾಟ
ಕುಸ್ತಿಯಲಿ ಮಲ್ಲದಲಿ ಮುಷ್ಟಿಗಳ ಹೊಡೆತದಲಿ
ಆಟಗಳನಾಡುತಲಿ ಭೀಮನವನೊಬ್ಬನೇ
ಕೌರವರ ನೂರ್ವರನು ಸದೆಬಡಿದು ಕೆಡಹಿದನು ॥೩೦೮॥

ಬಾಯೊಳಿಹ ಹಲ್ಲುಗಳು ಮುರಿಯುತಲಿ ಬೀಳುತಲಿ
ಕೈಕಾಲು ಮುರಿಯುತಲಿ ರಕುತವದು ಸೋರುತಲಿ
ಕೌರವರು ಓಡುತಲಿ ಅರಮನೆಗೆ ಐತಂದು
ಧೃತರಾಷ್ಟ್ರ ಗಾಂಧಾರಿ ದೇವಿಯರ್ಗೆ ತೋರಿದರು ॥೩೦೯॥

ಭೀಮುನವ ಬಲುತುಂಟ ಬಲುಶಕ್ತಿವಂತನಿಹ
ಅವನೊಡನೆ ಆಟವನು ನೀವೆಂದು ಆಡದಿರಿ
ಉಳಿದಿರುವ ನಾಲ್ವರೂ ಪಾಂಡವರು ಸಜ್ಜನರು
ಅವರೊಡನೆ ಆಡುವದು ಎಂದಿಹನು ಧೃತರಾಷ್ಟ್ರ ॥೩೧೦॥

**ಗಾಂಧಾರಿ ಕುಂತಿಯರ ಸಂವಾದ**

ಹಲ್ಲುಗಳು ಉದುರಿರುವ ರಕುತವದು ಒಸರುತಿಹ
ದುರ್ಯೋಧನಾದಿಗಳ ನೋಡುತಲಿ ಗಾಂಧಾರಿ
ಕೋಪದಲಿ ಕುದಿಯುತಲಿ ಕುಂತಿಯನು ಕರೆಸುತಲಿ
ಆ ಭೀಮಗೈದಿರುವ ಕೃತ್ಯವನು ತೋರಿಹಳು ॥೩೧೧॥

ನಿನ್ನಯಾ ಮಗ ಭೀಮ ಬಲುದುಷ್ಟ ಬಲುಕ್ರೂರ
ಎನ್ನಯಾ ಸುತರುಗಳ ಹಲ್ಲುಗಳ ಉದುರಿಸುತ
ಕೈಕಾಲುಮುರಿದಿಹನು ಇದು ಯೋಗ್ಯವೆನಿಸುವುದೆ
ಭೀಮನನು ಹಿಡಿತದಲಿ ಇರಿಸುವುದು ಇಲ್ಲದಿರೆ ॥೩೧೨॥

ಅವನಗತಿ ಚೆನ್ನಾಗಿ ಆಗದದು ಎನ್ನುತಿರೆ
ಕೇಳಕ್ಕ ಗಾಂಧಾರಿ ಎನ್ನಯಾ ಮಗ ಭೀಮ
ಪುಂಡನಿಹನೆಂಬುದನು ನಾ ಬಲ್ಲೆ ಚನ್ನಾಗಿ
ಆದೊಡೆಯು ತನ್ನನ್ನು ಕೆಣಕಿದೊಡೆ ಅಲ್ಲದೆಯೆ ॥೩೧೩॥

ಸುಮ್ಮನೆ ಪರರಿಂಗೆ ಹಿಂಸೆಯನು ಕೊಡನವನು
ನೂರ್ವರಾ ಕೌರವರು ಒಬ್ಬನೇ ಭೀಮನನು
ಕೆಣಕಿದೊಡೆ ಅಲ್ಲದೆಯ ಈ ಪರಿಯ ಗೈಯನವ
ಎನ್ನುತಿರೆ ಆ ಕುಂತಿ ಅಷ್ಟರಲಿ ಕಲಿಭೀಮ ॥೩೧೪॥

ಮಣ್ಣಿನಲಿ ಕಲ್ಲಿನಲಿ ಮುಳ್ಳಿನಲಿ ಉರುಳಾಡಿ
ಮೈದೊಗಲು ಕಿತ್ತುತಲಿ ರುಧಿರವದು ಸುರಿಯುತಲಿ
ಓಡುತಲಿ ಐತಂದು ನೂರ್ವರಾ ಕೌರವರು
ಓರ್ವನೇ ಎನ್ನನ್ನು ಬಡಿದಿಹರು ಎನ್ನುತಲಿ ॥೩೧೫॥

ಆ ಕುಂತಿ ಗಾಂಧಾರಿ ದೇವಿಯರ್ಗೆ ತೋರುತಿರೆ
ನೋಡಕ್ಕ ಗಾಂಧಾರಿ ಹುಡುಗರಿವು ಆಡುವವು
ಮತ್ತೆ ಜಗಳಾಡುವವು ಕೂಡುವವು ಸಹಜಮಿದು
ಏಳುವವು ಬೀಳುವವು ಕೋಪವನು ಮಾಡದಿರಿ ॥೩೧೬॥

ಎನ್ನುತಲಿ ಆ ಕುಂತಿ ಸುತಸಹಿತ ತೆರಳುತಿರೆ
ದಿನಮೂರು ಕಳೆಯುತಿರೆ ಮತ್ತೆ ಆ ಬಾಲಕರು
ಕೌರವರು ಪಾಂಡವರು ಎಲ್ಲವನು ಮರೆಯುತಲಿ
ಸೇರುತಲಿ ಸರಸದಲಿ ಆಟಗಳ ನಾಡಿದರು ॥೩೧೭॥

ಒಂದು ದಿನ ಕೌರವರು ಊರಹೊರವಲಯದಲಿ
ಮರವೊಂದನೇರುತಲಿ ಗಿಡಮಂಗನಾಟವನು
ಆಡುತಿರೆ ಕಲಿಭೀಮ ನೋಡುತಲಿ ಧಾವಿಸುತ
ಬೇರಿನಾ ಸಹಿತದಲಿ ಮರವನ್ನು ಅಲುಗಿಸಲು ॥೩೧೮॥

ಹಣ್ಣಾದ ಹಣ್ಣುಗಳು ಮರದಿಂದ ಬೀಳ್ವಂತೆ–
ನೂರ್ವರಾ ಕೌರವರು ಪಟಪಟನೆ ಬೀಳುತಿರ
ಕೈಕಾಲು ಮುರಿದಿಹವು ಹಲ್ಲುಗಳು ಉದುರಿದವು
ಬಾಯಿಯಲಿ ರಕುತದಾ ಧಾರೆಯದು ಸುರಿದಿಹುದು ॥೩೧೯॥

ಕೋಪದಲಿ ನೂರ್ವರಾ ಕೌರವರು ಸೇರುತಲಿ
ಓರ್ವನೇ ಭೀಮನನು ಮುತ್ತುತಲಿ ಬಡಿಯುತಲಿ
ಪಾಶದಲಿ ಕೈಕಾಲು ದೇಹವನು ಕಟ್ಟುತಲಿ
ನದಿಯೊಳಗೆ ಎಸೆಯುತಲಿ ಭವನದೆಡೆ ತೆರಳುತಿರೆ ॥೩೨೦॥

ಕಲಿಭೀಮ ಮೈಯನ್ನು ಹಿಗ್ಗಿಸುತ ಭರದಲ್ಲಿ
ಛಟಛಟನೆ ಎನ್ನುತಲಿ ಹಗ್ಗವನು ಕತ್ತರಿಸಿ
ಈಜುತಲಿ ದಂಡೆಯನು ತಲುಪುತಲಿ ಓಡುತಲಿ
ಓಡುತಿಹ ಕೌರವರ ನೂರ್ವರನು ಅಡ್ಡೈಸಿ ॥೩.೨೧॥

## ಭೀಮ ದುರ್ಯೋಧನರಲ್ಲಿ ಮತ್ಸರದ ಬೀಜ ಬಿತ್ತಿದುದು

ಹುಳುಗಳನು ಬಡಿದಂತೆ ಮುಷ್ಟಿಯಲಿ ಬಡಿಯುತಲಿ
ಕೋಪದಾ ಜ್ವಾಲೆಯದು ಪ್ರಜ್ವಲಿಸಿ ಉರಿಯುತಲಿ
ನೂರ್ವರಾ ಕೌರವರ ಜನಿಗರುಳ ಬಗೆಯುತಲಿ
ಶಾಕನಿಯು ಡಾಕಿಣಿಯು ಭೂತಗಳ ನಿಕರಕ್ಕೆ ॥೩.೨೨॥

ಬಲಿಯನ್ನು ಇಕ್ಕುವೆನು ಎನ್ನುತಲಿ ಹಣಿಯುತಲಿ
ಬಿಡುತಲಿರೆ ಬದುಕಿದೆವು ಎನ್ನುತಲಿ ಓಡಿದರು
ಆ ಭೀಮ ದುರ್ಯೋಧನಾದಿಗಳ ಮುಂದಣದ
ಮತ್ಸರದ ಹೆಮ್ಮರದ ಬೀಜವದು ಬಿತ್ತಿಹುದು ॥೩.೨೩॥

## ಕೌರವರು ಭೀಮನಿಗೆ ವಿಷವನ್ನು ಇಕ್ಕುವುದು

ದುರ್ಯೋಧನಾದಿಗಳ ಕೌರವನು ಮನದೊಳಗೆ
ಕ್ರೋಧದಲಿ ಭೀಮನನು ಕೊಲ್ಲುವುದು ಎನ್ನುತಲಿ
ಯೋಚಿಸುತ ಘೋರತರ ಹದಿನೆಂಟು ವಿಷಗಳನು
ಸೇರಿಸುತಲೊಂದುದಿನ ಸಿಹಿತಿಂಡಿ ಮಾಡುತಲಿ ॥೩.೨೪॥

ಸರಸದಲಿ ಪ್ರೇಮದಲಿ ಭೀಮನನು ಕರೆಯುತಲಿ
ಸೋದರನೆ ಕಲಿಭೀಮ ಕೋಪವನು ಮಾಡದಿರು
ಏಳುವುದು ಬೀಳುವುದು ಸಹಜವಿದು ಆಟದಲಿ
ನಾವೀಗ ತಿಂಡಿಯನು ತಿನ್ನುತಲಿ ಆಡೋಣ ॥೩.೨೫॥

ಎನ್ನುತಲಿ ವಿಷದುಂಡೆ ತೆಗೆಯುತಲಿ ಈಯುತಿರೆ
ಆ ಭೀಮ ಎಲ್ಲವನು ತಿನ್ನುತಲಿ ತೇಗುತಲಿ
ಆಟವನು ಆಡೋಣ ನೀವೆಲ್ಲ ಬನ್ನಿರಿ
ಎನ್ನುತಲಿ ಕೌರವರ ಬಡಿಯುತಲಿ ಹಣಿದಿಹನು ॥೩.೨೬॥

ನೂರ್ವರೂ ಮುತ್ತುತಲಿ ಎನ್ನನ್ನು ಬಡಿದಿಹಿರಿ
ಹಗ್ಗದಲಿ ಬಿಗಿಯುತಲಿ ನದಿಯೊಳಗೆ ಎಸೆದಿಹಿರಿ
ವಿಷವಿಕ್ಕಿ ಕೊಲ್ಲಲಿಕೆ ಯತ್ನವನು ಮಾಡಿದಿರಿ
ನಿಮ್ಮನ್ನು ಯಮಲೋಕಕಟ್ಟುವೆನು ಎಂದಿಹನು ॥೩.೨೭॥

ಆಯುಷ್ಯ ಗಟ್ಟಿಯಿರೆ ಆ ಬ್ರಹ್ಮ ಹರಿಹರರು
ಏನನ್ನೂ ಮಾಡಲಿಕೆ ಅಸಮರ್ಥರಿರುತಿಹರು
ಕೌರವರು ವಿಧವಿಧದಿ ಕೊಲ್ಲಲಿಕೆ ಯತ್ನಿಸಲು
ಕಲಿಭೀಮ ಬದುಕುತಲಿ ಕೌರವರ ಹಣಿದಿಹನು ॥೩.೨೮॥

ಮುಂದಣದ ಭಾರತದ ಘನಘೋರ ಯುದ್ಧಕಿದು
ನಾಂದಿಯಂತಾಗುತಲಿ ಹಗೆತನವು ಬೆಳೆಯುತಲಿ
ಕುರುಕುಲದ ವೃಕ್ಷವನು ಬೇರಿನಾ ಸಹಿತದಲಿ
ಭಸ್ಮವನು ಗೈಯುವಾ ದ್ವೇಷಕಿಡಿ ಹೊತ್ತಿಹುದು ॥೩.೨೯॥

## ಭೀಷ್ಮ ಧೃತರಾಷ್ಟ್ರರು ಬುದ್ಧಿಯನ್ನು ಹೇಳುವುದು

ಬಾಲಕರ ಕಲಹವನು ವೈರವನು ನೋಡುತಲಿ
ಧೃತರಾಷ್ಟ್ರ ಆ ವಿದುರ ಮುತ್ತಯ್ಯ ವರಭೀಷ್ಮ
ದ್ವೇಷವನು ಮಾಡುವದು ಎಂದಿಗೂ ಸಲ್ಲದಿದು
ಮತ್ಸರದ ಜ್ವಾಲೆಯಿದು ಎಲ್ಲರನು ದಹಿಸುವುದು ॥೩.೩೦॥

ಎನ್ನುತಲಿ ಬುದ್ಧಿಯನು ಪೇಳುತಿರೆ ಸಕಲರೂ
ಕೌರವರು ಪಾಂಡವರು ಪ್ರೇಮದಲಿ ಸೇರುತಲಿ
ಸಣ್ಣವೀ ಆಟಗಳು ಸಾಕಿನ್ನು ಎನ್ನುತಲಿ
ಅಸ್ತ್ರಗಳ ಶಸ್ತ್ರಗಳ ಆಟಗಳನಾಡಿದರು ॥೩.೩೧॥

## ಕೃಪ ಕೃಪೆಯರ ಜನನ

ಕೇಳರಸ ಪೂರ್ವದಲಿ ಮುನಿವರನ ಗೌತಮನ
ಸುತತನಯ ಶರದ್ವನು ತಪಸಿನೊಳು ಇರುತಿರಲು
ಸುರಯುವತಿ ಚೆಲುವೆಯನು ನೋಡುತಲಿ ಕಾಮದಲಿ
ಸಿಲುಕುತಲಿ ವೀರ್ಯವದು ಭರದಲ್ಲಿ ಸ್ಖಲಿಸುತಿರೆ ॥೩.೩೨॥

ಸನಿಹದಲಿ ಇರುತಿರುವ ಧನುವಿನಾ ಸ್ತಂಭದಲಿ
ನೆಲಸುತಲಿ ಶಿಶುವೆರಡು ಜನಿಸುತಿರೆ ಶಂತನುವು
ನೋಡುತಲಿ ಶಿಶುಗಳನು ಕೊಳ್ಳುತಲಿ ಪೋಷಿಸಲು
ಕೃಪ ಕೃಪೆಯರೆಂಬುವಾ ಹೆಸರುಗಳಲೆಸೆದಿಹರು ॥೩.೩೩॥

ಆ ಕೃಪನು ವೇದದಲಿ ಶಾಸ್ತ್ರದಲಿ ತರ್ಕದಲಿ
ಪರಿಣತನು ಆಗುತಿರೆ ಗಾಂಗೇಯ ಕಾಣುತಲಿ
ಅರಮನೆಗೆ ಕರೆಸುತಲಿ ಕೌರವರ್ಗೆ ಪಾಂಡವರ್ಗೆ
ವಿದ್ಯೆಗಳನೆಲ್ಲವನು ಕಲಿಸಲಿಕೆ ಅರುಹಿದನು ॥೩.೩೪॥

ವೇದಗಳ ಶಾಸ್ತ್ರಗಳ ತರ್ಕಗಳ ಕಾವ್ಯಗಳ
ಮೀಮಾಂಸ ಮೊದಲಾದ ಹದಿನಾಲ್ಕು ವಿದ್ಯೆಗಳ
ಗುರುಕೃಪನು ಕೌರವರ್ಗೆ ಪಾಂಡವರ್ಗೆ ಕಲಿಸುತಿರೆ
ಸಕಲರೂ ವಿದ್ಯೆಯಲಿ ಪರಿಣತರು ಎನಿಸಿಹರು ॥೩.೩೫॥

### ದ್ರೋಣನ ಜನನ-ಬಾಲ್ಯಾಭ್ಯಾಸ

ಇತ್ತಲಾ ಆಶ್ರಮದಿ ವರಭರದ್ವಾಜರ್ಷಿ
ತಪಗೈಯ್ಯುತಿರುತಿರಲು ಮಧುಮಾಸದೊಂದು ದಿನ
ಸುರಸುಂದರಾಂಗಿಯನು ನೋಡುತಲಿ ಮೋಹಿಸುತ
ಮದನೆಸೆದ ಬಾಣದಲಿ ಮನಮೃಗವು ಸಿಲುಕುತಲಿ ॥೩೩೬॥

ವೀರ್ಯವದು ಸ್ಖಲಿಸುತಿರೆ ದ್ರೋಣದಲಿ ಇರಿಸುತಿರೆ
ಪಿಂಡವದು ವೃದ್ಧಿಸುತ ದಿನದಿನದಿ ಬೆಳೆಯುತಿರೆ
ಶಿಶುವೊಂದು ಉದಿಸುತಿರೆ ದ್ರೋಣದಲಿ ಜನಿಸಿರುವ
ಕಾರಣದಿ ವರದ್ರೋಣ ಎನ್ನುತಲಿ ಕರೆದಿಹರು ॥೩೩೭॥

ಬಳಿಕಲಾ ಮುನಿವರನು ಉಪನಯನ ಗೈಯ್ಯುತಲಿ
ದ್ರೋಣಂಗೆ ವೇದಗಳ ಶಾಸ್ತ್ರಗಳ ಕಲಿಸುತಲಿ
ನೃಪರುಗಳ ಜೊತೆಯಲ್ಲಿ ಶಸ್ತ್ರಾಸ್ತ್ರ ಕಲಿಸುತಲಿ
ಪರಿಣತನ ಗೈದಿಹನು ಬಿಲ್ಲನಾ ವಿದ್ಯೆಯಲಿ ॥೩೩೮॥

ವರುಷಗಳು ಕಳೆಯುತಿರೆ ಗಾಂಗೇಯ ಯೋಚಿಸುತ
ವರಕೃಪನ ತಂಗಿಯನು ದ್ರೋಣಂಗೆ ಈಯುತಲಿ
ಮದುವೆಯನು ಮಾಡುತಿರೆ ಮಹರುದ್ರನವತಾರ
ರೌದ್ರನಶ್ವತ್ಥಾಮ ಜನಿಸಿದನು ಜಗದೊಳಗೆ ॥೩೩೯॥

ನೃಪಕುವರ ದ್ರುಪದನಾ ಸಹಿತದಲಿ ವರದ್ರೋಣ
ತಂದೆಯಲಿ ಧನುರ್ವಿದ್ಯೆ ಕಲಿಯುತಿರೆ ಸಖ್ಯದಲಿ
ದೃಪದನಾ ಪಿತೃವರನು ಪಾಂಚಾಲ ಭೂಪತಿಯು
ಸ್ವರ್ಗಕ್ಕೆ ತೆರಳುತಿರೆ ದ್ರುಪದನತಿ ಶೋಕದಲಿ ॥೩೪೦॥

ತನ್ನಯಾ ರಾಜ್ಯಕ್ಕೆ ತೆರಳುತಲಿ ಭರದಲ್ಲಿ
ರಾಜ್ಯಭಿಷೇಕದಲಿ ರಾಜ್ಯವನು ಆಳುತಿರೆ
ಹಲವು ದಿನ ಉರುಳುತಿರೆ ದ್ರೋಣನಾ ಪಿತೃವರನು
ದೇಹವನು ತ್ಯಜಿಸುತಿರೆ ದುಃಖದಲಿ ಮುಳುಗುತಲಿ ॥೩೪೧॥

### ದ್ರೋಣನು ಪರಶುರಾಮನಿಂದ ವೈಷ್ಣವಾಸ್ತ್ರ ಸ್ವೀಕಾರ ಮಾಡುವದು

ದಿನದಿನದಿ ದಾರಿದ್ರ್ಯ ಬೇಗೆಯಲಿ ಬಳಲುತಲಿ
ಗ್ರಾಮಗಳ ದೇಶಗಳ ವನಗಳನು ಅಲೆಯುತಲಿ
ತನ್ನಯಾ ಬಡತನವು ನೀಗದೆಯೆ ಚಲಿಸುತಲಿ
ಆ ಪರಶುರಾಮನಾ ಆಶ್ರಮಕೆ ಬರುತಿರಲು ॥೩೪೨॥

ಹರುಷದಲಿ ದ್ರೋಣನಿಗೆ ಆಸನವನೀಯುತಲಿ
ನಿಮ್ಮಯಾ ದರುಶನದಿ ಸಂತಸವು ಎನಿಸಿಹುದು
ಜಯಿಸಿರುವ ಐಶ್ವರ್ಯ ನೆಲವನ್ನು ಎಲ್ಲವನು
ಭೂಸುರರಿಗಿತ್ತಿಹೆನು ಕಡುಬಡವನಾಗಿಹೆನು ॥೩೪೩॥

ನಿಮ್ಮನ್ನು ಸತ್ಕರಿಸಲೆನಗಿಲ್ಲ ಸಂಪದವು
ಬಿದ್ದಿರುವ ಗುಡಿಸಲಿದೆ ಹತಭಾಗ್ಯನಾನಿಹೆನು
ಇದು ಜೀರ್ಣವಾಗಿರುವ ಬಿಲ್ಲಿಹುದು ಮತ್ತಿದುವೆ
ಜಂಗಾದ ಬಾಣೊಂದು ಬಿಟ್ಟೆನಗೆ ಬೇರಿಲ್ಲ ॥೩೪೪॥

ಇದರೊಳಗೆ ಇಷ್ಟವಿಹ ನೀಕೊಳ್ಳುದೆನ್ನುತಿರೆ
ನಸುನಗುತ ಆ ದ್ರೋಣ ಬಾಣವನು ಕೊಳ್ಳುತಲಿ
ಮೂಲೋಕ ಸುಡುವಾಸ್ತ್ರ ವೈಷ್ಣವ ಮಹಾಸ್ತ್ರವಿದು
ಸಂಗರದಿ ಮುಂದಿನಲಿ ಬಹುದೆಂದು ಕೊಳ್ಳುತಲಿ ॥೩೪೫॥

ನಿಮ್ಮಯಾ ಮಹಿಮೆಯನು ಘನತೆಯನು ನಾ ಬಲ್ಲೆ
ಜಗದೊಳಗೆ ನಾಟಕವನಾಡುತಿಹ ಮಹವಿಷ್ಣು
ನಿಮ್ಮಯಾ ರೀತಿಯೇ ಬೇರಿಹುದು ಅರಿತಿಹೆನು
ಎಮ್ಮನ್ನು ಕರುಣಿಪುದು ಎನ್ನುತಲಿ ಎರಗುತಲಿ ॥೩೪೬॥

### ದ್ರೋಣನು ದ್ರುಪದನ ಆಸ್ಥಾನಕ್ಕೆ ಬರುವುದು

ಸುತಸಹಿತ ತೆರಳುತಲಿ ಈ ಉದರಭರಣಕ್ಕೆ
ಮುಂದೇನುಗೈಯ್ಯುವುದು ಎನ್ನುತಲಿ ಚಿಂತಿಸುತ
ಅಂದಿನಲಿ ಬಾಲ್ಯದಲಿ ಜೊತೆಯಲ್ಲಿ ಕಲಿತಿರುವ
ಆ ದ್ರುಪದ ಸಖನೆಡೆಗೆ ತೆರಳುವುದು ಎನ್ನುತಲಿ ॥೩೪೭॥

ಯೋಚಿಸುತ ಪಾಂಚಾಲ ನಗರಕ್ಕೆ ಐತಂದು
ಅರಮನೆಯ ದ್ವಾರದಲಿ ಬರುತಿರಲು ಸೇವಕರು
ತಡೆಯುತಲಿ ಕೋಲುಗಳ ಅಡ್ಡಾಗಿ ನಿಲ್ಲಿಸುತ
ಒಳಗಡೆಗೆ ನಿನ್ನನ್ನು ಬಿಡಲಾಗದೆನ್ನುತಿರೆ ॥೩೪೮॥

ಏನಯ್ಯ ನಾನಿಮ್ಮ ಅರಸನಾ ಗೆಳೆಯನಿಹೆ
ಬಾಲ್ಯದಲಿ ಈರ್ವರೂ ಜೊತೆಯಲ್ಲಿ ಕಲಿತಿಹೆವು
ದ್ರೋಣನೆಂಬಭಿಧಾನ ಎನಗಿಹುದು ನೃಪನಿಂಗೆ
ಸಖದ್ರೋಣ ಬಂದಿಹನು ಎಂಬುದನು ತಿಳಿಸುವುದು ॥೩೪೯॥

ಎನ್ನುತಿರೆ ಸೇವಕರು ತೆರಳುತಲಿ ದ್ರುಪದನಿಗೆ
ನಿಮ್ಮಯಾ ಸಖನಂತೆ ದ್ರೋಣಮುನಿ ಬಂದಿಹನು
ಬಾಗಿಲಲಿ ನಿಮ್ಮಯಾ ದರುಶನಕೆ ಕಾದಿಹನು
ಎನ್ನುತಿರೆ ಕೇಳುತಲಿ ನೃಪ ದ್ರುಪದ ನಿಂತೆಂದ ॥೩೫೦॥

ಆಕಳಿಕೆ ಸೂಕರಕೆ ಕಾಕನಿಗೆ ಕೋಗಿಲೆಗೆ
ವರಗಜಗೆ ಶ್ವಾನಂಗೆ ನೃಪವರಗೆ ವಿಪ್ರಂಗೆ
ಎಲ್ಲಿಯದು ಗೆಳೆತನವು ತಿರಿದುಂಬ ಆತನಿಗೆ
ಮುಂದಿನಾ ಊರಿಂಗೆ ಹೋಗೆಂದು ಹೇಳೆಂದ ॥೩೫೧॥

ಆ ದ್ವಾರಪಾಲಕರು ಐತಂದು ದ್ರೋಣಂಗೆ
ನಿಮ್ಮನ್ನು ನೃಪನರಿಯ ಅರಸರಿಗೆ ವಿಪ್ರರಿಗೆ
ಎಲ್ಲಿಯದು ಸಖತನವು ಮುಂದಕ್ಕೆ ಹೋಗೆಂದು
ಭೂಪಾಲ ನುಡಿದಿಹನು ಎನ್ನುತಿರೆ ವರದ್ರೋಣ ॥೩೫೨॥

### ದ್ರೋಣನ ಶಪಥ

ಮಿತ್ರತ್ವ ಮೊದಲಾಗಿ ನಮ್ಮನ್ನು ನೋಡದಲೆ
ಹಲವಾರು ವರುಷಗಳು ಕಳೆದಿಹವು ಇಂದಿನಲಿ
ನೃಪವರನು ನಮ್ಮನ್ನು ಮರೆತಿಹನು ತಪ್ಪೇನು
ನಾನೆಯೇ ಜ್ಞಾಪಿಸುವೆ ಎನ್ನುತಲಿ ಸಾಗುತಿರೆ ॥೩೫೩॥

ಸೇವಕರು ತಡೆಯುತಿರೆ ನೂಕುತಲಿ ಧಾವಿಸುತ
ಸಿಂಹಾಸನಾರೂಢನಾಗಿರುವ ದ್ರುಪದನನು
ಕಾಣುತಲಿ ಎಮ್ಮಯಾ ಜೊತೆಯಲ್ಲಿ ತಂದೆಯಲಿ
ಶಸ್ತ್ರಾಸ್ತ್ರ ವಿದ್ಯೆಯನು ಕಲಿತಿಹುದು ಮರೆತಿಹೆಯಾ ॥೩೫೪॥

ಎನ್ನುತಿರೆ ವರದ್ರೋಣ ದ್ರುಪದನತಿ ಕೋಪದಲಿ
ರಾಜ್ಯವನು ಆಳುತಿಹ ನೃಪವರನು ನಾನಿಹೆನು
ಊರೂರ ಅಲೆಯುತಲಿ ಹೊಟ್ಟೆಯನು ಹೊರೆಯುತಿಹ
ಭಿಕ್ಷುಕನ ಜೊತೆಯಲ್ಲಿ ನನಗೆಂತು ಗೆಳೆತನವು ॥೩೫೫॥

ಪಂಡಿತಗೆ ಮೂರ್ಖನಿಗೆ ಧನಿಕನಿಗೆ ಬಡವನಿಗೆ
ಕೇಸರಿಗೆ ಬಡನರಿಗೆ ಹುಲಿಗಳಿಗೆ ಇಲಿಗಳಿಗೆ
ಅರಸನಿಗೆ ತಿರುಕನಿಗೆ ಎಲ್ಲಿಯದು ಮಿತ್ರತ್ವ
ಮರುಳನನು ಮಾಡದಿರು ಹೋಗೆಲವೊ ಎಂದಿಹನು ॥೩೫೬॥

ಸುಳ್ಳನ್ನು ನುಡಿಯುತಲಿ ಮೋಸವನು ಮಾಡಲಿಕೆ
ವೇಷವನು ಧರಿಸುತಲಿ ಬಂದಿರುವ ಕಪಟಿಯೆ
ತೊಲತೊಲಗು ಇಲ್ಲಿಂದ ಇಲ್ಲದಿರೆ ನಿನ್ನನ್ನು
ಸೇವಕರು ಚಂಡಿಕೆಯ ಹಿಡಿಯುತಲಿ ನೂಕುವರು ॥೩೫೭॥

ಎನ್ನುತಿರೆ ವರದ್ರೋಣ ನಖಶಿಖದ ಕೋಪದಲಿ
ರಾಜ್ಯದಾ ಸಂಪದದಿ ಗರ್ವದಲಿ ಸೊಕ್ಕಿರುವೆ
ನಿನ್ನಯಾ ಪುರಸಹಿತ ಐಶ್ವರ್ಯವೆಲ್ಲವನು
ಬಾಂಧವರ ಸಹಿತದಲಿ ಭಸ್ಮವನು ಮಾಡುವೆನು ॥೩೫೮॥

ಎಲವೆಲವೊ ಗುರುಸುತನ ನಿಂದಿಸುವ ಖೂಳನೃಪ
ಬಿಲುವಿದ್ಯೆ ಕಲಿಸುತಲಿ ಶಿಷ್ಯನಾ ಕೈಯಿಂದ
ಹೆಡಮುರಿಗೆ ಕಟ್ಟಿಸುತ ನಿನ್ನನ್ನು ಎಳತಂದು
ನಿನ್ನಯಾ ಶಿರವನ್ನು ಎಡಗಾಲಿನಿಂದೊದೆವೆ ॥೩೫೯॥

ಇದು ಎನ್ನ ಶಪಥವಿದೆ ನೆನಪಿಡುವುದೆನ್ನುತಲಿ
ವರದ್ರೋಣ ದ್ರುಪದಂಗೆ ನುಡಿಯುತಲಿ ಕ್ರೋಧದಲಿ
ನಿಜಸುತನ ಸಹಿತದಲಿ ಹೊರವಂಟು ಚರಿಸುತಲಿ
ವಿಧವಿಧದ ನಗರಗಳ ಗ್ರಾಮಗಳ ಅಲೆಯುತಲಿ ॥೩೬೦॥

### ದ್ರೋಣನು ಹಸ್ತಿನಾಪುರಕ್ಕೆ ಬರುವುದು

ಅಂದಿನಲಿ ಗಜಪುರದ ಹೊರವಲಯ ಬಯಲಿನಲಿ
ಖಡ್ಗಗಳ ತಿರುಹುತಲಿ ಬಾಣಗಳ ಎಸೆಯುತಲಿ
ಆಟಗಳನಾಡುತಿಹ ಕೌರವರ ಪಾಂಡವರ
ಕಾಣುತಲಿ ವರದ್ರೋಣ ಸಂತಸವಗೊಂಡಿಹನು ॥೩೬೧॥

ಆ ಸಮಯ ಧರ್ಮಜನ ಬೆರಳಿಂದ ಉಂಗುರವು
ಭರದಿಂದ ಕಳಚುತಲಿ ಬಾವಿಯೊಳು ಬೀಳುತಿರೆ
ಮೇಲಕ್ಕೆ ಉಂಗುರವ ತೆಗೆಯುವದು ಹೇಗೆಂದು
ದುಗುಡದಲಿ ಚಿಂತಿಸುತ ಯತ್ನಿಸುತಲಿರಲು ॥೩೬೨॥

### ಅಶ್ವತ್ಥಾಮನು ಬಾವಿಯಿಂದ ಉಂಗುರವನ್ನು ತೆಗೆಯುವದು

ಆ ದ್ರೋಣ ನೋಡುತಲಿ ಸುತನಶ್ವತ್ಥಾಮಗೆ
ಉಂಗುರವ ತೆಗೆ ಎಂದು ಕ್ಷಣದಲ್ಲಿ ನುಡಿಯುತಿರೆ
ದ್ರೋಣಸುತ ಬಾಣವನು ಧನುವಿನಲಿ ಅಳವಡಿಸಿ
ಬಾವಿಯೊಳು ಬಿಡುತಿರಲು ವೇಗದಲಿ ಸಾಗುತಲಿ ॥೩೬೩॥

ನೆಲದಲಿಹ ಸರ್ಪವನು ಕೊಳ್ಳುತಲಿ ಗಗನಕ್ಕೆ
ವರಗರುಡ ನೆಗೆಯುವಾ ಪರಿಯಲ್ಲಿ ಬಾಣವದು
ಉಂಗುರವ ಕೊಳ್ಳುತಲಿ ಮೇಲಕ್ಕೆ ಏರುತಲಿ
ಧರ್ಮಜನ ಕರದೊಳಗೆ ಇತ್ತಿಹುದು ನಿಮಿಷದಲಿ ॥೩೬೪॥

ಸಕಲರೂ ನೋಡುತಲಿ ಬೆರಗಾಗಿ ದ್ರೋಣನನು
ಮುತ್ತುತಲಿ ಧನುರ್ವಿದ್ಯೆ ಕೌಶಲವ ಕಲಿಸುವುದು
ಎನ್ನುತಲಿ ನುಡಿಯುತಲಿ ಭೀಷ್ಮನಿಗೆ ತಿಳಿಸುತಲಿ
ದ್ರೋಣನನು ಸತ್ಕರಿಪುದೆನ್ನುತಲಿ ನುಡಿದಿಹರು ॥೩೬೫॥

### ಭೀಷ್ಮರು ದ್ರೋಣರನ್ನು ಕರೆಸಿ ಸತ್ಕಾರ ಮಾಡುವುದು

ನದಿಸುತನು ಮುದದಿಂದ ದ್ರೋಣರನು ಆದರದಿ
ಕರೆಸುತಲಿ ಸತ್ಕಾರಗೈಯ್ಯುತಲಿ ಸಂತಸದಿ
ಅಗಣಿತದ ಧನಕನಕವೀಯುತಿರೆ ವರದ್ರೋಣ
ಕುರುಕುಲಕೆ ಗುರುವಾಗಿ ವೈಭವದಿ ಮೆರೆದಿಹನು ॥೩೬೬॥

ಬಳಿಕಲಾ ಗಾಂಗೇಯ ಕೌರವರ್ಗೆ ಪಾಂಡವರ್ಗೆ
ಶಸ್ತ್ರಾಸ್ತ್ರ ವಿದ್ಯೆಯಲಿ ಪರಿಣತರ ಮಾಡಲಿಕೆ
ಮೂಲೋಕ ಗೆಲ್ಲುವಾ ಕೌಶಲವ ಕಲಿಸಲಿಕೆ
ಘನದ್ರೋಣ ಗುರುವರನ ಕೈಯಲ್ಲಿ ಕೊಟ್ಟಿಹನು ॥೩೬೭॥

ಗಜಪುರದ ಹೊರಗಡೆಗೆ ಹರಹಿರುವ ಬಯಲಿನಲಿ
ಯೋಜನಗಳಳತೆಯಲಿ ಗರುಡಿಯಾ ಮನೆಯನ್ನು
ಭವ್ಯದಲಿ ಕಟ್ಟಿಸುತ ಅಗಣಿತದ ಶಸ್ತ್ರಗಳ
ಇರಿಸಿಹರು ಲಕ್ಷೋಪಲಕ್ಷದಲಿ ಪೂಜಿಸುತ ॥೩೬೮॥

ಚಂಡಿಯನು ಚಾಮುಂಡಿ ದುರ್ಗೆಯನು ಕಾಳಿಯನು
ದಶದಿಶೆಯ ದೇವಿಯರ ನಗರದಾ ದೇವತೆಯ
ಪೂಜಿಸುತ ಸಾವಿರದ ಪಶುಬಲಿಯನೀಯುತಲಿ
ಗರುಡಿಯಾ ಮನೆಯನ್ನು ಪೂಜೆಯನು ಗೈದಿಹರು ॥೩೬೯॥

### ದ್ರೋಣನು ಕೌರವರಿಗೆ ಮತ್ತು ಪಾಂಡವರಿಗೆ ಧನುರ್ವಿದ್ಯೆ ಕಲಿಸುವುದು

ಬಳಿಕಲಾ ಗುರುದ್ರೋಣ ಮಂಗಲದ ಸಮಯದಲಿ
ಕೌರವರ್ಗೆ ಪಾಂಡವರ್ಗೆ ಶಸ್ತ್ರಾಸ್ತ್ರ ವಿದ್ಯೆಯನು
ಕಲಿಸಲಿಕೆ ಪ್ರಾರಂಭಗೈಯ್ಯುತಿರೆ ಸಕಲರೂ
ದಿನದಿನದಿ ಶ್ರದ್ಧೆಯಲಿ ಅಭ್ಯಾಸಗೈದಿಹರು ॥೩೭೦॥

ಕತ್ತಿಗಳ ಖಡ್ಗಗಳ ತೋಮರದ ಕುಲಿಶಗಳ
ಮುಸಲಗಳ ಡೊಣ್ಣೆಗಳ ಶಸ್ತ್ರಗಳ ತಿರುಹುಗಳು
ಅಗ್ನ್ಯಾಸ್ತ್ರ ವರಣಾಸ್ತ್ರ ಸರ್ಪಾಸ್ತ್ರ ಗರುಡಾಸ್ತ್ರ
ವಿಧವಿಧದ ಅಸ್ತ್ರಗಳ ವಿದ್ಯೆಗಳನರಿತಿಹರು ॥೩೭೧॥

ಬಿಲ್ಲಿನಾ ವಿದ್ಯೆಯನು ಕೌಶಲದಿ ಕಲಿಸುವಾ
ದ್ರೋಣನಾ ಪಾಂಡಿತ್ಯ ಕೀರ್ತಿಯದು ಪಸರುತಲಿ
ದೂರದಾ ದೇಶಗಳ ನೃಪಕುವರರೈತಂದು
ವಿದ್ಯೆಯನು ಕಲಿಯುತಲಿ ಪರಿಣತರು ಎನಿಸಿದರು ॥೩೭೨॥

### ಕರ್ಣನ ಆಗಮನ

ಕೇಳುವುದು ಮಹಿಪತಿಯೇ ಜನಮೇಜಯೋತ್ತಮನೆ
ಮುನ್ನಿನಲಿ ಆ ಕುಂತಿ ಜಾಹ್ನವಿಯ ನದಿಯೊಳಗೆ
ನಿಜಶಿಶುವ ಎಸೆಯುತಿರೆ ಸೂತರ್ನೋರ್ವ ನೋಡುತಲಿ
ಕೊಂಡೊಯ್ದು ಸಲುಹಿರುವ ಖ್ಯಾತನಿಹ ಕಲಿಕರ್ಣ ॥೩೭೩॥

ವರಪರಶುರಾಮನಲಿ ಧನುರ್ವಿದ್ಯೆ ಅರಿಯುತಲಿ
ಹೆಚ್ಚಿನಲಿ ಸಂಗರದ ಪರಿಣತೆಯ ಪಡೆಯಲಿಕೆ
ದ್ರೋಣನಾ ಬಳಿಬಂದು ದುರ್ಯೋಧನಾದಿಗಳ
ಜೊತೆಯಲ್ಲಿ ಶಸ್ತ್ರಾಸ್ತ್ರ ವಿದ್ಯೆಯನು ಕಲಿತಿಹನು ॥೩೭೪॥

### ದುರ್ಯೋಧನ ಕರ್ಣರ ಮಿತ್ರತ್ವ

ಅಂದಿನಾ ಮೊದಲಾಗಿ ಬಂದಿರುವ ಕರ್ಣನನು
ದುರ್ಯೋಧನಾದರದಿ ಅರಮನೆಗೆ ಕರೆದೊಯ್ದು
ಸವಿಯೂಟವೀಯುತಲಿ ಸಖ್ಯತ್ವ ಬೆಳೆಸುತಲಿ
ನಿಮಿಷವೂ ಅಗಲದಲೆಯೆ ಕಾಲವನು ಕಳೆದಿಹನು ॥೩೭೫॥

ಕರ್ಣನಾ ಜೊತೆಯಲ್ಲಿ ಆಟವನು ಆಡುವುದು
ನೋಟವನು ನೋಡುವದು ಬೇಟೆಯಲಿ ರಮಿಸುವುದು
ಷಡ್ರಸದ ಪಕ್ವಾನ್ನದೂಟವನು ಸವಿಯುವುದು
ಸಂತೋಷಕೂಟದಲಿ ಸಂತಸದಿ ನಲಿಯುವುದು ॥೩೭೬॥

ಓಲಗದಿ ಪಕ್ಕದಲಿ ಕರ್ಣನಾ ಸಹಿತದಲಿ
ಸಂಗೀತ ಕೇಳುವುದು ನೃತ್ಯವನು ನೋಡುವುದು
ಭವನದಲಿ ರತ್ನದಾ ಮಂಚದಲಿ ತೂಗುವದು
ಆ ಕರ್ಣನೊಡಗೂಡಿ ಲೆತ್ತವನು ಆಡುವದು ॥೩೭೭॥

ಕರ್ಣನನು ನೋಡುತಲಿ ಕಣ್ಣುಗಳು ತಣಿಯದಿವೆ
ವಿಕ್ರಮವ ಹೊಗಳುತಲಿ ನಾಲಗೆಯು ದಣಿಯದಿದೆ
ಧನಕನಕವೀಯುತಲಿ ಆನಂದ ತೀರದಿದೆ
ಈರ್ವರಾ ಸಖ್ಯಕ್ಕೆ ಸಾಟಿಯದು ತೋರದಿದೆ ॥೩೭೭–ಅ॥

ಕ್ಷಣವೊಂದು ಕರ್ಣನನು ದುರ್ಯೋಧನನಗಲನೆಯೆ
ತನುವೆರಡು ಮನವೊಂದು ಪ್ರಾಣೊಂದು ಉಸಿರೊಂದು
ಎಂಬುವಾ ಪರಿಯಲ್ಲಿ ಪ್ರೇಮತರು ವರ್ಧಿಸುತ
ಈರ್ವರೂ ಒಂದಾಗಿ ಸಖ್ಯತ್ವ ಬೆಳೆದಿಹುದು ॥೩೭೮॥

ಧೃತರಾಷ್ಟ್ರ ಗಾಂಧಾರಿ ವರವಿದುರ ಗಾಂಗೇಯ
ಒಡಹುಟ್ಟು ಬಂಧುಗಳ ದುಶ್ಶಾಸನಾದಿಗಳ
ಮೇಲಣದ ಪ್ರೀತಿಗೂ ತೂಕೊಂದು ಹಿರಿದಾಗಿ
ಕೌರವನು ಜೀವಸಖ ಕರ್ಣನನು ಪ್ರೀತಿಸಿದ ॥೩೭೯॥

ಧೃತರಾಷ್ಟ್ರ ನುಡಿದಿರುವ ನುಡಿಗಳನು ಕೇಳದಲೆ
ಸಖಕರ್ಣ ಹೇಳಿರುವ ಮಾತುಗಳ ಕೇಳುವನು
ಈರ್ವರಾ ಮನವೊಂದೆ ಮತವೊಂದೇ ಎನಿಸುತಲಿ
ಸಖ್ಯದಾ ವೃಕ್ಷವದು ಧೃಢವಾಗಿ ಬೆಳೆದಿಹುದು ॥೩೮೦॥

## ಕೌರವ ಪಾಂಡವರ ಶಸ್ತ್ರಾಭ್ಯಾಸ

ಕೇಳುವುದು ಭೂಪತಿಯೆ ನಿಮ್ಮಯಾ ಪೂರ್ವಜರು
ಪಾಂಡವರು ಕೌರವರು ಗಜತುರಗವೇರುತಲಿ
ರಥಿಕರನು ಇರಿಯುತಲಿ ವ್ಯೂಹವನು ಭೇದಿಸುತ
ರಿಪುರುಂಡ ತರಿಯುವಾ ವಿದ್ಯೆಗಳ ಕಲಿತಿಹರು ॥೩೮೧॥

ಗಗನದಲಿ ತಿರುಗುತಿಹ ಯಂತ್ರವನು ಭೇದಿಸುವ
ಓಡುತಿಹ ಶತ್ರುಗಳ ಶಿರಗಳನು ಭೇದಿಸುವ
ಪ್ರತ್ಯಾಸ್ತ್ರವೆಸೆಯುತಲಿ ರಿಪುವಸ್ತ್ರ ಧ್ವಂಸಿಸುವ
ಸಂಗ್ರಾಮ ವಿದ್ಯೆಯಲಿ ಪರಿಣತರು ಎನಿಸಿಹರು ॥೩೮೨॥

ಮುತ್ತಿಬಹ ಶತ್ರುವಿನ ಕತ್ತನ್ನು ಕತ್ತಿಯಲಿ
ಕತ್ತುತಲಿ ಕಿತ್ತುತಲಿ ಸಭಕೆಸೆವ ವಿದ್ಯೆಯನು
ಸುತ್ತೆಲ್ಲ ಕವಿದಿರುವ ಅಂಬುಗಳ ರಾಶಿಯನು
ಪುಡಿಗೈವ ಬಿಲುವಿದ್ಯೆ ಜಾಣ್ಮೆಯನು ಅರಿತಿಹರು ॥೩೮೩॥

ತನ್ನಯಾ ಸಾರಥಿಯ ರಕ್ಷಿಸುತ ಶತ್ರುವಿನ
ಸಾರಥಿಯ ಸಾಯಿಸುತ ರಥವನ್ನು ಪುಡಿಗೈವ
ಅರಿಧನುವ ಭಂಗಿಸುತ ರಿಪುರುಂಡ ಗಗನಕ್ಕೆ
ನೆಗೆಸುವಾ ಧನುರ್ವಿದ್ಯೆಯರಿತಿಹರು ಕೌಶಲದಿ ॥೩೮೪॥

ಅಗ್ನ್ಯಾಸ್ತ್ರ ವರುಣಾಸ್ತ್ರ ಸರ್ಪಾಸ್ತ್ರ ಗರುಡಾಸ್ತ್ರ
ವಿಧವಿಧದ ಅಸ್ತ್ರಗಳ ಪ್ರತ್ಯಾಸ್ತ್ರ ಕಲಿತಿಹರು
ಸುತ್ತಿರುವ ಸಾವಿರದ ಸೈನಿಕರನಿರಿಯುತಲಿ
ಯುದ್ಧವನು ಜಯಿಸುವಾ ವಿದ್ಯೆಯನು ಅರಿತಿಹರು ॥೩೮೫॥

ಕೌರವರು ಪಾಂಡವರು ಕಲಿಕರ್ಣ ಸಕಲರೂ
ತಮತಮಗೆ ಇಷ್ಟವಿಹ ಶಸ್ತ್ರಾಸ್ತ್ರ ಕಲಿತಿಹರು
ಯುದ್ಧದಲಿ ಶೌರ್ಯದಲಿ ಶತ್ರುಗಳ ಜಯಿಸುವಾ
ವಿದ್ಯೆಯನು ಅರಿತಿಹರು ದ್ರೋಣನಾ ಗರುಡಿಯಲಿ ॥೩೮೬॥

ಗದೆಯೊಳಗೆ ದುರ್ಯೋಧನಾ ಭೀಮ ಈರ್ವರೂ
ಸಮಬಲರು ಪರಿಣತರು ಸಮಕುಶಲರೆನಿಸಿದರು
ಬಿಲ್ಲಿನಲಿ ಫಲುಗುಣನು ಕಲಿಕರ್ಣ ಈವರೂ
ಸಮವೀರ ವಿಕ್ರಮರು ಅತಿ ನಿಪುಣರೆನಿಸಿದರು ॥೩೮೭॥

## ರಾತ್ರಿಯಲ್ಲಿ ಅರ್ಜುನನ ಶಸ್ತ್ರಾಭ್ಯಾಸ

ಒಂದು ದಿನ ರಾತ್ರಿಯಲಿ ಭೋಜನವ ಮಾಡುತಿರೆ
ಭರದಿಂದ ಗಾಳಿಯದು ಬೀಸುತಿರೆ ದೀಪವದು
ಆರುತಿರೆ ಸಕಲರೂ ಭೋಜನವ ತೊರೆದಿಹರು
ಅರ್ಜುನನು ಓರ್ವನೇ ಭೋಜನವ ಗೈದಿಹನು ॥೩೮೮॥

ಕತ್ತಲಲಿ ಫಲುಗುಣನು ತುತ್ತನ್ನು ಕೈಯಲ್ಲಿ
ಕೊಳ್ಳುತಲಿ ಬಾಯಿಯಲಿ ಇರಿಸುತಲಿ ತಿನ್ನುತಿರೆ
ಕತ್ತಲಲಿ ಬಾಣಗಳ ಬಿಡುವುದನು ಕಲಿಯುವುದು
ಎನ್ನುವ ವಿಚಾರವದು ಬುದ್ಧಿಯಲಿ ಹೊಳೆದಿಹುದು ॥೩೮೯॥

ಇರುಳಿನಲಿ ಬಿಲ್ಲಿನಲಿ ಶರಗಳನು ಇರಿಸುತಲಿ
ಜಗ್ಗುತಲಿ ಎಚ್ಚುತಿಹ ಕೌಶಲವ ಕಲಿಯುತಿರೆ
ಒಂದಿರುಳು ಗುರುದ್ರೋಣ ಧನುವಿನಾ ಟಂಕಾರ
ಧ್ವನಿಯನ್ನು ಕೇಳುತಲಿ ಐತಂದು ನೋಡುತಲಿ ॥೩೯೦॥

ಭಲೆಭಲೆರೆ ಅರ್ಜುನನೆ ಬಿಲ್ಲಿನಾ ವಿದ್ಯೆಯಲಿ
ನಿನ್ನಸಮ ಪರಿಣತರ ನಾಕಾಣೆ ಇಂದಿನಲಿ
ಎನ್ನಯಾ ವಿದ್ಯೆಯನು ಸಕಲವನು ಕಲಿಸುತಲಿ
ನಿನ್ನನ್ನು ಮೂಲೋಕ ವೀರನನು ಮಾಡುವೆನು ॥೩೯೧॥

ಎನ್ನುತಲಿ ಗುರುದ್ರೋಣ ಅರ್ಜುನನ ನಪ್ಪುತಲಿ
ವಿಧವಿಧದ ರೀತಿಯಲಿ ಯುದ್ಧವನು ಗೈಯ್ಯುವಾ
ಪರಿಯನ್ನು ಅರುಹುತಲಿ ಘೋರತರ ಗೂಢವಿಹ
ದಿವ್ಯಾಸ್ತ್ರವಗಣಿತವ ಫಲುಗುಣಗೆ ಕಲಿಸಿದನು ॥೩೯೨॥

## ಏಕಲವ್ಯನ ಗುರುಭಕ್ತಿ

ಈ ಪರಿಯೆ ಕೌರವರು ಪಾಂಡವರು ಕಲಿಯುತಿರೆ
ಬೇಡನೃಪ ಸುತಸಹಿತ ಐತಂದು ದ್ರೋಣಂಗೆ
ನಿಜಕುವರ ಆ ಏಕಲವ್ಯಂಗೆ ಕರುಣೆಯಲಿ
ಧನುರ್ವಿದ್ಯೆ ಕಲಿಸುವುದು ಎನ್ನುತಲಿ ನುಡಿಯುತಿರೆ ॥೩೯೩॥

ಪಾಂಡವರು ಕೌರವರು ಕುರುಕುಲದ ನೃಪಸುತರು
ಇವರುಗಳ ಜೊತೆಯಲ್ಲಿ ಜಾತಿಯಲಿ ಹೀನಾದ
ನಿನ್ನಯಾ ಸುತಗೆಂತು ವಿದ್ಯೆಯನು ಕಲಿಸುವುದು
ಎನ್ನುತಲಿ ಗುರುದ್ರೋಣ ಬೇಡದೊರೆ ತೆರಳಿದನು ॥೩೯೪॥

ವಿಪಿನದಲಿ ದ್ರೋಣರಾ ಮೂರ್ತಿಯನು ಸ್ಥಾಪಿಸುತ
ನಿತ್ಯವೂ ಪೂಜಿಸುತ ಏಕಾಗ್ರ ಚಿತ್ತದಲಿ
ಶರಗಳನು ಎಚ್ಚುತಲಿ ಮರಗಳನು ಬೇಧಿಸುತ
ಧನುರ್ವಿದ್ಯೆ ಕಲಿತಿಹನು ಬೇಡಸುತ ಏಕಲವ್ಯ ॥೩೯೫॥

ಒಂದು ದಿನ ಕೌರವರ ಪಾಂಡವರ ಸಹಿತದಲಿ
ಬೇಟೆಯನು ಆಡಲಿಕೆ ಶ್ವಾನಗಳ ಸಹಿತದಲಿ
ಕಾನನಕೆ ತೆರಳುತಿರೆ ಗುರುದ್ರೋಣ ಸಂತಸದಿ
ಮಾರ್ಗದಲಿ ಶ್ವಾನಗಳು ಬೊಗಳುತಲಿ ಸಾಗಿರಲು ॥೩೯೬॥

ದೂರದಲಿ ನಾಯಿಗಳ ಕೂಗನ್ನು ಕೇಳುತಲಿ
ಸರವಿಡಿದು ಶರಗಳನು ಬಿಡುತಲಿರೆ ಏಕಲವ್ಯ
ಭರದಲ್ಲಿ ಧಾವಿಸುತ ಬಾಣಗಳು ಶ್ವಾನಗಳ
ಬಾಯಿಗಳ ಮುಚ್ಚುತಿರೆ ಭಯದಲ್ಲಿ ಓಡುತಲಿ ॥೩೯೭॥

ಮರಳುತಲಿ ಪಾಂಡವರ ಬಳಿಯಲ್ಲಿ ಬರುತಿರಲು
ದೂರದಲಿ ನೋಡದಲೆ ಶರಗಳನು ಬಿಟ್ಟವರು
ಆರಿಹರು ಎನ್ನುತಲಿ ಅರಸುತಲಿ ಪಾಂಡವರು
ಆ ಏಕಲವ್ಯನಾ ಬಳಿಯಲ್ಲಿ ಬಂದಿಹರು ॥೩೯೮॥

ದ್ರೋಣರಾ ವಿಗ್ರಹವ ಭಕ್ತಿಯಲಿ ಪೂಜಿಸುವ
ವರ ಏಕಲವ್ಯನನು ಕಾಣುತಲಿ ಬೆರಗಾಗಿ
ದ್ರೋಣನನು ಪೂಜಿಸುವ ನೀನಾರು ಹೇಳೆಂದು
ಪಾಂಡವರು ಕೇಳುತಿರೆ ಹೇಳಿದನು ಏಕಲವ್ಯ ॥೩೯೯॥

ಬೇಡ ನೃಪಸುತನಿಹೆನು ಹೆಸರೇಕಲವ್ಯವಿದೆ
ಪೆಸರಾಂತ ಕೋಲಗುರು ದ್ರೋಣರಾ ಶಿಷ್ಯನಿಹೆ
ದ್ರೋಣರಾ ಕೃಪೆಯಲ್ಲಿ ಮೂಲೋಕ ಗೆಲ್ಲುವಾ
ಪರಿಣತಿಯ ಪಡೆದಿಹೆನು ಎನ್ನುತಲಿ ನುಡಿದಿಹನು ॥೪೦೦॥

ಕೇಳುತಲಿ ಪಾಂಡವರು ದ್ರೋಣರಾ ಬಳಿಬಂದು
ಸಕಲವನು ಅರುಹಿದರು ಫಲುಗುಣನು ದುಗುಡದಲಿ
ಎನ್ನನ್ನು ಮೂಲೋಕ ವೀರನನು ಮಾಡುವೆನು
ಎನ್ನುತಲಿ ನೀವೆನಗೆ ಹೇಳಿದುದು ಸುಳ್ಳಾಯ್ತು ॥೪೦೧॥

ನಿಮ್ಮಯಾ ಶಿಷ್ಯನನು ಆ ಏಕಲವ್ಯನನು
ಎನಗಿಂತ ಶ್ರೇಷ್ಠನನು ವೀರನನು ಮಾಡಿದುದು
ನಿಮಗಿದುವೆ ಯೋಗ್ಯವೇ ಎನ್ನುತಿರೆ ಗುರುದ್ರೋಣ
ಅರ್ಜುನನ ಸಹಿತದಲಿ ಆ ಏಕಲವ್ಯನೆಡೆ ॥೪೦೨॥

ಐತರಲು ಬೇಡಸುತ ಸಂತಸದಿ ದ್ರೋಣರಾ
ಚರಣಕ್ಕೆ ಎರಗುತಲಿ ನಿಮ್ಮಯಾ ಶಿಷ್ಯನಿಹೆ
ನಿಮ್ಮಯಾ ಕರುಣೆಯಲಿ ವಿದ್ಯೆಯನು ಪಡೆದಿರುವೆ
ನಾನಿಂದು ಧನ್ಯನಿಹೆ ಎನ್ನುತಲಿ ನುಡಿದನು ॥೪೦೩॥

ನೀ ಎಮ್ಮ ಸುತಶಿಷ್ಯನಿರ್ದೊಡೆಯು ನಿಜವಾಗಿ
ಗುರುವಿಗೆ ಕಾಣಿಕೆಯ ನೀ ನೀಡು ಎನ್ನುತಿರೆ
ಬೇಡಿದುದ ಕಾಣಿಕೆಯನೀಕ್ಷಣವೆ ನೀಡುವೆನು
ಎಲ್ಲವೂ ನಿಮ್ಮದಿದೆ ಎನ್ನುತಿರೆ ಏಕಲವ್ಯ ॥೪೦೪॥

ಕೊಡು ನಿನ್ನ ಬಲಗೈಯ್ಯ ಹೆಬ್ಬೆರಳನೊಂದನ್ನು
ಬೇರೆನಗೆ ಬೇಡೆನಗೆ ಎನ್ನುತಿರೆ ಗುರುದ್ರೋಣ
ಕತ್ತಿಯಲಿ ಹೆಬ್ಬೆರಳ ಕತ್ತರಿಸಿ ತೆಗೆಯುತಲಿ
ಗುರುಚರಣಕರ್ಪಿಸಿದ ವರಶಿಷ್ಯ ಬೇಡಸುತ ॥೪೦೫॥

ವರ ಏಕಲವ್ಯನಾ ಗುರುಭಕ್ತಿ ಕಾಣುತಲಿ
ನಿನ್ನಯಾ ಸರಿಸಮನ ಶಿಷ್ಯನನು ನಾಕಾಣೆ
ನಿನ್ನಯಾ ಗುರುಭಕ್ತಿ ಚಂದ್ರಾರ್ಕ ಪರ್ಯಂತ
ಜಗದೊಳಗೆ ಮೆರೆಯುವದು ಎನ್ನುತಲಿ ತೆರಳಿದನು ॥೪೦೬॥

**ಅರ್ಜುನನ ಧನುರ್ವಿದ್ಯೆಯ ಜಾಣ್ಮೆಯ ಪ್ರದರ್ಶನ ಹಕ್ಕಿಯನ್ನು ಕೆಡುಹುವುದು**

ಕೇಳುವುದು ಭೂಪಾಲ ಬಳಿಕಿನಲಿ ಕೋಲಗುರು
ಬಿಲ್ಲಿನಲಿ ಬಲ್ಲಿದನು ಬಿಲುಗಾರನಾರಿಹನು
ಧರ್ಮಜನೊ ಅರ್ಜುನನೊ ಆ ನಕುಲ ಸಹದೇವ
ಕಲಿಕರ್ಣನಿರುತಿಹನೊ ಪರಿಕಿಸುವುದೆನ್ನುತಲಿ ॥೪೦೭॥

ಸಕಲರನು ಕರೆಸುತಲಿ ಪಕ್ಷಿಯನು ಒಂದನ್ನು
ವೃಕ್ಷದಲಿ ಕಟ್ಟುತಲಿ ಶರವನ್ನು ಎಚ್ಚುತಲಿ
ಕಣ್ಣನಲಿ ಚುಚ್ಚುತಲಿ ಪಕ್ಷಿಯನು ಕೆಡುಹುವುದು
ಎನ್ನುತಲಿ ನುಡಿದಿಹನು ಶಿಷ್ಯರಿಗೆ ಗುರುದ್ರೋಣ ॥೪೦೮॥

ಧರ್ಮಜನು ಧನುವಿನಲಿ ಬಾಣವನು ಅಳವಡಿಸಿ
ಪಕ್ಷಿಯನು ನೋಡುತಲಿ ಭರದಲ್ಲಿ ಜಗ್ಗುತಿರೆ
ಗುರುದ್ರೋಣ ನಿನಗೇನು ಕಾಣಪುದು ಕಣ್ಣನಲಿ
ಎನ್ನುತಿರೆ ಧರ್ಮಜನು ದಿಟ್ಟಿಸುತ ನೋಡುತಲಿ ॥೪೦೯॥

ವೃಕ್ಷವದು ವಿಹಗವದು ಎಲ್ಲವೂ ಕಾಣುತಿದೆ
ಎನ್ನುತಿರೆ ಬಳಿಕಿನಲಿ ಆ ನಕುಲ ಸಹದೇವ
ದುರ್ಯೋಧನಾದಿಗಳು ಐತಂದು ನೋಡುತಲಿ
ಮರವಿಹಗವೆಲ್ಲವೂ ಕಾಣುತಿವೆ ಎಂದಿಹರು ॥೪೧೦॥

ಬಳಿಕಲಾ ಕಲಿಕರ್ಣನೈತಂದು ನೋಡುತಲಿ
ಪಕ್ಷಿಯಾ ಶಿರವೊಂದೆ ಕಾಣುತಿದೆ ಎನ್ನುತಿರೆ
ಗುರುದ್ರೋಣ ಕರ್ಣನನು ಕೆಲದಲ್ಲಿ ಸರಿಸುತಿರೆ
ಫಲುಗುಣನು ಐತಂದು ಬಿಲ್ಲಿನಲಿ ಬಾಣವನು ॥೪೧೧॥

ಇರಿಸುತಲಿ ಗುರಿಯಿಡುತ ತೂಗುತಲಿ ಜಗ್ಗುತಲಿ
ಕಣ್ಣೊಂದೆ ಕಾಣಪುದು ಬೇರೆನಗೆ ಕಾಣಿಸದು
ಎನ್ನುತಿರೆ ಗುರುದ್ರೋಣ ಭಲೆಭಲೆರೆ ಅರ್ಜುನನೆ
ಬಾಣವನು ಬೇಗಬಿಡು ಎನ್ನುತಲಿ ನುಡಿದಿಹನು ॥೪೧೨॥

ಫಲುಗುಣನು ಶರವನ್ನು ಬಿಡುತಲಿರೆ ಭರದಲ್ಲಿ
ವೇಗದಲಿ ಸಾಗುತಲಿ ವಿಹಗದಾ ಕಣ್ಣನ್ನು
ಇರಿಯುತಲಿ ಕೆಡುಹುತಿರೆ ಗುರುದ್ರೋಣ ಹರ್ಷದಲಿ
ಅರ್ಜುನನ ಧೃಢದಲ್ಲಿ ಅಪ್ಪುತಲಿ ನುಡಿದಿಹನು ॥೪೧೩॥

ಕಲಿಸಿರುವ ವಿದ್ಯೆಯದು ಇಂದಿನಲಿ ಸಾರ್ಥಕವು
ಎನ್ನಯಾ ಗುರುತನವು ಸಫಲತೆಯು ಆಗಿಹುದು
ಎನ್ನುತಲಿ ಕೋಲಗುರು ಹರುಷವನು ತಾಳುತಿರೆ
ಅರ್ಜುನನು ದ್ರೋಣಂಗೆ ಆತ್ಮೀಯನೆನಿಸಿದನು ॥೪೧೪॥

### ಅರ್ಜುನನು ದ್ರೋಣನನ್ನು ಹಿಡಿದ ಮೊಸಳೆಯನ್ನು ಕೊಲ್ಲುವುದು

ಒಂದು ಸಲ ಗುರುದ್ರೋಣ ಜಾಹ್ನವಿಯ ನದಿಯೊಳಗೆ
ಸ್ನಾನವನು ಗೈಯ್ಯುತಿರೆ ನಕ್ರವದು ಸಲಿಲದಲಿ
ಚರಣಗಳ ಓಡಿಯುತಿರೆ ಘೋರತರ ಸ್ವರದಲ್ಲಿ
ಚೀರುತಲಿ ರಕ್ಷಿಸಲು ಶಿಷ್ಯನನು ಕೂಗಿದನು ॥೪೧೫॥

ತನ್ನಯಾ ಶಕ್ತಿಯಲಿ ಕೊಲ್ಲಲಿಕೆ ಸಮರ್ಥನಿರೆ
ಶಿಷ್ಯನಾ ಪರಿಣತೆಯ ಪರಿಕಿಸಲು ಕೂಗುತಿರೆ
ಭೀಕರದ ಮೊಸಳೆಯನು ನೋಡುತಲಿ ಸಕಲರೂ
ಭೀತಿಯಲಿ ಓಡಿದರು ಫಲಗುಣನನುಳಿಯುತಲಿ ॥೪೧೬॥

ನಿಶಿತವಿಹ ಶರವೈದು ಅರ್ಜುನನು ಕೊಳ್ಳುತಲಿ
ಮೊಸಳೆಯಾ ಶಿರದಲ್ಲಿ ಎಸೆಯುತಿರೆ ಭರದಲ್ಲಿ
ಹೋಳಾಗಿ ಸೀಳುತಿರೆ ಅಸುವನ್ನು ತೊರೆದಿಹುದು
ಗುರುದ್ರೋಣ ಏಳುತಲಿ ಅರ್ಜುನನಪ್ಪುತಲಿ ॥೪೧೭॥

ಇಂದಿನಲಿ ನೀ ಎನ್ನ ಪ್ರಾಣವನು ಉಳಿಸಿರುವೆ
ನಿಜ ಶಿಷ್ಯ ನೀನಿರುವೆ ಸರ್ವರಲಿ ಶ್ರೇಷ್ಠನಿಹೆ
ಬಿಲ್ಲಿನಾ ವಿದ್ಯೆಯಲಿ ನಿನ್ನಯಾ ಸರಿಸಮರು
ಮೂಲೋಕದೊಳಗಿಲ್ಲ ಎಂದಿಹರು ಸಂತಸದಿ ॥೪೧೮॥

ಎನ್ನಯಾ ಸರ್ವಸ್ವ ಧನುರ್ವಿದ್ಯೆ ಕೌಶಲವ
ನಿನಗೀವೆ ಎನ್ನುತಲಿ ಇಂದ್ರಾಗ್ನಿ ವಾಯುವ್ಯ
ವರುಣಾಸ್ತ್ರ ವೈಷ್ಣವ ಮಹಾಸ್ತ್ರಗಳ ಅಗಣಿತವ
ಅರುಹಿದನು ಗುರುದ್ರೋಣ ಜಗವೀರ ಅರ್ಜುನಗೆ ॥೪೧೯॥

### ದ್ರೋಣರು ಅರ್ಜುನನಿಗೆ ಬ್ರಹ್ಮಾಸ್ತ್ರವನ್ನು ಕೊಡುವುದು

ಬಳಿಕಿನಲಿ ಕೊನೆಯಲ್ಲಿ ತೇಜದಲಿ ಹೊಳೆಹೊಳೆವ
ದಿವ್ಯವಿಹ ಭೀಕರದ ಅಸ್ತ್ರವನು ತೆಗೆಯುತಲಿ
ಮೂಲೋಕ ಸುಡಬಲ್ಲ ಬ್ರಹ್ಮಾಸ್ತ್ರವಿದು ಎನುತ
ಅರ್ಜುನನ ಕೈಯೊಳಗೆ ಇರಿಸುತಲಿ ನುಡಿದಿಹನು ॥೪೨೦॥

ಪ್ರಳಯದಾ ಶಿಖಿಯಂತೆ ಜ್ವಲಿಸುವಾ ಅಸ್ತ್ರವಿದು
ಎಂದಿಗೂ ದುರ್ಬಲರ ಮಾನವರ ಮೇಲಣದಿ
ಉಪಯೋಗ ಮಾಡದಿರು ಬ್ರಹ್ಮಾಂಡವೆಲ್ಲವನು
ದಹಿಸುತಲಿ ಭಸ್ಮವನು ಮಾಡುವುದು ನಿಮಿಷದಲಿ ॥೪೨೧॥

ಜಗದೊಳಗೆ ಆವುದೂ ಪ್ರತ್ಯಸ್ತ್ರ ಇದಕಿಲ್ಲ
ಯುದ್ಧದಲಿ ಶತ್ರುಗಳು ನಿನ್ನನ್ನು ಮುತ್ತುತಲಿ
ಕೊಲ್ಲಲಿಕೆ ಯತ್ನಿಸಲು ಪ್ರಾಣಕ್ಕೆ ಭಯ:ವಿರಲು
ಬಿಡುವುದೀ ಅಸ್ತ್ರವನು ಎನ್ನುತಲಿ ನುಡಿಯುತಲಿ ॥೪೨೨॥

ಗೂಢವಿಹ ದಿವ್ಯವಿಹ ಮಂತ್ರಗಳ ಅರುಹುತಲಿ
ಬ್ರಹ್ಮಾಸ್ತ್ರ ಬಿಡುವದನು ಹಿಂದಕ್ಕೆ ಕೊಳ್ಳುದನು
ಕಲಿಸುತಲಿ ನೀನೀಗ ತ್ರೈಲೋಕ್ಯ ಗಂಡನಿಹೆ
ನಿನ್ನನ್ನು ಜಯಿಸುವಾ ವಿಕ್ರಮರು ಆರಿಲ್ಲ ॥೪೨೩॥

ಸ್ವರ್ಗದಲಿ ಮರ್ತ್ಯದಲಿ ಪಾತಾಳ ಲೋಕದಲಿ
ಯುದ್ಧದಲಿ ನಿನ್ನನ್ನು ಸೋಲಿಸುವರಾರಿಲ್ಲ
ಮೂಲೋಕ ವೀರನೆಂದೆನಿಸುತಲಿ ಜಗದೊಳಗೆ
ನಿನ್ನಯಾ ಕೀರ್ತಿಯದು ಮೆರೆಯುವದು ಎಂದಿಹನು ॥೪೨೪॥

### ಕೌರವ ಪಾಂಡವರ ಶಸ್ತ್ರಾಸ್ತ್ರ ವಿದ್ಯಾ ಪ್ರದರ್ಶನ

ಒಂದು ದಿನ ಧೃತರಾಷ್ಟ್ರ ಗಾಂಗೇಯ ವಿದುರಾದಿ
ಬಾಂಧವರು ಬಾಹ್ಲೀಕ ಸೋಮದತ್ತಾದಿಗಳು
ನೃಪವರರು ಮಂತ್ರಿಗಳು ವ್ಯಾಸಋಷಿ ಮುನಿವರರು
ಓಲಗದೋಳಿರುತಿರಲು ಕೋಲಗುರು ಐತಂದು ॥೪೨೫॥

ನಮಿಸುತಲಿ ನದಿಸುತಗೆ ಶಸ್ತ್ರಾಸ್ತ್ರ ವಿದ್ಯೆಯನು
ಕೌರವರ್ಗೆ ಪಾಂಡವರ್ಗೆ ಸಕಲವನು ಕಲಿಸಿಹೆನು
ಸಕಲರೂ ವಿದ್ಯೆಯಲಿ ಪರಿಣತರೊ ದಡ್ಡರೊ
ಎಂಬುದನು ನಿರ್ಧರಿಪುದೆನ್ನುತಲಿ ನುಡಿದಿಹನು ॥೪೨೬॥

ಕೇಳುತಲಿ ಗಾಂಗೇಯ ಸಂತಸವು ಉಕ್ಕುತಲಿ
ಆ ಪರಶುರಾಮನಾ ಬಳಿಕಿನಲಿ ಈ ಯುಗದಿ
ಬಿಲ್ಲಿನಲಿ ಪರಿಣತರು ವಿದ್ಯೆಯನು ಕಲಿಸುತಿಹ
ನಿಮ್ಮಯಾ ಸರಿಸಮರು ಆರಿಲ್ಲ ಜಗದೊಳಗೆ ॥೪೨೭॥

ನಿಮ್ಮಯಾ ಗುರುತನದಿ ವಿದ್ಯೆಗಳ ಕಲಿತಿರುವ
ಕುರುಕುಲದ ನೃಪಸುತರು ಕೌರವರು ಪಾಂಡವರು
ಧರೆಯೊಳಗೆ ಮೆರೆಯುವರು ಶೌರ್ಯಪ್ರತಾಪದಲಿ
ಧನ್ಯರೀ ಪಾಂಡವರು ಕೌರವರು ಎನ್ನುತಲಿ ॥೪೨೮॥

ರತ್ನದಾ ಪೀಠದಲಿ ದ್ರೋಣರನು ಕೂಡ್ರಿಸುತ
ಪಾದಗಳ ತೊಳೆಯುತಲಿ ಪೂಜೆಯನು ಗೈಯ್ಯುತಲಿ
ಅಗಣಿತದ ಧನಕನಕ ವಸ್ತ್ರಾದಿ ಕಾಣಿಕೆಯು
ನೀಡುತಲಿ ಗಾಂಗೇಯ ಗುರುಪೂಜೆಗೈದಿಹನು ॥೧೨೯॥

ಗಜಪುರದ ಹೊರವಲಯ ವಿಸ್ತರದ ಬಯಲಿನಲಿ
ಯೋಜನಗಳಳತೆಯಲಿ ವೈಭವದ ಮಂಡಪವ
ಯುದ್ಧದಾ ಕೌಶಲವ ತೋರಿಸಲು ಭವ್ಯದಾ
ಎತ್ತರದ ರಂಗವನು ರಚಿಸಿದರು ಬೆಡಗಿನಲಿ ॥೧೩೦॥

ಸಾವಿರದ ಬಿಲ್ಲುಗಳ ಲಕ್ಷಗಳ ಶರಗಳನು
ಕೋಟಿಗಳ ಗದೆಗಳನು ಖಡ್ಗಗಳ ಪರಶುಗಳ
ಪರ್ವತದ ಪರಿಯಲ್ಲಿ ತೋರುತಿಹ ಶಸ್ತ್ರಗಳ
ರಾಶಿಗಳ ಒಟ್ಟಿಹರು ಮುಗಿಲನ್ನು ಮುಟ್ಟುತಲಿ ॥೧೩೧॥

ಮಂತ್ರಗಳ ಪಠಣದಲಿ ದುರ್ಗೆಯನು ಪೂಜಿಸುತ
ಅಗಣಿತದ ಪಶುಗಳನು ಬಲಿಯನ್ನು ಕೊಟ್ಟಿಹರು
ದಶದಿಶೆಯ ಪೂಜಿಸುತ ಗ್ರಾಮದಾ ದೇವತೆಗೆ
ಷಡ್ರಸದ ಪಕ್ವಾನ್ನ ನೈವೇದ್ಯವಿತ್ತಿಹರು ॥೧೩೨॥

ದೇಶಗಳ ನೃಪರುಗಳು ನೃಪಸುತರು ಸಕಲರೂ
ಮಾಂಡಲಿಕ ಸಾಮಂತ ಮಂತ್ರಿಗಳು ಸೈನಿಕರು
ಆ ಬಾಲ ವೃದ್ಧರು ಸ್ತ್ರೀ ಪುರುಷರೆಲ್ಲರು
ಶಸ್ತ್ರಾಸ್ತ್ರ ಕೌಶಲವ ನೋಡಲಿಕೆ ನೆರೆದಿಹರು ॥೧೩೩॥

ಗಾಂಗೇಯ ಧೃತರಾಷ್ಟ್ರ ವರವಿದುರ ಗುರುದ್ರೋಣ
ವ್ಯಾಸಋಷಿ ಮೊದಲಾದ ಸಾಧುಗಳು ಸಜ್ಜನರು
ಪಂಡಿತರು ಗಾಯಕರು ನರ್ತನ ವಿಶಾರದರು
ಜಗಜಟ್ಟಿ ಮಲ್ಲರುಗಳಗಣಿತರು ಕುಳಿತಿಹರು ॥೧೩೪॥

ಅರಮನೆಯ ನಾರಿಯರ ಸಹಿತದಲಿ ವೈಭವದಿ
ಗಾಂಧಾರಿ ಕುಂತಿಯರು ರಥದೊಳಗೆ ಸಾಗುತಲಿ
ಐತಂದು ಸಂಭ್ರಮದಿ ಮಕ್ಕಳುಗಳಾಟವನು
ನೋಡಲಿಕೆ ಕುಳಿತಿಹರು ರತ್ನಗಳ ಪೀಠದಲಿ ॥೧೩೫॥

ಕಹಳೆಗಳ ಭೇರಿಗಳ ಮಂಗಳದ ವಾದ್ಯಗಳ
ಅಬ್ಬರದ ಘೋರ ಸ್ವರ ಗಗನವನು ಭೇದಿಸಲು
ವರದ್ರೋಣ ರಂಗದಾ ಮಧ್ಯದಲಿ ಐತಂದು
ಶೌರ್ಯಪ್ರದರ್ಶನವು ಪ್ರಾರಂಭವಾಗುತಿದೆ ॥೧೩೬॥

ಶಾಂತದಲಿ ಮಕ್ಕಳಾ ಶೌರ್ಯವನು ನೋಡುವುದು
ಎನ್ನುತಲಿ ಕರವೆತ್ತಿ ಸಭಿಕರಿಗೆ ನುಡಿಯುತಿರೆ
ಮೊದಲಿನಲಿ ಪಾಂಡವರ ಮೊದಲಿಗನು ಧರ್ಮಜನು
ನಡೆತಂದು ದ್ರೋಣರಾ ಅಂಘ್ರಿಗಳಿಗೆರಗುತಲಿ ॥೧೩೭॥

## ಧರ್ಮಜನ ಶಸ್ತ್ರ ಕೌಶಲ್ಯ ಪ್ರದರ್ಶನ

ಧನುವಿಂಗೆ ನಮಿಸುತಲಿ ಎತ್ತುತಲಿ ಝೇಂಕರಿಸಿ
ಬಾಣವನು ಅಳವಡಿಸಿ ಜಗ್ಗುತಲಿ ಬಿಡುತಲಿರೆ
ಕಣ್ಣಿಂಗೆ ಕಾಣಿಸದೆ ಗಗನವದು ಮುಟ್ಟುವಾ
ಪರಿಯಲ್ಲಿ ಹಾರಿಹುದು ಮೇಲಕ್ಕೆ ವೇಗದಲಿ ॥೧೩೮॥

ಆನೆಗಳ ಅಶ್ವಗಳ ರಥಗಳನು ಏರುತಲಿ
ವಿಧವಿಧದ ಪರಿಯಲ್ಲಿ ಯುದ್ಧವನು ಗೈಯ್ಯುವಾ
ಶಸ್ತ್ರಾಸ್ತ್ರ ಕೌಶಲವ ಯಮಸುತನು ತೋರಿಸಲು
ಸಕಲಜನ ಬೆರಗಾಗಿ ಭಲೆ ಭಲೆರೆ ಎಂದಿಹರು ॥೧೩೯॥

ಯಮಧರ್ಮ ತನಯಂಗೆ ವಿಕ್ರಮಕೆ ಕುಂದಿಲ್ಲ
ಎಂಬಂತೆ ಧರ್ಮಜನು ಧನುರ್ವಿದ್ಯೆ ಜಾಣ್ಮೆಯನು
ಅದ್ಭುತದಿ ತೋರಿಸಲು ನೆರೆದಿರುವ ಸರ್ವರೂ
ಕರತಟ್ಟಿ ಸಂತಸವ ಸೂಚಿಸಲು ಸರಿದಿಹನು ॥೧೪೦॥

ಆ ನಕುಲ ಸಹದೇವ ಅಶ್ವಗಳನೇರುತಲಿ
ಖಡ್ಗಗಳ ಝಳಪಿಸುತ ತಿರುಹುತಲಿ ಮುರುಹುತಲಿ
ಶಸ್ತ್ರಾಸ್ತ್ರ ಖಂಡಿಸುತ ರಥಗಳು ಪುಡಿಗೈದು
ಅರಿಗಳನು ಇರಿಯುವಾ ಕೌಶಲವ ತೋರಿಹರು ॥೧೪೧॥

## ಭೀಮನ ಗದಾ ಪರಿಣತಿಯ ಪ್ರದರ್ಶನ

ಬಳಿಕಲಾ ಕಲಿಭೀಮ ಗದೆಯನ್ನು ತಿರುಹುತಲಿ
ರಂಗದಾ ಮಧ್ಯದಲಿ ಧಾವಿಸುತ ಐತಂದು
ವಿಧವಿಧದ ಪರಿಯಲ್ಲಿ ತೋಮರವ ತಿರುಗಿಸುತ
ಶತ್ರುಗಳ ಶಿರಹೊಯ್ವ ಪರಿಯನ್ನು ತೋರಿದನು ॥೧೪೨॥

ಅಗಣಿತದ ಬಿಲ್ಲುಗಳ ರಥಗಳನು ಪುಡಿಗೈದು
ಕಲ್ಬಂಡೆ ಕುಟ್ಟುತಲಿ ಧೂಳಿಯನು ಮಾಡುತಲಿ
ಮುತ್ತಿಬಹ ಆನೆಯಾ ನೆತ್ತಿಯನು ಕುಟ್ಟುತಲಿ
ಒಂದಕ್ಕೆ ಅಟ್ಟುವಾ ಕೌಶಲವ ತೋರಿದನು ॥೧೪೩॥

ಪವನಜನ ಸಾಹಸದ ಅದ್ಭುತ ಪ್ರದರ್ಶನವ
ನೋಡುತಲಿ ನೆರೆದಿರುವ ಸಕಲಜನ ಚಕಿತದಲಿ
ಈ ಪರಿಯ ಶಕ್ತಿಯನು ಪಡೆದಿರುವ ಮನುಜನನು
ಇಂದಿನಾ ಪರ್ಯಂತ ಕಂಡಿಲ್ಲ ಎಂದಿಹರು ॥೧೪೪॥

### ದುರ್ಯೋಧನನ ಆಗಮನ ಮತ್ತು ಭೀಮನೊಡನೆ ಹೋರಾಟ

ಗದೆಯೊಳಗೆ ಪರಿಣಿತನು ಎನಿಸಿಹ ಸುಯೋಧನನು
ಕೇಳುತಲಿ ಮನದೊಳಗೆ ಮತ್ಸರದಿ ಕುದಿಯುತಲಿ
ಎಲವೆಲವೊ ಪವನಜನೆ ಶಕ್ತಿಯದು ಇರ್ದೊಡೆಯು
ಎನ್ನೊಡನೆ ಸೆಣಸುತಲಿ ತೋರಿಪುದು ಎನ್ನುತಲಿ ॥೪೪೫॥

ಗದೆಯನ್ನು ತಿರುಹುತಲಿ ಓಡುತಲಿ ಬರುತಲಿರೆ
ವಾಯುಸುತ ಗದೆಯಿಂದ ಗದೆಯನ್ನು ಅಪ್ಪಳಿಸೆ
ಪುಡಿಪುಡಿಯು ಆಗುತಿರೆ ಸಭೆಯಲ್ಲಿ ನಗುತಲಿರೆ
ಬೇರೊಂದು ಗದೆಯನ್ನು ಕೊಳ್ಳುತಲಿ ಬರುತಲಿರೆ ॥೪೪೬॥

ಗಜವೆರಡು ರೋಷದಲಿ ಹೆಣಗುವಾ ಪರಿಯಲ್ಲಿ
ಈರ್ವರೂ ಕ್ರೋಧರದಿ ಹೊಡೆಯುತಲಿ ಹಣಿಯುತಲಿ
ಖಣಿ ಖಟಿಲು ಖಟಿಲೆಂದು ಘೋರತರ ದನಿಯದುವೆ
ದಶದಿಸೆಯ ತುಂಬಿದುದು ಅಂಬರವ ಭೇದಿಸುತ ॥೪೪೭॥

ಕುಹಕನಾ ಕೌರವನು ವಿಷದನ್ನವಿಕ್ಕಿದುದ
ಮನದೊಳಗೆ ನೆನೆಯುತಲಿ ಕಲಿಭೀಮ ಕ್ರೋಧದಲಿ
ಕೌರವನ ಪ್ರಾಣವನು ಕೊಳ್ಳುವೆನು ಎನ್ನುತಲಿ
ಗದೆಯಿಂದ ಶಿರದಲ್ಲಿ ಹೊಯ್ಯುತಿರೆ ಭರದಲ್ಲಿ ॥೪೪೮॥

### ದುರ್ಯೋಧನನ ಶಿರ ಒಡೆಯುವದು

ರಕುತದಾ ಬುಗ್ಗೆಯದು ಚಿಲ್ಲೆಂದು ಚಿಮ್ಮುತಿರೆ
ಅಕಟಕಟ ಪೂರ್ಣಿಮೆಯ ಚಂದಿರನ ಬೆಳಕಿನಲಿ
ಪ್ರಳಯದಾ ಕೆಂಡಗಳ ಮಳೆಸುರಿದುದಂತಾಯ್ತು
ಎನ್ನುತಲಿ ಕೃಪನೆದ್ದು ಭೀಮನನು ತಡೆದಿಹನು ॥೪೪೯॥

ಹಾಲಿನಲಿ ಹುಳಿಹಿಂಡಿದಂತಾಯ್ತು ಇಂದಿನಲಿ
ಅಮೃತದಲಿ ವಿಷ ಬೆರೆಸಿ ಕೆಡಿಸಿದಂತಾಗಿಹುದೇ
ಸಂತಸದ ಸಮಯವಿದು ದುಃಖಾಂತವೆನಿಸಿಹುದು
ಎನ್ನುತಲಿ ಪವನಜನ ಸರಿಸಿದನು ಗುರುಸುತನು ॥೪೫೦॥

ನಿಜಸುತನ ಕೌರವನ ಬವಣೆಯನು ನೋಡುತಲಿ
ಗಾಂಧಾರಿ ಹೌಹಾರಿ ಕಳವಳದಿ ಚಿಂತಿಸುತ
ಅಕಟಕಟ ಈ ಭೀಮ ಅತಿದುಷ್ಟ ಬಲುಕ್ರೂರ
ಎನ್ನುತಲಿ ನೊಂದಿಹಳು ಬೆಂದಿಹಳು ಕುಂದಿಹಳು ॥೪೫೧॥

ಶಿಶುತನದಿ ಕಲ್ಬಂಡೆ ಪುಡಿಗೈದ ಪವನಜನ
ಅದ್ಭುತದ ಶಕ್ತಿಯನು ಅರಿತಿರುವ ವರಕುಂತಿ
ಜಗದೊಳಗೆ ಭೀಮನನು ಜಯಿಸುವವರಾರಿಲ್ಲ
ಎನ್ನುತಲಿ ಮನದೊಳಗೆ ಸಂತಸದಿ ಉಬ್ಬಿದಳು ॥೪೫೨॥

### ಅರ್ಜುನನ ವಿದ್ಯಾ ಪ್ರದರ್ಶನ

ಬಳಿಕಿನಲಿ ಮಧ್ಯಮನು ಪಾಂಡವನು ಅರ್ಜುನನು
ಬಿಲ್ಲನ್ನು ಝೇಂಕರಿಸುತೆಡಬಲನ ನೋಡುತಲಿ
ಗುರುವಿಂಗೆ ನಮಿಸುತಲಿ ರಂಗದಾ ಮಧ್ಯದಲಿ
ಬರುತಲಿರ ಸಕಲಜನ ಕರಗಳನು ತಟ್ಟಿಹರು ॥೪೫೩॥

ಅಗಣಿತದ ಶರಗಳನು ಧನುವಿನಲಿ ಅಳವಡಿಸಿ
ಒಂದೆ ಸಲ ಯೋಜನದ ಅಳತೆಯಲಿ ಎಸೆಯುವಾ
ಗಗನವನು ಭೇದಿಸುವ ಪರಿಯಲ್ಲಿ ಎಚ್ಚುವಾ
ಚಾತುರ್ಯವನು ತೋರಿದನು ಫಲುಗುಣನು ಅದ್ಭುತದಿ ॥೪೫೪॥

ಜ್ವಾಲೆಗಳ ಉಗುಳುತಿಹ ಪರ್ಜನ್ಯ ಸುರಿಸುತಿಹ
ಪರ್ವತವನೆರಚುತಿಹ ವಾಯವ್ಯ ಕಿತ್ತೊಗೆವ
ಸರ್ಪಾಸ್ತ್ರ ಗರುಡಾಸ್ತ್ರ ವಿಧವಿಧದ ಅಸ್ತ್ರಗಳ
ಎಸೆಯುತಲಿ ಕೌಶಲವ ತೋರಿದನು ಅರ್ಜುನನು ॥೪೫೫॥

ಬಿಲ್ಲಿನಲಿ ಫಲಗುಣಗೆ ಸರಿಸಮರು ಆರಿಲ್ಲ
ಅಪ್ರತಿಮ ವೀರನಿಹ ಮೂಲೋಕ ಗಂಡನಿಹ
ಎನ್ನುತಲಿ ಸಕಲರೂ ಅರ್ಜುನನ ಹೊಗಳುತಿರೆ
ಕಲಿಕರ್ಣ ಕೇಳುತಲಿ ಕನಲುತಲಿ ಕುದಿಯುತಲಿ ॥೪೫೬॥

### ಕರ್ಣನು ಇದಿರಾಗಿ ಯುದ್ಧಕ್ಕೆ ಬರುವುದು

ಮೂಲೋಕ ಗಂಡ ನೀ ನಿಜದಲ್ಲಿ ಇರ್ದೊಡೆಯು
ಎನ್ನೊಡನೆ ನಿನ್ನಯಾ ಶೌರ್ಯವನು ತೋರಿಪುದು
ಯುದ್ಧವನು ಗೈಯ್ಯುತಲಿ ಎನ್ನನ್ನು ಜಯಿಸುವುದು
ಎನ್ನುತಲಿ ಅಡ್ಡೈಸಿ ಇದಿರಾಗಿ ಬಂದಿಹನು ॥೪೫೭॥

ನೃಪಸುತರು ನೃಪಸುತರ ಸಹಿತದಲಿ ಸೆಣಸುವದು
ಸಮ್ಮತವು ಯೋಗ್ಯವದು ಎನಿಸುವುದು ರೂಢಿಯಲಿ
ನಿನ್ನಯಾ ಕುಲಗೋತ್ರ ತಾಯ್ತಂದೆ ಹೆಸರುಗಳ
ಮೊದಲಿಂಗೆ ಹೇಳುವುದು ಎಂದಿಹನು ಅರ್ಜುನನು ॥೪೫೮॥

ಕರೆಯದಲೆ ಬಂದಿರುವ ಕಡುಮೂರ್ಖ ಉದ್ಧಟನೆ
ಈಗಲೇ ನಿನ್ನಯಾ ಶಿರವನ್ನು ತರಿಯುತಲಿ
ಯಮಪುರಿಗೆ ಅಟ್ಟುವೆನು ಎನ್ನುತಲಿ ಅರ್ಜುನನು
ಬಿಲ್ಲನ್ನು ಠೇಂಕರಿಸಿ ಗುರಿಯಿಡುತ ನಿಲ್ಲುತಿರೆ ॥೪೫೯॥

### ಪೌರುಷವೇ ಕುಲವಿಹುದು

ಶೌರ್ಯವೇ ನನತಂದೆ ಶಕ್ತಿಯೇ ನನತಾಯಿ
ಪೌರುಷವೆ ಕುಲವಿಹುದು ಎನ್ನುತಲಿ ಕಲಿಕರ್ಣ
ವಿಪ್ರರಾ ಪರಿಯಲ್ಲಿ ಕುಲಗೋತ್ರ ಕೇಳುತಿಹ
ನೀನಾರು ಹಾರುವನೊ ಕ್ಷತ್ರಿಯನೊ ಹೇಳೆಂದ ॥೪೬೦॥

ನಾನಾವ ಕುಲದವನು ಇರ್ದೊಡೆಯು ತಪ್ಪೇನು
ಎನ್ನಯಾ ಶೌರ್ಯಕ್ಕೆ ಕುಂದಿಲ್ಲ ಮಿತಿ ಇಲ್ಲ
ಇದು ರಂಗಭೂಮಿ ಇದೆ ಕ್ಷತ್ರಿಯನು ಇರ್ದೊಡೆಯು
ನೀ ಎನ್ನ ಜೊತೆಯಲ್ಲಿ ಯುದ್ಧವನು ಮಾಡುವುದು ॥೪೬೧॥

**ಭೀಮನು ಕರ್ಣನನ್ನು ಹೀಯಾಳಿಸುವುದು**

ಪವನಜನು ನೋಡುತಲಿ ಕನಲುತಲಿ ಕರ್ಣಂಗೆ
ಫಲುಗುಣನು ಕುರುಕುಲದ ಪಾಂಡುವಿನ ಪುತ್ರನಿಹ
ಸಾಮ್ರಾಜ್ಞಿ ಕುಂತಿಯಾ ಉದರದಲಿ ಜನಿಸಿಹನು
ನೀನಾವ ಅರಸನಾ ಮಗನಿರುವೆ ಹೇಳೆಂದ ॥೪೬೨॥

ಅರಸುಗಳಗಿರಸುಗಳ ಕುಲಗಳನು ತರಿಯುವೆನು
ಪೌರುಷವೆ ಎನ್ನಯಾ ಕುಲವಿಹುದು ಫಲವಿಹುದು
ಈಗಲೇ ಅರ್ಜುನನ ಶಿರವನ್ನು ತರಿಯುತಲಿ
ಗುರುಚರಣಗರ್ಪಿಸುವೆ ಎನ್ನುತಲಿ ನಿಲ್ಲುತಿರೆ ॥೪೬೩॥

**ಕರ್ಣನ ನಿಂದನೆಯನ್ನು ಕೇಳಿ ಕುಂತಿಯು ಮೂರ್ಛೆಯನ್ನು ಹೊಂದುವುದು**

ವರಕುಂತಿ ನೋಡುತಲಿ ದಿಙ್ಮೂಢಳಾಗುತಲಿ
ಗಗನವೇ ಕುಸಿಯುತಲಿ ಶಿರದಲ್ಲಿ ಬಿದ್ದಂತೆ
ಅಕಟಕಟ ನಾನೆಂತು ದುಷ್ಕೃತ್ಯಗೈದಿಹೆನು
ಅಂದಿನಲಿ ಅಪಕೀರ್ತಿಗಳುಕುತಲಿ ಸಹಿಸದಲೆ ॥೪೬೪॥

ಶಿಶುವನ್ನು ಕರ್ಣನನು ನದಿಯೊಳಗೆ ಎಸೆಯುತಲಿ
ಘನಘೋರ ಪಾಪವನು ಗೈದುದಕೆ ಇಂದಿನಲಿ
ಕರ್ಣಂಗೆ ಈಪರಿಯು ಕಷ್ಟವದು ಒದಗಿಹುದು
ಎನ್ನಂಥ ಪಾತಕಿಯು ಆರಿಲ್ಲ ಎನ್ನುತಲಿ ॥೪೬೫॥

ಈರ್ವರಾ ನಿಜಸುತರು ಸೆಣಸುತಲಿ ಸಾಯುವರು
ಕರ್ಣನಾ ಜನನವನು ಉಸುರಿದೊಡೆ ಕೇಡಹುದು
ಉಸುರದಲೆ ಇರ್ದೊಡೆಯು ಕೇಡಹುದು ಎನ್ನುತಲಿ
ಇಬ್ಬರೊಳು ಓರ್ವನು ಸಾಯ್ವುದಿದು ನಿಜವಿಹುದು ॥೪೬೬॥

ಹಣೆಬರಹ ಮೀರುವವರಾರಿಲ್ಲ ಎನ್ನುತಲಿ
ಕಳವಳದಿ ಚಿಂತಿಸುತ ಹೌಹಾರಿ ತಿಳಿಯದಲೆ
ಕರುಳಿನಲಿ ಅಲಗಿಕ್ಕಿ ತಿರುಗಿಸಿದ ಪರಿಯಲ್ಲಿ
ಮಹತಾಯಿ ವರಕುಂತಿ ಮೂರ್ಛೆಯಲಿ ಉರುಳಿದಳು ॥೪೬೭॥

ಸುತವಿದುರ ನೋಡುತಲಿ ಸೇವಿಕೆಯರೊಡಗೂಡಿ
ಗಾಳಿಯನು ಬೀಸುತಲಿ ತಣ್ಣೀರನೆರಚುತಲಿ
ಗಂಧಾನುಲೇಪನದಿ ಶೈತ್ಯೋಪಚಾರವನು
ಗೈಯ್ಯುತಿರೆ ಸುತಕುಂತಿ ಎಚ್ಚರದೊಳೆದ್ದಿಹಳು ॥೪೬೮॥

**ಕೃಪರು ಅಸಮ್ಮತಿ ಸೂಚಿಸುವುದು**

ಗುರುಕೃಪರು ಕರ್ಣನಾ ನುಡಿಗಳನು ಕೇಳುತಲಿ
ರಾಜಸುತ ರಾಜಸುತ ಸಂಗಡದಿ ಕಾದುವುದು
ಶಾಸ್ತ್ರಕ್ಕೆ ಸಮ್ಮತವು ರೂಢಿಯಲಿ ಒಪ್ಪಿಗೆಯು
ಯುದ್ಧಕ್ಕೆ ನೀ ಯೋಗ್ಯನಲ್ಲೆಂದು ನುಡಿದಿಹನು ॥೪೬೯॥

**ದುರ್ಯೋಧನನು ಕರ್ಣನನ್ನು ಅಂಗದೇಶದ ರಾಜನನ್ನಾಗಿ ಮಾಡುವುದು**

ಗುರುಸುತನ ನುಡಿ ಕೇಳಿ ನೋಯುತಲಿ ಕರ್ಣನಾ
ಮುಖಕಮಲ ಬಾಡುತಿರೆ ಕೌರವನು ನೋಡುತಲಿ
ಗುರುವರರೆ ನೃಪಸುತರು ಅತಿವೀರ ವಿಕ್ರಮರು
ಸೇನಾಧಿನಾಯಕರು ರಾಜರುಗಳೆನಿಸುವರು ॥೪೭೦॥

ಕಲಿಕರ್ಣ ಶೂರನಿಹ ಜಯಿಸುವವರಾರಿಲ್ಲ
ಸೇನಾಧಿಪತಿಯಾಗಿ ಸೈನ್ಯವನು ನಡೆಸುವನು
ಕ್ಷತ್ರಿಯರ ಮೀರಿರುವ ಶಕ್ತಿಯನು ಪಡೆದಿರುವ
ಸುತಕರ್ಣ ರಾಜರಿಗೆ ಮಿಗಿಲಾದ ರಾಜನಿಹ ॥೪೭೧॥

ಇವರಾಜನಲ್ಲದೊಡೆ ಯುದ್ಧವನು ಗೈಯ್ಯಲಿಕೆ
ಅರ್ಜುನನು ಒಪ್ಪದಿರೆ ಈಗಲೇ ಕರ್ಣನನು
ರಾಜನನು ಮಾಡುವೆನು ಎನ್ನುತಲಿ ಅಕ್ಷಣದಿ
ವೈದಿಕರ ಕರೆಸುತಲಿ ಯಜ್ಞವನು ಮಾಡುತಲಿ ॥೪೭೨॥

ಸಿಂಹದಾ ವಿಷ್ಟರದಿ ಕರ್ಣನನು ಕೂಡ್ರಿಸುತ
ಹೊಳೆಹೊಳೆವ ರತ್ನದ ಕಿರೀಟವನು ಇರಿಸುತಲಿ
ಅಂಗದಾ ರಾಜ್ಯವನು ಸಂಭ್ರಮದಿ ಈಯುತಲಿ
ರಾಜ್ಯಾಭಿಷೇಕವನು ಗೈದಿಹನು ಕೌರವನು ॥೪೭೩॥

**ಕರ್ಣನ ತಂದೆಯ ಆಗಮನ**

ಕರ್ಣನಾ ಕಣ್ಣಿಂದ ಆನಂದ ಬಾಷ್ಪಗಳು
ಧಾರೆಯಲಿ ಸುರಿಯುತಲಿ ಸ್ನೇಹತೋರೆ ಉಕ್ಕುತಲಿ
ಕೌರವನ ಧೃಢವಾಗಿ ಅಪ್ಪುತಲಿ ಸಂತಸದಿ
ನಿನ್ನಯಾ ಉಪಕಾರ ನಾನೆಂತು ತೀರಿಸುವೆ ॥೪೭೪॥

ಈ ಒಂದು ಜನ್ಮದಲಿ ನಿನ್ನಯಾ ಋಣವನ್ನು
ತೀರಿಸಲು ಆಗದಿದು ಜನ್ಮಗಳು ಸಾಲದಿವೆ
ನಿನಗಾವ ಪರಿಯಲ್ಲಿ ನೆರವನ್ನು ಈಯುತಲಿ
ಋಣವನ್ನು ತೀರಿಪುದು ಎನ್ನುತಲಿ ನುಡಿದಿಹನು ॥೪೭೫॥

ಹೇ ಕರ್ಣ ನಿನ್ನಿಂದ ಏನನ್ನು ಆಶಿಸೆನು
ನಿನ್ನಯಾ ಮಿತ್ರತ್ವ ಬರಿಸ್ನೇಹ ಮಾತ್ರವನು
ಆಮರಣ ಪರ್ಯಂತ ಬಯಸುವೆನು ಎನ್ನುತಲಿ
ಕೌರವನು ನುಡಿದಿಹನು ಜೀವಸಖ ಕರ್ಣಂಗೆ ॥೪೭೬॥

ಅನಿತರಲಿ ಕರ್ಣನನು ಪೋಷಿಸಿದ ಪಿತೃವರನು
ವೃದ್ಧನಾ ವರಸೂತ ಅಧಿರಥನು ನಡುಗುತಲಿ
ಕೋಲನ್ನು ಊರುತಲಿ ಸಂತಸದಿ ಬರುತಿರಲು
ಕಲಿಕರ್ಣ ತಂದೆಯಾ ಚರಣಕ್ಕೆ ಎರಗಿದನು ॥೪೭೭॥

ಕರವಿಡಿದು ಕರ್ಣನನು ಎಬ್ಬಿಸುತ ಅಧಿರಥನು
ಹೇ ಮಗನೆ ನಿನ್ನಯಾ ಪಟ್ಟಾಭಿಷೇಕವನು
ನೋಡುತಲಿ ಎನ್ನಯಾ ಕಂಗಳಿವು ತಣಿದಿಹವು
ಜನ್ಮವಿದು ಸಾರ್ಥಕವು ಎನ್ನುತಲಿ ನುಡಿದಿಹನು ॥೪೭೮॥

**ಭೀಮನು ಮತ್ಸರ ಮೂದಲಿಸುವುದು**

ಪವನಜನು ನೋಡುತಲಿ ಎಲವೆಲವೊ ಕರ್ಣನೇ
ಸೂತಸುತ ನೀನಿರುವೆ ಕುಲದೊಳಗೆ ಹೀನನಿಹೆ
ಅರಸುಗಳು ಸೇವಕರು ಎತ್ತಣದ ಸರಿಸಮರು
ಅರ್ಜುನನ ಕೈಯಿಂದ ಸಾಯಲಿಕೆ ಅನುಚಿತನು ॥೪೭೯॥

ರಥವನ್ನು ಓಡಿಸುವ ನಿನ್ನಯಾ ಕುಲಕಸುಬ
ಗೈಯ್ಯುತಲಿ ಜೀವಿಪುದು ಅರ್ಜುನನ ನೆನೆಸುತಲಿ
ನೆಲದೊಳಗೆ ಹಾರಲಿಕೆ ಬಾರದಿಹ ಚಿಕ್ಕದುವೆ
ಗಗನವನು ಮುಟ್ಟಲಿಕೆ ಬಯಿಸುವಂತೆ ಯತ್ನಿಸಿದೆ ॥೪೮೦॥

ಕುರುಕುಲದ ಘನವೀರ ಪಾಂಡುವಿನ ಉದರದಲಿ
ಜನಿಸಿರುವ ಮೂಲೋಕವೀರನಿಹ ಅರ್ಜುನಗೆ
ಹೀನಕುಲ ಸೂತಸುತ ನೀನೆತ್ತ ಸರಿಸಮನು
ಹೋಗೆಲವೊ ಎನ್ನುತಲಿ ಕಲಿಭೀಮ ಜರಿದನು ॥೪೮೧॥

**ದುರ್ಯೋಧನ ಮತ್ತು ಭೀಮರ ವಾಗ್ವಾದ**

ಕೌರವನು ಕೇಳುತಲಿ ನಖಶಿಖದಿ ಉರಿಯುತಲಿ
ಎಲವೆಲವೊ ಪವನಜನೆ ನದಿಮೂಲ ಋಷಿಮೂಲ
ಶೂರರಾ ಮೂಲವನು ನೃಪರುಗಳ ಮೂಲವನು
ಅರಸಲಿಕೆ ಯತ್ನಿಪುದು ಕಡುಮೂರ್ಖತನವೆಂದ ॥೪೮೨॥

ಮತ್ತಯ್ಯ ಗಾಂಗೇಯ ನದಿಯಿಂದ ಜನಿಸಿಹನು
ಕೋಲಗುರು ವರದ್ರೋಣ ದೊನ್ನೆಯಲಿ ಜನಿಸಿಹನು
ಐವರೂ ನೀವೆಂತು ಜನಿಸಿದುವ ನಾಬಲ್ಲೆ
ಶೌರ್ಯಕ್ಕೆ ಪಾಂಡಿತ್ಯಕಾವುದೂ ಕುಲವಿಲ್ಲ ॥೪೮೩॥

ಕ್ಷತ್ರಿಯನ ಕುಲದೊಳಗೆ ಜನಿಸಿರುವ ವೀರನಾ
ಕೌಶಿಕನು ತಪಗೈದು ಬ್ರಹ್ಮರ್ಷಿಯೆನಿಸಿಹನು
ಜಮದಗ್ನಿ ಋಷಿವರನ ಸುತಸುತನು ಪರಶುಧರ
ಕ್ಷತ್ರಿಯರ ವಂಶವನು ನಿರ್ನಾಮಗೈದಿಹನು ॥೪೮೪॥

ಸಿಂಹದಾ ಗರ್ಭದಲಿ ಮೊಲವೆಂತು ಜನಿಸುವುದು
ವರಹುಲಿಯ ಉದರದಲಿ ಇಲಿ ಎಂತು ಜನಿಸುವದು
ಕುಣಿಯಲಿಕೆ ಬರದವಗೆ ನೆಲಡೊಂಕು ಎಂಬಂತೆ
ಯುದ್ಧಕ್ಕೆ ತಾಯ್ತಂದೆ ಕುಲವೇಕೆ ಬೇಕಿಹುದು ॥೪೮೫॥

ಆ ಪರಶುರಾಮನಲಿ ಧನುರ್ವಿದ್ಯೆ ಕಲಿಯುತಲಿ
ಬಿಲ್ಲಿನಲಿ ಅಪ್ರತಿಮ ಪರಿಣತೆಯ ಪಡೆದಿರುವ
ಕಲಿಕರ್ಣ ಅರ್ಜುನಗೆ ಪ್ರತಿಸ್ಪರ್ಧಿಯಾಗುತಲಿ
ಸೆಣಸಲಿಕೆ ಅತಿಯೋಗ್ಯನಿಹನೆಂದು ನುಡಿದನು ॥೪೮೬॥

ಸೂತಕುಲಜಾತನಿಹ ಈ ಕರ್ಣ ಹೀನನಿಹ
ಘನವೆನಿಪ ಕುರುಕುಲದಿ ಜನಿಸಿರುವ ಅರ್ಜುನನ
ಜೊತೆಯಲ್ಲಿ ಯುದ್ಧವನು ಗೈಯ್ಯುವುದು ಸಲ್ಲದಿದು
ಧರ್ಮಕ್ಕೆ ಶಾಸ್ತ್ರಕ್ಕೆ ವಿಪರೀತ ವಾಗಿಹುದು ॥೪೮೭॥

ಫಲುಗುಣನ ಸಂಗಡದಿ ಯುದ್ಧವನು ಗೈಯ್ಯಲಿಕೆ
ಬಯಕೆಯದು ಇರ್ದೊಡೆಯು ಇನ್ನೊಂದು ಜನುಮದಲಿ
ಉತ್ತಮದ ಕುಲದೊಳಗೆ ಜನಿಸುತಲಿ ಈ ಕರ್ಣ
ಸೆಣಸಲಿಕೆ ಬರಲೆಂದು ಪವನಜನು ನುಡಿದಿಹನು ॥೪೮೮॥

**ನಿಜಸುತನ ಕರ್ಣನ ನಿಂದನೆಯನ್ನು ಕೇಳಿ ರವಿಯು ಅಸ್ತಂಗತನಾಗುವನು**

ನಿಜಸುತನ ಕರ್ಣನಾ ನಿಂದೆಯನು ಕೇಳುತಲಿ
ಅಪಮಾನವಾದುದನು ಕಣ್ಣಾರೆ ಕಾಣುತಲಿ
ಕಳವಳದಿ ಚಿಂತಿಸುತ ಕಳೆಗುಂದಿ ಮ್ಲಾನದಲಿ
ಹೀನರವಿ ಪಶ್ಚಿಮದ ಕಡಲಿನಲಿ ಇಳಿದಿಹನು ॥೪೮೯॥

**ಸಕಲರೂ ಚಿಂತೆಯಲಿ ತೆರಳಿದರು**

ಪವನಜನ ಕೌರವನ ವಾಗ್ವಾದ ಮುಗಿಯದಿರೆ
ಗಾಂಧಾರಿ ಕುಂತಿಯರು ಗಾಂಗೇಯ ಧೃತರಾಷ್ಟ್ರ
ಗುರುದ್ರೋಣ ವಿದುರಾದಿ ಬಾಂಧವರು ಸಕಲರೂ
ಅರಮನೆಗೆ ತೆರಳಿದರು ದುಗುಡದಲಿ ನೊಂದಿಹರು ॥೪೯೦॥

ಗಾಂಗೇಯ ಮನದೊಳಗೆ ಭೀಮನಾ ಕೌರವನ
ಹಗೆತನದ ಹೋರಾಟ ಸೆಣಸಾಟ ನೆನೆಯುತಲಿ
ಮುಂದಣದ ದಾಯಾದಿ ಮತ್ಸರದ ಯುದ್ಧಕ್ಕೆ
ಇದು ನಾಂದಿಯಾಯ್ತೆಂದು ನೊಂದಿಹನು ಬೆಂದಿಹನು ॥೪೯೧॥

ಕೆಲಕೆಲರು ಧರ್ಮಜನ ಕೆಲವುಜನ ಪವನಜನ
ಉಳಿದವರು ಅರ್ಜುನನ ಶೌರ್ಯವನು ಹೊಗಳಿದರು
ಇನ್ನುಳಿದ ಪುರಜನವು ದುರ್ಯೋಧನಾ ಭೀಮ
ಈರ್ವರಾ ದ್ವೇಷವನು ಗುಜುಗುಜಿಸಿ ನುಡಿದಿಹರು ॥೪೯೨॥

**ದ್ರೋಣರಿಗೆ ಗುರುದಕ್ಷಿಣೆ**

ದಿನಕಳೆಯೆ ಪಾಂಡವರು ಕೌರವರು ಸಹಸದಲಿ
ಗರುಡಿಯೊಳು ಸೆರೆದಿರಲು ವರದ್ರೋಣನೈತಂದು
ಮಕ್ಕಳಿರ ನಿಮಗೆಲ್ಲ ವಿದ್ಯೆಯನು ಕಲಿಸಿಹೆನು
ಎಮಗೇನು ದಕ್ಷಿಣೆಯನೀಯುವಿರಿ ಎನ್ನುತಿರೆ ॥೪೯೩॥

ಕೇಳಿದುದನೀಯುವೆವು ಸಂಶಯವು ಎನಿತಿಲ್ಲ
ಧನಕನಕ ವಸ್ತ್ರವನು ಗಜತುರಗವೀಯುವೆವು
ಎನ್ನುತಲಿ ಬಾಲಕರು ಸಕಲರೂ ನುಡಿಯುತಿರೆ
ಕುಂಭಜನು ನುಡಿದಿಹನು ಸಂತಸವು ಉಕ್ಕುತಲಿ ॥೪೯೪॥

ಗಂಗೆಯಾ ಉತ್ತರದಿ ಪಾಂಚಾಲ ದೇಶವನು
ಆಳುತಿಹ ಅತಿಬಲನು ಆರಿಗೂ ಸೋಲದಿಹ
ವಿಕ್ರಮನ ಭೂಪಾಲ ದ್ರುಪದನನು ಸೆರೆಹಿಡಿದು
ಒಪ್ಪಿಪುದು ಎನಗೆಂದು ಕಲಶಜನು ನುಡಿದಿಹನು ॥೪೯೫॥

ಇದು ಅವ ಘನಕಾರ್ಯ ಎನ್ನುತಲಿ ಕೌರವರು
ಕರಮೊಯ್ದು ಉಪಹಾಸಗೈಯ್ಯುತಲಿ ನಗುನಗುತ
ಭೂಮಿಯನು ಐಶ್ವರ್ಯಬೇಡದಲೆ ಕೋಲಗುರು
ಮರಳುತನ ತೋರಿದನು ಎನ್ನುತಲಿ ತೆರಳಿದರು ॥೪೯೬॥

ಬಳಿಕಲಾ ಚತುರಂಗ ಬಲಸಹಿತ ಕೌರವರು
ಪಾಂಚಾಲ ದೇಶದಾಪುರವಳಯಕೈತಂದು
ದಾಳಿಯನು ಇಡುತಲಿರೆ ದ್ರುಪದನಾ ಸೋದರರು
ಬಳಸಹಿತ ಐತಂದು ಯುದ್ಧವನು ಗೈಯ್ಯುತಲಿ ॥೪೯೭॥

ಕೌರವನ ಸೈನ್ಯವನು ನಾಶವನು ಗೈಯ್ಯುತಿರೆ
ಪ್ರಾಣದಾ ಭಯದಿಂದ ಕರ್ಣಾದಿ ಸಹಿತದಲಿ
ಕಾಲ್ಕಿತ್ತು ಓಡುತಲಿ ಉಸಿರು ಮೇಲ್ಕೆಳಗಾಗಿ
ದ್ರೋಣನಾ ಬಳಿಬಂದು ನಿಂದಿಹರು ತಲೆತಗ್ಗಿ ॥೪೯೮॥

ಶಸ್ತ್ರಾಸ್ತ್ರ ಸಹಿತದಲಿ ಸನ್ನದ್ಧರಾಗುತಲಿ
ನಿಂತಿರ್ದ ಪಾಂಡವರು ಧಾವಿಸುತ ಪುರಹೊಕ್ಕು
ಎದುರಾಂತ ಸೈನಿಕರ ಕೊಚ್ಚುತಲಿ ಸಾಗುತಲಿ
ಗುರುವಿಂಗೆ ಈತನೇ ದಕ್ಷಿಣೆಯು ಎನ್ನುತಲಿ ॥೪೯೯॥

ದ್ರುಪದನನು ಓಡಿಯುತಲಿ ಹೆಡೆಮುರಿಗೆ ಕಟ್ಟುತಲಿ
ರಥದೊಳಗೆ ಇಕ್ಕುತಲಿ ಶೀಘ್ರದಲಿ ಐತಂದು
ದ್ರೋಣನಾ ಚರಣದಲಿ ದ್ರುಪದನನು ಒಗೆಯುತಲಿ
ಪಾಂಡವರು ನಿಂದಿಹರು ಕೃತಕೃತ್ಯರೆನಿಸುತಲಿ ॥೫೦೦॥

ಎಲವೆಲವೊ ಪಾಂಚಾಲ ಭೂಪತಿಯೆ ದ್ರುಪದನೆ
ಮುನ್ನಿನಲಿ ದರ್ಪದಲಿ ವಿಪ್ರರಿಗೆ ನೃಪರಿಂಗೆ
ಎತ್ತಣದ ಸಂಬಂಧ ಎನ್ನುತಲಿ ಎನ್ನನ್ನು
ನಿಂದಿಸುತ ಅಪಮಾನ ಗೈದುದನು ನೆನೆಯುವದು ॥೫೦೧॥

ತಲೆಗೇರ್ದ ನಿನ್ನಯಾ ಸೊಕ್ಕನ್ನು ಮುರಿಯಲಿಕೆ
ಐಶ್ವರ್ಯ ಮದದಿಂದ ಕೊಬ್ಬಿರುವ ನಿನ್ನನ್ನು
ತಿದ್ದುತಲಿ ಬುದ್ಧಿಯನು ವಿನಯವನು ಕಲಿಸಲಿಕೆ
ನಿನ್ನಯಾ ರಾಜ್ಯವನು ಗೆದ್ದಿಹೆವು ಯುದ್ಧದಲಿ ॥೫೦೨॥

ಐಶ್ವರ್ಯ ಲಾಲಸೆಯು ರಾಜ್ಯದಾ ಮೋಹವದು
ಎಳ್ಳನಿತು ಆಶೆಯೂ ಎಮಗಿಲ್ಲ ವಿಪ್ರರಿಗೆ
ಗಂಗೆಯಾ ಉತ್ತರದ ರಾಜ್ಯವದು ಎಮಗಿರಲಿ
ದಕ್ಷಿಣದ ರಾಜ್ಯವನು ನಿನಗಾಗಿ ಕೊಟ್ಟಿಹೆನು ॥೫೦೩॥

ನಿನ್ನನ್ನು ಜೀವಂತ ಬಿಟ್ಟಿಹೆನು ಕರುಣದಲಿ
ಪಾಂಡವರೆ ಭಂಡನಿಹ ಮೂರ್ಖನಿಹ ಇವನನ್ನು
ಬಂಧನವ ಬಿಡಿಸುತಲಿ ಬಿಟ್ಟುಬಿಡಿ ಎನ್ನುತಿರೆ
ಸೆರೆಯನ್ನು ಕಳಚುತಿರೆ ದುಗುಡದಲಿ ದ್ರುಪದನೃಪ ॥೫೦೪॥

**ಧೃಷ್ಟದ್ಯುಮ್ನ ಮತ್ತು ದ್ರೌಪದಿಯರ ಜನನ**

ಅಪಮಾನ ಸಹಿಸದಲೆ ಕೋಪದಲಿ ಕುದಿಯುತಲಿ
ತಾಪದಲಿ ಮರಳುತಲಿ ಪುರದೊಳಗೆ ತೆರಳದಲೆ
ಗಂಗೆಯಾ ತೀರದಲಿ ಕರೆಸುತಲಿ ಋತ್ವಿಜರ
ಲೋಕೈಕ ವೀರವನು ಪುತ್ರನನು ಪಡೆಯಲಿಕೆ ॥೫೦೫॥

ಪುತ್ರಕಾಮೇಷ್ಟಿ ಯನು ಯಜ್ಞವನು ಕೈಕೊಂಡು
ಭವ್ಯದಾ ಮಂಡಪವ ನಿರ್ಮಿಸುತ ಶೃಂಗರಿಸಿ
ವಿಸ್ತರದ ವೇದಿಕೆಯ ಮಧ್ಯದಲಿ ಸೊಗಯಿಸುವ
ಯಜ್ಞದಾ ಕುಂಡವನು ಶಾಸ್ತ್ರೋಕ್ತ ರಚಿಸಿದನು ॥೫೦೬॥

ಬಂಧುಗಳು ಬಾಂಧವರು ಆಪ್ತೇಷ್ಟ ಸ್ನೇಹಿತರು
ಅಗಣಿತದ ನೃಪರುಗಳು ಮಾಂಡಲಿಕ ಅರಸುಗಳು
ಮಂತ್ರಿಗಳು ಪುರಜನರು ವೇದಾಂತ ಪಂಡಿತರು
ತಂಡೋಪತಂಡದಲಿ ಅಧ್ವರಕೆ ಬಂದಿಹರು ॥೫೦೭॥

ಮಂಗಳದ ವಾದ್ಯಗಳು ಅಬ್ಬರದಿ ಮೊಳಗುತಿರೆ
ಮಂತ್ರಗಳ ಘೋಷಣೆಯು ಗಗನವನು ಮುಟ್ಟುತಿರೆ
ಪ್ರಜ್ವಲಿಪ ಅಗ್ನಿಯಲಿ ಘೃತಧಾರೆ ಸುರಿಯುತಿರೆ
ವಹ್ನಿಯಾ ಸೂಕ್ತದಲಿ ಹವಿಸನ್ನು ಅರ್ಪಿಸಲು ॥೫೦೮॥

ಧಗಧಗಿಸಿ ಭುಗಿಲೆನುತ ಮುಗಿಲನ್ನು ಮುದ್ದಿಡುವ
ತೆರದಲ್ಲಿ ಜ್ವಲಿಸುತಿಹ ಅಗ್ನಿಯಲಿ ಮಧ್ಯದಲಿ
ಛೇದಿಸುತ ಛಿಛಿಛಿಟಿಲು ಎನ್ನುತಲಿ ಘಸರಪದಿ
ಕವಚವನು ಕುಂಡಲ ಕಿರೀಟವನು ಧರಿಸಿರುವ ॥೫೦೯॥

ಕರದಲ್ಲಿ ಶಸ್ತ್ರಾಸ್ತ್ರ ಖಡ್ಗವನು ಹಿಡಿದಿರುವ
ಅತುಳಬುಜ ವಿಕ್ರಮನು ಬಲಯುತನು ಧಾರ್ಷ್ಟ್ಯನು
ಯುದ್ಧವನು ಗೈಯ್ಯಲಿಕೆ ಬಂದಿಹನೊ ಎಂಬಂತೆ
ರೌದ್ರದಾ ರೂಪದಲಿ ವೀರಸುತ ಜನಿಸಿಹನು ॥೫೧೦॥

ಅನಿತರಲಿ ಮೂಲೋಕ ಮೋಹಿಸುವ ಲಾವಣ್ಯ
ಸುರತೇಜ ಸೌಂದರ್ಯ ಕಾಂತಿಯಲಿ ಶೋಭಿಸುವ
ಸ್ವರ್ಗದಾ ದೇವತೆಯು ಧರೆಗಿಳಿದಳೆಂಬಂತೆ
ಅಗ್ನಿಯಾ ಮಧ್ಯದಲಿ ಅಗ್ನಿಸುತೆ ಜನಿಸಿಹಳು ॥೫೧೧॥

ಕರಿಕಾಯ ಕಾಂತಿಯಲಿ ಕರಿಯಾಲಿ ಬೆಳಕಿನಲಿ
ಕರಿನೀಳ ಕುಂತಳದಿ ಕಮಲದಳ ಪ್ರಭೆಯಲ್ಲಿ
ಮೇಘದಲಿ ಹೊಳೆಯುತಿಹ ಮಿಂಚಿನಾ ಲತೆಯಂತೆ
ವರಕೃಷ್ಣೆ ಲಲಿತಾಂಗಿ ಜನಿಸಿಹಳು ವಹ್ನಿಯಲಿ ॥೫೧೨॥

ಜಗದೊಳಿಹ ಸೌಂದರ್ಯ ಸರ್ವಸ್ವ ಸೇರಿಸುತ
ಎರಕವನು ಹೊಯ್ಯುತಲಿ ಬ್ರಹ್ಮನೇ ಸೃಜಿಸಿರುವ
ಚೆಲುವಿನಾ ಪುತ್ಥಳಿಯೋ ಎಂಬಂತೆ ಹೊಳೆಯುತಲಿ
ದಶದಿಶೆಯ ಬೆಳಗುತಲಿ ಕೃಷ್ಣಾಂಗಿ ಮೂಡಿಹಳು ॥೫೧೩॥

ದ್ರೋಣನನು ವಧಿಸಲಿಕೆ ಈ ವೀರ ಜನಿಸಿಹನು
ಕುರುವಂಶ ವನವನ್ನು ವಹ್ನಿಯಾ ಪರಿಯಲ್ಲಿ
ದಹಿಸಲಿಕೆ ಈ ಕನ್ಯೆ ಅಗ್ನಿಸುತೆ ಜನಿಸಿಹಳು
ಎನ್ನುತಲಿ ಅಶರೀರವಾಣಿಯದು ಮೊಳಗಿದುದು ॥೫೧೪॥

ದ್ರೋಣನನು ಕೊಲ್ಲಲಿಕೆ ವೀರಸುತನಿವನೆಂದು
ಫಲ್ಗುಣಗೆ ಈಯಲಿಕೆ ಸುತೆಯೀಕೆ ಎನ್ನುತಲಿ
ದ್ರುಪದನೃಪ ಸಂತಸದ ಸಾಗರದಿ ತೇಲುತಿರೆ
ಸಕಲಜನ ದ್ರುಪದನನು ಕೊಂಡಾಡಿ ಹರಸಿದರು ॥೫೧೫॥

ಶತ್ರುಗಳ ಧ್ವಂಸಿಸುವ ಧಾರ್ಷ್ಟ್ಯನಿಹನೆನ್ನುತಲಿ
ದೃಷ್ಟದ್ಯುಮ್ನ ಎಂಬುವಾ ನಾಮವನು ಪುತ್ರಂಗೆ
ಕೃಷ್ಣೆಯಾ ಕಾಂತಿಯಲಿ ಸೊಗಯಿಸುವ ಪುತ್ರಿಗೆ
ವರಕೃಷ್ಣೆ ಎನ್ನುತಲಿ ಹೆಸರುಗಳನಿಟ್ಟಿಹರು ॥೫೧೬॥

**ಧರ್ಮರಾಯನಿಗೆ ಯುವರಾಜ ಪದವಿಯನ್ನು ಕಟ್ಟುವದು**

ವರುಷವೊಂದು ಉರುಳುತಿರೆ ಇಭಪುರಿಯ ಪುರಜನವು
ಸಕಲಪ್ರಜೆ ಹರುಷದಲಿ ಧರ್ಮಜನು ಧರ್ಮವಿದ
ನಯವಿದನು ಅತಿಬಲನು ಸಂಯಮಿಯು ಸುಚರಿತನು
ಅವನಿಂಗೆ ಯುವರಾಜ ಪದವಿಯನು ಈಯುವುದು ॥೫೧೭॥

ಎನ್ನುತಲಿ ಧೃತರಾಷ್ಟ್ರ ಭೂಪತಿಗೆ ಅರುಹುತಿರೆ
ಭೀಷ್ಮಾದಿ ಸಕಲರು ಸಮ್ಮತಿಯನೀಯುತಿರೆ
ಸರಸದಲಿ ಧರ್ಮಜಗೆ ಯುವರಾಜ ಪದವಿಯನು
ಕಟ್ಟಿಹನು ಧೃತರಾಷ್ಟ್ರ ಸಕಲಪ್ರಜೆಗೋಸುಗವೆ ॥೫೧೮॥

ಬಳಿಕಲಾ ಕಲಿಭೀಮ ಬಲರಾಮನೆಡೆಯಲ್ಲಿ
ಗದೆ ಮುಸಲ ತಿರುಹುಗಳ ಹೊಡೆತಗಳ ವಿದ್ಯೆಯನು
ಹಿಡಿತದಲಿ ಮಲ್ಲದಲಿ ಮುಷ್ಟಿಯಲಿ ಪರಿಣತೆಯ
ಪಡೆದಿಹನು ಜಗದೊಳಗೆ ಅಪ್ರತಿಮ ಬಲನೆನಿಸಿ ॥೫೧೯॥

ನಾರಾಚ ಭಲ್ಲೆಗಳ ಕ್ಷುರಿಗಳಾ ಬಾಣಗಳ
ಅಗ್ನ್ಯಾಸ್ತ್ರ ವರುಣಾಸ್ತ್ರ ವಿವಿಧಾಸ್ತ್ರ ವಿದ್ಯೆಯಲಿ
ಪರಿಣತೆಯ ಪಡೆಯುತಲಿ ಫಲುಗುಣನು ಜಗದೊಳಗೆ
ಇವಗಾರು ಸಮರಿಲ್ಲ ಎಂದೆನಿಸಿ ಬೆಳಗಿದನು ॥೫೨೦॥

**ದ್ರೋಣರು ಅರ್ಜುನನಿಗೆ ಬ್ರಹ್ಮಶಿರ ಎಂಬ ಅಸ್ತ್ರವನ್ನು ಕೊಡುವುದು**

ಒಂದು ದಿನ ಗುರುದ್ರೋಣ ಕೌರವನ ಸಭೆಯೊಳಗೆ
ಎನ್ನ ಗುರು ವರಅಗ್ನಿವೇಶರಾ ದಿನದಲ್ಲಿ
ಎನಗಿತ್ತ ಬ್ರಹ್ಮಶಿರ ಎಂಬುವಾ ಘನಘೋರ
ಮೂಲೋಕ ಸುಡಬಲ್ಲ ಅದ್ಭುತದ ಹೊಳೆಹೊಳೆವ ॥೫೨೧॥

ದಿವ್ಯಾಸ್ತ್ರ ತೆಗೆಯುತಲಿ ಅರ್ಜುನಗೆ ಈಯುತಲಿ
ಬಲಹೀನ ಮಾನವರ ಮೇಲಿದನು ಎಂದಿಗೂ
ಸುಮ್ಮನೆ ಪ್ರಯೋಗವನು ಮಾಡದಿರು ಎನ್ನುತಲಿ
ನುಡಿಯುತಿರೆ ಸಕಲಜನ ಹೊಗಳಿದರು ಅರ್ಜುನನ ॥೫೨೨॥

ಗುರುವಿನಾ ಚರಣಕ್ಕೆ ಎರಗುತಲಿ ಅರ್ಜುನನು
ಕರಮುಗಿದು ನಿಲ್ಲುತಿರೆ ಈ ಅಸ್ತ್ರ ಧರಿಸಲಿಕೆ
ನೀ ಯೋಗ್ಯನಿಹೆ ಎಂದು ನಿನಗಿತ್ತೆ ಸಂತಸದಿ
ಎನಗಾವ ದಕ್ಷಿಣೆಯ ನೀನೀವೆ ಎಂದಿಹನು ॥೫೨೩॥

ಗುರುವರನೆ ಬೇಡಿದುದ ನಿಮಗೀವೆ ಖಚಿತದಲಿ
ಎನ್ನಯಾ ಪ್ರಾಣವನು ನಿಮಗೀವೆ ಎನ್ನುತಿರೆ
ನಿನ್ನೊಡನೆ ಯುದ್ಧದಲಿ ಎದುರಾಗಿ ಬಂದೊಡೆಯು
ಎನ್ನೊಡನೆ ಯುದ್ಧವನು ಗೈಯ್ಯುವುದು ಎನ್ನುತಿರೆ ॥೫೨೪॥

ಗುರುವಿನಾ ಇಚ್ಛೆಯದು ಈ ಪರಿಯು ಇರ್ದೊಡೆಯು
ಇವರಿಂದ ತಾವತುಳ ಸಂತಸವ ತಾಳ್ದೊಡೆಯು
ತಮ್ಮಯಾ ಆಜ್ಞೆಯನು ಪಾಲನೆಯಗೈಯ್ಯುವೆನು
ಎನ್ನುತಲಿ ಫಲುಗುಣನು ತಲೆಬಾಗಿ ನುಡಿದಿಹನು ॥೫೨೫॥

ಸಹದೇವ ಸುರಗುರು ಬೃಹಸ್ಪತಿಯ ಕೌಶಲದ
ನೀತಿಯಾ ಶಾಸ್ತ್ರವನು ಅಧ್ಯಯನ ಗೈಯ್ಯುತಲಿ
ದ್ರೋಣನಲಿ ಶಸ್ತ್ರಾಸ್ತ್ರ ಧನುರ್ವಿದ್ಯೆ ಕಲಿಯುತಲಿ
ವರಚಿತ್ರಯೋಧೀ ಎನ್ನುತಲಿ ಮೆರೆದಿಹನು ॥೫೨೬॥

ಯಜ್ಞವನು ಮಾಡುತಲಿ ಗಂಧರ್ವ ದಿವಿಜರನು
ಜಯಿಸಿರ್ದ ಬಲಶಾಲಿ ಸೌವೀರ ರಾಜನನು
ಅರ್ಜುನನು ಯುದ್ಧದಲಿ ಸಂಹಾರ ಗೈಯ್ಯುತಲಿ
ಮಹವೀರ ಎನ್ನುತಲಿ ಖ್ಯಾತಿಯನು ಪಡೆದಿಹನು ॥೫೨೭॥

ಪಾಂಡುದೊರೆ ಗೆಲ್ಲಲಿಕೆ ಅಸಮರ್ಥನಾಗಿರ್ದ
ಆ ಯವನ ರಾಜನನು ಫಲುಗುಣನು ಸೋಲಿಸುತ
ಸೌವೀರ ದೇಶದಾ ಮಗುದೊಬ್ಬ ದತ್ತನನು
ಮತ್ತೆ ಆ ಸುಮಿತ್ರನನ ವೀರನನು ಜಯಿಸುತಲಿ ॥೫೨೮॥

ದಕ್ಷಿಣದ ಮೂಡಣದ ನೃಪರುಗಳ ವಿಪುಳರನು
ಜಯಿಸುತಲಿ ಅಗಣಿತದ ಧನಕನಕ ಕೊಳ್ಳುತಲಿ
ಇಭಪುರದ ರಾಜ್ಯವನು ವಿಸ್ತರಣೆಗೈಯ್ಯುತಲಿ
ಕುರುವಂಶ ಕೀರ್ತಿಯಾ ದುಂದುಭಿಯ ಮೊಳಗಿಸಿದ ॥೫೨೯॥

ಎಲ್ಲೆಡೆಗೆ ಸಕಲಪ್ರಜೆ ಪಾಂಡವರ ಶೌರ್ಯವನು
ಧೈರ್ಯವನು ವಿಕ್ರಮದ ಗುಣಗಾನ ಮಾಡುತಿರೆ
ಪಾಂಡವರ ಕೀರ್ತಿಯದು ಜಗದೊಳಗೆ ಪಸರುತಿರೆ
ಅವರ ಆ ಅಭ್ಯುದಯ ಉತ್ಕರ್ಷ ಕೇಳುತಲಿ ॥೫೩೦॥

ಅಂಧನೃಪ ಧೃತರಾಷ್ಟ್ರ ಮನದೊಳಗೆ ಚಿಂತಿಸುತ
ಮತ್ಸರದ ಜ್ವಾಲೆಯದು ಹೊತ್ತುತಲಿ ಉರಿಯುತಲಿ
ಚಿಂತೆಯಾ ಚಿತೆಯಲ್ಲಿ ಬೇಯುತಲಿ ನವೆಯುತಲಿ
ರಾತ್ರಿಯಲಿ ನಿದ್ರೆಯದು ಬಾರದಲೆ ಹೊರಳುತಿರೆ ॥೫೩೧॥

**ಧೃತರಾಷ್ಟ್ರನ ಚಿಂತೆ ಮತ್ತು ಕಣಿಕನ ಉಪದೇಶ**

ಬಳಿಕಲಾ ಮಂತ್ರಿಯನು ಕಣಿಕನನು ಕರೆಸುತಲಿ
ಮನದೊಳಗೆ ಕೊರೆಯುತಿಹ ಚಿಂತೆಯನು ಅರುಹಿದನು
ಪಾಂಡವರ ಶೌರ್ಯ ಪ್ರತಾಪಗಳ ಕೀರ್ತಿಯದು
ಜಗದೊಳಗೆ ನಾಲ್ದೆಸೆಗೆ ಪಸರುತಿದೆ ದಿನದಿನದಿ ॥೫೩೨॥

ಎನ್ನಯಾ ಹೃದಯದಲಿ ಮಾತ್ಸರ್ಯ ದಾವಾಗ್ನಿ
ಜ್ವಲಿಸುತಲಿ ಎನ್ನನ್ನು ದಹಿಸುತಿದೆ ಕ್ಷಣಕ್ಷಣವು
ಪಾಂಡವರ ಜೊತೆಯಲ್ಲಿ ಎನಗಿಂದು ಸಂಧಾನ
ಇಲ್ಲದಿರೆ ವೈರತ್ವ ಯೋಗ್ಯವೇ ಹೇಳೆಂದ ॥೫೩೩॥

ನೀ ಪೇಳ್ದ ತೆರದಲ್ಲಿ ನಾನಡೆವೆ ಎನ್ನುತಿರೆ
ಧೃತರಾಷ್ಟ್ರ ಭೂಪತಿಯೆ ರಾಜರಿಗೆ ಹಿತವಿರುವ
ಅತಿಕಠಿಣ ಅತಿಕ್ರೂರ ನಿರ್ದಯೆಯ ನೀತಿಯನು
ನಿನಗೊರೆವೆ ಎನ್ನನ್ನು ನಿಂದನೆಯ ಗೈಯ್ಯದಿರು ॥೫೩೪॥

ನೃಪರುಗಳು ಸತತವು ದಂಡವನು ತೋರಿಸುತ
ದರ್ಪದಲಿ ನಡೆಯುವುದು ದುರ್ಬಲತೆ ತೋರಿಸದೆ
ದಿನದಿನವು ಗುಪ್ತದಲಿ ಶತ್ರುಗಳ ದೋಷಗಳ
ಚಲನಗಳ ವಲನಗಳ ಅರಿಯುವದು ಚರರಿಂದ ॥೫೩೫॥

ಆಮೆಯದು ಅಂಗಾಂಗವೆಲ್ಲವನು ಒಳಗೊಳಗೆ
ಇರಿಪಂತೆ ನಿನ್ನಯಾ ಆಶೆಗಳ ದ್ವೇಷಗಳ
ಮನದೊಳಗೆ ಇರಿಸುತಲಿ ಆರಿಗೂ ತಿಳಿಸದಲೆ
ನಿನ್ನಯಾ ಕಾರ್ಯವನು ಸಾಧಿಪುದು ಕೌಶಲದಿ ॥೫೩೬॥

ಪ್ರಜೆಗಳಾ ವಿಶ್ವಾಸ ಪ್ರೀತಿಯನು ಗಳಿಸಲಿಕೆ
ಯಜ್ಞಗಳ ಯಾಗಗಳ ದಾನಗಳ ಮಾಡುವುದು
ಕೆರೆಕೊಳವ ಕಟ್ಟುವುದು ಛತ್ರಗಳನಿರಿಸುವುದು
ನಿಲಯಗಳ ನಿರ್ಮಿಪುದು ನೃಪನೀತಿ ಕೇಳೆಂದ ॥೫೩೭॥

ವೇದಗಳ ವಿದುಷರನು ವಿಪ್ರರನು ವಿಬುಧರನು
ಕವಿಗಮಕಿ ವಾಗ್ಮಿಗಳ ಸಾಹಿತ್ಯ ಕೋವಿದರ
ಸಂಗೀತ ಪರಿಣತರ ನೃತ್ಯದಲಿ ನಿಪುಣರನು
ಸನ್ಮಾನ ಗೈಯ್ಯುವದು ನೃಪರಿಂಗೆ ಭೂಷಣವು ॥೫೩೮॥

ಶತ್ರುಗಳು ಸಂಕಟದಿ ಸಿಲುಕುತಲಿ ತೊಳಲುತಿರೆ
ಸೆರೆಯೊಳಗೆ ಸಿಕ್ಕಿರಲು ಕರುಣೆಯನು ತೋರದಲೆ
ಯೋಚಿಸದೆ ಸಂಹಾರ ಗೈಯ್ಯುವುದು ಯೋಗ್ಯವಿದು
ಎನ್ನುತಲಿ ನೀತಿಜ್ಞರೊರೆಯುವರು ಕೇಳೆಂದ ॥೫೩೯॥

ನಿನಶತ್ರು ಚಿಕ್ಕವನು ಬಾಲಕನು ಎನ್ನುತಲಿ
ಸಮಯವನು ಕಳೆಯದಲೆ ಯೋಚಿಸದೆ ಕೊಲ್ಲುವುದು
ಹಾವಿನಾ ಮರಿಯೊಂದು ಹೆಬ್ಬಾವು ಆಗುತಲಿ
ಬೆಳೆಯುತಲಿ ನರನನ್ನು ನುಂಗದೇ ಇರುತಿಹುದೆ ॥೫೪೦॥

ನಾಗಮರಿ ಬೆಳೆಯುತಲಿ ಕಚ್ಚದೇ ಇರುತಿಹುದೆ
ಕಿಡಿಯೊಂದು ಹೊತ್ತುತಲಿ ಕಾಡನ್ನು ಸುಡದಿಹುದೆ
ನಿನಶತ್ರು ಶಿಶುವಿಹನು ಎನ್ನುತಲಿ ಯೋಚಿಸದೆ
ನಿರ್ದಯದಿ ಕೊಲ್ಲುವುದು ನೃಪನೀತಿ ಕೇಳೆಂದ ॥೫೪೧॥

ಬೇರಿನಾ ಸಹಿತದಲಿ ವಿಷವೃಕ್ಷ ಕೊಯ್ವಂತೆ
ಪುತ್ರಾದಿ ಸಹಿತದಲಿ ಶತ್ರುಗಳ ಕೊಲ್ಲುತಲಿ
ರಾಜ್ಯವನು ಗೆಲ್ಲುತಲಿ ಅಧಿಕಾರ ವರ್ಗವನು
ಧನಕನಕವೀಯುತಲಿ ವಶಮಾಡಿಕೊಳ್ಳುವುದು ॥೫೪೨॥

ಸಕಲರಲಿ ಪ್ರೀತಿಯನು ಆದರವ ತೋರುವುದು
ಒಬ್ಬನಾ ದ್ವೇಷವನು ನೀ ಕಟ್ಟಿಕೊಂಡೊಡೆಯು
ಬೆಂಕಿ ಕಿಡಿ ಘನಘೋರ ಕಾನನವ ಸುಡುವಂತೆ
ನಿನ್ನಯಾ ರಾಜ್ಯವನು ಎಲ್ಲವನು ದಹಿಸುವುದು ॥೫೪೩॥

ಹೊರಗಡೆಗೆ ಹುಸಿನಗೆಯ ತೋರ್ವಂತೆ ಸೂಸುತಲಿ
ಮನದೊಳಗೆ ಹಗೆತನವ ಹುಗಿದಿರಿಸಿ ಗುಪಿತದಲಿ
ಪ್ರೀತಿಯನು ತೋರುತಲಿ ತೋಳಿನಲಿ ಅಪ್ಪುತಲಿ
ಶತ್ರುಗಳ ಬೆನ್ನಿನಲಿ ಇರಿಯುವುದು ನೃಪನೀತಿ ॥೫೪೪॥

ನಿನಗಿಂತ ಶತ್ರುಗಳು ಬಲವಾಗಿ ಇರ್ದೊಡೆಯು
ಸಖ್ಯವನು ಬೆಳೆಸುತಲಿ ನಿನ್ನೆಡೆಗೆ ಕರೆಸುತಲಿ
ಆದರದಿ ಸತ್ಕರಿಸಿ ಮೃಷ್ಟಾನ್ನವೀಯುತಲಿ
ವಿಷವಿಕ್ಕಿ ಕೊಲ್ಲುವುದು ನೃಪನೀತಿ ಕೇಳೆಂದ ॥೫೪೫॥

ನಿನ್ನಯಾ ಶತ್ರುಗಳ ದ್ವೇಷಿಸುವ ವೈರಿಗಳ
ಜೊತೆಯಲ್ಲಿ ಮಿತ್ರತ್ವ ಬೆಳೆಸುತಲಿ ಒಂದಾಗಿ
ಶತ್ರುವನು ಮುತ್ತುತಲಿ ರಾಜ್ಯವನು ಜಯಿಸುವುದು
ರಾಜರಾ ನೀತಿಯದು ಭೂಪಾಲ ಕೇಳೆಂದ ॥೫೪೬॥

ಅಸಮರ್ಥ ನಿರ್ಬಲನು ನಿಶ್ಶಕ್ತ ನೀನಿರಲು
ವೈರಿಗಳು ನಿನ್ನೊಡನೆ ಯುದ್ಧಕ್ಕೆ ಬಂದಿರಲು
ನಮ್ರತೆಯ ತೋರುತಲಿ ಶರಣಾಗಿ ಒಪ್ಪುತಲಿ
ಸಂಧಿಯನು ಕೊಳ್ಳುವುದು ನೃಪನೀತಿ ಕೇಳೆಂದ ॥೫೪೭॥

ಸಾಮದಲಿ ದಾನದಲಿ ದಂಡದಲಿ ಬೇಧದಲಿ
ಅವುದೇ ಮಾರ್ಗದಲಿ ಶತ್ರುವನು ಜಯಿಸುವುದು
ಇಲ್ಲದಿರೆ ಎಲ್ಲವನು ಯೋಜಿಸುತ ಶತ್ರುವನು
ನಾಶವನು ಪಡಿಸುವದು ಯೋಗ್ಯವದು ಕೇಳೆಂದ ॥೫೪೮॥

ಮನದೊಳಿಹ ತಾಪವನು ಕೋಪವನು ತೋರದಲೆ
ಸವಿನುಡಿಯ ನುಡಿಯುತಲಿ ಮುಗುಳ್ನಗೆಯ ಸೂಸುತಲಿ
ಶತ್ರುವಿನ ಜೊತೆಯಲ್ಲಿ ಸೌಜನ್ಯ ತೋರುತಲಿ
ಬೆನ್ನಿನಲಿ ಅಲಗನ್ನು ಇರಿಯುವದು ನೃಪನೀತಿ ॥೫೪೯॥

ಯುದ್ಧವನು ಗೈಯ್ಯುತಲಿ ರಿಪುಗಳನು ದಣಿಸುತಲಿ
ಆಹಾರ ನೀರುಗಳು ಅರಿಗಳಿಗೆ ಸಿಗದಂತೆ
ದಾರಿಗಳ ಮುಚ್ಚುತಲಿ ಉಪವಾಸ ಕೆಡಹುತಲಿ
ಮುತ್ತುತಲಿ ಶತ್ರುಗಳ ಸಂಹಾರ ಗೈಯ್ಯುವುದು ॥೫೫೦॥

ಶತ್ರುಗಳ ವಿಷಯದಲಿ ಎಳ್ಳನಿತು ಕರುಣೆಯನು
ತೋರದಲೆ ರಿಪುಗಳಾ ರುಂಡಗಳ ಮುಂಡಗಳ
ಕ್ಷುರದಿಂದ ಕೇಶವನು ಕತ್ತರಿಪ ಪರಿಯಲ್ಲಿ
ಛೇದಿಸುತ ಕೆಡಹುವುದು ನೃಪನೀತಿ ಕೇಳೆಂದ ॥೫೫೧॥

ಗಡಿಯಲ್ಲಿ ಪುರದಲ್ಲಿ, ಬೀದಿಯಲಿ, ಕೋಟೆಯಲಿ
ಉದ್ಯಾನವನಗಳಲಿ ಗುಡಿಗಳಲಿ ಗುಡಿಸಲಲಿ
ನೆರೆಹೊರೆಯ ರಾಜ್ಯದಲಿ ಗೂಢದಲಿ ಚರರನ್ನು
ಕಳಿಸುತಲಿ ವೃತ್ತಾಂತವರಿಯುವುದು ಕೇಳೆಂದ ॥೫೫೨॥

ನೀ ಗೈವ ಕಾರ್ಯವನು ಆರಿಗೂ ಉಸುರದಿರು
ನಿನ್ನಂತರಂಗದಲಿ ಇರುತಿರುವ ಗೌಪ್ಯವನು
ಹೆಂಡತಿಗೆ ಮಕ್ಕಳಿಗೆ ಮತ್ತೊಬ್ಬರಾರಿಗೂ
ಹೇಳದಲೆ ಕಾರ್ಯವನು ಮಾಡುವುದು ಕೇಳೆಂದ ॥೫೫೩॥

ಮನೆಯೊಳಗೆ ಬಂಧುಗಳು ಬಾಂಧವರು ಸೋದರರು
ಸತಿಸುತರು ಎಲ್ಲರೂ ನಿನ್ನಯಾ ವೈರಿಗಳು
ಧನಕನಕ ಐಶ್ವರ್ಯ ರಾಜ್ಯದಾ ಸಂಪದಕೆ
ನಿನ್ನನ್ನೆ ಕೊಲ್ಲುವರು ಭೂಪಾಲ ಕೇಳೆಂದ ॥೫೫೪॥

ಅಣ್ಣನಿವ ತಮ್ಮನಿವ ಮಾವ ಇವ ಮಗನು ಇವ
ಇವಳು ಸತಿ ಇವಳು ಸುತೆ ಎನ್ನುತಲಿ ಮೋಹದಲಿ
ಅತಿಪ್ರೀತಿ ಗೈಯ್ಯದಲೆ ನಂಬದಿರು ಎಚ್ಚರಿರು
ಅರಸರಿಗೆ ಬಂಧುಗಳೆ ವೈರಿಗಳು ಕೇಳೆಂದ ॥೫೫॥

ಪಾಂಡವರು ನಿನ್ನಯಾ ಸೋದರನ ಸುತರಿಹರು
ತಂದೆಯನು ಕಳಕೊಂಡ ತಬ್ಬಲಿಗಳಾಗಿಹರು
ನಿನ್ನಯಾ ಸುತರಂತೆ ಸಮಭಾವ ಪ್ರೀತಿಯಲಿ
ನೋಡುವುದು ಸಲುಹುವುದು ನಿನ್ನಯಾ ಧರ್ಮವಿದೆ ॥೫೬॥

ಅವರೊಳಗೆ ಕಲಿಭೀಮ ಬಹುಕೋಪಿ ಅತಿಬಲನು
ಫಲುಗುಣನು ಅಪ್ರತಿಮ ಬಿಲುವಿದ್ಯೆ ಶೂರನಿಹ
ಇಬ್ಬರೂ ಮೂಲೋಕ ಜಯಿಸುವಾ ಬಲವುಳ್ಳ
ಅದ್ಭುತ ಪರಾಕ್ರಮದ ಖ್ಯಾತಿಯನು ಪಡೆದಿಹರು ॥೫೭॥

ಪಾಂಡವರ್ಗೆ ಕೌರವರ್ಗೆ ಇತ್ತಂಡ ವರ್ಗಕ್ಕೆ
ಭೇದವನು ಮಾಡದಲೆ ಹಿತವಿರುವ ಕ್ಷೇಮವಿಹ
ಕಾರ್ಯವನು ಯೋಚಿಸುತ ಜಾಣ್ಮೆಯಲಿ ಮಾಡುವುದು
ಇಲ್ಲದಿರೆ ನಿಮಗೆಲ್ಲ ಕೇಡಹುದು ಕೇಳೆಂದ ॥೫೮॥

ಗದೆಯಿಂದ ಕಲಿಭೀಮ ಕುರುಕುಲದ ವನವನ್ನು
ಬೇರಿನಾ ಸಹಿತದಲಿ ಧ್ವಂಸವನು ಮಾಡುವನು
ಫಲುಗುಣನು ಕಿಚ್ಚಿಟ್ಟು ಕಾನನವ ಸುಡುವಂತೆ
ಕೌರವ ಕುಲಾನ್ವಯವ ದಹಿಸುವನು ಕೇಳೆಂದ ॥೫೯॥

ನಿನಗಿನಿತು ನೃಪರುಗಳ ನೀತಿಯನು ಪೇಳಿಹೆನು
ನಿನ್ನಯಾ ಬುದ್ಧಿಯಲಿ ತೂಗುತಲಿ ನೋಡುತಲಿ
ಸರಿಯೆನಿಪ ಕ್ಷೇಮಕರ ಕಾರ್ಯವನು ಗೈಯ್ಯುವುದು
ಎನ್ನುತಲಿ ಕಣಿಕನು ನಿಜನಿಲಯಕ್ಕೈದಿದನು ॥೬೦॥

ಪಾಂಡವರು ಕೌರವರ ನಿಜವಾದ ಶತ್ರುಗಳು
ಅವರಿರುವ ಪರ್ಯಂತ ಕೌರವರ್ಗೆ ಸುಖವಿಲ್ಲ
ಎನ್ನುತಲಿ ಯೋಚಿಸುತ ಮಾರ್ಗವನು ಕಾಣದಲೆ
ಚಿಂತೆಯೆಂಬ ಕಡಲೊಳಗೆ ಮುಳುಗಿದನು ಧೃತರಾಷ್ಟ್ರ ॥೬೧॥

ಇತ್ತಲಾ ಕೌರವನು ಪಾಂಡವರು ಶೌರ್ಯದಲಿ
ದ್ರುಪದನನು ಸೆರೆಹಿಡಿದು ಗುರುದ್ರೋಣಗೀಯುತಿರೆ
ತನ್ನಯಾ ಪರಿಭವವ ಮನದೊಳಗೆ ನೆನೆಯುತಿರೆ
ದ್ವೇಷದಾಜ್ವಾಲೆಯದು ಹೊತ್ತುತಲಿ ಉರಿದಿಹುದು ॥೬೨॥

ಧೃತರಾಷ್ಟ್ರ ಧರ್ಮಜಗೆ ಯುವರಾಜ ಪಟ್ಟವನು
ಕಟ್ಟುತಲಿ ಸಂಭ್ರಮದಿ ಉತ್ಸವವ ಗೈಯ್ಯುತಿರೆ
ಪುರಜನರು ಪಾಂಡವರ ಶೌರ್ಯಪ್ರತಾಪಗಳ
ಸದ್ಗುಣವ ಕೀರ್ತಿಯನು ಕೊಂಡಾಡಿ ಹೊಗಳುತಿರೆ ॥೬೩॥

ಕಿವಿಯೊಳಗೆ ಸೀಸಕದ ಎರಕವನು ಹೊಯ್ದಂತೆ
ಕೌರವನು ಕಳವಳಿಸಿ ತಳಮಳಿಸಿ ಕುದಿಯುತಲಿ
ಕರ್ಣನನು ಶಕುನಿಯನು ಜಯದ್ರಥಾದ್ಯರನು
ದೂತರರನಟ್ಟುತಲಿ ಕರೆಸುತಲಿ ಭರದಲ್ಲಿ ॥೬೪॥

ಬಲ್ಲರೈ ಪಾಂಡವರ ಗುಣಗಳನು ಧರ್ಮವನು
ಶೌರ್ಯವನು ಪುರಜನರು ಸಕಲರೂ ಹೊಗಳುವರು
ಧರ್ಮಜಗೆ ಯುವರಾಜ ಪದವಿಯನು ಇತ್ತಿಹರು
ಇಂತಿರಲು ನಾನೆಂತು ನೋಡುತಲಿ ಜೀವಿಪುದು ॥೬೫॥

ದಾಯಾದಿ ಮಧ್ಯದಲಿ ಅಪಮಾನ ಸಹಿಸುತಲಿ
ಜೀವಿಪುದು ಕಷ್ಟಕರ ಮರಣವೇ ಲೇಸೆನಗೆ
ನೀವೆಮಗೆ ಮಾರ್ಗವನು ತೋರಿಪುದು ಎನ್ನುತಲಿ
ಕೌರವನು ನುಡಿಯುತಿರೆ ಸಖಕರ್ಣ ನುಡಿದಿಹನು ॥೬೬॥

ಕುರುರಾಯ ಇದಕೇಕೆ ಇನಿತೊಂದು ಚಿಂತಿಪುದು
ಅರಿಗಳಾ ಪಾಂಡವರ ಐವರಾ ಶಿರಗಳನು
ಎಲೆಗಳನು ತರಿವಂತೆ ತರಿಯುತಲಿ ನಿಮಿಷದಲಿ
ನಿನ್ನಯಾ ಚರಣಕ್ಕೆ ಅರ್ಪಿಸುವೆ ಕೇಳೆಂದ ॥೬೭॥

ಹರಿಹರರು ಬ್ರಹ್ಮಾದಿ ಸುರವೃಂದ ಒಂದಾಗಿ
ಅಡಹಾಯ್ದು ಎನ್ನೊಡನೆ ಯುದ್ಧವನು ಮಾಡಿದರೆ
ಶೌರ್ಯದಲಿ ಜಯಿಸುತಲಿ ಉಬ್ಬಸವ ಮಾಡುವೆನು
ಎನ್ನಯಾ ಬಿಲುವಿದ್ಯೆ ಜಾಣ್ಮೆಯನು ನೋಡೆಂದ ॥೬೮॥

ಅರ್ಜುನನ ಕರುಳನ್ನು ಬಾಣದಲಿ ತೋರತೆಗೆದು
ಗಗನದಾ ಮಂಟಪಕೆ ತೋರಣವ ಕಟ್ಟುವೆನು
ಭೀಮನಾ ರುಂಡವನು ಛೇದಿಸುತ ನೆಗೆಸುತಲಿ
ಯಮಸದನಕಟ್ಟುವೆನು ಕುರುರಾಯ ಕೇಳೆಂದ ॥೬೯॥

ಗುರುದ್ರೋಣ ಭೀಷ್ಮಾದಿ ಸಕಲರೂ ನಿನ್ನಲ್ಲಿ
ಅನ್ನವನು ಉಣ್ಣುತಲಿ ಪಾಂಡವರ ಪ್ರೀತಿಪರು
ನಿನ್ನಯಾ ಅನ್ನವನು ಉಂಡಿರುವ ಎನ್ನಯಾ
ಪ್ರಾಣವನು ನಿನಗಾಗಿ ಅರ್ಪಿಸುವೆ ಕೇಳೆಂದ ॥೭೦॥

ಅಹುದಹುದು ರಾಧೇಯ ನುಡಿದ ನುಡಿ ನಿಜವಿಹುದು
ಆದೊಡೆಯು ಪಾಂಡವರ ಕೊಂದೊಡೆಯು ಸಕಲ ಪ್ರಜೆ
ಎಮ್ಮನ್ನು ಕೊಲ್ಲದೊಡೆ ಎಂದಿಗೂ ಬಿಡದಿಹರು
ಎನ್ನುತಲಿ ಆ ಶಕುನಿ ಕೌರವಗೆ ನುಡಿದಿಹನು ॥೫೭೨॥

ತಮಗಿಷ್ಟವಾದೊಡೆಯು ಪೇಳುವೆನುಪಾಯವನು
ಜನರೊಳಗೆ ಆ ಭೀಮ ಅತಿಬಲನು ಎನಿಸಿಹನು
ರುದ್ರನೇ ಭೂಮಿಯೊಳು ಅವತಾರ ಗೈದಿಹನು
ಎನ್ನುವರು ಸಕಲಜನ ಗೆಲ್ಲುವದು ಕಷ್ಟವಿದೆ ॥೫೭೩॥

ಜಗದೊಳಗೆ ಮೂವರೇ ಧನುರ್ವಿದ್ಯೆ ಪರಿಣತರು
ಮೂವರಾ ಗುಣ ಮೂರು ಒಬ್ಬನೊಳು ಇರುತಿರುವ
ಫಲುಗುಣನ ಜಯಿಸಲಿಕೆ ಮೂಜಗದೊಳೊಬ್ಬರನು
ನಾ ಕಾಣೆ ಯೋಚಿಪುದು ಕುರುರಾಯ ಕೇಳೆಂದ ॥೫೭೪॥

ಮರವಾಗಿ ಬಗ್ಗದ್ದು ಗಿಡವಾಗಿ ಬಗ್ಗೀತೆ
ಸಸಿಯಾಗಿ ಇರುತಿರುವ ಸಮಯದಲಿ ಕಿತ್ತೆಸೆದು
ಹಸನವನು ಗೈಯ್ಯುವಾ ಪರಿಯಲ್ಲಿ ಪಾಂಡವರ
ಈಗಲೇ ನಿರ್ಮೂಲಗೈಯ್ಯುವುದು ನಿನಗುಚಿತ ॥೫೭೫॥

ಭೂಮಿಯಲಿ ಪಾಂಡವರು ಜೀವದಲಿ ಇಹತನಕ
ಶಿರಮೇಲೆ ಖಡ್ಗವದು ತೂಗುತಿಹ ಪರಿಯಲ್ಲಿ
ನಿನಗೆನಿತು ಸುಖವಿಲ್ಲ ದಿನ ರಾತ್ರಿ ಚಿಂತಿಸುತ
ಕಾಲವನು ಕಳೆಯುವದು ತಪ್ಪದದು ಕೇಳೆಂದ ॥೫೭೬॥

ಕಷ್ಟದಲಿ ಸಿಲುಕಿರ್ದ ಸಮಯದಲಿ ಶತ್ರುಗಳ
ಸಂಹಾರಗೈಯ್ಯುವದು ರಾಜರಾ ನೀತಿಯಿದು
ಈಗಲೇ ಪಾಂಡವರ ನಾಶವನು ಮಾಡದಿರೆ
ಮುಂದಕ್ಕೆ ಘೋರತರ ಕಷ್ಟವದು ನಿನಗೆಂದ ॥೫೭೭॥

ಅಣ್ಣನಿವ ತಮ್ಮನಿವ ದಾಯಾದಿ ಬಂಧುಗಳು
ಎನ್ನುತಲಿ ಮೋಹವನು ಮಾಡದಲೆ ನಿರ್ದಯದಿ
ನಿರ್ನಾಮಗೈಯ್ಯುವದು ರಾಜರಾಧರ್ಮವಿದು
ಬಂಧುಗಳೆ ರಾಜರಿಗೆ ವೈರಿಗಳು ಕೇಳೆಂದ ॥೫೭೮॥

ಹುಳುವೊಂದು ಗೆದ್ದಲವು ಒಳಗೊಳಗೆ ಕೊರೆಯುತಲಿ
ಭವ್ಯದಾ ಮನೆಯನ್ನು ಮಣ್ಣಾಗಿ ಮಾಳ್ಪಂತೆ
ಸವಿನುಡಿಯ ನುಡಿಯುತಲಿ ಐವರಾ ಪಾಂಡವರ
ನಾಶವನು ಮಾಡುವುದು ನಿನಗುಚಿತ ಕೇಳೆಂದ ॥೫೭೯॥

ಆವ ಪರಿ ಪಾಂಡವರ ನಿರ್ನಾಮ ಗೈಯ್ಯುವುದು
ಹೇಳೆಂದು ಕುರುರಾಯ ಕಾತರದಿ ಕೇಳುತಿರೆ
ಕುಂತಿಯಾ ಸಹಿತದಲಿ ಪಾಂಡವರ ಐವರನು
ಆ ವಾರಣಾವತಕೆ ನಯದಿಂದ ಕಳುಹುತಲಿ ॥೫೮೦॥

ಗುಪಿತದಲಿ ರಚಿಸಿರುವ ಅರಗಿನಾ ಮನೆಯೊಳಗೆ
ಇರಿಸುತಲಿ ಬೆಂಕಿಯನು ಇಕ್ಕುತಲಿ ಕೊಲ್ಲುವುದು
ಉರಿಯೊಳಗೆ ಪಾಂಡವರು ಮರಣವನು ಹೊಂದಿದರು
ಎನ್ನುತಲಿ ಪುರಜನರು ನಂಬುತಲಿ ನುಡಿಯುವರು ॥೫೮೧॥

ಧೃತರಾಷ್ಟ್ರ ರಾಯಂಗೆ ಕೌಶಲದಿ ಅರುಹುತಲಿ
ವಾರಣಾವತ ಪುರಕೆ ಪಾಂಡವರ ಕಳುಹಿಪುದು
ಎನ್ನುತಲಿ ಆ ಶಕುನಿ ದುರ್ಯೋಧನಂಗರುಹೆ
ತಂದೆಯೆಡೆ ಬಂದಿಹನು ಕುರುರಾಯ ಶೀಘ್ರದಲಿ ॥೫೮ ॥

ಬಾಕಂದ ಕುರುರಾಯ ಬಂದಿರುವ ಕಾರಣವ
ಅರುಹುವುದು ಎನ್ನುತಲಿ ಅಂಧನೃಪ ನುಡಿಯುತಿರೆ
ನೀವೆನ್ನ ಮಾತನ್ನು ನಡೆಸುವುದು ಆದೊಡೆಯು
ತಿಳಿಸುವೆನು ಎನ್ನುತಲಿ ಕೌರವನು ನುಡಿಯುತಿರೆ ॥೫೮೩॥

ನಿನ್ನಯಾ ಮಾತನ್ನು ಸಂತಸದಿ ನಡೆಸುವೆನು
ನೀ ಸುಖದೊಳಿರ್ದೊಡೆಯು ಅದುವೆನಗೆ ಸುಖವಿಹುದು
ಬೇಗನೇ ಹೇಳೆಂದು ಅಂಧನೃಪ ನುಡಿಯುತಿರೆ
ಕೌರವನು ನುಡಿದಿಹನು ನಾಟಕದ ದುಃಖದಲಿ ॥೫೮೪॥

ಬಲ್ಲಿರೈ ಪುರಜನರು ಪಾಂಡವರ ಹೊಗಳುವರು
ಎಲ್ಲೆಡೆಗೆ ಪಾಂಡವರ ಗುಣಗಳನು ಸ್ತುತಿಸುವರು
ಮೇಲಾಗಿ ಯುವರಾಜ ಪದವಿಯನು ನಿಮ್ಮಯಾ
ಸೋದರನ ಮಗನಿಂಗೆ ಧರ್ಮಜಗೆ ಕಟ್ಟಿದಿರಿ ॥೫೮೫॥

ನೂರೊಂದು ಮಕ್ಕಳನು ನಿಷ್ಫಲದಿ ಹಡೆಯುತಲಿ
ಗಾಂಧಾರಿ ತಾಯೊಡಲ ಕೆಡಿಸಿದಿರಿ ವ್ಯರ್ಥದಲಿ
ಮಕ್ಕಳಾಕ್ಷೇಮವನು ಅಭ್ಯುದಯ ಯೋಚಿಸದ
ಆ ಪಿತೃವು ಪಿತೃವೆಂದು ಎನಿಸುವನೆ ಜಗದೊಳಗೆ ॥೫೮೬॥

ಮುಂದಕ್ಕೆ ಹಸ್ತಿನದ ರಾಜ್ಯವದು ಸಂಪದವು
ಧರ್ಮಜನ ಪುತ್ರರಿಗೆ ಪೌತ್ರರಿಗೆ ಹೋಗುವುದು
ಧರ್ಮಜಗೆ ಕೈಯೊಡ್ಡಿ ಭಿಕ್ಷೆಯನು ಬೇಡುತಲಿ
ಅನ್ನವನು ತಿನ್ನುವಾ ಗತಿಯಾಯ್ತು ನಮಗೆಲ್ಲ ॥೫೮೭॥

ನಿಮ್ಮಯಾ ನೂರ್ವರನು ಮಕ್ಕಳನು ನೂಕುತಲಿ
ಅಡವಿಯಾ ಪಾಲಾಗಿ ಮಾಡಿದಿರಿ ನಿರ್ದಯದಿ
ನಾವಿನ್ನು ಭಿಕ್ಷೆಯನು ಬೇಡುತಲಿ ತಿರುಗುತಲಿ
ಅಡವಿಯೊಳು ವಾಸಿಪೆವು ಇಲ್ಲದಿರೆ ಸಾಯುವೆವು ॥೪೮೮॥

ನೀವಿನ್ನು ಪಾಂಡವರ ಜೊತೆಯಲ್ಲಿ ಸುಖವಾಗಿ
ಸಂತಸದಿ ಕಾಲವನು ಕಳೆಯುತಲಿ ಜೀವಿಪುದು
ನಾವಿನ್ನು ಅವುದೋ ಹಾಳಾದ ಭಾವಿಯನು
ನದಿಯನ್ನು ಬೀಳುತಲಿ ಪ್ರಾಣವನು ತೊರೆಯುವೆವು ॥೫೮೯॥

**ಮಕ್ಕಳಾ ಕುಹಕದಲಿ ಧೃತರಾಷ್ಟ್ರ ಭೂಪತಿಯು**
**ಪಾಂಡವರ ಕಳುಹಿದನು ಆ ವಾರಣಾವತಕೆ**

ಬಾ ಎನ್ನ ಜೀವದಾ ಮೋಹದಾ ಕುವರನೆ
ನಿನ್ನನ್ನು ತೊರೆಯುತಲಿ ನಾನೆಂತು ಬೇವಿಪೆನು
ನಿನ್ನುಳಿದ ಜಗವೆಲ್ಲ ಶೂನ್ಯವದು ಎನಿಸುವುದು
ನಿನ್ನಯಾ ಇಚ್ಛೆಯನು ಸಲಿಸುವೆನು ಎನ್ನುತಿರೆ ॥೫೯೦॥

ಎನ್ನಯಾ ಆಶೆಯನು ಸಲಿಸುವದು ಆದೊಡೆಯು
ಪಾಂಡವರ ಐವರನು ಆ ವಾರಣಾವತಕೆ
ನಿರ್ದಯದಿ ಅಟ್ಟಿದೊಡೆ ನಮಗದುವೆ ಕ್ಷೇಮವದು
ಇಲ್ಲದಿರೆ ಅವರಿಂದ ಕೇಡಹುದು ನಿಶ್ಚಿತವು ॥೫೯೧॥

ನೀನೊಪ್ಪದಿರ್ದೊಡೆಯು ನಾವುಗಳು ನೂರ್ವರೂ
ಕಾನನವ ಸೇರುತಲಿ ಪ್ರಾಣವನು ನೀಗುವೆವು
ನೀವುಗಳು ಪಾಂಡವರ ಜೊತೆಯಲ್ಲಿ ಸುಖಿಸುವುದು
ನಮ್ಮನ್ನು ಬೀಳ್ಕೊಡುವುದೆನ್ನುತಲಿ ನುಡಿದಿಹನು ॥೫೯೨॥

ಈ ತೆರದಿ ಕುರುರಾಯ ಕಣ್ಣೀರ ಸುರಿಸುತಲಿ
ನುಡಿಯುತಿರೆ ಚಿಂತಿಸುತ ಧೃತರಾಷ್ಟ್ರ ಯೋಚಿಸುತ
ಬಂಧುಗಳು ಶತ್ರುಗಳು ಎನ್ನುತಲಿ ಕರಣಿಕನು
ನುಡಿದಿರುವ ನುಡಿಗಳನು ನೆನೆಯುತಲಿ ನುಡಿದನು ॥೫೯೩॥

ಪಾಂಡುನೃಪ ಪ್ರಜೆಗಳನು ಮಕ್ಕಳಾ ಪರಿಯಲ್ಲಿ
ಪ್ರೇಮದಲಿ ಧರ್ಮದಲಿ ಪಾಲನೆಯ ಗೈದಿಹನು
ಪಾಂಡುವಿನ ಮಕ್ಕಳಿಗೆ ಅಹಿತವನು ಮಾಡಿದರೆ
ಸಕಲ ಪ್ರಜೆ ನಮ್ಮನ್ನು ಕೊಲ್ಲುವರು ಎಂದಿಹನು ॥೫೯೪॥

ಚಿಂತೆಯನು ಮಾಡದಿರು ನಾನಿದನು ಯೋಚಿಸುತ
ಸೈನಿಕರ್ಗೆ ಸಚಿವರಿಗೆ ಅಧಿಕಾರಿ ವರ್ಗಕ್ಕೆ
ಸರ್ವರಿಗೆ ಧನಕನಕವೀಯುತಲಿ ಒಲಿಸಿಹೆನು
ಸರ್ವರೂ ನಮ್ಮಯಾ ವಶದೊಳಗೆ ಇರುತಿಹರು ॥೫೯೫॥

ಏನಾದರೊಂದನ್ನು ಕಾರಣವ ಮಾಡುತಲಿ
ಪಾಂಡವರ ಕಳುಹುವುದು ಆ ವಾರಣಾವತಕೆ
ಎನ್ನಯಾ ವಶದೊಳಗೆ ಸಾಮ್ರಾಜ್ಯ ಬರುತಿರಲು
ಪಾಂಡವರು ಎಮ್ಮನ್ನು ಕೆಣಕಲು ಅಸಾಧ್ಯವು ॥೫೯೬॥

ಎನ್ನುತಲಿ ಕೌರವನು ನುಡಿಯುತಿರೆ ಅಂಧನೃಪ
ಆ ವಿದುರ ಗಾಂಗೇಯ ಗುರುದ್ರೋಣ ಸಕಲರೂ
ತಂದೆಯನು ಕಳಕೊಂಡ ಪಾಂಡವರ ಅತುಳದಲಿ
ಪ್ರೀತಿಪರು ನಮ್ಮನ್ನು ನಿಂದಿಪರು ಎಂದಿಹನು ॥೫೯೭॥

ನಿನ್ನ ನುಡಿ ನಿಜವಿಹುದು ಆ ಭೀಷ್ಮ ದ್ರೋಣರಿಗೆ
ಪಾಂಡವರೊಳತಿ ಪ್ರೇಮ ಹೆಚ್ಚಾಗಿ ಇರುತಿಹರು
ದಾಯಾದಿ ಕಲಹದಲಿ ಆವುದೇ ಪಕ್ಷವನು
ವಹಿಸದಲೆ ಅವರೆಲ್ಲ ತಾಟಸ್ಥ್ಯ ತಾಳುವರು ॥೫೯೮॥

ಗುರುಸುತನು ಅಶ್ವತ್ಥ ಕೃಪರಾದಿಉಳಿದವರು
ಎಮ್ಮನ್ನು ಪ್ರೀತಿಸುತ ಎಮ್ಮೊಳಗೆ ಇರುತಿಹರು
ಆ ವಿದುರನೊಬ್ಬನನು ನಂಬಲಿಕೆ ಆಗದದು
ಆವನೊಬ್ಬನಿಂದಾವ ಕಷ್ಟವದು ಎಮಗಿಲ್ಲ ॥೫೯೯॥

ಈಗಲೇ ಪಾಂಡವರ ಕಳುಹಿಸುವ ಸಿದ್ಧತೆಯ
ಮಾಡುವುದು ಇಲ್ಲದಿರೆ ಎನ್ನಯಾ ಹೃದಯದಲಿ
ಹೊತ್ತಿರುವ ಅಗ್ನಿಯದು ಕ್ಷಣಕ್ಷಣವು ದಹಿಸುತಲಿ
ಎನ್ನನ್ನು ಸಾಯಿಪುದು ನೀನಂಬು ಖಚಿತವಿದು ॥೬೦೦॥

ನೂರಾರು ಅಲಗುಗಳು ಎನ್ನಯಾ ಹೃದಯವನು
ಇರಿಯುತಲಿ ಪರಿಪರಿಯ ವೇದನೆಯನೀಯುತಿವೆ
ಪಾಂಡವರ ಕಳುಹುತಲಿ ಎನ್ನಯಾ ಹೃದಯಕ್ಕೆ
ಶಾಂತಿಯನು ಈಯುವುದು ಎನ್ನುತಲಿ ನುಡಿದಿಹನು ॥೬೦೧॥

ಈತೆರದಿ ನುಡಿದಿರುವ ಪುತ್ರನಾ ಮಾತುಗಳ
ಕೇಳುತಲಿ ವಾತ್ಸಲ್ಯ ಉಕ್ಕುತಲಿ ಅಂಧನೃಪ
ಪಾಂಡುವರು ಇಹತನಕ ಮಗನಿಂಗೆ ಸುಖವಿಲ್ಲ
ಎನ್ನುತಲಿ ಮನದೊಳಗೆ ನಿಶ್ಚಯವ ಮಾಡುತಲಿ ॥೬೦೨॥

ಮಂತ್ರಿಗಳ ಅಧಿಕಾರಿ ವರ್ಗಗಳ ಕರೆಸುತಲಿ
ಆ ವಾರಣಾವತಕೆ ಪಾಂಡವರ ಕಳುಹಿಸಲು
ವಿಧವಿಧದ ಮಾರ್ಗಗಳ ಸೂಚನೆಯ ಸಲಹೆಯನು
ಇತ್ತಿಹನು ಕುಹಕದಲಿ ಗುಟ್ಟದಲಿ ಧೃತರಾಷ್ಟ್ರ ॥೬೦೩॥

ಒಂದು ದಿನ ಸಭೆಯೊಳಗೆ ಮಂತ್ರಿಗಳು ವಿಶದದಲಿ
ಆ ವಾರಣಾವತದಿ ವೈಭವದಿ ನಡೆಯುತಿಹ
ಲಕ್ಷೋಪಲಕ್ಷಜನ ಸಂತಸದಿ ನಲಿಯುತಿಹ
ಪಶುಪತಿಯ ಉತ್ಸವದ ವರ್ಣನೆಯ ಗೈದಿಹರು ॥೬೦೪॥

ಈತೆರದಿ ಉತ್ಸವವು ಹಿಂದೆಂದು ಆಗಿಲ್ಲ
ಮುಂದೆಂದು ಆಗದಿದೆ ಕಣ್ಮನವ ತಣಿಸುತಿದೆ
ಈಪರಿಯ ಉತ್ಸವವ ಕಣ್ಣುಗಳು ಕಂಡಿಲ್ಲ
ಎನ್ನುತಲಿ ಎಲ್ಲರೂ ಕೇಳ್ವಂತೆ ನುಡಿದಿಹರು ॥೬೦೫॥

ಪಾಂಡವರು ಆಲಿಸುತ ಮಂತ್ರಿಗಳ ನೋಡುತಿರೆ
ಧೃತರಾಷ್ಟ್ರನೀಕ್ಷಿಸುತ ಧರ್ಮಜನ ಕರೆಸುತಲಿ
ಆ ವಾರಣಾವತವು ಜಗದೊಳಗೆ ಸುಂದರವು
ಅದಕಿಂತ ಮಿಗಿಲಾದ ಚೆಲುವಿನಾ ಪುರವಿಲ್ಲ ॥೬೦೬॥

ನಿಮ್ಮಯಾ ಸೋದರರ ಸಹಿತದಲಿ ತೆರಳುತಲಿ
ಸಂತಸದಿ ಪಶುಪತಿಯ ಪೂಜೆಯನು ಗೈಯ್ಯುತಲಿ
ಧನಕನಕ ವಸ್ತ್ರಗಳ ದಾನಗಳನೀಯುತಲಿ
ಧರ್ಮದಾ ಕಾರ್ಯಗಳ ಗೈಯ್ಯುವುದು ಶಾಂತಿಯಲಿ ॥೬೦೭॥

ಸಂಗೀತ ನೃತ್ಯದಲಿ ಹರಿಕಥೆಯ ಶ್ರವಣದಲಿ
ಎಲ್ಲವನು ಮರೆಯುತಲಿ ಮನವನ್ನು ರಮಿಸುತಲಿ
ಮತ್ತೆ ಹೊಸ ಉತ್ಸಾಹ ಉಕ್ಕುತದಿ ಮುದದಿಂದ
ಗಜಪುರಕೆ ಮರಳುವುದು ಎನ್ನುತಲಿ ನುಡಿದಿಹನು ॥೬೦೮॥

ಎನ್ನಯಾ ಸುತಶತರು ಅತಿ ದುಷ್ಟ ಪಾಪಿಗಳು
ನಿಮ್ಮನ್ನು ವಿಧವಿಧದಿ ಹಿಂಸೆಯನು ಗೊಳಿಸಿಹರು
ಆ ವಾರಣಾವತದಿ ಉತ್ಸವದ ಕೆಲಕಾಲ
ಸಂತಸದಿ ಕಳೆಯುವದು ಎನ್ನುತಲಿ ನುಡಿದಿಹನು ॥೬೦೯॥

ಇಂತು ಆ ಧೃತರಾಷ್ಟ್ರ ಕಪಟದಲಿ ನುಡಿದಿರುವ
ಕುಹಕದಾ ನುಡಿಗಳನು ಧರ್ಮಜನು ಅರಿಯುತಲಿ
ಅಂಧನೃಪ ಒಡ್ಡಿರುವ ಮೋಸದಾ ಜಾಲವಿದು
ನಮ್ಮನ್ನು ಮುಗಿಸುವಾ ತಂತ್ರವಿದು ಎನ್ನುತಲಿ ॥೬೧೦॥

ನೂರರೀ ಕೌರವರ ಮಧ್ಯದಲಿ ನಾವುಗಳು
ಬರಿ ಐವರಿರುತಿಹೆವು ನಮಗಾರು ಬೇರಿಲ್ಲ
ಎನ್ನುತಲಿ ಧರ್ಮಜನು ಮನದೊಳಗೆ ಯೋಚಿಸುತ
ಹುಸಿನಗೆಯ ಸೂಸುತಲಿ ಧೃತರಾಷ್ಟ್ರಗೊರೆದಿಹನು ॥೬೧೧॥

ತಂದೆಯನು ಕಳಕೊಂಡು ತಬ್ಬಲಿಗಳಾಗಿರುವ
ಎಮಗಿಂದು ನೀವೆಮ್ಮ ತಂದೆಯರು ಆಗಿಹಿರಿ
ನಮ್ಮ ಹಿತವಭ್ಯುದಯ ಕ್ಷೇಮವನು ಬಯಸುತಿಹ
ನಿಮ್ಮಯಾ ನುಡಿಗಳನು ನಾವೆಂತು ಮೀರುವುದು ॥೬೧೨॥

ನಮಗಾರು ಗತಿಯಿಲ್ಲ ನಿಮ್ಮನ್ನು ನಂಬಿಹೆವು
ಅದ್ದಾಗಿ ಹೆಚ್ಚುವದು ಉದ್ದಾಗಿ ಹೆಚ್ಚುವದು
ಆ ವಾರಣಾವತಕೆ ಹೋಗುವೆವು ಹರಸುವುದು
ಎನ್ನುತಲಿ ಸಾಷ್ಟಾಂಗವೆರಗುತಲಿ ನುಡಿದಿಹನು ॥೬೧೩॥

ಗುರುದ್ರೋಣ ಭೀಷ್ಮರೇ ಗಾಂಧಾರಿ ತಾಯಿಯೇ
ಆ ವಾರಣಾವತಕೆ ನಾವೆಲ್ಲ ತೆರಳುವೆವು
ಶುಭವಾಗಲೆನ್ನುತಲಿ ಹರಸುವುದು ಎನ್ನುತಲಿ
ಕರಗಳನು ಜೋಡಿಸುತ ನಮಿಸಿದನು ಸಕಲರಿಗೆ ॥೬೧೪॥

ಪಯಣವದು ನಿಮಗೆಲ್ಲ ಶುಭವಾಗಲೆನ್ನುತಲಿ
ಆ ಪುರದಿ ಮಂಗಳವು ನಿಮಗಾಗಲೆನ್ನುತಲಿ
ಸಕಲರೂ ಹರಸುತಿರೆ ಸೋದರರ ಸಹಿತದಲಿ
ಧರ್ಮಜನು ತನ್ನಯಾ ಅರಮನೆಗೆ ಬಂದಿಹನು ॥೬೧೫॥

ಬಳಿಕಲಾ ಧೃತರಾಷ್ಟ್ರ ರತ್ನಗಳ ವಜ್ರಗಳ
ಗಜತುರಗ ರಥಗಳನು ಭಾಗೆರಡು ಮಾಡುತಲಿ
ಗಾಂಗೇಯ ಗುರುದ್ರೋಣ ವಿದುರಾದಿ ಒಪ್ಪುತಿರೆ
ಕೌರವರ್ಗೆ ಪಾಂಡವರ್ಗೆ ಸಮವಾಗಿ ಇತ್ತಿಹನು ॥೬೧೬॥

ರಾಜ್ಯವದು ದೊರೆಯಲಿಕೆ ವಿದ್ಯುಕ್ತ ಕರ್ಮಗಳ
ಧರ್ಮಜನು ಮಾಡುತಲಿ ದಾನಗಳನೀಯುತಲಿ
ಅನುಜರೊಡಗೂಡುತಲಿ ಕುಂತಿಯಾ ಸಹಿತದಲಿ
ರಥವೇರಿ ಹೊರಟಿಹನು ಆ ವಾರಣಾವತಕೆ ॥೬೧೭॥

## ಕೌರವನು ಪುರೋಚನನಿಗೆ ಗುಪ್ತ ಸಲಹೆ ಮಾಡಿದುದು

ತಂದೆಯಾ ನುಡಿಯಂತೆ ಪಾಂಡವರು ಪಯಣದಲಿ
ಹೊರಟಿಹುದ ಕಾಣುತಲಿ ಸಂತಸದಿ ಕೌರವನು
ತನ್ನಾಪ್ತ ಮಂತ್ರಿಯು ಪುರೋಚನನ ಕರೆಸುತಲಿ
ಉಪಚರಿಸಿ ನುಡಿದಿಹನು ಗುಪಿತನಲಿ ಗೂಢವನು ॥೬೧೮॥

ನೀ ಎನ್ನ ನಂಬಿಕೆಯ ವಿಶ್ವಸ್ತ ಮಂತ್ರಿಯಿಹೆ
ಎನ್ನಯಾ ಅಭ್ಯುದಯ ಕ್ಷೇಮವನು ಬಯಸುತಿಹೆ
ಈ ರಾಜ್ಯ ಎನ್ನದಿದೆ ಅದರಂತೆ ನಿನ್ನದಿದೆ
ರಾಜ್ಯವನು ರಕ್ಷಿಸುವ ಭಾರವದು ನಿನ್ನದಿದೆ ॥೬೧೯॥

ನಾನೀಗ ಹೇಳುತಿಹ ಪರಿಯಲ್ಲಿ ಮಾಡುತಲಿ
ಶತ್ರುಗಳ ನಾಶವನು ಗೈಯ್ಯುವುದು ಯೋಚಿಸದೆ
ಆ ವಾರಣಾವತಕೆ ಪಾಂಡವರು ಹೊರಟಿಹರು
ಬೇಗನೇ ತೆರಳುತಲಿ ನೀನವರ ಸ್ವಾಗತಿಸಿ ॥೬೨೦॥

ಕೆಲಕಾಲ ಬೇರೆಯಾ ಗೃಹದೊಳಗೆ ಇರಿಸುತಲಿ
ಶೀಘ್ರದಲಿ ಅರಗಿನಲಿ ಕರ್ಪೂರ ಗಂಧಕದಿ
ಬೇಗನೆ ಅಗ್ನಿಯಿಂದು ಹೊತ್ತುತಿಹ ಅರಮನೆಯ
ರಚಿಸುತಲಿ ಪಾಂಡವರ ಅವರೊಳಗೆ ಇರಿಸುವುದು ॥೬೨೧॥

ಒಂದಿರುಳು ಪಾಂಡವರು ಗಾಢದಲಿ ಮಲಗಿರಲು
ಆರಿಗೂ ತಿಳಿಯದಲೆ ಬೆಂಕಿಯನು ಇಕ್ಕುವದು
ಅರಮನೆಯು ಉರಿಯುತಲಿ ಒಳಗಿರುವ ಪಾಂಡವರು
ಭಸ್ಮವದು ಆಗುತಲಿ ನಿರ್ನಾಮರಾಗುವರು ॥೬೨೨॥

ಈ ಗೂಢ ವಿಷಯವನು ಅನ್ಯರಿಗೆ ಉಸುರದಿರು
ಇಲ್ಲದಿರೆ ಕಾರ್ಯವಿದು ನಿಷ್ಫಲವು ಆಗುವದು
ಎನ್ನುತಿರೆ ಕೌರವನು ಪುರೋಚನನು ಒಪ್ಪುತಲಿ
ಆ ವಾರಣಾವತಕೆ ತೆರಳಿದನು ಧಾವಿಸುತ ॥೬೨೩॥

## ಪಾಂಡವರು ವಾರಣಾವತಕ್ಕೆ ತೆರಳುವುದು

ಇತ್ತಲಾ ಧರ್ಮಜನು ಸೋದರರ ಸಹಿತದಲಿ
ಭೀಷ್ಮಂಗೆ ದ್ರೋಣಂಗೆ ವಿದುರಾದಿ ಬಾಂಧವರ್ಗೆ
ಧೃತರಾಷ್ಟ್ರ ಗಾಂಧಾರಿ ದೇವಿಯರ್ಗೆ ನಮಿಸುತಲಿ
ಕುಂತಿಯೊಡಗೂಡುತಲಿ ರಥವೇರಿ ಹೊರಟಿಹನು ॥೬೨೪॥

ಕುರುಕುಲದ ಘನಕೀರ್ತಿ ಗೌರವವು ಪುಣ್ಯವದು
ಪುರುಷನಾರೂಪದಲಿ ಗಜಪುರವ ತೊರೆಯುತಲಿ
ಹೊರಟಿಹುದೊ ಎಂಬಂತೆ ನುತಚರಿತ ಪಾವನನು
ಸದಮಲನು ಧರ್ಮಜನು ಹೊರಟಿಹನು ಪಯಣದಲಿ ॥೬೨೫॥

ಸಕಲ ಪ್ರಜೆ ಪುರಜನರು ದಿಗ್ಭ್ರಾಂತರಾಗುತಲಿ
ಪಾಂಡವರನಟ್ಟುತಲಿ ದೂರದಲಿ ಇರಿಸುವುದು
ಇದು ಏನೊ ಧೃತರಾಷ್ಟ್ರ ಭೂಪತಿಯ ತಂತ್ರವಿದೆ
ಒಳಸಂಚು ಮೋಸವಿದೆ ಎನ್ನುತಲಿ ನುಡಿದಿಹರು ॥೬೨೬॥

ಎಳೆಯರೀ ಪರದೇಶಿ ಮಕ್ಕಳನು ಪಾಂಡವರ
ಹೊರನೂಕಿ ರಾಜ್ಯವನು ಕಬಳಿಸುವ ತಂತ್ರವಿದು
ಕಣ್ಣುಗಳು ಕುರುಡಾದ ಧೃತರಾಷ್ಟ್ರ ಭೂಪತಿಗೆ
ಬುದ್ಧಿಯದು ಕುರುಡಾಯ್ತು ಎನ್ನುತಲಿ ನುಡಿದಿಹರು ॥೬೨೭॥

ನಯವಿನಯ ಸದ್ಗುಣದ ನಿರ್ಮಲನ ಧರ್ಮಜನ
ಬಲಯುತನ ಭೀಮನನು ವೀರನಾ ಅರ್ಜುನನ
ಸೌಮ್ಯನಿಹ ಸಹದೇವ ನಕುಲರನು ಅಟ್ಟುತಿಹ
ಧೃತರಾಷ್ಟ್ರ ಕಡುಕ್ರೂರ ಕಡುದುಷ್ಟನೆಂದಿಹರು ॥೬೨೮॥

ಪಾಂಡವರು ಇದ್ದೆಡೆಯೆ ನಾವೆಲ್ಲ ವಾಸಿಪೆವು
ಎನ್ನುತಲಿ ಸಕಲ ಪ್ರಜೆ ಭೂಪತಿಯ ಶಪಿಸುತಲಿ
ಕರುಳುಗಳು ಕುದಿಯುತಲಿ ಕಣ್ಣೀರ ಸುರಿಸುತಲಿ
ಧರ್ಮಜನ ಹಿಂದುಗಡೆ ಹೊರಟಿಹರು ತಂಡದಲಿ ॥೬೨೯॥

ಊರಹೊರ ಕೊಳದೆಡೆಗೆ ಬರುತಿರಲು ಧರ್ಮಜನು
ಪ್ರಜೆಗಳೇ ನೀವೆಲ್ಲ ಎನ್ನಲ್ಲಿ ಇಟ್ಟಿರುವ
ವಿಶ್ವಾಸಪ್ರೇಮಕ್ಕೆ ಚಿರಋಣಿಯು ಆಗಿಹೆನು
ನೀವೀಗ ನಗರಕ್ಕೆ ಹಿಂತಿರುಗಿ ತೆರಳುವುದು ॥೬೩೦॥

ಭೂಪತಿಯು ಆಜ್ಞೆಯನು ನಾವೀಗ ಪಾಲಿಪೆವು
ಸಮಯವದು ಬಂದಾಗ ನೆರವನ್ನು ಈಯುವುದು
ಎನ್ನುತಲಿ ಧರ್ಮಜನು ಕರಮುಗಿದು ನುಡಿಯುತಿರೆ
ಸಕಲರೂ ನಗರಕ್ಕೆ ದುಃಖದಲಿ ಮರಳಿದರು ॥೬೩೧॥

ವಿದುರೊಬ್ಬ ತೆರಳದಲೆ ಅಲ್ಲಿಯೇ ನಿಲ್ಲುತಲಿ
ಧರ್ಮಜನ ಕರೆಯುತಲಿ ಮೆಲ್ಲನಿಯಲುಸುರಿದನು
ರಾಜರಿಗೆ ಬಂಧುಗಳ ಬಾಂಧವರು ಶತ್ರುಗಳು
ಸತತವೂ ಭಯವಿಹುದು ಎಂಬುದನು ಅರಿಯುವುದು ॥೬೩೨॥

ಶತ್ರುಗಳು ಬರಿ ಅಸ್ತ್ರದಿಂದಷ್ಟೆ ಕೊಲ್ಲದೆಯೆ
ವಿಷ ಅಗ್ನಿ ಮೊದಲಾದ ಮೋಸದಾ ತಂತ್ರದಲಿ
ನಯವಾಗಿ ಮೃದುಮಧುರ ನುಡಿಗಳಲಿ ಕೊಲ್ಲುವರು
ನೀನಿದನು ಚೆನ್ನಾಗಿ ಅರಿಯುವುದು: ಎಂದಿಹನು ॥೬೩೩॥

ನಿನಗಲ್ಲಿ ಅಗ್ನಿಭಯ ವಿಷಭಯವು ಇರುತಿಹುದು
ಆರನೂ ನಂಬದಿರು ಸತತವೂ ಎಚ್ಚರಿರು
ಪಂಚೇಂದ್ರಿಯಂಗಳನು ವಶದೊಳಗೆ ಇರಿಸುತಲಿ
ಮತಿಯಿಂದ ಕೌಶಲದಿ ಸಂಕಟವ ದಾಟುವದು ॥೬೩೪॥

ಮುಂದಿನಾ ಮಾರ್ಗವನು ಅರಸುತಲಿ ಸಾಗುವದು
ನೀವೆಲ್ಲ ಬುದ್ಧಿಯನು ಶಕ್ತಿಯನು ಪಡೆದಿಹಿರಿ
ಎನ್ನುತಲಿ ಆ ವಿದುರ ನುಡಿಯುತಿರೆ ಧರ್ಮಜನು
ಅರಿತಿಹೆನು ಎನ್ನುತಲಿ ಶಿರತೂಗಿ ನುಡಿದಿಹನು ॥೬೩೫॥

ಬಳಿಕಿನಲಿ ಆ ವಿದುರ ಧರ್ಮಜನ ಹರಸುತಲಿ
ತೆರಳುತಿರೆ ಆ ಕುಂತಿ ನೋಡುತಲಿ ಧರ್ಮಜಗೆ
ಆ ವಿದುರ ನಿನಗಾವ ಗೌಪ್ಯದಾ ವಿಷಯವನು
ತಿಳಿಸಿದನು ಎನ್ನುತಲಿ ಕೇಳುತಿರೆ ಕೌತುಕದಿ ॥೬೩೬॥

ಎಮಗಲ್ಲಿ ವಿಷಭಯವು ಅಗ್ನಿಭಯ ಮತ್ತೆಯು
ಶತ್ರುಗಳು ಮೋಸದಲಿ ಕೊಲ್ಲುವಾ ಭಯವಿಹುದು
ಸತತವೂ ಎಚ್ಚರದಿ ನೀವಿಹುದು ಎನ್ನುತಲಿ
ಆ ವಿದುರ ಹೇಳಿದನು ಎನ್ನುತಲಿ ನುಡಿದಿಹನು ॥೬೩೭॥

ಚಿಂತೆಯನು ಮಾಡದಿರು ನಾವೆಲ್ಲ ಧೈರ್ಯದಲಿ
ಬರುತಲಿಹ ಕಷ್ಟಗಳ ಯುಕುತಿಯಲಿ ದಾಟುವೆವು
ಈ ಭೀಮ ಅರ್ಜುನರು ಸೋದರರು ಇಹತನಕ
ಎಮಗಾವ ಭಯವಿಲ್ಲ ಎನ್ನುತಲಿ ನುಡಿದಿಹನು ॥೬೩೮॥

ಪಯಣದಲಿ ಆ ವಾರಣಾವತಕೆ ಬರುತಿರಲು
ಪುರಜನರು ಗಜತುರಗ ವೈಭವದಿ ಸಂಭ್ರಮದಿ
ವಾದ್ಯಗಳ ಮೊಳಗಿನಲಿ ಮಂತ್ರಗಳ ಘೋಷಣದಿ
ಆರತಿಯ ನೆತ್ತುತಲಿ ಸ್ವಾಗತವ ಗೈದಿಹರು ॥೬೩೯॥

ಧರ್ಮವೇ ವ್ಯವೆತ್ತ ಮಹಿಮನೀ ಧರ್ಮಜನು
ಬಹುಬಲ ವೃಕೋಧರನು ಜಗವೀರ ಅರ್ಜುನನು
ನಯವಿನಯ ಸಂಪನ್ನ ನಕುಲ ಸಹದೇವರು
ನಮ್ಮೆಯಾ ನಗರಕ್ಕೆ ಬಂದಿಹುದು ಭಾಗ್ಯವಿದು ॥೬೪೦॥

ಎನ್ನುತಲಿ ಸಂತೋಷ ಸಾಗರವು ಉಕ್ಕುತಲಿ
ಹಾಡುತಲಿ ಕುಣಿಯುತಲಿ ಸಂತಸದಿ ನಲಿಯುತಿರೆ
ಕುರುಮಂತ್ರಿ ಪುರೋಚನನು ಭರದಿಂದ ಐತಂದು
ಪಾಂಡವರಿಗೆಲ್ಲರಿಗೆ ಶಿರಬಾಗಿ ನಮಿಸುತಲಿ ॥೬೪೧॥

ಆಡಳಿತ ವರ್ಗವನು ಅಧಿಕಾರಿ ವರ್ಗವನು
ಸೈನ್ಯದಾ ಪ್ರಮುಖನನು ನಗರದಾ ಗಣ್ಯರನು
ಪಾಂಡವರ್ಗೆ ಪರಿಚಯಿಸಿ ಪುರವೆಲ್ಲ ತೋರಿಸುತ
ಅರಮನೆಯೊಳಿರಿಸುತಲಿ ಸತ್ಕಾರ ಗೈದಿಹನು ॥೬೪೨॥

ಬಗೆಬಗೆಯ ಭಕ್ಷ್ಯಗಳ ಭೋಜ್ಯಗಳ ನೀಯುತಲಿ
ಸಂಗೀತ ನರ್ತನದಿ ಪಾಂಡವರ ತಣಿಸುತಲಿ
ಮನದೊಳಿಹ ಕುಹಕವನು ತೋರಿಸದೆ ನಗುನಗುತ
ಮುಂದಿನಾ ಕಾರ್ಯವನು ಪುರೋಚನನು ನೆನೆಯುತಲಿ ॥೬೪೩॥

**ಅರಗಿನಾ ಅರಮನೆಯು ಉರಿಯೊಳಗೆ ಪಾರಾಗಿ।**
**ಪಾಂಡವರು ಹೊರಬಂದು ಕಾನನವ ಸೇರಿದರು।**

ಕುರುರಾಯ ಹೇಳಿರುವ ಪರಿಯಲ್ಲಿ ಶೀಘ್ರದಲಿ
ಗಂಧಕದ ಕರ್ಪೂರದ ಅರಗಿನಾ ಅರಮನೆಯು
ಕಟ್ಟಿಸುತ ತಳಿರಿನಲಿ ತೋರಣದಿ ಶೃಂಗರಿಸಿ
ಪಾಂಡವರ ಬಳಿಯಲ್ಲಿ ಐತಂದು ನುಡಿದಿಹನು ॥೬೪೪॥

ನಿಮಗಾಗಿ ಸುಂದರದ ಸೊಬಗಿನಾ ಹೊಸಬಗೆಯ
ರಮಣೀಯವಾಗಿರುವ ಶಿವಸೌಧ ಎಂಬುವಾ
ಅರಮನೆಯ ರಚಿಸಿಹೆನು ನೀವಲ್ಲಿಗೈತಂದು
ಸುಖವಾಗಿ ವಾಸಿಪುದು ಎನ್ನುತಲಿ ನುಡಿದಿಹನು ॥೬೪೫॥

ಬಳಿಕಲಾ ಪಾಂಡವರು ಶಿವಸೌಧಕ್ಕೆ ತಂದು
ಒಳಗಡೆಗೆ ನಡೆಯುತಲಿ ಸುತ್ತಲೂ ನೋಡುತಿರೆ
ಗಂಧಕದ ಕರ್ಪೂರದ ಅರಗಿನಾ ವಾಸನೆಯು
ನಾಸಿಕಕೆ ತಾಗುತಿರೆ ಧರ್ಮಜನು ನುಡಿದಿಹನು ॥೬೪೬॥

ಸೋದರ ವೃಕೋದರನೆ ವಾಸನೆಯು ಬರುತಲಿದೆ
ಗಂಧಕದಿ ಅರಗಿನಲಿ ಕಂಬಗಳ ಗೋಡೆಗಳ
ಕಟ್ಟಿರುವ ತೆರದಲ್ಲಿ ಅರಮನೆಯು ತೋರುತಿದೆ
ಕ್ಷಣದಲ್ಲಿ ಉರಿಯುತಲಿ ಭಸ್ಮವಿದು ಆಗುವದು ॥೬೪೭॥

ಸಮಿಧೆಗಳು ನಾಲ್ವರೂ ನಾವಿಹೆವು ಮತ್ತೆಯು
ಆ ಕುಂತಿ ಆಹುತಿಯು ಭೀಮನೇ ಯಜ್ಞಪಶು
ಅರಗಿನಾ ಅರಮನೆಯು ಯಜ್ಞದಾ ಕುಂಡವಿದು
ಕೌರವನೆ ಯಜ್ಞದಾ ಯಜಮಾನನಿಹನೆಂದ ॥೬೪೮॥

ನಮಗಿಲ್ಲಿ ವಿಷಅಗ್ನಿ ಭಯವಿಹುದು ಎನ್ನುತಲಿ
ದುರುಳನಾ ಕೌರವನು ನಮ್ಮನ್ನು ಇಲ್ಲಿಯೇ
ಭಸ್ಮವನು ಮಾಡಲಿಕೆ ಯತ್ನಿಸುತಲಿಹನು
ಎನ್ನುತಲಿ ವರವಿದುರ ಎನ್ನೊಡನೆ ನುಡಿದಿಹನು ॥೬೪೯॥

ಆರಿಗೂ ತಿಳಿಯದಲೆ ಅರಮನೆಯ ಒಳಗಿಂದ
ಸುರಂಗದಾ ಮಾರ್ಗವನು ನಾವುಗಳು ನಿರ್ಮಿಪುದು
ಸಮಯವದು ಬಂದಾಗ ಈಮಾರ್ಗದಿಂದಾಚೆ-
ದಾಟುತಲಿ ಪಾರಾಗಿ ಹೋಗುವದು ಎಂದಿಹನು ॥೬೫೦॥

ಅನಿತರಲಿ ಆ ವಿದುರ ಕಳಿಸಿರುವ ನಿಪುಣನಿಹ
ಶಿಲ್ಪದಲಿ ಕುಶಲನಿಹ ಆ ಖನಕ ಶಿಲ್ಪಿಯು
ಧರ್ಮಜನ ಬಳಿಯಲ್ಲಿ ಐತಂದು ನಮಿಸುತಲಿ
ಆ ವಿದುರ ನನ್ನನ್ನು ನಿಮ್ಮೆಡೆಗೆ ಕಳಿಸಿಹನು ॥೬೫೧॥

ಕೌರವನು ಸಾಮ್ರಾಜ್ಯದಾಸೆಯಲಿ ಐವರನ್ನು
ಅರಗಿನಾ ಮನೆಯಲ್ಲಿ ಸುಡಲಿಕ್ಕೆ ಬಯಸಿಹನು
ಇಲ್ಲಿಂದ ಪಾರಾಗಿ ಹೋಗಲಿಕೆ ಒಳಗಡೆಗೆ
ಸುರಂಗದಾ ಮಾರ್ಗವನು ನಿರ್ಮಿಸಲು ತಿಳಿಸಿಹನು ॥೬೩॥

ಈ ತೆರದಿ ಆ ಖನಕ ವಿನಯದಲಿ ನುಡಿಯುತಿರೆ
ಧರ್ಮಜನು ವಿದುರನಾ ಉಪಕಾರ ನೆನೆಯುತಲಿ
ಒಪ್ಪುತಿರೆ ಆರಿಗೂ ತಿಳಿಯದಲೆ ಆ ಖನಕ
ಇರುಳಿನಲಿ ಸುರಂಗದಾ ಮಾರ್ಗವನು ರಚಿಸಿಹನು ॥೬೪॥

ಅರಮನೆಯ ಮಧ್ಯದಲಿ ನೆಲದಿಂದ ಒಳಗಿಂದ
ಕಂದಕದ ಪರ್ಯಂತ ಸುರಂಗದಾ ಮಾರ್ಗವನು
ಆ ಪುರೋಚನಗೆ ತಿಳಿಯದಾ ಪರಿಯಲ್ಲಿ
ರಚಿಸುತಲಿ ಹೊರಗಡೆಗೆ ಹುಲ್ಲಿಂದ ಮುಚ್ಚಿಹನು ॥೬೫॥

ವರುಷವೊಂದು ಕಾಲವನು ಪಾಂಡವರು ಹರುಷದಲಿ
ಕಳೆಯುತಿರೆ ಪುರೋಚನನು ಸಂತಸದಿ ತನ್ನಯಾ
ಕಾರ್ಯವನು ನೆನೆಯುತಲಿ ಸಿದ್ಧತೆಯ ಮಾಡುತಿರೆ
ಧರ್ಮಜನು ಅರಿಯುತಲಿ ಅನುಜರಿಗೆ ನುಡಿದಿಹನು ॥೬೬॥

ಈಗೆಮಗೆ ಇಲ್ಲಿಂದ ಪಾರಾಗಿ ಹೋಗಲಿಕೆ
ಸೂಕ್ತವಿಹ ಸಮಯವದು ಬಂದಿಹುದು ಸೋದರರೆ
ಮೊದಲಿಂಗೆ ಆಯುಧಾಗಾರಕ್ಕೆ ಬೆಂಕಿಯನು
ಇಕ್ಕುತಲಿ ಪುರೋಚನನ ಭಸ್ಮವನು ಮಾಡುವದು ॥೬೭॥

ಪ್ರಾಣಗಳ ಆರನ್ನು ಅರಮನೆಯೊಳಿರಿಸುತಲಿ
ನಂತರದಿ ಅರಮನೆಗೆ ಅಗ್ನಿಯನು ಸ್ಪರ್ಶಿಸುತ
ಪಾರಾಗಿ ಹೋಗುವುದು ಎನ್ನುತಲಿ ನುಡಿಯುತಿರೆ
ಸಕಲರೂ ಸೋದರರು ಸಮ್ಮತಿಯನಿತ್ತಿಹರು ॥೬೮॥

ದೈವವೇ ಕರೆಸಿಹುದೊ ಎಂಬಂತೆ ಐವರು
ಮಕ್ಕಳುಗಳೊಡಗೂಡಿ ಬಂದಿರ್ದ ಬೇಡತಿಯು
ಭೋಜನವ ಮಾಡುತಲಿ ಮದ್ಯವನು ಕುಡಿಯುತಲಿ
ಮದವೇರಿ ಅಲ್ಲಿಯೇ ಮಲಗಿದಳು ಗಾಢದಲಿ ॥೬೯॥

ಸುತ್ತಲೂ ಭೀಕರದ ಕತ್ತಲೆಯು ಮುಸುಕಿರಲು
ಗಾಳಿಯದು ಬಲವಾಗಿ ಭರದಿಂದ ಬೀಸುತಿರೆ
ಧರ್ಮಜನು ಭೀಮನಿಗೆ ಸನ್ನೆಯಲಿ ತಿಳಿಸುತಿರೆ
ಉಜ್ವಲದಿ ಉರಿಯುತಿಹ ಕೊಳ್ಳಿಯನು ಕೊಳ್ಳುತಲಿ ॥೭೦॥

ಆ ಭೀಮ ದುರುಳನಾ ಪುರೋಚನನು ಮಲಗಿರುವ
ಆಯುಧಾಗಾರಕ್ಕೆ ಬೆಂಕಿಯನು ಇಕ್ಕುತಿರೆ
ಅಗಣಿತದ ಮದ್ದುಗಳು ಸ್ಫೋಟಿಸುತ ಚಿಮ್ಮುತಲಿ
ಘೋರತರ ನಾದವದು ದಶದಿಸೆಯ ತುಂಬಿಹುದು ॥೭೦॥

ಅರಗಿನಾ ಅರಮನೆಗೆ ಅಗ್ನಿಯನು ಸ್ಪರ್ಶಿಸಲು
ಧಗಧಗನೆ ಛಟಛಟಲು ಛಿಟಛಿಟಲು ಎನ್ನುತಲಿ
ಪ್ರಜ್ವಲಿಸಿ ಉರಿಯುತಿರೆ ಐವರೂ ಪಾಂಡವರು
ಕುಂತಿಯಾ ಸಹಿತದಲಿ ಸುರಂಗವನು ಹೊಕ್ಕಿಹರು ॥೭೧॥

ಮುಗಿಲನ್ನು ಮುಟ್ಟುತಲಿ ಉರಿಯುತಿಹ ಜ್ವಾಲೆಯದು
ಬೀಸುತಿಹ ಗಾಳಿಯಲಿ ಸರ್ವವನು ವ್ಯಾಪಿಸುತ
ಆಯುಧಾಗಾರವನು ಸನಿಹದಲಿ ಮಲಗಿರ್ದ
ಆ ಪಾಪಿ ಪುರೋಚನನ ಸಹಿತದಲಿ ದಹಿಸಿದುದು ॥೭೨॥

ನಭಬಿರಿವ ಭೀಕರದ ಘೋರತರ ನಾದವನು
ಕೇಳುತಲಿ ಪುರಜನರು ಭಯದಿಂದ ಐತಂದು
ಮುಗಿಲನ್ನು ಚುಂಬಿಸುತ ಉರಿಯುತಿಹ ಜ್ವಾಲೆಯದು
ಅರಗಿನಾ ಅರಮನೆಯ ದಹಿಸುವುದ ಕಂಡಿಹರು ॥೭೩॥

ಅಕಟಕಟ ಶಿವಶಿವನೆ ಪಾಂಡವರು ಅಗ್ನಿಯಲಿ
ದಹಿಸುತಲಿ ಭಸ್ಮದಲಿ ನಿರ್ನಾಮವಾದರೇ
ದುಷ್ಟರಾ ಧೃತರಾಷ್ಟ್ರ ದುರ್ಯೋಧನಾದಿಗಳ
ಮೋಸಕ್ಕೆ ಬಲಿಯಾಗಿ ಅಳಿದರೇ ಎನ್ನುತಲಿ ॥೭೪॥

ಕುದಿಕುದಿವ ದುಃಖದಲಿ ಕಣ್ಣೀರ ಸುರಿಸುತಲಿ
ಕೋಪದಲಿ ತಾಪದಲಿ ಧೃತರಾಷ್ಟ್ರ ಭೂಪತಿಗೆ
ಪಾಂಡವರ ತೆರದಲ್ಲಿ ನಿನಪುತ್ರರೆಲ್ಲರು
ಸಾಯುವದು ಖಂಡಿತವು ಎನ್ನುತಲಿ ಶಪಿಸಿದರು ॥೭೫॥

ಕಡುಪಾಪಿ ಆ ಪುರೋಚನನು ತನ್ನಯಾ ಪಾಪದಲಿ
ಅಗ್ನಿಯಲಿ ದಹಿಸುತಲಿ ಹಿಡಿಬೂದಿ ಆಗಿಹನು
ತಾಗೈದ ಪಾಪಕ್ಕೆ ಸರಿಯಾದ ಶಿಕ್ಷೆಯನು
ದೇವರೇ ಇತ್ತಿಹನು ಎಂದಿಹರು ಪುರಜನರು ॥೭೬॥

ಪಾಂಡವರು ಅಗ್ನಿಯಲಿ ಅಳಿದರೆ ಎನ್ನುತಲಿ
ಪುರಜನರು ತಪಿಸುತಲಿ ದುಃಖದಲಿ ನೋಯುತಲಿ
ಕಣ್ಣೀರ ಕೋಡಿಯನು ಹರಿಸುತಲಿ ಶೋಕದಲಿ
ರಾತ್ರಿಯನು ಅಲ್ಲಿಯೇ ಕಳೆದಿಹರು ನೋಡುತಲಿ ॥೭೭॥

ಇತ್ತಲಾ ಪಾಂಡವರು ವರಕುಂತಿ ಸಹಿತದಲಿ
ಸುರಂಗದ ಮಾರ್ಗದಲಿ ಮುಂದಕ್ಕೆ ಸಾಗುತಲಿ
ದ್ವಾರದಲಿ ಮುಚ್ಚಿರುವ ಹುಲ್ಲನ್ನು ಸರಿಸುತಲಿ
ನಡೆದಿಹರು ಘೋರತರ ಕತ್ತಲಲಿ ಕಾನನದಿ ॥೬೬೮॥

ದುರ್ಯೋಧನಾದಿಗಳ ಭಯವನ್ನು ನೆನೆಯುತಲಿ
ತಮ್ಮನ್ನು ಹಿಡಿಯಲಿಕೆ ಬೆನ್ನಟ್ಟಿ ಬಹರೆಂದು
ಯೋಚಿಸುತ ಚಿಂತಿಸುತ ಪಾಂಡವರು ಧಾವಿಸುತ
ಅಡವಿಯಲಿ ಕಳವಳದಿ ದುಗುಡದಲಿ ನಡೆದಿಹರು ॥೬೬೯॥

ರಾತ್ರಿಯಲಿ ನಿದ್ರೆಯದು ಇಲ್ಲದೆಯೆ ತೊಳಲುತಲಿ
ಬೀಳುತಲಿ ಏಳುತಲಿ ಕಲ್ಮುಳ್ಳು ತುಳಿಯುತಲಿ
ಪಾಂಡವರು ಅಡವಿಯಲಿ ಭರದಿಂದ ಸಾಗಿರಲು
ಪಾದಗಳು ಒಡೆಯುತಲಿ ರಕುತವದು ಚಿಮ್ಮುತಲಿ ॥೬೭೦॥

ಘಳಿಲೆಂದು ಸುರಿಯುತಿರೆ ವಾಯುಸುತ ನೋಡುತಲಿ
ಅಕಟಕಟ ಕಷ್ಟವಿದು ಹಾಎಂದು ಮನನೊಂದು
ತನ್ನಯಾ ಹೆಗಲಿನಲಿ ವರಕುಂತಿ ಧರ್ಮಜರ
ಬಲಗಡೆಯು ಕಂಕುಳದಿ ಅರ್ಜುನನ ಮತ್ತೆಯು ॥೬೭೧॥

ಯಮಳರನು ಎಡಗಡೆಯ ಕಂಕುಳದೊಳಿರಿಸುತಲಿ
ರಭಸದಲಿ ಹೆಜ್ಜೆಗಳನಿರಿಸುತಲಿ ಧಾವಿಸುತ
ಎದುರಾದ ಮರಗಳನು ಒದೆಯುತಲಿ ಕೆಡುಹುತಲಿ
ವಾಯುಸುತ ನಡೆದಿಹನು ವಾಯುವಿನ ವೇಗದಲಿ ॥೬೭೨॥

ಹೆಜ್ಜೆಯನು ಇಡುತಿರಲು ಭೂಮಿಯದು ಬಿರಿಯುತಲಿ
ಕುಸಿಯುತಲಿ ತಗ್ಗಾಗಿ ಕಂದಕವು ಆಗುತಲಿ
ಗಿಡಗಂಟಿ ಬಿದ್ದಿಹವು ಕಲ್ಬಂಡೆ ಉರುಳಿಹವು
ಆ ಭೀಮ ಓಡುತಿರೆ ರಭಸದಲಿ ಅಡವಿಯಲಿ ॥೬೭೩॥

ತಗ್ಗುಗಳ ದಿನ್ನೆಗಳ ಕಂದಕವ ದಾಂಟುತಲಿ
ಭರದಿಂದ ಸಾಗುತಿರೆ ಗಂಗೆಯಾ ವರನದಿಯು
ಅಡ್ಡಾಗಿ ಬರುತಿರಲು ಎಲ್ಲರೂ ಇಳಿಯುತಲಿ
ನದಿಯೊಳಗೆ ದಾರಿಯನು ಅರಸುತಲಿ ಇರುತಿರಲು ॥೬೭೪॥

ನಾವಿಕನ ವೇಷದಲಿ ಓರ್ವನೇ ಐತಂದು
ಆ ವಿದುರ ನಿಮ್ಮಯಾ ಕಷ್ಟವನು ಅರಿಯುತಲಿ
ನದಿಯಿಂದ ದಾಟಿಸಲು ಯಂತ್ರದಾ ನೌಕೆಯನು
ಕಳಿಸಿಹನು ಅದು ಅಲ್ಲಿ ನದಿಯಲ್ಲಿ ನಿಂತಿಹುದು ॥೬೭೫॥

ನಿಮ್ಮನ್ನು ಆ ದಡಕೆ ತಲುಪಿಸುವೆನೆನ್ನುತಿರೆ
ವಿದುರನಾ ಉಪಕಾರ ಮನದೊಳಗೆ ನೆನೆಯುತಲಿ
ನೌಕೆಯನು ಏರುತಲಿ ಆಚೆಯಾ ತೀರವನು
ಐವರೂ ಪಾಂಡವರು ಸೇರಿದರು ಸಂತಸದಿ ॥೬೭೬॥

ನಾವಿಕನು ನಮಿಸುತಲಿ ಹೊರಡಲನುವಾಗಿರಲು
ಆ ವಿದುರ ಮಹಿಮಂಗೆ ನಾವೆಲ್ಲ ಉಪಕೃತರು
ನಮ್ಮಯ ಕೃತಜ್ಞತೆಯ ನಮನವನು ತಿಳಿಸುವದು
ಎನ್ನುತಲಿ ಧರ್ಮಜನು ನಾವಿಕನ ಕಳಿಸಿದನು ॥೬೭೭॥

## ಪಾಂಡವರು ಧೃತರಾಷ್ಟ್ರನನ್ನು ಶಪಿಸುವುದು

ಇತ್ತಲಾ ಪುರಜನರು ಪಾಂಡವರು ಸತ್ತಿಹರು
ಎಂಬುವಾ ದಾರುಣದ ವಾರ್ತೆಯನು ಕೇಳುತಲಿ
ಅರಮನೆಯು ಸುತ್ತಲೂ ನೆನೆಯುತಲಿ ದುಃಖದಲಿ
ಕಣ್ಣೀರ ಸುರಿಸುತಲಿ ರೋದನವ ಗೈದಿಹರು ॥೬೭೮॥

ನೀಚನಾ ಧೃತರಾಷ್ಟ್ರ ಭೂಪತಿಯ ಕೃತ್ಯವಿದು
ಪಾಂಡವರ ಕೊಲ್ಲಲಿಕೆ ಪುರೋಚನನ ಕಳಿಸುತಲಿ
ಅರಗಿನಾ ಅರಮನೆಯ ಕಟ್ಟಿಸುತ ಸುಟ್ಟಿಹನು
ಕೊಲೆಗಡುಕ ಪಾತಕಿಯು ಧೃತರಾಷ್ಟ್ರನೆಂದಿಹರು ॥೬೭೯॥

ಪಾಂಡವರ ಕೊಲ್ಲುವಾ ನಿನ್ನಯಾ ಮಹದಾಸೆ
ಫಲಿಸುತಲಿ ಕೃತಕೃತ್ಯ ನೀನಾದೆ ಎನ್ನುತಲಿ
ಧೃತರಾಷ್ಟ್ರ ಭೂಪತಿಗೆ ಅರುಹುವುದು ಎನ್ನುತಲಿ
ಪುರಜನರು ಗಣ್ಯರನು ಗಜಪುರಕೆ ಕಳಿಸಿದರು ॥೬೮೦॥

ಬರಸಿಡಿಲು ಎರಗಿದಾ ಪರಿಯಲ್ಲಿ ಪಾಂಡವರ
ಮರಣದಾ ವಾರ್ತೆಯದು ಗಜಪುರದಿ ಪಸರಿಸಲು
ಸಕಲ ಪ್ರಜೆ ಕಂಬನಿಯ ಸುರಿಸುತಲಿ ಅಳುತಲಿರೆ
ರೋದನದ ಘೋರಸ್ವರ ಮುಗಿಲನ್ನು ಮುಟ್ಟಿಹುದು ॥೬೮೧॥

ಅಕಟಕಟ ದುಷ್ಟನೀ ಧೃತರಾಷ್ಟ್ರ ಭೂಪತಿಯು
ತನ್ನಯಾ ಮಕ್ಕಳಿಗೆ ಸಾಮ್ರಾಜ್ಯ ದೊರೆಯಲಿಕೆ
ಅರಗಿನಾ ಮನೆಯೊಳಗೆ ಪಾಂಡವರ ಸುಡಿಸಿಹನು
ಕಡುಪಾಪಿ ಧೃತರಾಷ್ಟ್ರ ಎನ್ನುತಲಿ ಶಪಿಸಿದರು ॥೬೮೨॥

ಪಾಂಡವರು ಸತ್ತಿರುವ ಸುದ್ದಿಯನು ಕೇಳುತಲಿ
ಅಕಟೆನ್ನ ಸೋದರನ ಪಾಂಡುವಿನ ಸುತರೆಲ್ಲ
ಕುಂತಿಯಾ ಸಹಿತದಲಿ ಮೃತರಾಗಿ ಹೋದರೇ
ಎನ್ನುತಲಿ ಕಂಬನಿಯ ಸುರಿಸಿದನು ಧೃತರಾಷ್ಟ್ರ ॥೬೮೩॥

ಪಾಂಡವರ ನೋಡುತಲಿ ಆ ಪಾಂಡು ಸೋದರನು
ಸತ್ತಿರುವ ದುಃಖವನು ಮರೆತಿರ್ದ ಈವರೆಗೆ
ಈ ವಾರ್ತೆ ಕೇಳುತಲಿ ದುಃಖವನು ಭೋಗಿಪುದು
ಎನ್ನಯಾ ಹಣೆಯಲ್ಲಿ ಬರೆದಿತ್ತು ಎಂದಿಹನು ॥೬೮೪॥

ಬಂಧುಗಳೆ ಬಾಂಧವರೆ ನೀವೆಲ್ಲ ತೆರಳುತಲಿ
ಪಾಂಡವರ ಆ ಅಂತ್ಯ ಕ್ರಿಯೆಗಳನು ಮಾಡುವುದು
ಸದ್ಗತಿಯು ದೊರೆಯಲಿಕೆ ಶಾಸ್ತ್ರದಲಿ ವಿಧಿಸಿರುವ
ಕರ್ಮಗಳ ಮಾಡುವುದು ಎನ್ನುತಲಿ ಕಳಿಸಿದನು ॥೬೮೫॥

ಬಳಿಕಿನಲಿ ಸ್ನಾನವನು ಮಾಡುತಲಿ ಅಂಧನೃಪ
ಹಾ ಕುಂತಿ ಧರ್ಮಜನೆ ಹಾ ಭೀಮ ಅರ್ಜುನರೆ
ಹಾ ನಕುಲ ಸಹದೇವ ಎನ್ನುತಲಿ ಪಾಂಡವರ್ಗೆ
ಪಿಂಡವನು ಉದಕವನು ತರ್ಪಣವನಿತ್ತಿಹನು ॥೬೮೬॥

**ಪಾಂಡವರು ಹಿಡಂಬಕನ ರಾಕ್ಷಸನ ವನಕ್ಕೆ ಬರುವುದು**

ಇತ್ತಲಾ ಪಾಂಡವರು ನಾವೆಯನು ಇಳಿಯುತಲಿ
ತಾರೆಗಳ ಚಲನದಲಿ ದಾರಿಯನು ಅರಸುತಲಿ
ತೆಂಕಣದ ಮಾರ್ಗದಲಿ ಸಾಗುತಲಿ ಭರದಲ್ಲಿ
ಘೋರತರ ನಿಬಿಡವಿಹ ಕಾನನವ ಹೊಕ್ಕಿಹರು ॥೬೮೭॥

ನಿನ್ನೆಯಾ ದಿನದಿಂದ ಅನ್ನವನು ಉಣ್ಣದೆಯೆ
ನೀರಡಿಕೆ ಹಸಿವೆಯಲಿ ಬಳಲುತಲಿ ಭೀಮಂಗೆ
ನಮ್ಮೊಳಗೆ ನಡೆಯಲಿಕೆ ನೀನೊಬ್ಬ ಶಕ್ತನಿಹೆ
ಎಮ್ಮಯಾ ತ್ರಾಣವದು ಕುಂಠಿತವು ಆಗಿಹುದು ॥೬೮೮॥

ಮೊದಲಿನಾ ತೆರದಲ್ಲಿ ನಿನ್ನಯಾ ಭುಜದೊಳಗೆ
ಎಮ್ಮನ್ನು ಕೊಳ್ಳುವದು ತೆರಳುವುದು ಎನ್ನುತಿರೆ
ಕುಂತಿಯಾ ಸಹಿತದಲಿ ಸಕಲರನು ಭುಜದೊಳಗೆ
ಕೊಳ್ಳುತಲಿ ಗರುಡನಾ ಗಮನದಲಿ ನಡೆದಿಹನು ॥೬೮೯॥

ಹೊಳೆಹಳ್ಳ ಗಿರಿಗಳನು ಕೊಳ್ಳವನು ದುರ್ಗವನು
ದಾಂಟುತಲಿ ಧಾವಿಸುತ ಬಹುದೂರ ಕ್ರಮಿಸುತಲಿ
ಸಿಂಹಗಳ ವ್ಯಾಘ್ರಗಳ ಅತಿಕ್ರೂರ ಮೃಗಗಳಿಹ
ಕಾನನಕೆ ಸೇರಿದರು ಅಸ್ತಮಯ ಸಮಯದಲಿ ॥೬೯೦॥

ಘೋರತರ ಕತ್ತಲೆಯು ವಿಪಿನದಲಿ ಪಸರಿಸಲು
ನೀರಡಿಕೆ ಹಸಿವೆಯಲಿ ಸಕಲರೂ ಬಳಲುತಲಿ
ಮುಂದಕ್ಕೆ ನಡೆಯಲಿಕೆ ಚೈತನ್ಯವಿಲ್ಲದೆಯೆ
ಮರವೊಂದರಡಿಯಲ್ಲಿ ಕುಳಿತಿಹರು ದಣಿವಿನಲಿ ॥೬೯೧॥

ಆ ಕುಂತಿ ತಾಯಳಿಗೆ ನೀರಡಿಕೆ ಅತಿಯಾಗಿ
ಬಾಯಾರಿ ನೀರೆಂದು ನೀರೆಂದು ಎನ್ನುತಲಿ
ಜಗವೀರರೈವರೂ ಮಕ್ಕಳುಗಳಿರುತಿರಲು
ನೀರಿಲ್ಲದಂತಾಗಿ ಸಾಯುವಾ ದುರ್ದೈವ ॥೬೯೨॥

ನನಗಿಂದು ಬಂದಿಹುದೆ ಎನ್ನುತಲಿ ಅಳುತಲಿರೆ
ಆ ಭೀಮ ಮನನೊಂದು ಕಳವಳದಿ ತಕ್ಷಣದಿ
ನೀರನ್ನು ಶೋಧಿಸುತ ವನದೊಳಗೆ ಅಲೆಯುತಿರೆ
ಸುಂದರದ ವಿಸ್ತರದ ಸರಸಿಯನು ಕಂಡಿಹನು ॥೬೯೩॥

ಹರುಷದಲಿ ಐತಂದು ಸ್ನಾನವನು ಮಾಡುತಲಿ
ನೀರನ್ನು ಒಯ್ಯಲಿಕೆ ಪಾತ್ರೆಯದು ಇಲ್ಲದಿರೆ
ಹೊದೆದಿರುವ ವಸ್ತ್ರವನು ನೀರಿನೊಳು ಅದ್ದುತಲಿ
ಕೊಳ್ಳುತಲಿ ಬಂದಿಹನು ಕುಂತಿಯಾ ಬಳಿಯಲ್ಲಿ ॥೬೯೪॥

ಬರುತಿರಲು ಆ ಕುಂತಿ ಬಾಯಾರಿ ಬಳಲುತಲಿ
ಬರಿನೆಲದಿ ಹುಲ್ಲಿನಲಿ ಮಲಗಿಹುದ ಕಂಡಿಹನು
ನಾಲ್ವರೂ ಸೋದರರು ಕಲ್ಲಿನಲಿ ಮುಳ್ಳಿನಲಿ
ಕೊರೆಯುತಿಹ ಚಳಿಯಲ್ಲಿ ಒರಗಿಹುದ ಕಂಡಿಹನು ॥೬೯೫॥

ಈ ದೃಶ್ಯ ನೋಡುತಲಿ ಭೀಮನಾ ಹೃದಯದಲಿ
ಸಾವಿರದ ಅಲಗುಗಳು ಇರಿದಂತೆ ಆಗಿಹುದು
ಗಜಪುರದ ಅರಸರಿಗೆ ಈಪರಿಯ ದುರ್ಭಾಗ್ಯ
ಬಂದಿಹುದೆ ಎನ್ನುತಲಿ ಮನದೊಳಗೆ ನೊಂದಿಹನು ॥೬೯೬॥

ಜಗವೀರ ವಸುದೇವನೊಲುಮೆಯಾ ಸೋದರಿಯು
ಖ್ಯಾತನೃಪ ಆ ವಿಚಿತ್ರವೀರ್ಯನಾ ಸೊಸೆಯಿಹಳು
ಕುರುಕುಲದ ನೃಪತಿಲಕ ಪಾಂಡುವಿನ ಮಡದಿಯಿಹ
ಆ ಕುಂತಿ ಮಣ್ಣಿನಲಿ ಮುಳ್ಳಿನಲಿ ಮಲಗಿಹಳು ॥೬೯೭॥

ಸಕಲ ಭೂಮಂಡಲವ ಅರಸಾಗಿ ಆಳಲಿಕೆ
ಯೋಗ್ಯನಿಹ ಧರ್ಮಜನು ನೆಲದಲ್ಲಿ ಒರಗಿಹನು
ಮೂಲೋಕ ಜಯಿಸುವಾ ವೀರನಿಹ ಅರ್ಜುನನು
ಮಣ್ಣಿನಲಿ ಮಲಗಿಹನು ಯಮಳರಾ ಸಹಿತದಲಿ ॥೬೯೮॥

ಅಕಟಕಟ ಎಂಥಹದು ಕಷ್ಟಕರ ನೋಟವಿದು
ಇದಕೆಲ್ಲ ದುರುಳನಾ ಕೌರವನೆ ಕಾರಣನು
ಸಹಿಸನೀ ದುಃಖವನು ಸಹಿಸೆನೀ ದುಃಖವನು
ಕೌರವನ ಕೊಲ್ಲದೆಯೇ ಶಾಂತಿಯದು ಎನಗಿಲ್ಲ ॥೬೯೯॥

ಸಮ್ಮತವರಲ್ಲದೆಯೆ ಮಹತಾಯಿ ಕುಂತಿಯನು
ಅಗ್ನಿಯಲಿ ಸುಡಲಿಕ್ಕೆ ಯತ್ನವನು ಗೈದಿರುವ
ನೀಚನಾ ಕೌರವನ ತನಿಗರುಳ ಬಗಿಯುತಲಿ
ಯಮಸದನಕಟ್ಟದೆಯೆ ಶಾಂತಿಯದು ಎನಗಿಲ್ಲ ॥೨೦೦॥

ನಿನ್ನಯಾ ಗ್ರಹಗತಿಯು ಚನ್ನಾಗಿ ಇರುತಿಹುದು
ಕೌರವನೆ ಧರ್ಮಜನು ನಿನ್ನನ್ನು ಕೊಲ್ಲಲಿಕೆ
ಆಜ್ಞೆಯನು ಇತ್ತಿಲ್ಲ ಆಯುಷ್ಯ ನಿನಗಿಹುದು
ಸಮಯದಲಿ ನಿನ್ನನ್ನು ಕೊಲ್ಲದೇ ಬಿಡೆನೆಂದ ॥೨೦೧॥

ಗಾಢದಲಿ ಮಲಗಿರ್ದ ಕುಂತಿಯನು ನೋಡುತಲಿ
ಎಚ್ಚರವು ಆಗುತಿರೆ ನೀರನ್ನು ಕುಡಿಯುವುದು
ಎನ್ನುತಲಿ ಮಾರುತಿಯು ಸಕಲರನು ಈಕ್ಷಿಸುತ
ರಕ್ಷಿಸುತ ಕುಳಿತಿಹನು ಕಾನನದಿ ಕತ್ತಲಲಿ ॥೨೦೨॥

ಹುಲಿಕರಡಿ ಸಿಂಹಗಳು ಸರಿಸೃಪಗಳಾನೆಗಳು
ರಕ್ಕಸರು ಅಲೆಯುತಿಹ ಭೀಕರದ ಅಡವಿಯಿದು
ಎನ್ನುತಲಿ ನಿದ್ರಿಸದೆ ಸೋದರರ ನೋಡುತಲಿ
ಕಣ್ಣೆವೆಯ ಮುಚ್ಚದೆಯೆ ಕುಳಿತಿಹನು ಅನಿಲಜನು ॥೨೦೩॥

**ರಕ್ಕಸ ಹಿಡಿಂಬನಾ ವಧಿಸುತಲಿ ಆತನಾ**
**ತಂಗಿಯ ಹಿಡಿಂಬೆಯನು ವರಿಸಿದನು ಒಲವಿನಲಿ**

ಸನಿಹದಲಿ ಸಾಲದಾ ವೃಕ್ಷದಲಿ ವಾಸಿಸುವ
ಕೆಂಗಣ್ಣು ಹೇರೊಡಲ ಗುಹೆಯಂಥ ನಾಸಿಕದ
ಕೋರೆಯಾ ಹಲ್ಲುಗಳ ಚಾಚಿರುವ ನಾಲಗೆಯ
ಮನುಜರನು ಭಕ್ಷಿಸುವ ರಕ್ಕಸ ಹಿಡಿಂಬಕನು ॥೨೦೪॥

ಹಸಿವೆಯಲಿ ಬಳಲುತಲಿ ಸುತ್ತಲೂ ನೋಡುತಿರೆ
ಮರದಡಿಯೆ ಮಲಗಿರ್ದ ಪಾಂಡವರ ನೋಡುತಲಿ
ನರಮಾಂಸ ವಾಸನೆಯು ನಾಸಿಕವನರಳಿಸಲು
ಹರುಷದಲಿ ಸೋದರಿ ಹಿಡಿಂಬೆಯನು ಕರೆಯುತಲಿ ॥೨೦೫॥

ಹೇ ತಂಗಿ ಅಗೋ ಅಲ್ಲಿ ಕಾಣುತಿಹ ಗಿಡದಡಿಯೆ
ಮಾನವರು ಮಲಗಿಹರು ಅಲ್ಲಿಗೇ ಹೋಗುತಲಿ
ಅವರಾರು ಎಂಬುದನು ಅರಿಯುತಲಿ ಸಕಲರನು
ಕೊಲ್ಲುತಲಿ ಕೊಳ್ಳುತಲಿ ಬೇಗನೇ ಬಹುದಿಲ್ಲಿ ॥೨೦೬॥

ನರಮಾಂಸ ದೊರೆಯದಲೆ ಬಹಳದಿನ ಕಳೆದಿಹವು
ಆಯಾಸವಿಲ್ಲದೆಯೆ ಎನಗಿಂದು ದೊರೆತಿಹುದು
ಸುಮಧುರದವಾಸನೆಯು ಮೂಗನ್ನು ಅರಳಿಸಿದೆ
ಸರ್ವರಾ ಮಾಂಸವನು ತಿನ್ನುತಲಿ ತಣಿಯುವೆನು ॥೨೦೭॥

ಹಲ್ಲುಗಳು ಕಡಿಯಲಿಕೆ ಕಾತರವಗೊಂಡಿಹವು
ನಾಲಗೆಯು ತಿನ್ನಲಿಕೆ ಅತ್ಯಾಸೆ ಪಡುತಲಿದೆ
ಮಾಂಸವನು ತಿನ್ನುತಲಿ ರಕುತವನು ಕುಡಿಯುತಲಿ
ಈರ್ವರೂ ಸಂತಸದಿ ನರ್ತನವ ಮಾಡೋಣ ॥೨೦೮॥

ಈ ತೆರದಿ ರಕ್ಕಸನು ನುಡಿಯುತಿರೆ ಹಿಡಿಂಬೆಯು
ಪಾಂಡವರು ನಿದ್ರಿಸುವ ಸ್ಥಳದಲ್ಲಿ ಬರುತಿರಲು
ಐವರೂ ಮಲಗಿರಲು ಭೀಮನವನೋರ್ವನೇ
ಎಚ್ಚರದಿ ಕಾಯುತಲಿ ಕುಳಿತಿಹುದ ಕಂಡಿಹಳು ॥೨೦೯॥

ವಿಸ್ತರದ ಮಸ್ತಕದ ಉಜ್ವಲದ ನೇತ್ರಗಳ
ಅತಿಪುಷ್ಟ ಬಾಹುಗಳ ಹರವಾದ ಎದೆಯಿಂದ
ಶ್ಯಾಮಲದ ವರ್ಣದಲಿ ಶೋಭಿಸುವ ಸುಂದರನ
ಭೀಮನನ ನೋಡುತಲಿ ಆಶ್ಚರ್ಯಗೊಳ್ಳುತಲಿ ॥೨೧೦॥

ಕಣ್ಣವೆಯ ಮುಚ್ಚದಲೆ ಮರುತಜನ ನೋಡುತಿರೆ
ಮೋಹದಲಿ ಕಾಮನಾ ಶರಹತಿಗೆ ಸಿಲುಕುತಿರೆ
ಈ ತೆರದಿ ಸುಂದರನ ಮನಸೂರೆಗೊಂಬುವನ
ಮಹಕಾಯ ಚೆಲುವನನ ಹಿಂದೆಂದು ನೋಡಿಲ್ಲ ॥೨೧೧॥

ಅಣ್ಣನಾ ಆಜ್ಞೆಯಲಿ ಇವನನ್ನು ನಾ ಕೊಲ್ಲೆ
ಇವನನ್ನು ನೋಡುತಲಿ ಅತಿಮೋಹಗೊಂಡಿಹೆನು
ಇವನೊಡನೆ ರಮ್ಯದಾ ಗಿರಿಧಾಮ ಸ್ಥಳಗಳಲಿ
ಸಂಚರಿಸಿ ವಿಹರಿಸುತ ರಮಿಸುವೆನು ಸಂತಸದಿ ॥೨೧೨॥

ಕ್ಷಣವೊಂದು ನಾಲಗೆಯ ರುಚಿಗೋಸುಗಿತನನು
ಕೊಲ್ಲುತಲಿ ತಿನ್ನುವದಕಿಂತಲೂ ಮೇಲಾಗಿ
ಈತನನು ಒಲಿಸುತಲಿ ರಮಿಸುತಲಿ
ಅನವರತ ಕಾಲವನು ಕಳೆಯುವೆನು ಸುಖದಲ್ಲಿ ॥೨೧೩॥

ರಕ್ಕಸಿಯ ರೂಪದಲಿ ನಾ ಅಲ್ಲಿ ತೆರಳಿದರೆ
ಭಯಭೀತನಾಗುತಲಿ ಮೋಹಿಸನು ಎನ್ನುತಲಿ
ಮಾಯೆಯಲಿ ಸುಂದರದ ರೂಪವನು ತಳೆಯುತಲಿ
ಅಂದದಲಿ ವಸ್ತ್ರಗಳ ಆಭರಣ ಧರಿಸುತಲಿ ॥೨೧೪॥

ಮೆಲ್ಲನೆಯೆ ಹೆಜ್ಜೆಗಳನಿರಿಸುತಲಿ ಸಾಗುತಲಿ
ಬೆಡಗಿನಲಿ ಭೀಮನಾ ಬಳಿಬಂದು ಹಿಡಿಂಬೆಯು
ನೀವಾರು ಇರುತಿಹಿರಿ ಈ ಪರಿಯ ಭೀಕರದ
ಕಾನನಕೆ ಏತಕ್ಕೆ ಬಂದಿಹಿರಿ ಎಂದಿಹಳು ॥೨೧೫॥

ದೇವತೆಗಳಂತೆಸೆವ ಇವರಾರು ಇರುತಿಹರು
ಶ್ಯಾಮಲಳು ಕೋಮಲಳು ವೃದ್ಧೆಯಳು ಆಗಿರುವ
ನಿರ್ಭಯದಿ ನಿದ್ರಿಸುವ ಇವಳಾರು ಇರುತಿಹಳು
ನಿನಗಾವ ಸಂಬಂಧ ಇರುತಿಹಳು ಇವಳಲ್ಲಿ ॥೨೧೬॥

ಅತಿಶೂರನಾಗಿರುವ ಹಿಡಿಂಬನೆಂಬುವಾ
ರಕ್ಕಸನು ಈ ವನವ ರಾಜ್ಯವನು ಆಳುವನು
ನಿಮ್ಮನ್ನು ತಿನ್ನಲಿಕೆ ಕೊಂಡೊಯ್ಯುದೆನ್ನುತಲಿ
ಎನ್ನನ್ನು ಇಲ್ಲಿಗೇ ತ್ವರಿತದಲಿ ಕಳಿಸಿಹನು ॥೨೧೭॥

ಆದೊಡೆಯು ನಿನ್ನನ್ನು ನೋಡಿದಾಕ್ಷಣದಲ್ಲಿ
ನಿನ್ನಯಾ ಮಹರೂಪ ನೋಡುತಲಿ ಮನಸೋತು
ಕಾಮಿತಳು ನಾನಾಗಿ ನಿನ್ನನ್ನು ಅಲ್ಲದೆಯೆ
ಬೇರಾರನೆಂದಿಗೂ ವರಿಸಲಾರೆನ್ನುತಲಿ ॥೨೧೮॥

ಮನದೊಳಗೆ ಧೃಢವಾಗಿ ನಿಶ್ಚಯವ ಗೈದಿಹೆನು
ಒಲಿಯುತಲಿ ಬಂದಿರುವ ಎನ್ನನ್ನು ತ್ಯಜಿಸದಲೆ
ಗಿರಿಶಿಖರ ಪರ್ವತದಿ ಉದ್ಯಾನ ವನಗಳಲಿ
ಎನ್ನನ್ನು ರಮಿಸುತಲಿ ತಣಿಸುವುದು ಮನದಣಿಯೆ ॥೨೧೯॥

ಗಗನದಲಿ ಸಂಚರಿಪ ಶಕ್ತಿಯದು ಎನಗುಂಟು
ಎನ್ನೊಡನೆ ನಭಕೇರಿ ಆಗಸದ ಅಂಚಿನಲಿ
ಚರಿಸುತಲಿ ಹರುಷದಲಿ ರಮಿಸುವದು ನೀನೆಂದು
ಖಳನನುಜೆ ನುಡಿಯುತಿರೆ ಅನಿಲಜನು ನುಡಿದಿಹನು ॥೨೨೦॥

ನಿದ್ರಿಸುವ ತಾಯಿಯನು ಸೋದರರ ತ್ಯಜಿಸುತಲಿ
ನಿನ್ನೊಡನೆ ವಿಹರಿಸಲು ರಮಿಸಲಿಕೆ ತೆರಳಲಿಕೆ
ಕಾಮುಕನು ನಾನಲ್ಲ ನಿಮ್ಮಣ್ಣ ರಕ್ಕಸಗೆ
ತಿನ್ನಲಿಕೆ ಕೊಡಲಿಕ್ಕೆ ಕಡುಮೂರ್ಖ ನಾನಲ್ಲ ॥೨೨೧॥

ಈ ತೆರದಿ ಆ ಭೀಮ ನುಡಿಯುತಿರೆ ಹಿಡಿಂಬೆಯು
ಇವರನ್ನು ಎನ್ನಯಾ ಭುಜದಲ್ಲಿ ಕೊಳ್ಳುತಲಿ
ಒಯ್ಯುತಲಿ ಬೇರೆಡೆಗೆ ಸುಖವಾಗಿ ಇರಿಸುವೆನು
ಇವರನ್ನ ಎಬ್ಬಿಸುವುದೆನ್ನುತಲಿ ನುಡಿದಿಹಳು ॥೨೨೨॥

ನಿದ್ರಿಸುವ ಇವರನ್ನು ಎಚ್ಚರವ ಗೊಳಿಸದಿಹೆ
ರಕ್ಕಸಗೆ ಹೆದರುತಲಿ ಓಡುತಲಿ ಹೋಗದಿಹೆ
ಸುರರೊಳಗೆ ಯಕ್ಷರೊಳು ಗಂದರ್ವರಾದ್ಯರಲಿ
ಎನಗಾರು ಸಮರಿಲ್ಲ ಯುದ್ಧದಲಿ ಶಕ್ತಿಯಲಿ ॥೨೨೩॥

ರಕ್ಕಸರು ಮಾಯಾವಿರೂಪಿಗಳು ಮೋಸದಲಿ
ವೇಷವನು ಧರಿಸುತಲಿ ಮರುಳಾಗಿ ಮಾಡುತಲಿ
ವಿಧವಿಧದಿ ಹಿಂಸೆಯನು ಕ್ರೌರ್ಯವನು ಮಾಡುವರು
ನಿನ್ನಲ್ಲಿ ವಿಶ್ವಾಸ ಎನಗಿಲ್ಲ ಎಂದಿಹನು ॥೨೨೪॥

ನಿನ್ನನ್ನು ಪ್ರೀತಿಸುತ ಪ್ರೇಮದಲಿ ಬಂದಿಹೆನು
ನಿನಗಾಗಿ ಎನ್ನಯಾ ಪ್ರಾಣವನು ಅರ್ಪಿಸುವೆ
ಎನ್ನಯಾ ನುಡಿಗಳನು ನಿಜವೆಂದು ನಂಬುವುದು
ಎನ್ನುತಲಿ ದೈನ್ಯದಲಿ ಆ ದನುಜೆ ಪ್ರಾರ್ಥಿಸಲು ॥೨೨೫॥

ಎನಗಾಗಿ ಪ್ರಾಣವನು ಅರ್ಪಿಪೆಯೊ ಕೊಳ್ಳುವೆಯೊ
ಇದನಾರು ಬಲ್ಲವರು ನಂಬಿಕೆಯು ನಮಗಿಲ್ಲ
ರಕ್ಕಸರ ಹೆಣ್ಣನಾ ಗೊಡುವೆಯೇ ಬೇಡೆಮಗೆ
ಮನುಜರಿಗೆ ದನುಜರಿಗೆ ಎತ್ತಣದ ಸಂಬಂಧ ॥೨೨೬॥

ಮನಬಂದೊಡಿಲ್ಲಿಹುದು ಇಲ್ಲದಿರೆ ತೆರಳುವುದು
ಎಮ್ಮನ್ನು ತಿನ್ನುವಾ ಮಹದಾಸೆ ಇರ್ದೊಡೆಯು
ನಿಮ್ಮಣ್ಣ ಅವನನ್ನು ಇಲ್ಲಿಗೇ ಕಳುಹುವುದು
ನಿಮಿಷದಲಿ ಯಮಸದನಕಟ್ಟುವೆನು ಎಂದಿಹನು ॥೨೨೭॥

ತಡವೇಕೆ ಮಾಡಿಹಳೊ ನನತಂಗಿ ಎನ್ನುತಲಿ
ತರುವಿಳಿದು ರಕ್ಕಸನು ಕೋಪದಲಿ ತ್ವರಿತದಲಿ
ಆಕ್ರೋಶಗೈಯ್ಯುತಲಿ ಕೆಂಡವನು ಕಾರುತಲಿ
'ಆ' ಎಂದು ಬಾಯನ್ನು ಅಗಲಾಗಿ ತೆರೆಯುತಲಿ ॥೨೨೮॥

ಓಡುತಲಿ ಬರುತಲಿರೆ ನೋಡುತ ಹಿಡಿಂಬೆಯು
ಆಗೊ ಅಲ್ಲಿ ನಮ್ಮಣ್ಣ ಬರುತಲಿಹ ತಿನ್ನಲಿಕೆ
ಬೇಗನೇ ನಿಮ್ಮನ್ನು ಬೇರೆಡೆಗೆ ಕೊಂಡೊಯ್ದು
ಸುಖವಾಗಿ ಇರಿಸುವೆನು ಎನ್ನುತಲಿ ನುಡಿಯುತಿರೆ ॥೨೨೯॥

ನಿನಗೆನ್ನ ಶಕ್ತಿಯಾ ಅರಿವಿಲ್ಲ ಅಂಗನೆಯೆ
ಈ ಪರಿಯ – ಸಾವಿರದ ರಕ್ಕಸರು ವಿಕ್ರಮರು
ಎನ್ನನ್ನು ಮುತ್ತಿದರು ಸಕಲರನು ಸದೆಬಡಿವೆ
ಕ್ಷಣದಲ್ಲಿ ಕತ್ತರಿಸುವೆ ಎನ್ನುತಲಿ ನುಡಿದಿಹನು ॥೨೩೦॥

ಆನೆಯಾ ಸೊಂಡಿಲಿನ ಪರಿ ಇರುವ ಬಾಹುಗಳ
ವಜ್ರ ತೆರ ಕಠಿಣವಿಹ ಎನ್ನೆದೆಯ ನೋಡುವುದು
ಇಂದ್ರನಾ ಶಕ್ತಿಯದು ಶೌರ್ಯವದು ಎನಗಹುದು
ನೀನೀಗ ಪ್ರತ್ಯಕ್ಷ ನೋಡುವುದು ಎಂದಿಹನು ॥೨೩೧॥

ಅನಿತರಲಿ ಮನುಜನನು ಭಕ್ಷಿಸುವ ಹಿಡಿಂಬನು
ಸನಿಹದಲಿ ಐತಂದು ನುಡಿಗಳನು ಕೇಳುತಲಿ
ಹೊಳೆಯುತಿಹ ವಸ್ತ್ರದಲಿ ಸ್ವರ್ಣದಾಭರಣದಲಿ
ರತ್ನದಾ ಹಾರದಲಿ ತೇಜದಲಿ ಹೊಳೆಯುತಿಹ ॥೭೩೨॥

ಅತಿಸೊಬಗು ಲಾವಣ್ಯ ಸೌಂದರ್ಯ ಉಕ್ಕುತಿಹ
ಸೊಬಗಿನಾ ರೂಪದಲಿ ಹೊಳೆಯುತಿಹ ತಂಗಿಯನು
ನೋಡುತಲಿ ಈತನೊಳು ಕಾಮಿಸಿಹಳೆನ್ನುತಲಿ
ಸಂಶಯವು ಮೂಡುತಲಿ ಕೋಪವದು ಇಮ್ಮಡಿಸಿ ॥೭೩೩॥

ಹಸಿವೆಯಲಿ ಬಳಲುತಿಹ ಎನ್ನನ್ನು ಮರೆಯುತಲಿ
ಆಹಾರವೀಯದಲೆ ಹುಲುನರನ ಕಾಮಿಸುತ
ಸ್ವೇಚ್ಛೆಯಲಿ ವರ್ತಿಸಿದ ಸ್ವೈರಿಣಿಯೆ ಮೂರ್ಖಳೇ
ರಾಕ್ಷಸರ ವಂಶದಾ ಕೀರ್ತಿಯನು ಅಳಿಸಿರುವೆ ॥೭೩೪॥

ಆರನ್ನು ಮೋಹಿಸುತ ಈ ಕಾರ್ಯ ಗೈಯ್ಯುವೆಯೊ
ಅವನನ್ನು ನಿನ್ನನ್ನು ಇಬ್ಬರನು ಕೊಲ್ಲುವೆನು
ಎನ್ನುತಲಿ ಕೋಪದಲಿ ಕ್ರೂರನಾ ರಕ್ಕಸನು
ಹಿಡಿಂಬೆಯನು ಕೊಲ್ಲಲಿಕೆ ಕರಗಳನು ಎತ್ತುತಿರೆ ॥೭೩೫॥

ಮಾರುತಜನು ನೋಡುತಲಿ ರೋಷದಲಿ ಅಸುರಂಗೆ
ಎಲವೊ ತಡೆ ದುರುಳನೇ ಎನ್ನುತಲಿ ಹಿಡಿಯುತಲಿ
ಹೆಂಗುಸಿನ ಮೇಲೇಕೆ ನಿನ್ನಯಾ ಶೌರ್ಯವದು
ಎನ್ನೊಡನೆ ನಿನ್ನಯಾ ಶಕ್ತಿಯನು ತೋರುವದು ॥೭೩೬॥

ನಿನ್ನಾಜ್ಞೆ ಪಾಲಿಸಲು ಅವಳಿಲ್ಲಿ ಬಂದಿಹಳು
ಹದಿಹರೆಯ ಹೆಣ್ಣಿಂಗೆ ಸುಂದರನ ಪುರುಷನಲಿ
ಮನಸೋಲ್ವುದಿದು ಸಹಜ ಮದನನೇ ಕಾರಣನು
ಇವಳಾವ ಅಪರಾಧ ದುಷ್ಕೃತ್ಯಗೈದಿಲ್ಲ ॥೭೩೭॥

ಬಡಹೆಂಗುಸೊಬ್ಬಳನು ಬಡಿಯುತಲಿ ಕೊಲ್ಲುವುದು
ನಿನ್ನಂಥ ಬಲಯುತಗೆ ರಕ್ಕಸಗೆ ಸಲ್ಲದಿದು
ಎನ್ನೆದುರು ಸ್ತ್ರೀಯನ್ನು ಕೊಲ್ಲುವುದ ನಾ ಸಹಿಸೆ
ಮೊದಲಿಂಗೆ ಎನ್ನೊಡನೆ ಯುದ್ಧಕ್ಕೆ ಬಾ ಎಂದ ॥೭೩೮॥

ಮನುಜರನು ತಿನ್ನುತಿಹ ನಿನ್ನನ್ನು ಕೊಲ್ಲುತಲಿ
ವನವನ್ನು ನಿಷ್ಕಂಟಕಾಗುತಲಿ ಮಾಡುವೆನು
ಮದವೇರ್ದ ಗಜವನ್ನು ಸಿಂಹವದು ಕೊಲುವಂತೆ
ಸೊಕ್ಕಿರುವ ನಿನ್ನನ್ನು ಕೊಲ್ಲುವೆನು ಎಂದಿಹನು ॥೭೩೯॥

ಎಲವೆಲವೊ ಹುಲುಮನುಜ ಸುಮ್ಮನೇ ಗರ್ವದಲಿ
ಏತಕ್ಕೆ ನುಡಿಯುತಿಹೆ ಕಾಲವನು ಕಳೆಯುತಲಿ
ನಿಮಿಷದಲಿ ನಿನ್ನನ್ನು ವಧೆಗೈದು ನಿನ್ನಯಾ
ಮಾಂಸವನು ತಿನ್ನುವೆನು ಎನ್ನುತಲಿ ನುಡಿಯುತಲಿ ॥೭೪೦॥

ನೀಳಮಿಹ ತೋಳುಗಳ ಚಾಚುತಲಿ ಓಡುತಲಿ
ಭೀಮನನು ನುಂಗಲಿಕೆ ಬರುತಿಹನೊ ಎಂಬಂತೆ
ರಕ್ಕಸನು ಬಾಯ್ದೆರೆದು ಒರುತಿರಲು ಕಲಿಭೀಮ
ಕಾಲಿನಲಿ ಒದೆಯುತಿರೆ ದೂರದಲಿ ಬಿದ್ದಿಹನು ॥೭೪೧॥

ಐವತ್ತು ಗಜದಾಚೆ ಹಾರುತಲಿ ಬೀಳುತಿರೆ
ಮೇಲಕ್ಕೆ ಏಳುತಲಿ ಸೂರ್ಮಡಿಯ ರೋಷದಲಿ
ಮರಗಳನು ಕಿತ್ತುತಲಿ ಭೀಮನನು ಬಡಿಯಲಿಕೆ
ಧಾವಿಸುತ ಐತರಲು ಮರುತಜನು ನೋಡುತಲಿ ॥೭೪೨॥

ಕೆಲದಲಿಹ ದ್ರುಮವನ್ನು ಕೀಳುತಲಿ ಭರದಲ್ಲಿ
ಅಸುರಂಗೆ ಎಸೆಯುತಿರೆ ತಾಗುತಲಿ ಬಿದ್ದಿಹನು
ತಿರುವುಗಳ ಮುರುವುಗಳ ಹಿಡಿತದಲಿ ಮಲ್ಲದಲಿ
ಮುಷ್ಟಿಪ್ರಹಾರದಲಿ ಹೆಣಗುತಲಿ ಸೆಣಸಿದರು ॥೭೪೩॥

ಮತ್ತದಾ ಗಜವೆರಡು ಸೆಣಸುವಾ ಪರಿಯಲ್ಲಿ
ಈರ್ವರೂ ಘೋರದಲಿ ಯುದ್ಧವನು ಗೈಯ್ಯುತಿರೆ
ಗರ್ಜನೆಗೆ ಆರ್ಭಟೆಗೆ ನಭಬಿರಿವ ನಾದಕ್ಕೆ
ನಿದ್ರಿಸುವ ಪಾಂಡವರು ಎಚ್ಚರವಗೊಂಡಿಹರು ॥೭೪೪॥

ಏಳುತಲಿ ಪಾಂಡವರು ಮುಂದಕ್ಕೆ ನಿಂತಿರುವೆ
ಸುಂದರಿ ಹಿಡಿಂಬೆಯನು ನೋಡಿದರು ಚಕಿತದಲಿ
ಕೌತುಕದಿ ಆ ಕುಂತಿ ನೀನಾರು ಇರುತಿರುವೆ
ಸ್ವರ್ಗದಾ ಅಪ್ಸರೆಯ ಪರಿಯಲ್ಲಿ ಶೋಭಿಸುವೆ ॥೭೪೫॥

ಸಾಮಾನ್ಯ ಸ್ತ್ರೀಯಂತೆ ನೀ ಕಾಣುತಿಹುದಿಲ್ಲ
ಕುಲಗೋತ್ರನಾಮಗಳು ಬಂಧುಗಳು ಆರಿಹರು
ಈ ವನದ ದೇವತೆಯೊ ಸುರಲೋಕ ದೇವತೆಯೊ
ನೀನಾರು ಹೇಳುವದು ಎಲ್ಲವನು ಎಂದಿಹಳು ॥೭೪೬॥

ತಾಯೆದುರು ನಿಜಸುತೆಯು ಪೇಳುವಾ ಪರಿಯಲ್ಲಿ
ನೋಡಮ್ಮ ನನ್ನಣ್ಣ ಹಿಡಿಂಬನೆಂಬ ಸುರನು
ಈ ವನದ ರಾಜ್ಯವನು ಆಳುತ್ತಲಿರುತಿಹನು
ನಿಮ್ಮನ್ನು ಕೊಲ್ಲುತಲಿ ತಿನ್ನಲಿಕೆ ಕೊಂಡು ಬಾ ॥೭೪೭॥

ಎಂದೆನ್ನ ಕಳುಹಿಸಿರೆ ನಾ ಬರುತ ಈ ಎಡೆಗೆ
ಅದ್ಭುತದ ಕಾಯದಲಿ ಶೋಭಿಸುವ ಸುಂದರನೆ
ನಿನ್ನಯಾ ಸುತನನ್ನು ನೋಡುತಲಿ ಮೋಹಿಸುತ
ಎನ್ನನ್ನು ವರಿಸಲಿಕೆ ಪ್ರಾರ್ಥನೆಯ ಗೈಯ್ಯುತಿರೆ ॥೭೪೮॥

ಎನ್ನಣ್ಣ ರಕ್ಕಸನು ತಡವಾಯ್ತು ಎನ್ನುತಲಿ
ಹಸಿವೆಯಲಿ ಕಂಗೆಟ್ಟು ಬಾಯಾರಿ ಕಳವಳಿಸಿ
ನಿಮ್ಮನ್ನು ತಿನ್ನಲಿಕ್ಕೆ ಕೋಪದಲಿ ಬಂದಿಹನು
ಈರ್ವರಾ ಯುದ್ಧವದು ನಡೆದಿಹುದು ಎಂದಿಹಳು ॥೭೪೯॥

ಪರ್ವತಗಳೆರಡೆದ್ದು ತಾಗುತಲಿ ಅಪ್ಪಳಿಸಿ
ಕದನವನು ಮಾಡುತಿಹ ಪರಿಯಲ್ಲಿ ಕಾಣುತಿವೆ
ಸಿಂಹಗಳು ಸಿಟ್ಟಿನಲಿ ಸೆಣಸುತಿಹ ಪರಿಯಲ್ಲಿ
ಈರ್ವರೂ ಕಾಣುವರು ನೋಡುವುದು ಎಂದಿಹಳು ॥೭೫೦॥

ಒಬ್ಬರರನೊಬ್ಬರನು ತೆಕ್ಕೆಯಲಿ ಅಪ್ಪುತಲಿ
ಎತ್ತುತಲಿ ಅಪ್ಪಳಿಸಿ ತಳ್ಳುತಲಿ ನೂಕುತಲಿ
ಘನಘೋರ ಯುದ್ಧವನು ಬಹುಕಾಲ ಗೈಯ್ಯುತಿರೆ
ಅರ್ಜುನನು ಕಾಣುತಲಿ ಭೀಮನಿಗೆ ನುಡಿದಿಹನು ॥೭೫೦॥

ಎಮ್ಮನ್ನು ಎಚ್ಚರವಗೊಳಿಸದೆಯೆ ಓರ್ವನೇ
ಸಂಗ್ರಾಮಗೈಯ್ಯುತಿಹೆ ಶ್ರಮವಾಗಿ ದಣಿದಿರುವೆ
ರಕ್ಕಸನ ಬಿಟ್ಟುಬಿಡು ಶರವೊಂದರಿಂದವನ
ಶಿರವನ್ನು ತೆಗೆಯುತಲಿ ಮುಗಿಲಂಚಗಟ್ಟುವೆನು ॥೭೫೨॥

ಸೊರಜಿನಂತಿರುತಿರುವ ದುರುಳನೀ ರಕ್ಕಸನ
ಕೊಲ್ಲಲಿಕೆ ಸುಮ್ಮನೇ ತಡವೇಕೆ ಮಾಡುತಿಹೆ
ಸೂರಾನೆ ಬಲವುಳ್ಳ ಅದ್ಭುತ ಪರಾಕ್ರಮಿಗೆ
ಇಲಿಯಂತೆ ಇಹ ಇವನ ವಧಿಸಲಿಕೆ ತಡವೇಕೆ ॥೭೫೩॥

ಈ ಪರಿಯೆ ಅರ್ಜುನನು ನುಡಿಯುತಿರೆ ಕಲಿಭೀಮ
ನೀನೋಡು ಈಗಲೇ ಎನ್ನುತಲಿ ಹಿಡಿಂಬನನು
ಎತ್ತುತಲಿ ನೂರುಸಲ ತಿರ್ರನೇ ತಿರುಗಿಸುತ
ಮುಂದಿರುವ ಕಲ್ಬಂಡೆಗಪ್ಪಳಿಸುತಿರುತಿರಲು ॥೭೫೪॥

ನಭಬಿರಿವ ಸ್ವರದಿಂದ ಆಕ್ರೋಶಗೈಯ್ಯುತಲಿ
ರಕುತವನು ಕಾರುತಲಿ ಧರೆಗುರುಳಿ ಬೀಳುತಿರೆ
ಮರುತಜನು ದೈತ್ಯನಾ ದೇಹವನು ಬಗ್ಗಿಸುತ
ಭಾಗೆರಡು ಮಾಡುತಲಿ ಅತ್ತಿತ್ತ ಒಗೆದಿಹನು ॥೭೫೫॥

ರಕ್ಕಸನ ಕೊಂದಿಹುದ ಕಾಣುತಲಿ ಸಂತಸದಿ
ಧರ್ಮಜನು ಮೊದಲಾಗಿ ಸಕಲರೂ ಸೋದರರು
ಭೀಮನಾ ಶೌರ್ಯವನು ಹೊಗಳುತಲಿ ಅಪ್ಪುತಲಿ
ಆನಂದ ಬಾಷ್ಪವನು ಸುರಿಸಿಹರು ಮುದದಿಂದ ॥೭೫೬॥

ಆಗಲಾ ಅರ್ಜುನನು ಅಣ್ಣನಿಗೆ ಭೀಮನಿಗೆ
ಇಲ್ಲಿಯಾ ಕಾರ್ಯವದು ಸಂಪೂರ್ಣ ಮುಗಿದಿಹುದು
ಸನಿಹದಲಿ ಪುರವೊಂದು ಇರುತಿಹುದು ಕಾಣುತಿದೆ
ನಾವೆಲ್ಲ ಆ ಪುರಕೆ ತೆರಳೋಣ ಎನ್ನುತಿರೆ ॥೭೫೭॥

ಸಕಲರೂ ಕುಂತಿಯಾ ಸಹಿತದಲಿ ಹೊರಟಿರಲು
ಬೆನ್ನಿನಲಿ ರಕ್ಕಸಿ ಹಿಡಿಂಬೆಯಳು ಬರುತಿರಲು
ಅನಿಲಜನು ಈಕ್ಷಿಸುತ ಎಮ್ಮೊಡನೆ ಬಾರದಿರು
ನಿನ್ನಯಾ ಸ್ಥಾನಕ್ಕೆ ಮರಳುವುದು ಎಂದಿಹನು ॥೭೫೮॥

ರಕ್ಕಸರು ತಮ್ಮಯಾ ಶತ್ರುಗಳ ಸೇಡನ್ನು
ಮಾಯಾವಿಧಾನದಲಿ ವಿಧವಿಧ ಕುತಂತ್ರದಲಿ
ಮೋಸವನು ಮಾಡುವರು ನಿಮ್ಮಣ್ಣ ಹಿಡಿಂಬನನು
ಕೊಂದಿರುವ ಸೇಡನ್ನು ತೀರಿಸಲಿಕೆ ಬಂದಿರುವೆ ॥೭೫೯॥

ನಿನ್ನಯಾ ಸೋದರನ ಕಳಿಸಿರುದ ಸ್ಥಾನಕ್ಕೆ
ನಿನ್ನನ್ನು ಸಹಿತವೂ ಯಮಲೋಕ ಕಟ್ಟುವೆನು
ಎನ್ನುತಲಿ ಕರಗಳನು ಹೊಡೆಯಲಿಕೆ ಎತ್ತುತಿರೆ
ಧರ್ಮಜನು ವಾಯುಜನ ತಡೆಯುತಲಿ ನುಡಿದಿಹನು ॥೭೬೦॥

ಇವಳಲ್ಲಿ ನಿನಗಿನಿತು ಕೋಪವದು ಸಲ್ಲದದು
ಸ್ತ್ರೀಯನ್ನು ಕೊಲ್ಲುವದು ಬಹುಪಾಪವೆನಿಸುವದು
ಅಬಲೆಯಳ ಬಡಹೆಂಗುಸೀಕೆಯನು ವಧಿಸುವದು
ಜಗವೀರ ಜಗಮಲ್ಲ ನಿನಗಿದುವೆ ಶೋಭಿಸದು ॥೭೬೦॥

ಇವಳಣ್ಣ ವೀರನಾ ರಕ್ಕಸನ ಕೊಂದಿರಲು
ಇವಳಿಂದ ನಿನಗಾವ ಭಯವಿಲ್ಲ ಕೇಡಿಲ್ಲ
ದೇಹದಾ ರಕ್ಷಣೆಗೆ ಧರ್ಮವನು ತ್ಯಜಿಸುವದು
ಸಲ್ಲದಿದು ಎನ್ನುತಲಿ ಧರ್ಮಜನು ನುಡಿಯುತಿರೆ ॥೭೬೨॥

ಮರುತಜನ ರೋಷವದು ಇಳಿಯುತಿರೆ ಶಾಂತದಲಿ
ಯಮಸುತನ ಮಾತುಗಳ ಕೇಳುತ ಹಿಡಿಂಬೆಯಳು
ಸಂತಸದಿ ಧರ್ಮಜನ ಕುಂತಿಯಾ ಅಂಘ್ರಿಗಳ
ನಮಿಸುತಲಿ ನುಡಿದಿಹಳು ನಯವಾಗಿ ಶಿರಬಾಗಿ ॥೭೬೩॥

ಹೇತಾಯೆ ನಿನ್ನಯಾ ಸುತನಾದ ಭೀಮನನು
ನೋಡುತಲಿ ಮೋಹಿಸುತ ಕಾಮಿಸುತ ಬಂದಿಹೆನು
ಮನ್ಮಥನ ಬಾಣದಲಿ ಸಿಲುಕಿರುವ ಲಲನೆಯರ
ಯಾತನೆಯ ಪರಿಯನ್ನು ನೀ ಲಲನೆ ಅರಿತಿರುವೆ ॥೭೬೪॥

ಎನ್ನಲ್ಲಿ ಕರುಣೆಯನು ಪ್ರೀತಿಯನು ತೋರಿಸುತ
ನಿನ್ನಯಾ ಮಗನಿಂಗೆ ಎನ್ನನ್ನು ವರಿಸಲಿಕೆ
ಮನಒಲಿಸಿ ಹೇಳುವುದು ಅವನೊಡನೆ ವಿಹರಿಸಲು
ರಮಿಸಲಿಕೆ ಕೊಂಡೊಯ್ವೆ ವಿಧವಿಧದ ಸ್ಥಳಗಳಿಗೆ ॥೭೬೫॥

ನಿನ್ನಯಾ ಸೇವೆಯನು ಅನವರತ ಮಾಡುವೆನು
ನೀ ಎನ್ನ ನೆನೆಯುತಿರೆ ಆಕ್ಷಣದಿ ಐತಂದು
ನೀ ಬಯಿಪ ಸ್ಥಳಗಳಿಗೆ ಭುಜದಲ್ಲಿ ಕೊಂಡೊಯ್ವೆ
ಮರಳುತಲಿ ನಿಮ್ಮಯಾ ಸ್ಥಾನದಲಿ ಇರಿಸುವೆನು ॥೭೬೬॥

ನೀ ಎನ್ನ ತಾಪವನು ಪರಿಹರಿಸು ತಾಯಿಯೇ
ಇಲ್ಲದಿರೆ ನಿನ್ನೆದುರು ಪ್ರಾಣವನು ತ್ಯಜಿಸುವೆನು
ಎನ್ನಯಾ ಜೀವವನು ಉಳಿಸುವದು ನಿನ್ನೊಳಿದೆ
ಎನ್ನುತಲಿ ಕರವಾಗಿದು ಕುಂತಿಯನು ಪ್ರಾರ್ಥಿಸಲು ॥೭೬೭॥

ಧರ್ಮಜನು ಕೇಳುತಲಿ ಸರಿ ಎಂದು ಎನಿಸುತಲಿ
ಹಿಡಿಂಬೆಯೆ ಈ ಭೀಮ ಸ್ನಾನವನು ಸಂಧ್ಯಾದಿ
ಕರ್ಮಗಳ ಮಾಡುತಲಿ ನಿನ್ನೆಡೆಗೆ ಐತಂದು
ಸಂಜೆಯಾ ಪರ್ಯಂತ ನಿನ್ನೊಡನೆ ವಿಹರಿಪನು ॥೭೬೮॥

ಬೆಳಕಿನಲಿ ಭೀಮನನು ಕೊಳ್ಳುತಲಿ ಸಂಜೆಯಲಿ
ಕರೆತಂದು ಇಲ್ಲಿಯೇ ಬಿಡುವದಿದು ನಿರ್ಬಂಧ
ಎನ್ನುತಲಿ ಧರ್ಮಸುತ ನುಡಿಯುತಿರೆ ವಾಯುಸುತ
ಸಮ್ಮತಿಸಿ ಸಂತಸದಿ ಹಿಡಿಂಬೆಗೆ ನುಡಿದಿಹನು ॥೭೬೯॥

ಎನ್ನಯಾ ನಿರ್ಬಂಧವೊಂದಿಹುದು ಕೇಳುವುದು
ನಿನ್ನೊಳಗೆ ಮಗನೊಬ್ಬ ಜನಿಸುವಾ ಪರ್ಯಂತ
ಮಾತ್ರವೇ ನಿನ್ನೊಡನೆ ನಾನಿಹೆನು ತಿಳಿಯುವದು
ಇದು ನಿನಗೆ ಸಮ್ಮತವೆ ಹೇಳೆಂದ ಮರುತಜನು ॥೭೭೦॥

ಹರುಷದಲಿ ಮುಖವರಳಿ ಒಪ್ಪುತ ಹಿಡಿಂಬೆಯು
ಆ ಕುಂತಿ ಧರ್ಮಜರಿಗೆಲ್ಲರಿಗೆ ನಮಿಸುತಲಿ
ಭೀಮನನು ಭುಜದಲ್ಲಿ ಭರದಿಂದ ಇರಿಸುತಲಿ
ಬಾಂದಳಕೆ ಏರುತಲಿ ಯಾನವನು ಗೈದಿಹಳು ॥೭೭೧॥

ಹಿಮಗಿರಿಯ ಶಿಖರದಲಿ ವಿಂಧ್ಯದಾ ಪರ್ವತದಿ
ಸಹ್ಯಾದ್ರಿ ಬೆಟ್ಟದಲಿ ನದಿಕೊಳತಟಾಕದಲಿ
ಗುಡ್ಡದಲಿ ಕೊಳ್ಳದಲಿ ತಪ್ಪಲಲಿ ಗುಹೆಯಲ್ಲಿ
ತೋಟದಲಿ ಉಪವನದಿ ಲತೆಗಳಾ ಮಂಟಪದಿ ॥೭೭೨॥

ಸ್ವರ್ಗದಾ ಅಪ್ಸರೆಯ ತೆರದಲ್ಲಿ ಶೋಭಿಸುವ
ಸುಂದರದ ಲಾವಣ್ಯ ರೂಪವನು ತಳೆಯುತಲಿ
ಹೊಳೆಯುತಿಹ ವಸ್ತ್ರವನು ಸ್ವರ್ಣದಾಭರಣಗಳ
ಧರಿಸುತಲಿ ಭೀಮನಾ ಜೊತೆಯಲ್ಲಿ ರಮಿಸಿದಳು ॥೭೭೩॥

ಪುಷ್ಪದಲಿ ಸೊಗಯಿಸುವ ವೃಕ್ಷಗಳ ಅಡಿಯಲ್ಲಿ
ಸಾಗರದ ದ್ವೀಪದಲಿ ನಿಬಿಡಮಿಹ ವಿಪಿನದಲಿ
ಕಮಲಗಳ ಶೋಭಿತದ ಮಾನಸ ಸರೋವರದಿ
ಮರುತಜನ ಸಹಿತದಲಿ ಸಂತಸದಿ ರಮಿಸಿದಳು ॥೭೭೪॥

ಈ ಪರಿಯ ಹಲವುದಿನ ಉರುಳುತಿರೆ ಹಿಡಿಂಬೆಯು
ಗರ್ಭವನು ಧರಿಸುತಲಿ ಸೌಷ್ಟವದ ಅಂಗಾಂಗ
ಸೊಬಗಿನಲಿ ಶೋಭಿಸುವ ಅದ್ಭುತದ ಬಲಯುತದ
ಶಿಶುವೊಂದ ಹೆತ್ತಿಹಳು ನವಮಾಸ ಕಳೆಯುತಿರೆ ॥೭೭೫॥

ಹುಟ್ಟಿದಾ ಕ್ಷಣದಲ್ಲಿ ಶಿಶು ಬೆಳೆದು ಬೆಳೆಯುತಲಿ
ಶೈಶವದ ಬಾಲ್ಯದ ಅವಸ್ಥೆಗಳ ದಾಂಟುತಲಿ
ಕೌಮಾರವಸ್ಥೆಯನು ಆಗಲೇ ಪಡೆಯುತಲಿ
ಭೀಕರದ ರಾಕ್ಷಸದ ರೂಪವನು ತಾಳಿಹನು ॥೭೭೬॥

ವಿಸ್ತರದ ನೊಸಲಿನಲಿ ಉರಿಯುತಿಹ ಕಣ್ಣಿನಲಿ
ಶಂಕುಕಿವಿ ಕೆಂದುಟಿಯ ಕೋರೆಯಾ ಹಲ್ಲುಗಳ
ನೀಳವಿಹ ತೋಳುಗಳ ಬೋಳಾದ ತಲೆಯಿಂದ
ಭೀಕರದ ದೈತ್ಯನಾ ಪರಿಯಲ್ಲಿ ಕಂಡಿಹನು ॥೭೭೭॥

ಜನಿಸಿದಾ ಕ್ಷಣದಲ್ಲಿ ಮಾಯೆಯಾ ವಿದ್ಯೆಯಲಿ
ಅಸ್ತ್ರದಲಿ ಶಸ್ತ್ರದಲಿ ಪರಿಣತಿಯ ಪಡೆಯುತಲಿ
ಜಗದೊಳಗ ಅಪ್ರತಿಮ ಅತಿಮಾನುಷದ್ಭುತನು
ಬಲಭೀಮ ವಿಕ್ರಮನು ಭೀಷಣದಿ ತೋರಿಹನು ॥೭೭೮॥

ಗಡಿಗೆಯಾ ತಳದಂತೆ ಬೋಳಾದ ತಲೆಯಿಂದ
ಆ ಕುಂತಿ ಧರ್ಮಜಗೆ ಭೀಮಂಗೆ ಸಕಲರಿಗೆ
ಸಾಷ್ಟಾಂಗ ನಮಿಸುತಿರೆ ಸರ್ವರೂ ಪ್ರೀತಿಯಲಿ
ಅಪ್ಪುತಲಿ ತೆಗೆಯುತಲಿ ಹರಸಿದರು ಸಂತಸದಿ ॥೭೭೯॥

ಘಟತಲದ ಪರಿಯಲ್ಲಿ ಬೋಳಾದ ತಲೆಯುಹುದು
ಎನ್ನುತಲಿ ಘಟೋತ್ಕಜ ನೆಂಬುವಾ ನಾಮವನು
ಇಡುತಲಿರೆ ಸರ್ವರಿಗೆ ಪ್ರೀತಿಗೇ ಪಾತ್ರಾಗಿ
ಅದ್ಭುತ ಪರಾಕ್ರಮಿಯು ಎನಿಸಿಹನು ಜಗದೊಳಗೆ ॥೭೮೦॥

ಮಗನೊಬ್ಬ ಜನಿಸಿರಲು ಭೀಮನಾ ನುಡಿಯಂತೆ
ವರಕುಂತಿ ಧರ್ಮಜಗೆ ಭೀಮಾದಿ ಪಾಂಡವರ್ಗೆ
ನಮಿಸುತಲಿ ಹೋಗಿ ಬಹೆ ಎನ್ನುತ ಹಿಡಿಂಬೆಯು
ತನ್ನಯಾ ಸ್ಥಾನಕ್ಕೆ ಸಂತಸದಿ ತೆರಳಿದಳು ॥೭೮೧॥

ಆ ಬಳಿಕ ಭೀಮಸುತ ನುತ ಘಟೋತ್ಕಜನು
ನುತಕುಂತಿ ಪಾಂಡವರ್ಗೆ ಸಕಲರಿಗೆ ಎರಗುತಲಿ
ನಿಮಗಾವ ಕಾರ್ಯವನು ನಾ ಗೈವುದೆನ್ನುತಲಿ
ಸಂಕೋಚವಿಲ್ಲದೆಯೆ ಪೇಳುವದು ಎಂದಿಹನು ॥೭೮೨॥

ಕೇಳುತಲಿ ವರಕುಂತಿ ಪ್ರೀತಿಯಲಿ ಹೇ ಮಗುವೆ
ಕುರುವಂಶಸಂಭೂತ ನೀ ಶ್ರೇಷ್ಠ ಶೂರನಿಹೆ
ನಿನ ತಂದೆ ಭೀಮನಾ ಪರಿಯಲ್ಲಿ ಬಲವುಳ್ಳ
ಅದ್ಭುತ ಪರಾಕ್ರಮಿಯು ಅಪ್ರತಿಮ ವೀರನಿಹೆ ॥೭೮೩॥

ಐವರಿಗೆ ಪಾಂಡವರ್ಗೆ ಜ್ಯೇಷ್ಠಸುತ ನೀನಿರುವೆ
ಸಮಯವದು ಬಂದಾಗ ನಿನ್ನನ್ನು ಸ್ಮರಿಸುವೆವು
ನೀ ಬಂದು ಕಷ್ಟವನು ಪರಿಹರಿಸು ಎನ್ನುತಲಿ
ಪ್ರೀತಿಯಲಿ ಮೊಮ್ಮಗನ ಹರಸಿದಳು ಆ ಅಜ್ಜಿ ॥೭೮೪॥

ಹೇಅಜ್ಜಿ ರಾವಣನ ಪರಿಯಲ್ಲಿ ವೀರನಿಹೆ
ಮಾನವರ್ಗೆ ಮಿಗಿಲಾದ ಶಕ್ತಿಯದು ಎನಗಿಹುದು
ನೀವೆನ್ನ ನೆನೆಯುತಿರೆ ಕ್ಷಣದಲ್ಲಿ ಐತಂದು
ನಿಮ್ಮಯಾ ದುಃಖವನು ಕಳೆಯುವೆನು ಎನ್ನುತಲಿ ॥೭೮೫॥

ಸಕಲರಿಗೆ ನಮಿಸುತಲಿ ಅಪ್ಪಣೆಯ ಪಡೆಯುತಿರೆ
ಕುಂತಿಯಾ ಸಹಿತದಲಿ ಪಾಂಡವರು ಅಪ್ಪುತಲಿ
ಆಯುಷ್ಮವಂತಾಗು ಎನ್ನುತಲಿ ಹರಸುತಿರೆ
ಉತ್ತರದ ದಿಕ್ಕಿನೆಡೆ ತೆರಳಿದ ಘಟೋತ್ಕಜನು ॥೭೮೬॥

**ಆ ಏಕಚಕ್ರದಾ ನಗರದಲಿ ಕಲಿಭೀಮ**
**ಕ್ರೂರನಾ ರಕ್ಕಸನ ಬಕನನ್ನು ಕೊಂದಿಹನು**

ಅತ್ತಲಾ ಹಿಡಿಂಬೆಯು ಘಟೋತ್ಕಜರು ತೆರಳುತಿರೆ
ಇತ್ತಲಾ ಪಾಂಡವರು ಕಾನನದಿ ಚಲಿಸುತಲಿ
ಸಿಂಹಗಳ ವ್ಯಾಘ್ರಗಳ ಬೇಟೆಯನು ಆಡುತಲಿ
ಗಿರಿಗುಹೆಯ ದುರ್ಗಗಳ ನದಿಕೊಳ ತಟಾಕಗಳ ॥೭೮೭॥

ದಾಂಟುತಲಿ ವನವನವ ಕ್ರಮಿಸುತಲಿ ಸಾಗುತಲಿ
ತ್ರಿಗರ್ತ ಪಾಂಚಾಲ ದೇಶಗಳ ಚರಿಸುತಲಿ
ಜಡೆವಲ್ಕಲಾದಿಯಲಿ ತಪಸಿಗಳ ವೇಷದಲಿ
ನಡೆದಿರಲು ಭಾಗ್ಯವೇ ಎದುರಿನಲಿ ಬಂದಂತೆ ॥೭೮೮॥

ಘನಮಹಿಮ ಪಾವನನು ನುತಚರಿತ ಪಿತಾಮಹ
ವ್ಯಾಸಋಷಿ ಬರುತಿರಲು ಹರುಷದಲಿ ಸಕಲರೂ
ಕುಂತಿಯಾ ಸಹಿತದಲಿ ಸಾಷ್ಟಾಂಗವೆರಗುತಲಿ
ಕರಮುಗಿದು ನಿಂತಿಹರು ತಲೆಬಾಗಿ ವಿನಯದಲಿ ॥೭೮೯॥

ವ್ಯಾಸಋಷಿ ಹರಸುತಲಿ ಕುರುಕುಲದ ಸಂಭೂತ
ನೃಪಸುತರೆ ಪಾಂಡವರೆ ದುರುಳನಾ ಕೌರವನು
ಅರಗಿನಾ ಮನೆಯೊಳಗೆ ನಿಮ್ಮನ್ನು ಸುಡಲಿಕ್ಕೆ
ಯುಕ್ತಿಸುತ ಮೋಸದಲಿ ರಾಜ್ಯದಾ ಹೊರಗಟ್ಟಿ ॥೭೯೦॥

ಕಷ್ಟಗಳ ಕೊಟ್ಟಿಹುದು ಎಲ್ಲವನು ನಾ ಒಲ್ಲೆ
ನಿಮಗೆಲ್ಲ ಶುಭವನ್ನು ಮಾಡಲಿಕೆ ಬಂದಿಹೆನು
ನೀವೆನ್ನ ಮಾತುಗಳ ಮೀರದಲೆ ನಡೆಸಿದರೆ
ಭಾಗ್ಯವದು ಮಂಗಳವು ಲಭಿಸುವದು ಎಂದಿಹನು ॥೭೯೧॥

ಇಲ್ಲಿಯೇ ಸನಿಹದಲಿ ಇರುತಿರುವ ಪುರದೊಳಗೆ
ವಿಪ್ರರಾ ವೇಷದಲಿ ವಾಸ್ತವ್ಯ ಮಾಡುವದು
ನಿಮಗಾವ ತೊಂದರೆಯು ಕಷ್ಟಗಳು ಅಲ್ಲಿಲ್ಲ
ತಿಂಗಳಿನ ಒಂದರಲಿ ನಾ ಮರಳಿ ಬಹೆನೆಂದು ॥೭೯೨॥

ಹೇಳುತಲಿ ಪಾಂಡವರ ಕಳುಹುತಲಿ ಸಾಗಿರಲು
ಚಿಂತೆಯಲಿ ಮುಳುಗಿರ್ದ ಕುಂತಿಯನು ನೋಡುತಲಿ
ಚಿಂತೆಯನು ಮಾಡದಿರು ನಿನ್ನಯಾ ಸುತರೆಲ್ಲ
ಜಗದೊಳಗೆ ಅಪ್ರತಿಮ ವೀರರೆಂದೆನಿಸಿಹರು ॥೭೯೩॥

ಸತ್ಯದಲಿ ಧರ್ಮದಲಿ ನಡೆಯುತಿಹ ನಿನ್ನ ಸುತ
ಧರ್ಮಜನು ಅದ್ಭುತ ಪರಾಕ್ರಮಿಗಳಾಗಿರುವ
ಭೀಮಾರ್ಜುನಾದಿಗಳ ಸೋದರರ ನೆರವಿನಲಿ
ಜಗಸಾರ್ವಭೌಮೆಂದು ಜಗದೊಳಗೆ ಮೆರೆಯುವನು ॥೭೯೪॥

ಎನ್ನುತಲಿ ಸಂತೈಸಿ ಸನಿಹದಲಿ ಇರುತಿರುವ
ಆ ಏಕಚಕ್ರದಾ ನಗರಕ್ಕೆ ಬರುತಿರಲು
ಅಲ್ಲಿರುವ ವಿಪ್ರನನು ಓರ್ವನನು ಪಾಂಡವರ್ಗೆ
ಪರಿಚಯಿಸಿ ಅವನಲ್ಲಿ ಇರಿಸುತಲಿ ಮುದಿದಿಹರು ॥೭೯೫॥

ದೇಶಕ್ಕೆ ಕಾಲಕ್ಕೆ ತಕ್ಕವಿಹ ರೀತಿಯಲಿ
ನಡೆಯುತಿರೆ ನೀವೆಲ್ಲ ಸುಖವಾಗಿ ಇರಬಹುದು
ಇನ್ನೊಂದು ತಿಂಗಳಲಿ ನಾ ಇಲ್ಲಿ ಬರಲಿರುವೆ
ಎನ್ನುತಲಿ ವ್ಯಾಸಮುನಿ ಆಶ್ರಮಕೆ ತೆರಳಿದನು ॥೭೯೬॥

ಕೇಳುವುದು ಜನಮೇಜಯ ಕ್ಷಿತಿಪ ಮುಂದಕ್ಕೆ
ನಿನ್ನಯಾ ಮುತ್ತಾತರಾಗಿರುವ ಪಾಂಡವರು
ವಿಪ್ರನಾ ಗೃಹದೊಳಗೆ ವಿಪ್ರರಾ ವೇಷದಲಿ
ವಾಸವನು ಮಾಡುತಲಿ ದಿನಗಳನು ಕಳೆದಿಹರು ॥೭೯೭॥

ಕುರುಕುಲದ ನೃಪಸುತರು ವೀರರಾ ಕ್ಷತ್ರಿಯರು
ಬಿಳಿಧೋತ್ರ ಯಜ್ಞೋಪವೀತವನು ಧರಿಸುತಲಿ
ನೊಸಲಿನಲಿ ಭಸ್ಮವನು ತಿಲಕವನು ಇರಿಸುತಲಿ
ಪುರದೊಳಗೆ ಚರಿಸಿದರು ಹುಲುನರರ ಪಾಡೇನು ॥೭೯೮॥

ಬ್ರಾಹ್ಮೀ ಮುಹೂರ್ತದಲಿ ಪ್ರತಿದಿನವು ಏಳುತಲಿ
ವಿಪ್ರರಿಗೆ ಯೋಗ್ಯವಿಹ ಸಂಧ್ಯಾದಿ ಗೈಯುತಲಿ
ನಗರದಲಿ ಭಿಕ್ಷಾನ್ನ ಕಲೆಯುತಲಿ ಸಂಜೆಯಲಿ
ಐತಂದು ಭಿಕ್ಷಾನ್ನ ಈಯುತಿರೆ ಆ ಕುಂತಿ ॥೭೯೯॥

ತಂದಿರುವ ಅನ್ನವನು ಭಾಗೆರಡು ಮಾಡುತಲಿ
ಭೀಮಂಗೆ ಜಠರಾಗ್ನಿ ಬಹುಪ್ರಖರವಿಹುದೆಂದು
ಬಹಳನ್ನ ಬೇಕೆಂದು ಅರಿತಿರುವ ಮಹತಾಯಿ
ಒಂದರ್ಧ ಭಾಗವನು ಭೀಮಂಗೆ ಈಯುತಲಿ ॥೮೦೦॥

ಉಳಿದರ್ಧ ಭಾಗದಲಿ ಮಿಕ್ಕಿರುವ ನಾಲ್ವರಾ
ಸುತರೊಡನೆ ಸೇವಿಸುತ ಕಾಲವನು ಕಳೆದಿಹಳು
ಅರಮನೆಯ ಪಕ್ವಾನ್ನದೂಟವನು ಸವಿಯುವಾ
ಕುರುಕುಲದ ಸಾಮ್ರಾಜ್ಞಿಗೀ ವಿಧಿಯು ಬಂದಿಹುದು ॥೮೦೧॥

ಜಗದೊಳಗೆ ಖ್ಯಾತನೃಪ ಪಾಂಡುವಿನ ಸತಿಯಾಗಿ
ಅದ್ಭುತ ಪರಾಕ್ರಮದ ಭೀಮಾರ್ಜುನಾದಿಗಳ
ತಾಯಾಗಿ ಭಿಕ್ಷಾನ್ನ ಉಂಬುವಾ ಗತಿಯಾಯ್ತು
ಇನ್ನುಳಿದ ಸಾಮಾನ್ಯ ನರರುಗಳ ಪಾಡೇನು ? ॥೮೦೨॥

ಈ ಪರಿಯ ಹಲವು ದಿನ ಕಳೆಯುತಿರೆ ಒಂದು ದಿನ
ಭೀಮನನು ಉಳಿಯುತಲಿ ಮಿಕ್ಕವರು ಹೊರಗಡೆಗೆ
ಭಿಕ್ಷೆಯಲಿ ತೆರಳಿರಲು ವಿಪ್ರನಾ ನಿಲಯದಲಿ
ಘೋರತರ ರೋದನದ ಸ್ವರವದುವು ಕೇಳಿಸಲು ॥೮೦೩॥

ಕಾರುಣ್ಯ ಮೂರ್ತಿಯಳು ವರಕುಂತಿ ಕೇಳುತಲಿ
ಹೃದಯವದು ಕರಗುತಲಿ ಕಳವಳದಿ ನೋಯುತಲಿ
ಕ್ಷಣಕ್ಷಣಕೆ ಅಳುವ ದನಿ ಹೆಚ್ಚುತಿರೆ ಸಹಿಸದಲೆ
ಬಳಿಯಿರ್ದ ಭೀಮನಿಗೆ ನುಡಿದಿಹಳು ಭರದಲ್ಲಿ ॥೮೦೪॥

ಹೇ ಭೀಮ ನಾವೆಲ್ಲ ಬ್ರಾಹ್ಮಣನ ಮನೆಯೊಳಗೆ
ಬಹುದಿನದಿ ಹಾಯಾಗಿ ಸುಖವಾಗಿ ಇರುತಿಹೆವು
ದಿಕ್ಕಿಲ್ಲದಲೆಯುತಿಹ ನಮಗೆಲ್ಲ ಕರುಣೆಯಲಿ
ಆಶ್ರಯವ ನೀಯುತಲಿ ಉಪಕಾರ ಗೈದಿಹನು ॥೮೦೫॥

ಕಷ್ಟದಲಿ ಸಿಲುಕಿರುವ ಆ ಬ್ರಾಹ್ಮಣೋತ್ತಮಗೆ
ಪ್ರತಿಯಾಗಿ ಉಪಕಾರ ಗೈಯ್ಯುವುದು ಧರ್ಮವಿದು
ಆತನಿಗೆ ಬಂದಿರುವ ಕಷ್ಟವನು ಕಳೆಯುತಲಿ
ಎಮ್ಮಯಾ ಋಣವನ್ನು ತೀರಿಪುದು ಎಂದಿಹಳು ॥೮೦೬॥

ಹೇ ತಾಯೆ ಈ ಕ್ಷಣದಿ ತೆರಳುತಲಿ ಬ್ರಾಹ್ಮಣನ
ದುಃಖವದು ಏನಿಹುದು ಆರಿಂದ ಬಂದಿಹುದು
ಎನ್ನುತಲಿ ವಿಷಯವನು ಸಕಲವನು ಅರಿಯುತಲಿ
ಬರುತಲೆನಗೆಲ್ಲವನು ತಿಳಿಸುವುದು ಎಂದಿಹನು ॥೮೦೭॥

ಕಷ್ಟವದು ಅತಿಘೋರತರವಾಗಿ ಇರ್ದರೂ
ಸರ್ವವನು ಪರಿಹರಿಪೆ ಚಿಂತೆಯನು ಮಾಡದಿರು
ಎನ್ನುತಲಿ ಮರುತಜನು ನುಡಿಯುತಿರೆ ಆ ಕುಂತಿ
ಆಕಳವು ಕರುವಿನೆಡೆ ಧಾವಿಸುವ ಪರಿಯಲ್ಲಿ ॥೮೦೮॥

ಓಡುತಲಿ ವಿಪ್ರನಾ ಆಲಯಕೆ ತೆರಳುತಲಿ
ಬಾಗಿಲದ ಬಳಿಯಲ್ಲಿ ಮರೆಯಲ್ಲಿ ನಿಲ್ಲುತಲಿ
ತಲೆಯನ್ನು ತಗ್ಗಿಸುತ ಸತಿಸುತರ ಸಹಿತದಲಿ
ರೋದಿಸುತ ಕುಳಿತಿರುವ ವಿಪ್ರನನ ಕಂಡಿಹಳು ॥೮೦೯॥

ಎನ್ನನ್ನು ಬಲಿಯಾಗಿ ರಕ್ಕಸಗೆ ಈಯುತಿರೆ
ನೀವೆಲ್ಲ ಅನ್ನಾನ್ನವೆನ್ನುತಲಿ ಸಾಯುವಿರಿ
ನಿಮ್ಮನ್ನು ಬಲಿಕೊಟ್ಟು ನಾನೆಂದು ಜೀವಿಸೆನು
ಈ ಕಷ್ಟ ಪರಿಹರಿಪ ಮಾರ್ಗವದು ತೋರದಿದೆ ॥೮೧೦॥

ಎನ್ನುತಲಿ ಆ ವಿಪ್ರ ನುಡಿಯುತಿರೆ ವರಸತಿಯು
ಪತಿಸೇವೆ ಮಾಡಿಹೆನು ಮಕ್ಕಳನು ಪಡೆದಿಹೆನು
ಎನ್ನಯಾ ಕಾರ್ಯವದು ಎಲ್ಲವೂ ಮುಗಿದಿಹುದು
ಎನ್ನನ್ನು ರಕ್ಕಸಗೆ ಬಲಿಕೊಡುವುದೆಂದಿಹಳು ॥೮೧೧॥

ಬಳಿಕಲಾ ವರಪುತ್ರಿ ಎನ್ನನ್ನು ಅಸುರನಿಗೆ
ಬಲಿಕೊಟ್ಟು ನೀವೆಲ್ಲ ನಿಶ್ಚಿಂತವಿರಬಹುದು
ಪಿತೃವೆಲ್ಲ ಉತ್ತಮರ ಲೋಕವನು ಪಡೆಯುವರು
ಎನ್ನಯಾ ಕೀರ್ತಿಯದು ಜಗದೊಳಗೆ ಮೆರೆಯುವದು ॥೮೧೨॥

ಕೈಹಿಡಿದು ಎನ್ನನ್ನು ತಾಯಿಯಾ ತೆರದಲ್ಲಿ
ಪಾಲನೆಯ ಪೋಷಣೆಯ ಮಾಡಿರುವ ಸತಿಯನ್ನು
ಮದುವೆಯದು ಆಗದಿಹ ಮುದ್ದಿನಾ ಸುತೆಯನ್ನು
ಬಲಿಕೊಟ್ಟು ನಾನೆಂತು ಜೀವಿಪೆನು ಎಂದಿಹನು ॥೮೧೩॥

ಚಿಣ್ಣನಾ ಬಾಲಕನು ತೊದಲಿನಾ ನುಡಿಗಳಲಿ
ನೀವೇಕೆ ಅಂಜುವಿರಿ ಈ ದರ್ಭೆ ಕೊಳ್ಳುತಲಿ
ರಕ್ಕಸನ ಶಿರವನ್ನು ಕತ್ತರಿಸಿ ಚೆಲ್ಲುವೆನು
ಎನ್ನುತಲಿ ನುಡಿಯುತಿರೆ ಸಕಲರೂ ನಕ್ಕಿಹರು ॥೮೧೪॥

ಇದು ಯೋಗ್ಯ ಸಮಯವಿದೆ ಎನ್ನುತಲಿ ಆ ಕುಂತಿ
ಭೂಸುರನ ಬಳಿಸಾಗಿ ಏತಕ್ಕೆ ಅಳುತಿಹಿರಿ
ಬಂದಿರುವ ಕಷ್ಟವದು ಆವುದಿದೆ ತಿಳಿಸುವುದು
ಸಕಲವನು ಪರಿಹಾರ ಮಾಡುವೆನು ಎಂದಿಹಳು ॥೮೧೫॥

ಕುಂತಿಯಾ ಅಮೃತಸಮ ಮಾತುಗಳ ಕೇಳುತಲಿ
ತೊಲಗಿರುವ ಪ್ರಾಣವದು ತಾ ಮರಳಿ ಬಂದಂತೆ
ನೀರೊಳಗೆ ಮುಳುಗುತಿಹ ಮನುಜಂಗೆ ಆಸರವು
ಸಿಕ್ಕಂತೆ ಆ ವಿಪ್ರ ನುಡಿದಿಹನು ಹರುಷದಲಿ ॥೮೧೬॥

ಹೇ ಅವ್ವೆ ಎಮ್ಮಯಾ ದುಃಖವನು ಎಂತುಸುರ್ವೆ
ಆರಿಗೂ ಪರಿಹರಿಸಲಸದಳವು ಆಗಿಹುದು
ಪುರದ ಹೊರವಲಯದಲಿ ಗಿರಿಶಿಖರ ಗುಹೆಯಲ್ಲಿ
ಬಕನೆಂಬ ಬಹುಕ್ರೂರ ರಕ್ಕಸನು ವಾಸಿಪನು ॥೮೧೭॥

ಪ್ರತಿದಿನವು ಒಂದೊಂದು ಮನೆಯವರು ತಪ್ಪದಲೆ
ಚಕ್ಕಡಿಯ ತುಂಬನ್ನ ಮತ್ತೆರಡು ಕೋಣಗಳ
ಮೇಲೊಬ್ಬ ನರನನ್ನು ಬಲಿಯಾಗಿ ಕೊಡುತಿಹುದು
ಎಂಬುದಾ ಕಟ್ಟಾಜ್ಞೆ ವಿಧಿಸಿಹನು ಸಕಲರಿಗೆ ॥೮೧೮॥

ತಪ್ಪಿದೊಡೆ ಮನೆಯೊಳಿಹ ಸಕಲರನು ತಿನ್ನುವನು
ಇಂದಿನಲಿ ಎಮ್ಮಯಾ ಸರದಿಯದು ಬಂದಿಹುದು
ಒಬ್ಬರನ್ನಗಲುತಲಿ ನಾವಾರು ಜೀವಿಸೆವು
ಎಲ್ಲರೂ ರಕ್ಕಸಗೆ ಬಲಿಯಾಗಿ ಸಾಯುವುದು ॥೮೧೯॥

ಎನ್ನುತಲಿ ನಿಶ್ಚಯವ ಮಾಡಿಹೆವು ಎನ್ನುತಿರೆ
ಆ ಕುಂತಿ ಕೇಳುತಲಿ ಚಿಂತೆಯನು ಮಾಡದಿರಿ
ಇದಕೊಂದುಪಾಯವನು ಮಾರ್ಗವನು ಸೂಚಿಪೆನು
ಅದರಂತೆ ಮಾಡಿದೊಡೆ ಕಷ್ಟವದು ಕಳೆಯುವದು ॥೮೨೦॥

ಎನಗೈದು ಸುತರಿಹರು ಅವರೊಳಗೆ ಓರ್ವನು
ಪುಂಡನಿಹ ತುಂಟನಿಹ ಅತಿಕೂಳ ಬಕ್ಕಸನು
ಅವನನ್ನು ನಿನಗಾಗಿ ಚಕ್ಕಡಿಯ ಅನ್ನವನು
ರಕ್ಕಸಗೆ ತಲುಪಿಸಲು ಕಳಿಸುವೆನು ಎಂದಿಹಳು ॥೮೨೧॥

ನವಮಾಸ ಗರ್ಭದಲಿ ಧರಿಸುತಲಿ ಹಡೆದಿರುವ
ಮಗನನ್ನು ರಕ್ಕಸಗೆ ಬಲಿಕೊಡುವ ತಾಯುಂಟೆ
ಜಗದೊಳಗೆ ಈ ತೆರನ ತಾಯಿಯನು ಕಂಡಿಲ್ಲ
ಕಿವಿಗಳಿವು ಕೇಳಿಲ್ಲ ಎನ್ನುತಲಿ ನುಡಿದಿಹನು ॥೮೨೨॥

ಬ್ರಾಹ್ಮಣೆಯ ನಿನ್ನಯಾ ಸುತನನ್ನು ಬಲಿಕೊಟ್ಟು
ಈ ಬ್ರಹ್ಮಹತ್ಯೆಯನು ಗೈಯ್ಯುವದಕಿಂತಲೂ
ನಾವುಗಳು ಬಲಿಯಾಗಿ ಪ್ರಾಣವನು ತೊರೆಯುವುದು
ಲೇಸೆಂದು ಭೂಸುರನು ಆ ಕುಂತಿಗುಸುರುತಿರೆ ॥೮೨೩॥

ರಾಕ್ಷಸನು ತಿನ್ನಲಿಕೆ ಮಗನನ್ನು ನಾ ಕೊಡೆನು
ಎನ್ನಯಾ ಸುತನಿವನು ಅಪ್ರತಿಮ ವೀರನಿಹ
ಸುರನರೋರಗರೊಳಗೆ ಸರಿಸಾಟಿ ಇವಗಿಲ್ಲ
ಮಂತ್ರದಾ ಶಕ್ತಿಯಲಿ ದೈತ್ಯನನ ಕೊಲ್ಲುವನು ॥೮೨೪॥

ಎನ್ನಮಗ ಬಕನನ್ನು ಕೊಲ್ಲುವಾ ವಾರ್ತೆಯನು
ಮತ್ತಾರಿಗುಸುರದಿರು ಇಲ್ಲದಿರೆ ಸಕಲರೂ
ಆ ಮಂತ್ರ ಕಲಿಸಲಿಕೆ ನನಸುತನ ಪೀಡಿಪರು
ಎನ್ನುತಲಿ ವಿಪ್ರನಿಗೆ ವರಕುಂತಿ ನುಡಿದಿಹಳು ॥೮೨೫॥

ಈ ತೆರದಿ ನುಡಿಯುತಿಹ ಅವ್ವೆಯಾ ನುಡಿಗಳನು
ಕೇಳುತಲಿ ವಿಪ್ರನಿಗೆ ಸತಿ ಸುತರಿಗೆಲ್ಲರಿಗೆ
ಅಮೃತದಾ ಧಾರೆಯದು ಸುರಿದಂತೆ ಹರುಷವದು
ಉಕ್ಕುತಲಿ ಕುಂತಿಯಾ ಚರಣಕ್ಕೆ ಎರಗಿದರು ॥೮೨೬॥

ಅಲ್ಲಿಯೇ ಆಡುತಿಹ ಮಗುವನ್ನು ಕೊಳ್ಳುತಲಿ
ತಲೆಯನ್ನು ನೇವರಿಸಿ ಮುದದಿಂದ ಮುದ್ದಿಸುತ
ವಿಪ್ರನಾ ಜೊತೆಯಲ್ಲಿ ಭೀಮನೆಡೆ ನಡೆತಂದು
ಸಕಲವನು ತಿಳಿಸುತಿರೆ ಭೀಮನದಕೊಪ್ಪಿದನು ॥೮೨೭॥

ಸಂಜೆಯಲಿ ಧರ್ಮಜನು ಸೋದರರು ಬರುತಿರಲು
ವಿಶದದಲಿ ಆ ಕುಂತಿ ವಿಷಯವನು ತಿಳಿಸುತಿರೆ
ಧರ್ಮಜನು ಚಿಂತಿಸುತ ಕಳವಳಗೊಳ್ಳುತಲಿ
ಇದು ಕಾರ್ಯ ದುಸ್ಸಾಧ್ಯ ಅಯೋಗ್ಯವೆಂದಿಹನು ॥೮೨೮॥

ಲೋಕದಲಿ ಅನ್ಯರಾ ಮಕ್ಕಳಿಗೆ ಪ್ರೀತಿಯಾಗಿ
ತನ್ನಯಾ ಮಕ್ಕಳನು ಬಲಿಕೊಡುವ ತಾಯುಂಟೇ
ಮೇಲಾಗಿ ಭೀಮನೇ ಇಹನೆಂದು ನಾವೆಲ್ಲ
ಇಂದಿನಾ ಪರ್ಯಂತ ಜೀವಿಸುತ ಇರುತಿಹೆವು ॥೮೨೯॥

ಅಂದಿನಲಿ ಅರಗಿನಾ ಅರಮನೆಯ ಬೆಂಕಿಯಲಿ
ಭೀಮನೇ ನಮ್ಮೆಲ್ಲ ಪ್ರಾಣಗಳ ಉಳಿಸಿಹನು
ಭೀಮನಾ ಬಲದಿಂದ ಕೌರವರ ಕೊಲ್ಲುತಲಿ
ರಾಜ್ಯವನು ಪಡೆಯುವಾ ಆಸೆಯನು ಹೊಂದಿಹೆನು ॥೮೩೦॥

ಅವನನ್ನು ನೆನೆಯುತಲಿ ನೂರ್ವರಾ ಕೌರವರು
ಭಯದಿಂದ ರಾತ್ರಿಯಲಿ ಚನ್ನಾಗಿ ನಿದ್ರಿಸರು
ಇಂತಿರಲು ಭೀಮನನು ಬಲಿಕೊಡುವ ಯೋಚನೆಯು
ಅತಿಮೂರ್ಖತನವಿಹುದು ಎಂದಿಹನು ಧರ್ಮಜನು ॥೮೩೧॥

ಧರ್ಮಜನೆ ನೀನಿಂತು ಚಿಂತೆಯನು ಮಾಡದಿರು
ಮರುತಜನ ಅದ್ಭುತ ಪರಾಕ್ರಮವ ನೀನರಿಯೆ
ಶಿಶುವಿರುವ ಸಮಯದಲಿ ಭೀಮನನು ತೊಡೆಯಲ್ಲಿ
ಇರಿಸುತಲಿ ಕೂತಿರಲು ಶಿಶು ಉರುಳಿ ಬೀಳುತಲಿ ॥೮೩೨॥

ಕೆಳಗಿರುವ ಕಲ್ಬಂಡೆಗಪ್ಪಳಿಸೆ ಬಲವಾಗಿ
ಘೋರದಾ ನಾದದಲಿ ಕಲ್ಬಂಡೆ ಸೀಳುತಲಿ
ಪುಡಿ ಪುಡಿಯು ಆಗುತಲಿ ದೆಸೆದೆಸೆಗೆ ಚಿಮ್ಮುತಲಿ
ಭೂಮಿಯದು ಕಂಪಿಸಿತು ಎಂದಿಹಳು ಆ ಕುಂತಿ ॥೮೩೩॥

ಮರುತಜನ ಭುಜಬಲವು ಈರೈದು ಸಾವಿರದ
ಆನೆಗಳ ಶಕ್ತಿಯಾ ಸರಿಸಮವು ಇರುತಿಹುದು
ನಿಮಗೆಲ್ಲ ಒಂದಾನೆ ಶಕ್ತಿ ಇದೆ ಕಾರಣವು
ಅಂದಿನಾ ಅರಮನೆಯ ಕಿಚ್ಚಿನಲಿ ನಿಮ್ಮನ್ನು ॥೮೩೪॥

ನಿಜ ಭುಜದಿ ಕೊಳ್ಳುತಲಿ ಸುರಂಗವನು ದಾಂಟಿಹನು
ನೀನಿದಕೆ ಎಳ್ಳನಿತು ಚಿಂತೆಯನು ಮಾಡದಿರು
ಎಲ್ಲವನು ಯೋಚಿಸುತ ನಿಶ್ಚಯವ ಮಾಡಿಹೆನು
ಎನ್ನುತಲಿ ನುಡಿಯುತಿರೆ ಧರ್ಮಸುತನೊಪ್ಪಿದನು ॥೮೩೫॥

ದೈತ್ಯನಾ ಬಳಿಯಲ್ಲಿ ಭೀಮನನು ಕಳಿಸುವೆನು
ಕ್ಷಣದಲ್ಲಿ ಅಸುರನನು ಯಮಲೋಕಕಟ್ಟುವನು
ಭೀಮನನು ಕಳಿಸುವಾ ಸಿದ್ಧತೆಯ ಮಾಡುವುದು
ಎನ್ನುತಲಿ ಆ ಕುಂತಿ ನುಡಿದಿಹಳು ವಿಪ್ರನಿಗೆ ॥೮೩೬॥

ರಾತ್ರಿಯಲಿ ವಿಪ್ರನಾ ಗೃಹದೊಳಗೆ ಸಕಲರೂ
ವಿಧವಿಧದ ಪಕ್ವಾನ್ನ ಭಕ್ಷ್ಯಗಳ ಶಾಕಗಳ
ಮಂಡಿಗೆಯ ಉಂಡೆಗಳ ಶಾವಿಗೆಯ ಪಾಯಸವ
ಮೇಲೊಂದು ಬಂಡೆಯಾ ಅನ್ನವನು ಮಾಡಿಹರು ॥೮೩೭॥

ಸುಮಧುರದ ಸವಿರಸದ ಪಾಕಗಳ ವಾಸನೆಯು
ನಿದ್ರಿಸುವ ಭೀಮನಾ ನಾಸಿಕವನರಳಿಸಲು
ಬಹುದಿನದ ನಂತರದಿ ಪಕ್ವಾನ್ನದೂಟವಿದು
ಎನಗಿಂದು ದೊರೆತಿಹುದು ಇಂದೆನಗೆ ಮಹನವಮಿ ॥೮೩೮॥

ಎನ್ನುತಲಿ ಸಂತಸದಿ ಕುಂತಿಯಾ ಬಳಿಸಾಗಿ
ಏಳವ್ವ ಎನ್ನಯಾ ಪಾರಣೆಗೆ ಹೊತ್ತಾಯ್ತು
ಖಳನಲ್ಲಿ ಎನಗಾಗಿ ದಾರಿಯನು ಕಾಯುತಿಹ
ಎನ್ನುತಲಿ ಕುಂತಿಯನು ಎಬ್ಬಿಸಿದನಾಕ್ಷಣದಿ ॥೮೩೯॥

ಚಕ್ಕಡಿಯ ತುಂಬೆಲ್ಲ ಅನ್ನವನು ಹೇರಿಸುತ
ಭಕ್ಷ್ಯಗಳ ಭೋಜ್ಯಗಳ ಪಾಕಗಳ ಶಾಕಗಳ
ತುಪ್ಪದಾ ಹರವಿಗಳ ಮೇಲಕ್ಕೆ ಒಟ್ಟುತಲಿ
ನೊಗಕೆರಡು ಬಲವುಳ್ಳ ಕೋಣಗಳ ಹೂಡಿದರು ॥೮೪೦॥

ಸ್ನಾನವನು ಗೈಯುತಲಿ ಬಿಳಿಧೋತ್ರ ಧರಿಸುತಲಿ
ಆ ಗಂಡುಗಚ್ಚೆಯನು ಬಿಗಿಯಾಗಿ ಹಾಕುತಲಿ
ವರಕುಂತಿ ಧರ್ಮಜರ ಚರಣಕ್ಕೆ ಎರಗುತಲಿ
ಮರುತಜನು ನೊಗವೇರಿ ಹರುಷದಲಿ ಕೂಡ್ರುತಲಿ ॥೮೪೧॥

ಕೋಣಗಳ ಮುಗದಾರ ಹಿಡಿಯುತಲಿ ಜಗ್ಗುತಲಿ
ಚೆನ್ನಸ್ಸು ಚಪ್ಪರಿಸಿ ಬಾಲವನು ತಿರುಹುತಲಿ
ಹಳಿಹಲಿಯು ಎನ್ನುತ್ತ ಕೂಗುತ್ತಾ ಆರ್ಭಟಿಸಿ
ಬಂಡಿಯನು ಬಿಟ್ಟಿಹನು ವಾಯುವಿನ ವೇಗದಲಿ ॥೮೪೨॥

ಪುರದಗಸೆ ದಾಂಟುತಲಿ ಕೋಟೆಯನು ಕ್ರಮಿಸುತಲಿ
ಊರ ಹೊರವಲಯದಲಿ ರಕ್ಕಸನು ವಾಸಿಸುವ
ಸ್ಥಳದೆಡೆಗೆ ಬರುತಿರಲು ದುರುಳನಾ ರಕ್ಕಸನು
ದೂರದಲಿ ಮರುತಜನು ಬರುವುದನು ಕಂಡಿಹನು ॥೮೪೩॥

ಈ ತೆರದಿ ಅದ್ಭುತದ ದೇಹದಾ ಮನುಜನನು
ಈ ವರೆಗೆ ಕಂಡಿಲ್ಲ ಎನ್ನುತಲಿ ನೋಡುತಿರೆ
ಮರುತಜನು ಬಂಡಿಯನು ಇಳಿಯುತಲಿ ಭರದಲ್ಲಿ
ಚಕ್ಕಡಿಯ ಅರ್ಧದಾ ಅನ್ನವನು ಉಂಡಿಹನು ॥೮೪೪॥

ಆ ಮೇಲೆ ಹರವಿಗೆಯ ಹಾಲನ್ನು ತುಪ್ಪವನು
ಸುರಿಸುರಿದು ಸವಿಯುತಲಿ ಕೊಳ ಜಲವ ಕುಡಿಯುತಲಿ
ಎಲೆ ಖೂಳ ರಕ್ಕಸನೆ ಕೂಳಿಹುದು ತಿನ್ನು ಬಾ
ಎನ್ನುತಲಿ ಅನ್ನದಾ ಉಂಡೆಯನು ತೋರಿಸುತ ॥೮೪೫॥

ಅಣಕಿಸುತ ತನ್ನಯಾ ಬಾಯೊಳಗೆ ಇರಿಸುತಲಿ
ಉಳಿದಿರುವ ಅನ್ನವನು ಉಣ್ಣುತಿರೆ ಸರಭರನೆ
ಎತ್ತಣದ ನರನಿವನು ಎಲ್ಲಿಂದ ಬಂದಿಹನು
ಎನ್ನುತಲಿ ಕೋಪವದು ಇಮ್ಮಡಿಸಿ ರಕ್ಕಸನು ॥೮೪೬॥

ತೋಳುಗಳನೆತ್ತುತಲಿ ಧಾವಿಸುತ ನಡೆತಂದು
ಭೀಮನಾ ಬೆನ್ನಿನಲಿ ಬಲವಾಗಿ ಗುದ್ದಿಹನು
ನೊಣವೊಂದು ಆನೆಯಾ ಮೇಲೆರಗಿ ಬಿದ್ದೊಡೆಯು
ಅಲುಕದಿಹ ಆನೆಯಾ ಪರಿಯಲ್ಲಿ ಆ ಭೀಮ ॥೮೪೭॥

ಹೊಡೆದಿನುವ ಗುದ್ದುಗಳ ಪರಿವೆಯದು ಇಲ್ಲದೆಯೆ
ಮುಂದಿರುವ ರಕ್ಕಸನ ಕಣ್ಣೆತ್ತಿ ನೋಡದಲೆ
ಶಾಂತಿಯಲಿ ಸುಖವಾಗಿ ಅನ್ನವನು ಉಣ್ಣುತಿರೆ
ದೈತ್ಯನಾ ಕೋಪವದು ನೂರ್ಮಡಿಯು ಹೆಚ್ಚುತಲಿ ॥೮೪೮॥

ಪಕ್ಕದಲಿ ಬೆಳೆದಿರುವ ಮರಗಳನು ಕಿತ್ತುತಲಿ
ಭೀಮನಾ ಬೆನ್ನಿನಲಿ ಬಲವಾಗಿ ಹೊಡೆಯುತಿರೆ
ಎಲೆಎಲೆವೊ ತಡೆಎಲವೊ ಇದೊ ಬಂದೆ ಎನ್ನುತಲಿ
ಬಂಡಿಯಾ ಅನ್ನವನು ಎಲ್ಲವನು ಉಣ್ಣುತಲಿ ॥೮೪೯॥

ಬರಿದಾಗಿ ಮಾಡುತಲಿ ನೀರನ್ನು ಕುಡಿಯುತಲಿ
ಥರ್ರೆಂದು ತೇಗುತಲಿ ಮೇಲಕ್ಕೆ ಏಳುತಲಿ
ಮರಗಳನು ಕೀಳುತಲಿ ದನುಜನಾ ಶಿರದಲ್ಲಿ
ಬೆನ್ನಿನಲಿ ಬಡಿದಿಹನು ಬಲವಾಗಿ ಕಲಿಭೀಮ ॥೮೫೦॥

ಈರ್ವರೂ ಇಕ್ಕೆಲದಿ ಬೆಳೆದಿರುವ ದ್ರುಮಗಳನು
ಕಿತ್ತುತಲಿ ಬೀಸುತಲಿ ಬಡಿಯುತಲಿ ಅಪ್ಪಳಿಸಿ
ಘನಘೋರ ಯುದ್ಧವನು ಗೈಯುತಿರೆ ಬಹುಕಾಲ
ಬೆಳೆದಿರುವ ಸಕಲವೂ ವೃಕ್ಷಗಳು ಮುಗಿಯುತಿರೆ ॥೮೫೧॥

ಎಲೊ ಮನುಜ ಹೀನ ನರ ನಿನ್ನನ್ನು ತಿನ್ನುವೆನು
ಎನ್ನುತಲಿ ಆ ದೈತ್ಯ ಧಾವಿಸುತ ಮುತ್ತುತಿರೆ
ಒಬ್ಬರರನೊಬ್ಬರನು ಅಪ್ಪುತಲಿ ತಳ್ಳುತಲಿ
ನೂಕುತಲಿ ಕೆಡಹುತಲಿ ಕದನವನು ಗೈದಿಹರು ॥೮೫೨॥

ಮಲ್ಲದಲಿ ಮುಷ್ಟಿಯಲಿ ಹಿಡಿತದಲಿ ಒಗೆತದಲಿ
ವಿಧ ವಿಧ ಪರಿಯಲ್ಲಿ ಯುದ್ಧವನು ಗೈಯುತಿರೆ
ರಕ್ಕಸನು ಆಯಾಸಗೊಳ್ಳುತಲಿ ದಣಿದಿರಲು
ಪವನಜನು ದೈತ್ಯನಾ ಶಿರದಲ್ಲಿ ಬಲವಾಗಿ ॥೮೫೩॥

ಮುಷ್ಟಿ ಪ್ರಹಾರವನು ಗೈಯುತಿರೆ ಭರದಲ್ಲಿ
ಭೂಮಿಯಲಿ ಅಂಗಾತ ಆಗುತಲಿ ಬೀಳುತಿರೆ
ರಕ್ಕಸನ ಎದೆಯಲ್ಲಿ ಮಂಡಿಸುತ ಕಲಿಭೀಮ
ಮುಷ್ಟಿಯಲಿ ಹೊಡೆಯುತಿರೆ ಕ್ಷಣದಲ್ಲಿ ಎದೆಬಿರಿದು ॥೮೫೪॥

ರಕುತದಾ ಬುಗ್ಗೆಯದು ಘಳಿಲೆಂದು ಚಿಮ್ಮುತಿರೆ
ನಭ ಬಿರಿವ ಸ್ವರದಲ್ಲಿ ದುರುಳನಾ ರಕ್ಕಸನು
ಕೂಗುತಲಿ ಚೀರುತಲಿ ಆಕ್ರೋಶಗೈಯುತಲಿ
ರಕುತವನು ಕಾರುತಲಿ ಪ್ರಾಣವನು ಬಿಟ್ಟಿಹನು ॥೮೫೫॥

ನಂತರದಿ ಪವನಜನು ದನುಜನಾ ಹೆಣವನ್ನು
ಚಕ್ಕಡಿಯ ಹಿಂದಕ್ಕೆ ಹಗ್ಗದಲಿ ಕಟ್ಟುತಲಿ
ಭರದಲ್ಲಿ ಪುರದೆಡೆಗೆ ಮರಳುತಲಿ ಬರುತಲಿರೆ
ಅಗಸೆಯಾ ಬಾಗಿಲವ ಬಳಿಬರಲು ಇಳಿಯುತಲಿ ॥೮೫೬॥

ಹೆಣವನ್ನು ಪುರದಗಸೆ ಬಾಗಿಲಿಗೆ ಕಟ್ಟುತಲಿ
ಬಂಡಿಯನು ಓಡಿಸುತ ಆರಿಗೂ ತಿಳಿಯದಲೆ
ಮನೆಯೊಳಗೆ ತೆರಳುತಲಿ ಕುಂತಿಯಾ ಚರಣಕ್ಕೆ
ಧರ್ಮಜನ ಪಾದಕ್ಕೆ ಎರಗಿದನು ಸಂತಸದಿ ॥೮೫೭॥

ಬಕವಧೆಯ ವೃತ್ತಾಂತವರಿಯುತಲಿ ಮಹತಾಯಿ
ಆ ಕುಂತಿ ಭೀಮನನು ಬಿಗಿಯಾಗಿ ಅಪ್ಪುತಲಿ
ಆನಂದ ಬಾಷ್ಪಗಳ ಸುರಿಸುತಲಿ ಹರಸಿದಳು
ಧರ್ಮಜನು ತೆಗೆದಪ್ಪಿ ಮುದ್ದಿಡುತ ನಲಿದಿಹನು ॥೮೫೮॥

ಇತ್ತಲಾ ಪುರಜನರು ದೈತ್ಯನಾ ಸ್ವರವನ್ನು
ಕೇಳುತಲಿ ರಕ್ಕಸಗೆ ಏನಾಯ್ತು ಎನ್ನುತಲಿ
ಚಕಿತದಲಿ ತಂಡದಲಿ ಧಾವಿಸುತ ಬರುತಿರಲು
ಅಗಸೆಯಾ ಬಾಗಿಲಲಿ ಹೆಣವನ್ನು ಕಂಡಿಹರು ॥೮೫೯॥

ಆವನೋ ಬಹುಶೂರ ತಾವನನ್ನು ಕೊಂದಿಹನು
ಜಗಕೆಲ್ಲ ಹಿಂಸೆಯನು ಪೀಡೆಯನು ಕೊಡುತಿರ್ದ
ನರಮಾಂಸ ಭಕ್ಷಕನ ದುಷ್ಟನೀ ರಕ್ಕಸನ
ಕೊಂದಿಹುದು ಲೇಸಾಯ್ತು ಎನ್ನುತಲಿ ನಲಿದಿಹರು ॥೮೬೦॥

ಈ ವಾರ್ತೆ ಪುರದೊಳಗೆ ಪಸರುತಿರೆ ತೀವ್ರದಲಿ
ಸಕಲರೂ ವಿಪ್ರನಾ ಬಳಿಬಂದು ಕಾತುರದಿ
ಇಂದಿನಾ ಸರದಿಯದು ನಿಮ್ಮದೇ ಇದ್ದಿರಲು
ಅಸುರನನು ಕೊಂದವರು ಆರಿಹರು ಪೇಳುವುದು ॥೮೬೧॥

ಎನ್ನುತಲಿ ಸರ್ವಜನ ಕೇಳುತಿರೆ ಭೂಸುರನು
ಎನ್ನಯಾ ರೋದನವ ಕೇಳುತಲಿ ಆವನೋ
ಹಾರುವನು ಐತಂದು ಬಂಡಿಯಾ ಅನ್ನವನು
ಕೊಳ್ಳುತಲಿ ತೆರಳಿದುದ ನಾ ಬಲ್ಲೆ ಎಂದಿಹನು ॥೮೬೨॥

ಈ ನುಡಿಯ ಕೇಳುತಲಿ ಸಕಲರೂ ನಲಿಯುತಲಿ
ಮುದದಿಂದ ಹಾಡುತಲಿ ಹರುಷದಲಿ ಕುಣಿಯುತಲಿ
ಹಾರುವರ ಕುಲಕಿದುವೆ ಹೆಮ್ಮೆಯಾ ವಿಷಯವಿದು
ವಿಪ್ರರಾ ಕೀರ್ತಿಯಿದು ಮೆರೆದಿಹುದು ಎನ್ನುತಲಿ ॥೮೬೩॥

ಸಕಲರೂ ನೆರೆಯುತಲಿ ವಿಪ್ರರಾ ದಿನವೊಂದು
ವೈಭವದಿ ವಿಜಯದಾ ಉತ್ಸವವ ಗೈದಿಹರು
ದುಷ್ಟಶನಿ ತೊಲಗಿಹುದು ಶಿಷ್ಟಜನ ಬದುಕಿದರು
ಪುರವಿಂದು ನಿಷ್ಕಂಟಕಾಯ್ತೆಂದು ನುಡಿದಿಹರು ॥೮೬೪॥

**ದ್ವಿಜನೋರ್ವನೈತಂದು ದ್ರೌಪದಿಯ ಮದುವೆಯಾ ।**
**ವೃತ್ತಾಂತವರುಹಿದನು ವಿಸ್ತರದಿ ಪಾಂಡವರ್ಗೆ ॥**

ಬಳಿಕಲಾ ಪಾಂಡವರು ವಿಪ್ರನಾ ಮನೆಯಲ್ಲಿ
ದಿನಗಳನು ಕಳೆಯುತಿರೆ ದ್ವಿಜನೋರ್ವ ದೇಶಗಳ
ಚರಿಸುತಲಿ ವಾಸಿಸಲು ಬರುತಿರಲು ಭೂಸುರನು
ಸತ್ಕರಿಸಿ ತನ್ನಯಾ ನಿಲಯದಲಿ ಇರಿಸಿದನು ॥೮೬೫॥

ಬಂದಿರುವ ವಿಪ್ರನಿಗೆ ಭೂಸುರರ ವೇಷವನು
ಧರಿಸಿರುವ ಪಾಂಡವರ್ಗೆ ಮಿತ್ರತ್ವ ಬೆಳೆಯುತಿರೆ
ಒಂದು ದಿನ ಧರ್ಮಜನು ಎಲ್ಲಿಂದ ಬಂದಿಹಿರಿ
ನಿಮ್ಮಯಾ ದೇಶವದು ಆವುದಿದೆ ಎನ್ನುತಲಿ ॥೮೬೬॥

ವಿಪ್ರನನು ಕೇಳುತಿರೆ ಜಗದೊಳಗೆ ಮೆರೆಯುತಿಹ
ಹಸ್ತಿನಾಪುರದಿಂದ ನಾವಿಲ್ಲಿ ಬಂದಿಹೆವು
ಹೊಟ್ಟೆಯಾ ಪಾಡಿಂಗೆ ಭೋಜನಕೆ ದಕ್ಷಿಣೆಗೆ
ದೇಶಗಳ ಅಲೆಯುವುದು ನಮ್ಮದೀ ಧರ್ಮವಿದೆ ॥೮೬೭॥

ಸನಿಹದಲಿ ಇರುತಲಿಹ ಪಾಂಚಾಲ ದೇಶದಾ
ದ್ರುಪದೆಂಬ ಭೂಪತಿಯು ನಿಜಸುತೆಯ ದ್ರೌಪದಿಯ
ಸ್ವಯಂವರವ ಅದ್ಭುತದಿ ವೈಭವದಿ ಮಾಡುವನು
ಮೃಷ್ಟಾನ್ನ ಭೋಜನವು ದಕ್ಷಿಣೆಯು ದೊರೆಯುವವು ॥೮೬೮॥

ದಾನಗಳನೀಯುವರು ನಾವಲ್ಲಿ ತೆರಳುವೆವು
ಎನ್ನುತಲಿ ಆ ವಿಪ್ರ ನುಡಿಯುತಿರೆ ಧರ್ಮಸುತ
ಚಕಿತದಲಿ ಹಸ್ತಿನೆಯ ವಿಷಯವನು ಕೇಳುತಲಿ
ವಿಪ್ರಂಗೆ ನುಡಿದಿಹನು ಕೌತುಕದ ಭರದಲ್ಲಿ ॥೮೬೯॥

ಹಸ್ತಿನಾವತಿಯಲ್ಲಿ ರಾಜ್ಯವನು ಧರ್ಮಜನೊ
ಇಲ್ಲವೆ ಕೌರವನೊ ಆರೀಗ ಆಳುವರು
ಎನ್ನುತಲಿ ಕೇಳುತಿರೆ ಆ ವಿಪ್ರ ನಸುನಗುತ
ನಿನ್ನಯಾ ನುಡಿಕೇಳಿ ನಗೆ ಎನಗೆ ಬರುತಲಿದೆ ॥೮೭೦॥

ಅರಗಿನಾ ಅರಮನೆಯ ಕಿಚ್ಚಿನಲಿ ಪಾಂಡವರು
ಸತ್ತಿರುವ ವಿಷಯವನು ಜಗವೆಲ್ಲ ಅರಿತಿಹುದು
ಪಾಂಡವರು ಜೀವಂತ ಇಹರೆಂದು ನಂಬಿರುವ
ನೀವುಗಳು ಹುಚ್ಚರೊ ನಾವುಗಳು ಹುಚ್ಚರೊ ॥೮೭೧॥

ಎನ್ನುತಲಿ ಆ ವಿಪ್ರ ನುಡಿಯುತಿರೆ ಯಮಸುತನು
ಅಕಟಕಟ ಸತ್ಯದಲಿ ನಡೆದಿರ್ದ ಪಾಂಡವರು
ಅರಗಿನಾ ಅರಮನೆಯ ಕಿಚ್ಚಿನಲಿ ಸತ್ತಿಹರೆ
ದುಷ್ಟರಿಗೆ ಕುಹಕರಿಗೆ ಕಾಲವಿದು ಎಂದಿಹನು ॥೮೭೨॥

ಇನ್ನು ಆ ದ್ರುಪದ ಸುತೆ ದ್ರೌಪದಿಯ ವಿಷಯವನು
ನಾವುಗಳು ಅರಿತಿಲ್ಲ ವಿಸ್ತರದಿ ಪೇಳುವುದು
ದ್ರೌಪದಿಯ ಗುಣಶೀಲ ನಡತೆಯನು ವರ್ಣಿಪುದು
ಎನ್ನುತಲಿ ಧರ್ಮಜನು ವಿಪ್ರಂಗೆ ನುಡಿದಿಹನು ॥೮೭೩॥

ಭೂಸುರನೆ ಕೇಳುವುದು ಗಂಗೆಯಾ ತೀರದಲಿ
ಭರದ್ವಾಜನೆಂಬುವಾ ಖ್ಯಾತನಿಹ ಮುನಿವರನು
ಜಪತಪವ ಕಠಿಣವ್ರತ ನೇಮಗಳ ಗೈಯುತಲಿ
ಆಜನ್ಮ ಬ್ರಹ್ಮಚರ್ಯದಾ ವ್ರತದಲ್ಲಿ ಇರುತಿರಲು ॥೮೭೪॥

ಒಂದುದಿನ ಋಷಿವರನು ಸ್ನಾನವನು ಗೈಯಲಿಕೆ
ಜಾಹ್ನವಿಯ ತೀರಕ್ಕೆ ಬರುತಿರಲು ಆ ಕ್ಷಣದಿ
ಘೃತಾಚಿ ಎಂಬುವಾ ಅಪ್ಸರೆಯು ನದಿಯೊಳಗೆ
ಸ್ನಾನವನು ಮಾಡುತಲಿ ತೀರದಲಿ ನಿಲ್ಲುತಲಿ ॥೮೭೫॥

ತೆಳುವಾದ ಸೀರೆಯನು ಉಡುತಲಿರೆ ಗಾಳಿಯದು
ಭರದಲ್ಲಿ ಬಲವಾಗಿ ಬೀಸುತಿರೆ ಸೀರೆಯದು
ಕಳಚುತಲಿ ಹಾರುತಲಿ ದೂರದಲಿ ಬೀಳುತಿರೆ
ಅಪ್ಸರೆಯು ಬತ್ತಲೆಯು ಆಗುತಲಿ ನಿಂತಿರಲು ॥೮೭೬॥

ನಗ್ನಳಿಹ ಅಪ್ಸರೆಯ ಸುಂದರದ ದೇಹವನು
ನೋಡುತಲಿ ಋಷಿವರನ ವೀರ್ಯವದು ಸ್ಖಲಿಸುತಿರೆ
ಋಷಿವರನು ವೀರ್ಯವನು ದ್ರೋಣದಲಿ ಇರಿಸಿಹನು
ವರುಷವೊಂದು ನಂತರದಿ ಶಿಶುವೊಂದು ಜನಿಸಿಹುದು ॥೮೭೭॥

ದ್ರೋಣದಲಿ ಜನಿಸಿರುವ ಶಿಶುವಿಂಗೆ ವರದ್ರೋಣ
ಎನ್ನುತಲಿ ಹೆಸರಿಡಲು ದಿನದಿನದಿ ಬೆಳೆಯುತಲಿ
ಶಸ್ತ್ರಗಳ ಶಾಸ್ತ್ರಗಳ ವಿದ್ಯೆಯನು ಕಲಿಯುತಲಿ
ಜಗದೊಳಗೆ ಅಪ್ರತಿಮನೆನಿಸುತಲಿ ಮೆರೆದಿಹನು ॥೮೭೮॥

ಭರದ್ವಾಜ ಮುನಿವರಗೆ ಪೃಷತೆಂಬ ಸಖನೃಪನು
ಪಾಂಚಾಲ ಭೂಪತಿಯು ನಿಜಸುತನ ದ್ರುಪದನನು
ವೇದಗಳ ಶಾಸ್ತ್ರಗಳ ವಿದ್ಯೆಯನು ಕಲಿಯಲಿಕೆ
ಆಶ್ರಮಕೆ ಋಷಿಬಳಿಗೆ ಕಳಿಸಿದನು ಸಂತಸದಿ ॥೮೭೯॥

ದಿನದಿನದಿ ದ್ರೋಣಂಗೆ ದ್ರುಪದಂಗೆ ಈರ್ವರಿಗೆ
ಅನ್ಯೋನ್ಯ ಸೌಹಾರ್ದ ಸಖ್ಯವದು ಬೆಳೆದಿಹುದು
ಆಟದಲಿ ಪಾಟದಲಿ ನೋಟದಲಿ ಜೊತೆಯಾಗಿ
ಈರ್ವರೂ ಕಾಲವನು ಕಳೆದಿಹರು ಒಲವಿನಲಿ ॥೮೮೦॥

ವರುಷಗಳು ಉರುಳುತಿರೆ ಪಾಂಚಾಲ ಭೂಪತಿಯು
ಆ ಪೃಷತ ಮರಣವನು ಅಪ್ಪುತಿರೆ ಬಳಿಕದಲಿ
ದ್ರುಪದನೇ ಪಟ್ಟವನು ಏರುತಲಿ ವೈಭವದಿ
ಪಾಂಚಲ ನೃಪನಾಗಿ ಮೆರೆದಿಹನು ಜಗದೊಳಗೆ ॥೮೮೧॥

ಇತ್ತಲಾ ವರದ್ರೋಣ ಬಡತನದಿ ಬಳಲುತಲಿ
ಭಾರ್ಗವನು ಐಶ್ವರ್ಯ ದಾನವನು ಮಾಡುವನು
ಎಂದರಿತು ಅವನೆಡೆಗೆ ಸಾಗುತಲಿ ಧನವನ್ನು
ಯಾಚಿಸಲು ಭಾರ್ಗವನು ಈ ತೆರದಿ ನುಡಿದಿಹನು ॥೮೮೨॥

ಸರ್ವಸ್ವ ಧನವನ್ನು ದಾನವನು ಮಾಡಿಹೆನು
ಎನ್ನ ಬಳಿ ಶಸ್ತ್ರಗಳು ಅಸ್ತ್ರಗಳು ಮಾತ್ರ ಇವೆ
ಬೇಡುತಲಿ ಬಂದಿರುವ ನಿನ್ನನ್ನು ಬರಿಗೈಯ್ಯ
ಕಳಿಸದಿಹೆ ಒಪ್ಪಿದರೆ ಶಸ್ತ್ರಾಸ್ತ್ರವೀಯುವೆನು ॥೮೮೩॥

ಈ ತೆರದ ಭಾರ್ಗವನ ನುಡಿಗಳನು ಕೇಳುತಲಿ
ಹರುಷದಲಿ ಆ ದ್ರೋಣ ಸಮ್ಮತಿಸೆ ಭಾರ್ಗವನು
ಲೋಕವನು ಸುಡಬಲ್ಲ ಬ್ರಹ್ಮಾಸ್ತ್ರ ಮೊದಲಾದ
ಅದ್ಭುತದ ಅಸ್ತ್ರಗಳ ದ್ರೋಣನಿಗೆ ಇತ್ತಿಹನು ॥೮೮೪॥

ಮುದದಿಂದ ಆ ದ್ರೋಣ ಭಾರ್ಗವಗೆ ನಮಿಸುತಲಿ
ಬಾಲ್ಯದಾ ಸ್ನೇಹಿತನ ಭೂಪತಿಯ ದ್ರುಪದನನು
ನೆನೆಯುತಲಿ ತನ್ನಿಷ್ಟ ಕಾರ್ಯವದು ಫಲಿಸುವುದು
ಎನ್ನುತಲಿ ದ್ರುಪದನಾ ಬಳಬಂದು ನುಡಿದಿಹನು ॥೮೮೫॥

ಎನ್ನೊಡನೆ ಆಶ್ರಮದಿ ವಿದ್ಯೆಯನು ಕಲಿತಿರುವೆ
ನೀ ಎನ್ನ ಸ್ನೇಹಿತನು ನೆನಪಿಹುದೆ ಎಂದಿಹನು
ಆ ದ್ರುಪದ ಕೇಳುತಲಿ ನೃಪರಿಂಗೆ ವಿಪ್ರರಿಗೆ
ಒಡೆಯಂಗೆ ಭಿಕ್ಷುಕಗೆ ಎತ್ತಣದ ಸಖ್ಯವದು ॥೮೮೬॥

ರಾಜಂಗೆ ರಾಜರಾ ಮಿತ್ರತ್ವವಿರುತಿಹುದು
ಸಾಮಾನ್ಯ ನರನೊಡನೆ ಸಖ್ಯವನು ಮಾಡದಿಹ
ಹಿಂದಿನದ ಕೊಳ್ಳುತಲಿ ಈಗೇನು ಮಾಡುವುದು
ನಿನ್ನಯಾ ಜೊತೆಯಲ್ಲಿ ಸಖ್ಯತ್ವ ಎನಿತಿಲ್ಲ ॥೮೮೭॥

ಈ ತೆರದಿ ದ್ರೋಣನನು ಅರಿತರೂ ಗರ್ವದಲಿ
ಐಶ್ವರ್ಯ ಮದದಿಂದ ಆ ದ್ರುಪದ ನುಡಿಯುತಿರೆ
ಕೋಪದಲಿ ವರದ್ರೋಣ ಮನದೊಳಗೆ ಕುದಿಯುತಲಿ
ದ್ರುಪದಂಗೆ ಬುದ್ಧಿಯನು ಕಲಿಸುವುದು ಎನ್ನುತಲಿ ॥೮೮೮॥

ದೇಶಗಳ ಚರಿಸುತಲಿ ವೈಭವದಿ ಮೆರೆಯುತಿಹ
ಹಸ್ತಿನಾಪುರದೊಳಗೆ ಬರುತಲಿರೆ ವರಭೀಷ್ಮ
ಅರಮನೆಗೆ ಆದರದಿ ಕೊಂಡೊಯ್ದು ವಿಧವಿಧದಿ
ಸತ್ಕರಿಸಿ ಧನಕನಕ ಭೂಮಿಯನು ಈಯುತಲಿ ॥೮೮೯॥

ತಾವಿಲ್ಲಿ ಬಂದಿಹುದು ಎಮ್ಮಯಾ ಭಾಗ್ಯವಿದು
ಕುರುಕುಲದ ಉತ್ಕರ್ಷ ಏಳಿಗೆಯ ಪುಣ್ಯವಿದು
ಪಾಂಡವರ್ಗೆ ಕೌರವರ್ಗೆ ವಿದ್ಯೆಯನು ಕಲಿಸುವುದು
ಎನ್ನುತಲಿ ವರಭೀಷ್ಮ ನುಡಿದಿಹನು ವಿನಯದಲಿ ॥೮೯೦॥

ಕುರುಕುಲಕೆ ವರದ್ರೋಣ ಗುರುವಾಗಿ ಮೆರೆಯುತಲಿ
ಶಸ್ತ್ರಾಸ್ತ್ರ ವಿದ್ಯೆಯನು ಸಕಲವನು ಕಲಿಸಿದನು
ಒಂದು ದಿನ ಶಿಷ್ಯರನು ಕರೆಯುತಲಿ ಕೋಲಗುರು
ತನ್ನಯ ಅಭೀಷ್ಟವನು ನುಡಿದಿಹನು ಸಕಲರಿಗೆ ॥೮೯೧॥

ಶಸ್ತ್ರಾಸ್ತ್ರ ವಿದ್ಯೆಯಲಿ ಪರಿಣತರು ಆಗಿಹರು
ಈಗೆನಗೆ ನೀವ್ ಗುರುದಕ್ಷಿಣೆಯನೀಯುವುದು
ಪಾಂಚಾಲ ಭೂಪತಿಯ ದ್ರುಪದನನು ಸೆರೆಹಿಡಿದು
ಒಪ್ಪಿಪುದು ಇದು ಎನಗೆ ಇರ್ಪುದು ಗುರುದಕ್ಷಿಣೆ ॥೮೯೨॥

ಗುರುವಿನಾ ನುಡಿಗಳನು ಕೇಳುತಲಿ ಕೌರವರು
ದ್ರುಪದನನು ಮುತ್ತುತಲಿ ಸೋಲುತಿರೆ
ಪಾಂಡವರು ಯುದ್ಧವನು ಗೈಯ್ಯುತಲಿ ದ್ರುಪದನನು
ಸೆರೆಹಿಡಿದು ಬಂಧಿಸುತ ಹೆಡೆಮುರಿಗೆ ಕಟ್ಟುತಲಿ ॥೮೯೩॥

ದರದರನೆ ಎಳೆ ತಂದು ದ್ರೋಣನಾ ಚರಣಕ್ಕೆ
ಒಗೆಯುತಿರೆ ಕೋಲಗುರು ನಸುನಗುತ ನುಡಿದಿಹನು
ಎಲವೆಲವೊ ದ್ರುಪದನೃಪ ಮುನ್ನಿನಲಿ ಗರ್ವದಲಿ
ನುಡಿದಿರುವ ಜಂಭದಾ ನುಡಿಗಳನು ನೆನೆಯುವುದು ॥೮೯೪॥

ರಾಜರಿಗೆ ವಿಪ್ರರಿಗೆ ಮಿತ್ರತ್ವವೆಲ್ಲಿಯದು
ಎನ್ನುತಲಿ ನುಡಿದಿರುವ ಕಾರಣದಿ ನಿನ್ನಯಾ
ರಾಜ್ಯವನು ಜಯಿಸುತಲಿ ರಾಜ ನಾನಾಗಿಹೆನು
ಎನ್ನೊಡನೆ ನೀನೀಗ ಸಖ್ಯತ್ವ ಮಾಡುವುದು ॥೮೯೫॥

ವಿಪ್ರರಿಗೆ ಕ್ಷಮೆಗುಣವು ಭೂಷಣವು ಸಹಜವಿದೆ
ನಿನ್ನನ್ನು ಕೊಲ್ಲುವದು ನನಗುಚಿತವಲ್ಲವದು
ಜಾಹ್ನವಿಯ ಉತ್ತರದ ರಾಜ್ಯವನು ನಾನಾಳ್ವೆ
ದಕ್ಷಿಣದ ರಾಜ್ಯವನು ನೀನಾಳ್ವುದೆಂದಿಹನು ॥೮೯೬॥

ಎನ್ನುತಲಿ ಗುರುದ್ರೋಣ ಬಂಧನವ ಬಿಡಿಸುತಿರೆ
ದ್ರುಪದನೃಪ ಅಪಮಾನ ಸಹಿಸದಲೆ ಕೋಪದಲಿ
ಮನದೊಳಗ ಕತಕತನೆ ಕುದಿಯುತಲಿ ನೋಯುತಲಿ
ದ್ರೋಣನನು ಕೊಲ್ಲುವಾ ಮಗನನ್ನು ಪಡೆಯುವುದು ॥೮೯೭॥

ಎನ್ನುತಲಿ ನಿಶ್ಚಯಿಸಿ ಗಂಗೆಯಾ ತೀರದಲಿ
ಕಠಿಣ ತಪಗೈಯ್ಯುತಿಹ ಆ ಯಾಜ ಉಪಯಾಜ
ಎಂಬೀರ್ವ ಮುನಿಗಳಿಗೆ ನಯವಾಗಿ ನಮಿಸುತಲಿ
ದ್ರೋಣನನು ಕೊಲ್ಲುವಾ ಪುತ್ರನನು ಪಡೆಯಲಿಕೆ ॥೮೯೮॥

ಯಜ್ಞವನು ಮಾಡಿವುದು ಎನ್ನುತಲಿ ನುಡಿಯುತಿರೆ
ಮುನಿದ್ವಜನು ಒಪ್ಪುತಿರೆ ಪಾಂಚಾಲ ಭೂಪತಿಯು
ಸಿದ್ಧತೆಯ ಮಾಡುತಲಿ ಭವ್ಯದಾ ಮಂಟಪವ
ಯಜ್ಞದಾ ವೇದಿಕೆಯ ರಚಿಸಿದರು ಸೊಬಗಿನಲಿ ॥೮೯೯॥

ಆಗಣಿತದ ನೃಪರುಗಳು ನೆರೆದಿರಲು ಯಾಗದಲಿ
ಮಂತ್ರಗಳ ಘೋಷಣದಿ ಯಜ್ಞವದು ಗೈಯ್ಯುತಲಿ
ಪೂರ್ಣಾಹುತಿಯನೀಯುತಲಿ ಆ ಯಾಜ ಮುನಿವರನು
ದ್ರುಪದನಾ ರಾಣಿಯನು ಕರೆಸುತಲಿ ನುಡಿದಿಹನು ॥೯೦೦॥

ಈ ಹವಿಸ ಸೇವಿವುದು ನಿನಗೋರ್ವ ಅಪ್ರತಿಮ
ವೀರಸುತ ಜನಿಸುವನು ಮತ್ತೋರ್ವ ಪುತ್ರಿಯಳು
ತ್ರೈಲೋಕ್ಯ ಮೋಹಿನಿಯು ಸುಂದರಿಯು ಜನಿಸುವಳು
ಎನ್ನುತಿರೆ ಮಹರಾಣಿ ಸ್ನಾನವನು ಮಾಡುತಲಿ ॥೯೦೧॥

ತಾ ಬಹೆನು ಎನ್ನುತಲಿ ತೆರಳುತಿರೆ ಮುನಿವರನು
ತಡವಾಯ್ತು ಎನ್ನುತಲಿ ಯಜ್ಞದಾ ಕುಂಡದಲಿ
ಹವಿಸನ್ನ ಅರ್ಪಿಸಲು ಜ್ವಾಲೆಯದು ಪ್ರಜ್ವಲಿಸೆ
ದಿವ್ಯದಾ ಕಾಂತಿಯಲಿ ರತ್ನದ ಕಿರೀಟದಲಿ ॥೯೦೨॥

ಕರದಲ್ಲಿ ಖಡ್ಗವನು ಬಿಲ್ಲನ್ನು ಧರಿಸುತಲಿ
ಶೌರ್ಯದಲಿ ಮೆರೆಯುತಿಹ ಸುಕುಮಾರನೋರ್ವನು
ಅಗ್ನಿಯಲಿ ಜನಿಸುತಲಿ ನೆಗೆಯುತಲಿ ಹೊರಗಡೆಗೆ
ಗರ್ಜನೆಯ ಗೈಯ್ಯುತಲಿ ರಥವೇರಿ ಹೊರಟಿಹನು ॥೯೦೩॥

ನೆರೆದಿರುವ ಜನರೆಲ್ಲ ಹರ್ಷದಲಿ ಮುಳುಗಿರಲು
ಈ ವೀರ ದ್ರೋಣನನು ವಧಿಸಲಿಕೆ ಜನಿಸಿಹನು
ಪಾಂಚಾಲ ಭೂಪತಿಯ ದುಃಖವನು ತೊಲಗಿಪನು
ಎನ್ನುತಲಿ ಅಶರೀರ ವಾಣಿಯದು ಕೇಳಿಸಿತು ॥೯೦೪॥

ಬಳಿಕಲಾ ಕ್ಷಣದೊಳಗೆ ಯಜ್ಞದಾ ಕುಂಡದಲಿ
ಮೇಘದಾ ಕಾಂತಿಯಲಿ ಕಪ್ಪಾದ ವರ್ಣದಲಿ
ಶೋಭಿಸುವ ತನುವಿನಲಿ ದೆಸೆದೆಸೆಯ ಬೆಳಗುತಲಿ
ತ್ರೈಲೋಕ್ಯ ಮೋಹಿನಿಯೊ ಸ್ವರ್ಗದಾ ದೇವತೆಯೊ ॥೯೦೫॥

ಎಂಬುವಾ ತೆರದಲ್ಲಿ ಅಪ್ರತಿಮ ಸೊಬಗಿನಲಿ
ಜಗದೊಳಗೆ ಇವಳಿಂಗೆ ಚೆಲುವಿನಲಿ ಸಮರಿಲ್ಲ
ಎಂಬುವಾ ಪರಿಯಲ್ಲಿ ಸೌಂದರ್ಯದಿಂದೆಸೆವ
ಕನ್ಯೆಯಳು ಹೊಳೆಯುತಲಿ ಜನಿಸಿಹಳು ಅಗ್ನಿಯಲಿ ॥೯೦೬॥

ಜಗದೊಳಗೆ ಸುಂದರಿಯು ಸಾಧ್ವೀ ಶಿರೋಮಣಿಯು
ಸ್ತ್ರೀ ರತ್ನವೆನಿಸುತಲಿ ಚಂದ್ರಾರ್ಕ ಮೆರೆಯುವಳು
ಕುರುವಂಶ ನಾಶಕ್ಕೆ ಕಾರಣಳು ಆಗುವಳು
ಎನ್ನುತಲಿ ಆಕಾಶವಾಣಿಯದು ಮೊಳಗಿಹುದು ॥೯೦೭॥

ಕವಚವನು ಕುಂಡಲ ಕಿರೀಟವನು ಧರಿಸುತಲಿ
ಕರದೊಳಗೆ ಖಡ್ಗವನು ಹಿಡಿಯುತಲಿ ಜನಿಸಿರುವ
ಅಪ್ರತಿಮ ಸತ್ವದಾ ಬಹುಧಾರ್ಷ್ಟ್ಯ ಬಾಲಕಗೆ
ಧೃಷ್ಟದ್ಯುಮ್ನ ನೆಂಬುವಾ ಹೆಸರನ್ನು ಇಟ್ಟಿಹನು ॥೯೦೮॥

ಅರವಿಂದನ ಕಣ್ಣುಗಳ ಕಾಂತಿಯಲಿ ಶೋಭಿಸುವ
ಕರಿಮೇಘ ಪ್ರಭೆಯಲ್ಲಿ ಹೊಳೆಯುತಿಹ ತನುಲತೆಯ
ಕೃಷ್ಣದಾ ವರ್ಣದಲಿ ಮೆರೆಯುತಿಹ ಕನ್ನಿಕೆಗೆ
ಕೃಷ್ಣೆಯಳು ಎನ್ನುತಲಿ ಹೆಸರನ್ನು ಇಟ್ಟಿಹನು ॥೯೦೯॥

**ಪಾಂಚಾಲ ಪಟ್ಟಣಕೆ ತೆರಳುತಿರೆ ಮಾರ್ಗದಲಿ ।**
**ಅರ್ಜುನನು ಗಂಧರ್ವ ರಾಜನನು ಗೆಲಿದಿಹನು ॥**

ಹೇ ಪರೀಕ್ಷಿತ ತನಯ ಈ ತೆರದಿ ಭೂಸುರನು
ದ್ರೌಪದಿಯ ವಿಷಯವನು ವಿಸ್ತರದಿ ಪೇಳುತಿರೆ
ಪಾಂಡವರು ಕೇಳುತಲಿ ಮೂಲೋಕ ಮೋಹಿಸುವ
ದ್ರೌಪದಿಯ ನೋಡಲಿಕೆ ಆತುರವಗೊಂಡಿಹರು ॥೯೧೦॥

ಮನ್ಮಥನ ಬಾಣದಲಿ ಸಿಲುಕುತಲಿ ಪಾಂಡವರು
ಚಿಂತಿಸುತ ಮ್ಲಾನದಾ ವದನದಲಿ ಇರುತಿರಲು
ಆ ಕುಂತಿ ಮಹತಾಯಿ ಭಾವವನು ಅರಿಯುತಲಿ
ಧರ್ಮಜನ ಕರೆಯುತಲಿ ಈ ತೆರದಿ ನುಡಿದಿಹಳು ॥೯೧೧॥

ಈ ವಿಪ್ರನಾಲಯದಿ ಬಹುದಿನವ ಕಳೆದಿಹೆವು
ಕೌರವಗೆ ತಿಳಿಯದಲೆ ಕಾಲವನು ನೂಕಿದೆವು
ಬಹಳ ದಿನ ಇಲ್ಲಿಹುದು ಯೋಗ್ಯವದು ನಮಗಲ್ಲ
ಮುಂದಿನಾ ಪಟ್ಟಣಕೆ ಪಯಣವನು ಬೆಳೆಸುವುದು ॥೯೧೨॥

ಪಾಂಚಾಲ ದೇಶವದು ಧನಧಾನ್ಯ ಜಲದಿಂದ
ಸಂಪದದ ದೇಶವದು ಎನ್ನುತಲಿ ಕೇಳಿಹೆವು
ವಿಪ್ರರನು ಗೌರವದಿ ಕಾಣುವಾ ಧರಣಿಪನು
ಧರ್ಮದಲಿ ಪ್ರೀತಿಯಲಿ ರಾಜ್ಯವನು ಆಳುತಿಹ ॥೯೧೩॥

ನಮಗಲ್ಲಿ ಭಿಕ್ಷೆಯದು ವಿಪುಲದಲಿ ದೊರೆಯುವದು
ಅಲ್ಲಿಗೇ ತೆರಳೋಣ ಎನ್ನುತಿರೆ ಆ ಕುಂತಿ
ಧರ್ಮಸುತ ಹರುಷದಲಿ ಭೀಮಾರ್ಜುನಾದಿಗಳ
ಕೇಳುತಿರೆ ಸಕಲರೂ ಸಂತಸದಿ ಒಪ್ಪಿಹರು ॥೯೧೪॥

ಆನಿತರಲಿ ಘನಮಹಿಮ ವ್ಯಾಸಋಷಿ ಬರುತಲಿರೆ
ಸಕಲರೂ ನಮಿಸುತಲಿ ಸತ್ಕಾರ ಗೈಯ್ಯುತಿರೆ
ಇಂದಿನಾ ತನಕದಲಿ ವಿಧವಿಧದ ಕಷ್ಟದಲಿ
ತಾಪದಲಿ ದುಃಖದಲಿ ಕಾಲವನು ಕಳೆದಿಹಿರಿ ॥೯೧೫॥

ಮುಂಬರುವ ದಿನಗಳಲಿ ನಿಮಗೆಲ್ಲ ಶುಭವಹುದು
ಸುಖಕರವು ಮಂಗಳವು ಆಗುವುದು ಕೇಳುವುದು
ಮುನ್ನಿನಲಿ ಮಹಮುನಿಯ ಓರ್ವನಿಗೆ ಅತಿ ಚೆಲುವೆ
ಸುಂದರದ ರೂಪದಾ ಕನ್ಯೆಯಳು ಇರುತಿರಲು ॥೯೧೬॥

ಎನಿತೆನಿತೊ ವರ್ಷಗಳು ಉರುಳಿದರು ಕನ್ನಿಕೆಗೆ
ಯೋಗ್ಯನಿಹ ಸತ್ಕುಲದ ವರನೊಬ್ಬ ದೊರೆಯದಿರೆ
ಆ ಕನ್ಯೆ ಘೋರದಲಿ ಶಂಕರನ ತಪಗೈಯ್ಯೆ
ಮಹದೇವ ಮೆಚ್ಚುತಲಿ ಪ್ರತ್ಯಕ್ಷನಾಗುತಲಿ ॥೯೧೭॥

ಹೇ ಮಗಳೆ ನಿನ್ನಯಾ ತಪಸಿಂಗೆ ಒಲಿದಿಹೆನು
ಬೇಡಿದುದನೀಯುವೆನು ಕೇಳುವುದು ಎನ್ನುತಿರೆ
ಪತಿಯನ್ನು ಈಯುವುದು ಪತಿಯನ್ನು ಕರುಣಿಪುದು
ಎನ್ನುತಲಿ ಐಯ್ದು ಸಲ ವರವನ್ನು ಬೇಡುತಿರೆ ॥೯೧೮॥

ನಿನಗೈದು ವೀರರನು ಪತಿಗಳನು ಕೊಟ್ಟಿಹೆನು
ಚಿಂತೆಯನು ಮಾಡದಿರು ಎನ್ನುತಿರೆ ಶಂಕರನು
ದುಗುಡದಲಿ ಆ ಕನ್ಯೆ ಜಗದಲಿ ವಿರುದ್ಧವಿದು
ಒಬ್ಬನೇ ಪತಿಯನ್ನು ಕರುಣಿಪುದು ಎಂದಿಹಳು ॥೯೧೯॥

ಐಯ್ದು ಸಲ ಪತಿಯನ್ನು ಕೊಡು ಎಂದು ಕೇಳಿರುವೆ
ಐವರನು ಜಗವೀರ ಪತಿಗಳನು ಕೊಟ್ಟಿರುವೆ
ಯೋಚನೆಯ ಮಾಡದಿರು ನಿನಗೆಲ್ಲ ಸುಖವಹುದು
ಎನ್ನುತಲಿ ಶಂಕರನು ಸರಿದಿಹನು ಹರಸುತಲಿ ॥೯೨೦॥

ಆ ಕನ್ಯೆ ಇಂದಿನಲಿ ದ್ರುಪದನಾ ಸುತೆಯಾಗಿ
ದ್ರೌಪದಿಯ ಹೆಸರಿನಲಿ ಜಗದೊಳಗೆ ಮೆರೆದಿಹಳು
ಐವರೀ ಪಾಂಡವರ್ಗೆ ಈಕೆಯೇ ಸತಿಯೆಂದು
ಬ್ರಹ್ಮನಾ ಬರಹವಿದೆ ಎನ್ನುತಲಿ ನುಡಿದನು ॥೯೨೧॥

ನೀವೆಲ್ಲ ಪಾಂಚಾಲ ದೇಶಕ್ಕೆ ತೆರಳುವುದು
ನಿಮಗೆಲ್ಲ ಮಂಗಳವು ಸುಖಕರವು ಆಗುವುದು
ಎನ್ನುತಲಿ ಘನಮಹಿಮ ವರವ್ಯಾಸ ಪಾಂಡವರ
ಸಕಲರನು ಹರಸುತಲಿ ಆಶ್ರಮಕೆ ತೆರಳಿದನು ॥೯೨೨॥

ಅಂದಿನಾ ಪರ್ಯಂತ ಆಶ್ರಯವನಿತ್ತಿರುವ
ವಿಪ್ರನಿಗೆ ಸಕಲರೂ ಸಾಷ್ಟಾಂಗ ನಮಿಸುತಲಿ
ಮಹತಾಯಿ ಕುಂತಿಯಾ ಸಹಿತದಲಿ ಪಾಂಡವರು
ಪಾಂಚಾಲ ಪಟ್ಟಣಕೆ ಹರುಷದಲಿ ನಡೆದಿಹರು ॥೯೨೩॥

ಗಿರಿ ಗುಹೆಯ ದುರ್ಗವನು ನದಿಕೊಳ್ಳ ದಾಂಟುತಲಿ
ತವಕದಲಿ ಪಾಂಡವರು ಏಕಪ್ರಕಾರದಲಿ
ಹಗಲಿರುಳು ಎನ್ನದಲೆ ಪಯಣದಲಿ ಸಾಗುತಲಿ
ಗಂಗೆಯಾ ತೀರದಲಿ ಸೋಮಾಶ್ರಯಥಾಯಣಕೆ ॥೯೨೪॥

ಬರುತಲಿರೆ ಕತ್ತಲೆಯು ಕವಿಯುತಿರೆ ಅರ್ಜುನನು
ಕೈಯಲ್ಲಿ ಕೊಳ್ಳಿಯನು ಹಿಡಿಯುತಲಿ ಸಾಗಿರಲು
ಹಿಂದಕ್ಕೆ ಮರುತಜನು ಪಂಜನ್ನು ಹಿಡಿದಿರಲು
ಮಧ್ಯದಲಿ ಆ ಕುಂತಿ ಧರ್ಮಜನು ಸೋದರರು ॥೯೨೫॥

ಭೀಕರದಿ ಕಾನನದಿ ಮೆಲ್ಲಗೆಯು ನಡೆಯುತಿರೆ
ಪಾವನದ ಗಂಗೆಯಾ ನದಿ ಬಳಿಗೆ ಬರುತಿರಲು
ಓರ್ವನಾ ಗಂಧರ್ವ ಪತ್ನಿಯರ ಸಹಿತದಲಿ
ಜಲಕ್ರೀಡೆಯಾಡುವದ ಕಂಡಿಹನು ಚಕಿತದಲಿ ॥೯೨೬॥

ಗಂಧರ್ವ ಲಲನೆಯರು ಲಜ್ಜೆಯಲಿ ಭರದಲ್ಲಿ
ಸರಿದಿರುವ ವಸ್ತ್ರಗಳ ಸರಿಪಡಿಸಿಕೊಳ್ಳುತಲಿ
ಅಂಗಗಳ ಮುಚ್ಚುತಲಿ ಕಳವಳದಿ ಇರುತಿರಲು
ಗಂಧರ್ವ ಕೋಪದಲಿ ಅರ್ಜುನಗೆ ನುಡಿದಿಹನು ॥೯೨೭॥

ಲೋಕದಲಿ ಮಾನವರು ಹಗಲಿನಲಿ ಚರಿಸುವರು
ಖೇಚರರು ರಾತ್ರಿಯಲಿ ಚರಿಸುವದು ನಿಯಮವಿದು
ಇರುಳಿನಲಿ ಪತ್ನಿಯರ ಸಹಿತದಲಿ ನದಿಯಲ್ಲಿ
ಜಲಕ್ರೀಡೆಯಾಡುವದು ನಿನಗಿದುವ ಕಾಣಸದೆ ॥೯೨೮॥

ಅಂಗಾರಪರ್ಣನೆಂಬ ವನವಿದುವು ಎನ್ನದಿದೆ
ಸುರನರರು ರಾಕ್ಷಸರು ಬರಲಿಕ್ಕೆ ಹೆದರುವರು
ಇಂತಿರಲು ಹುಳುಜಂತು ಹೀನ ನರ ನೀನಿರಲು
ಧೈರ್ಯವದು ಎಂತಿಹದು ನಿನಗೆಂದು ನುಡಿದಿಹನು ॥೯೨೯॥

ಎಲೆ ಮೂಢ ಗಂಧರ್ವ ಗರ್ವದಲಿ ನುಡಿಯದಿರು
ಮೆರೆಯುತಿಹ ಹಿಮಗಿರಿಗೆ ದೇವನದಿ ಜಾಹ್ನವಿಗೆ
ಹಗಲಿರಲಿ ಇರುಳಿರಲಿ ಹೋಗಲಿಕೆ ನಿಯಮಗಳು
ನಿರ್ಬಂಧ ಅವುದೂ ಒಂದಿಲ್ಲ ತಿಳಿಯುವದು ॥೯೩೦॥

ಹೀನ ನರ ಎನ್ನುತಲಿ ಎನ್ನನ್ನು ಜರೆದಿರುವ
ನಿನ್ನಯಾ ಉಸುರನ್ನು ಮೇಲ್ಕೆಳಗೆ ಮಾಡುವೆನು
ನದಿ ಬಳಿಗೆ ನಾ ಬರುವೆ ನದಿ ನೀರ ಮುಟ್ಟುವೆನು
ಎನ್ನುತಲಿ ಅರ್ಜುನನು ಮುಂದಕ್ಕೆ ನುಗ್ಗುತಿರೆ ॥೯೩೧॥

ಕೋಪದಲಿ ಗಂಧರ್ವ ತೀಕ್ಷ್ಣದಾ ಶರಗಳನು
ಬಿಲ್ಲಿನಲಿ ಅಳವಡಿಸಿ ಬಿಡುತಲಿರೆ ಅರ್ಜುನನು
ಕೈಯಲ್ಲಿ ಹಿಡಿದಿರುವ ಕೊಳ್ಳಿಯನು ತಿರುಗಿಸುತ
ಮುತ್ತುತಿಹ ಬಾಣಗಳ ಭಸ್ಮವನು ಮಾಡಿದನು ॥೯೩೨॥

ಸುರರಲ್ಲಿ ನರರಲ್ಲಿ ಎನ್ನನ್ನು ಜಯಿಸುವಾ
ವೀರರೊಬ್ಬನಾವನೂ ಮೂಲೋಕದೊಳಗಿಲ್ಲ
ಸುಮ್ಮನೇ ಎನ್ನನ್ನು ಕೆಣಕುತಲಿ ಸಾಯದಿರು
ಎನ್ನಯಾ ಶೌರ್ಯವನು ನೀನೀಗ ನೋಡುವುದು ॥೯೩೩॥

ಜಗದೊಳಗೆ ಬಿಲ್ಲಿನಲಿ ಅಪ್ರತಿಮನೆನಿಸಿರುವ
ಗುರುದ್ರೋಣ ಕಲಿಸಿರುವ ಆಗ್ನೇಯಾಸ್ತ್ರ ದಿವ್ಯವಿದು
ಜಗವೆಲ್ಲ ಸುಡಬಲ್ಲ ಈ ಅಸ್ತ್ರವೆಸೆಯುತಲಿ
ನಿನ್ನನ್ನು ಸಂಹರಿಪೆ ಎನ್ನುತಲಿ ಅಸ್ತ್ರವನು ॥೯೩೪॥

ಮಂತ್ರವನು ಉಚ್ಚರಿಸಿ ಬಿಡುತಲಿರೆ ಆಗ್ನೇಯಾಸ್ತ್ರ
ವೇಗದಲಿ ಧಾವಿಸುತ ಖೇಚರನ ರಥವನ್ನು
ಅಶ್ವಗಳ ದಹಿಸುತಲಿ ಭಸ್ಮವನು ಮಾಡುತಿರೆ
ಗಂಧರ್ವ ಜ್ವಾಲೆಯಲಿ ಬೇಯುತಲಿ ಬೀಳುತಿರೆ ॥೯೩೫॥

ಗಂಧರ್ವನಾ ಸತಿಯು ಚೀರುತಲಿ ಓಡುತಲಿ
ಧರ್ಮಜನು ಚರಣಕ್ಕೆ ಬೀಳುತಲಿ ಹೊರಳುತಲಿ
ಎನ್ನಯಾ ಪತಿಯನ್ನು ರಕ್ಷಿಪುದು ಉಳಿಸುವದು
ಎನ್ನುತಲಿ ದೈನ್ಯದಲಿ ನುಡಿಯುತಿರೆ ರೋದಿಸುತ ॥೯೩೬॥

ಧರ್ಮಜನು ಕರುಣೆಯಲಿ ಅರ್ಜುನನೆ ಖೇಚರನ
ಕೊಲ್ಲದಿರು ಹಿಂದಕ್ಕೆ ಆಗ್ನೇಯಾಸ್ತ್ರ ಕೊಳ್ಳುವದು
ಇದು ಎನ್ನ ಆಜ್ಞೆ ಇದೆ ಎನ್ನುತಲಿ ನುಡಿಯುತಿರೆ
ಫಲುಗುಣನು ಅಸ್ತ್ರವನು ಹಿಂದಕ್ಕೆ ಕೊಳ್ಳುತಲಿ ॥೯೩೭॥

ಅಣ್ಣನಾ ಆಜ್ಞೆಯಲಿ ನಿನ್ನನ್ನು ಬಿಟ್ಟಿಹೆನು
ಜೀವಂತ ಹೋಗುವುದು ಎನ್ನುತಿರೆ ಅರ್ಜುನನು
ಗಂಧರ್ವ ಲಜ್ಜೆಯಲಿ ತಲೆತಗ್ಗಿ ವಿನಯದಲಿ
ನಿನ್ನಿಂದ ಸೋತಿಹೆನು ದುಃಖವದು ಎನಗಿಲ್ಲ ॥೯೩೮॥

ಈ ಪರಿಯ ವೀರನನು ಮನುಜರೊಳು ಕಂಡಿಲ್ಲ
ನರಶ್ರೇಷ್ಠ ನಿನ್ನನ್ನು ಕಂಡಿಹುದು ನನಭಾಗ್ಯ
ಲೋಕೈಕ ವೀರನಿಹ ನೀನಾರು ಹೇಳುವುದು
ಎನ್ನುತಲಿ ಗಂಧರ್ವ ನುಡಿದಿಹನು ಅರ್ಜುನಗೆ ॥೯೩೯॥

ಧರಣಿಯೊಳು ಖ್ಯಾತವಿಹ ಕುರುಕುಲದಿ ಜನಿಸಿರುವ
ಐವರೂ ಪಾಂಡವರು ನಾವಿಹೆವು ತಿಳಿಯುವದು
ಆವುದೊ ಕಾರಣದಿ ವಿಪ್ರರೀ ವೇಷದಲಿ
ನಾವೀಗ ಕಾನನವ ದೇಶಗಳ ಚರಿಸುವೆವು ॥೯೪೦॥

ಮುಂದಿನಲಿ ಪಾಂಚಾಲ ನಗರದಲಿ ವೈಭವದಿ
ಮದುವೆಯಲಿ ನಮ್ಮಯಾ ನಿಜರೂಪ ಪ್ರಕಟವೆವು
ಎನ್ನುತಿರೆ ಗಂಧರ್ವ ಯಮವಾಯು ದೇವೇಂದ್ರ
ಅಶ್ವಿನೀ ಕುಮರರಾ ಸುತರುಗಳು ನೀವಿಹಿರಿ ॥೯೪೧॥

ನೀವೆಮ್ಮ ಬಂಧುಗಳು ತಾಪತ್ಯ ಶ್ರೇಷ್ಠನೆ
ನಿಮ್ಮಯ ಸಮಾಗಮವು ಎಮ್ಮಯಾ ಭಾಗ್ಯವಿದು
ನಿನ್ನನ್ನು ಹುಲುನರನು ಎನ್ನುತಲಿ ನಿಂದಿಸಿದೆ
ಎನ್ನಯಾ ತಪ್ಪನ್ನು ಮನ್ನಿಪುದು ಎಂದಿಹನು ॥೯೪೨॥

**ಕುರುವಂಶ ಮೂಲನಾ ತಪತಿಯೂ ಸೃಪವರನ ।**
**ವಿಷಯವನು ಅರುಹಿದನು ಖೇಚರನು ಅರ್ಜುನಗೆ ॥**

ತಾಪತ್ಯ ಶ್ರೇಷ್ಠನೆ ಎನ್ನಯಾ ಪ್ರಾಣವನು
ಉಳಿಸಿರುವ ಕಾರಣದಿ ಸಖ್ಯತ್ವ ವರ್ಧಿಸಲು
ಯುದ್ಧದಲಿ ಜಯಿಸುವಾ ಅದ್ಭುತ ಪರಾಕ್ರಮದ
ಅಶ್ವಗಳ ನಿಮಗೆಲ್ಲ ಈಯುವೆನು ಎಂದಿಹನು ॥೯೪೩॥

ವಜ್ರದಾ ಪರಿಯಲ್ಲಿ ಅದ್ಭುತದ ಶಕ್ತಿಯಿಹ
ಮನಸಿನಾ ವೇಗದಲಿ ಬಹುದೂರ ಚರಿಸುತಿಹ
ನಿಮ್ಮಯಾ ಇಚ್ಛೆಯನು ಪೂರ್ಣವನು ಮಾಡುತಿಹ
ಒಂದು ಶತ ಅಶ್ವಗಳ ಪ್ರತಿಯೊಬ್ಬಗೀಯುವೆನು ॥೯೪೪॥

ಎನ್ನುತಲಿ ಗಂಧರ್ವ ನುಡಿಯುತಿರೆ ಅರ್ಜುನನು
ನಮಗೀಗ ಅಶ್ವಗಳು ಬೇಕಿಲ್ಲ ಮುಂದಕ್ಕೆ
ಸಮಯವದು ಬಂದಾಗ ಕುದುರೆಗಳನೀಯುವುದು
ನಿಮ್ಮಯಾ ಔದಾರ್ಯ ಮೆಚ್ಚಿಹೆನು ಎಂದಿಹನು ॥೯೪೫॥

ಎನ್ನನ್ನು ತಾಪತ್ಯ ಎನ್ನುತಲಿ ಕರೆದಿಹಿರಿ
ನಾನೆಂತು ತಪತಿಯಾ ಪುತ್ರನಿಹೆ ಮತ್ತೆಯು
ಆ ತಪತಿ ಆರಿಹರು ಎಂಬುವಾ ವಿಷಯವನು
ವಿಸ್ತರದಿ ಪೇಳುವುದು ಎಂದಿಹನು ಅರ್ಜುನನು ॥೯೪೬॥

ಕುರುಕುಲದ ಸಂಭೂತ ತಾಪತ್ಯ ಶ್ರೇಷ್ಠನೆ
ನಿನ್ನಯಾ ಪೂರ್ವಜರ ಕಥೆಯನ್ನು ಪೇಳುವೆನು
ಮುನ್ನಿನಲಿ ಸೋಮಕುಲ ಋಕ್ಷ ನೃಪನಣುಗನಿಹ
ಸಂವರಣನೆಂಬುವನು ವ್ರತನಿಯಮ ನೇಮದಲಿ ॥೯೪೭॥

ಪ್ರತಿದಿನವು ಸೂರ್ಯನನು ಭಕುತಿಯಲಿ ಭಜಿಸುತಿರೆ
ಸಂಪ್ರೀತನಾಗುತಲಿ ಸರ್ವಗುಣ ಸಂಪನ್ನ
ಸಂವರಣ ನೃಪನಿಂಗೆ ಆ ರವಿಯು ತನಯಳನು
ತಪತಿಯನು ಈಯುವುದು ಎನ್ನುತಲಿ ಇಚ್ಛಿಸಿದ ॥೯೪೮॥

ಒಂದು ದಿನ ಸಂವರಣ ಬೇಟೆಯನು ಆಡಲಿಕೆ
ವನದೊಳಗೆ ಅಲೆಯುತಲಿ ಬಹುದೂರ ಬರುತಲಿರೆ
ನೀರಡಿಕೆ ಹಸಿವೆಯಲಿ ಬಳಲುತಲಿ ಅಶ್ವವದು
ಚೀರುತಲಿ ಪ್ರಾಣವನು ಬಿಡುತಲಿರೆ ಸಂವರಣ ॥೯೪೯॥

ಏಕಾಕಿ ಅಲೆಯುತಿರೆ ಮೂಲೋಕ ಮೋಹಿಸುವ
ನವರಸದ ತಾರುಣ್ಯ ಸೌಂದರ್ಯದಿಂದೆಸೆವ
ಸುಂದರಿಯನೋರ್ವಳನು ಕಾಣುತಲಿ ಮನಸೋಲ್ಲು
ಮದನನಾ ಬಾಣದಲಿ ಸಿಲುಕಿದನು ಕಾಮದಲಿ ॥೯೫೦॥

ನೀನಾರು ಹೇಳುವುದು ಎಲ್ಲಿಂದ ಬಂದಿರುವೆ
ಒಬ್ಬಳೇ ನೀನೇಕೆ ಕಾನನದಿ ಅಲೆಯುತಿಹೆ
ಸುರನರೋರಗರೊಳಗೆ ನಿನ್ನ ಪರಿ ಚೆಲುವೆಯನು
ನಾನೆಂದು ಕಂಡಿಲ್ಲ ಎಂದಿಹನು ಸಂವರಣ ॥೯೫೧॥

ಕಾಮದಾ ಬಾಧೆಯನು ತಾಳದಲೆ ಕನ್ಯೆಯನು
ಅಪ್ಪಲಿಕೆ ತೋಳುಗಳ ಚಾಚುತಲಿ ಧಾವಿಸಲು
ಕ್ಷಣದಲ್ಲಿ ಆ ಕನ್ಯೆ ಮಾಯವದು ಆಗುತಿರೆ
ಮೂರ್ಛೆಯನು ಹೊಂದುತಲಿ ನೆಲದಲ್ಲಿ ಬಿದ್ದಿಹನು ॥೯೫೨॥

ಕೆಲಕಾಲ ನಂತರದಿ ಆ ಕನ್ಯೆ ಮತ್ತೆಯು
ಕಣ್ಣಿಂಗೆ ಕಾಣಿಸುತ ಈ ಪರಿಯ ನುಡಿದಿಹಳು
ಲೋಕವನು ಜಯಿಸುವಾ ಅದ್ಭುತ ಪರಾಕ್ರಮಿಯು
ಅಪ್ರತಿಮ ಶೂರನಿಹ ಧರ್ಮಾತ್ಮನೆನಿಸುತಿಹ ॥೯೫೩॥

ನೀನಿಂತು ನಿರ್ಬಲನ ಹೀನನಾ ಪರಿಯಲ್ಲಿ
ಕಾಮದಲಿ ಸಿಲುಕುತಲಿ ಬಳಲುವುದು ಸರಿಯಲ್ಲ
ಖ್ಯಾತವಿಹ ವಂಶದಲಿ ಜನಿಸಿರುವ ನಿನ್ನನ್ನು
ವರಿಸಲಿಕೆ ನಿಶ್ಚಯವ ಮಾಡಿಹೆನು ಆದೊಡೆಯು ॥೯೫೪॥

ನೀ ಬಲ್ಲೆ ಪುತ್ರಿಯಳು ಪಿತನಿಂಗೆ ಅಧೀನ
ಎನ್ನಯಾ ಪಿತನಾದ ಆ ಸೂರ್ಯನೊಪ್ಪಿದರೆ
ನಿನ್ನನ್ನು ಸಂತಸದಿ ಮದುವೆಯಲಿ ವರಿಸುವೆನು
ಎನ್ನುತಲಿ ನಭಕೇರಿ ಮಾಯವದು ಆಗಿಹಳು ॥೯೫೫॥

ಕಾಮದಲಿ ಸಿಲುಕಿರ್ದ ಸಂವರಣ ಭೂಪತಿಯು
ಸುರಸ್ತ್ರೀಯ ಸೌಂದರ್ಯದಿಂದೆಸೆವ ತಪತಿಯನು
ಮನದೊಳಗೆ ನೆನೆಯುತಲಿ ತಾಪದಲಿ ಬಳಲುತಲಿ
ಎಚ್ಚರವುದಪ್ಪುತಲಿ ನೆಲಕೊರಗಿ ಬಿದ್ದಿಹನು ॥೯೫೬॥

ಇತ್ತಲಾ ಮಂತ್ರಿಗಳು ಭೃತ್ಯರುಗಳೆಲ್ಲರು
ಅರಸನನು ಅರಸುತಲಿ ಸುತ್ತಲೂ ಚರಿಸುತಲಿ
ಪರ್ವತದ ಬಳಿ ಬರಲು ಮೂರ್ಛೆಯಲಿ ಬಿದ್ದಿರುವ
ಸಂವರಣ ಭೂಪತಿಯ ಕಂಡಿಹರು ಕಳವಳದಿ ॥೯೫೭॥

ಶೀತಲದ ಜಲವನ್ನು ಮುಖದೊಳಗೆ ಸಿಂಪಡಿಸಿ
ಶೈತ್ಯೋಪಚಾರವನು ಗೈಯ್ಯುತಿರೆ ಧರಣಿಪನು
ಎಚ್ಚರವಗೊಳ್ಳುತಲಿ ತಾನಿಲ್ಲಿ ವಾಸಿಪೆನು
ಎನ್ನುತಲಿ ಸಕಲರನು ಪುರದೆಡೆಗೆ ಕಳಿಸಿದನು ॥೯೫೮॥

ತಪತಿಯನು ಪಡೆಯಲಿಕೆ ಆಕೆಯಾ ತಂದೆಯನು
ತಪನನ್ನು ತಪಗೈದು ಮೆಚ್ಚಿಪುದು ಎನ್ನುತಲಿ
ಪ್ರತಿದಿನವು ಸ್ನಾನವನು ಗೈಯ್ಯುತಲಿ ಭಾನುವನು
ಕರವೆತ್ತಿ ನಮಿಸುತಲಿ ಪೂಜೆಯನು ಗೈದಿಹನು ॥೯೫೯॥

ಮನದೊಳಗೆ ನಿಜಗುರು ವಸಿಷ್ಠರನು ನೆನೆಯುತಿರೆ
ಜ್ಞಾನದಲಿ ಅರಿಯುತಲಿ ಮುನಿವರನು ಬರುತಲಿರೆ
ಸಂವರಣ ಆದರದಿ ಸತ್ಕಾರಗೈಯ್ಯುತಲಿ
ಸಾಷ್ಟಾಂಗವೆರಗುತಲಿ ಋಷಿವರಗೆ ನುಡಿದಿಹನು ॥೯೬೦॥

ತಪನ ಸುತೆ ತಾಪತಿಯ ನೋಡುತಲಿ ಮೋಹಿಸುತ
ಕಾಮಾಗ್ನಿ ತಾಪದಲಿ ನೊಂದಿಹೆನು ಬೆಂದಿಹೆನು
ಆ ತಪತಿ ಲಭಿಸುವಾ ಪರಿಯಲ್ಲಿ ಕರುಣಿಪುದು
ಎನ್ನುತಿರೆ ಒಪ್ಪುತಲಿ ಗುರುವರ ವಸಿಷ್ಠನು ॥೯೬೧॥

ಆಕಾಶಕೇರುತಲಿ ಭಾನುವಿನ ಬಳಿಬರಲು
ಋಷಿವರನೆ ನೀವೆಮ್ಮ ಬಳಿಬಂದ ಕಾರಣವ
ಉಸುರುವುದು ಇದು ನಮ್ಮ ಪೂರ್ವದಾ ಪುಣ್ಯವಿದೆ
ಎನ್ನುತಿರೆ ಆ ಸೂರ್ಯ ಋಷಿವರನು ನುಡಿದಿಹನು ॥೯೬೨॥

ನಿನಗೋರ್ವ ತಪತಿಯಳು ಎನ್ನುವಾ ಮಗಳಿಹಳು
ಎಂಬುದನು ಕೇಳುತಲಿ ನಾವಿಲ್ಲಿ ಬಂದಿಹೆವು
ಜಗದೊಳಗೆ ಖ್ಯಾತನಿಹ ಅಪ್ರತಿಮ ವೀರನಿಹ
ಸರ್ವಗುಣ ಸಂಪನ್ನ ಸದ್ಗುಣ ಸುಶೀಲನಿಹ ॥೯೬೩॥

ಸಂವರಣನೆಂಬುವಾ ಎಮ್ಮಯಾ ಶಿಷ್ಯನಿಹ
ನಿನ್ನಯಾ ಮಗಳನ್ನು ಅವಗಿತ್ತು ಮದುವೆಯನು
ಮಾಡುವುದು ಎನ್ನುತಲಿ ನಿನ್ನ ಬಳಿ ಬೇಡಲಿಕೆ
ಬಂದಿಹೆನು ಎನ್ನುತಲಿ ಮುನಿವರನು ನುಡಿದನು ॥೯೬೪॥

ಕೇಳುತಲಿ ಸಂಪ್ರೀತನಾಗುತಲಿ ಆ ಸೂರ್ಯ
ಪರಮಗುರು ನೀನಾಗಿ ಜಗವನ್ನು ಬೆಳಗುತಿಹೆ
ಕಿರಣಗಳ ತೇಜದಲಿ ನಾ ಜಗವ ಬೆಳಗುವೆನು
ಸಂವರಣ ನೃಪರೊಳಗೆ ಜಗದೊಳಗೆ ಮೆರೆಯುತಿಹ ॥೯೬೫॥

ಇಂತಿರಲು ಅತಿಶ್ರೇಷ್ಠ ಸಂವರಣ ಭೂಪತಿಗೆ
ಸ್ತ್ರೀಯರೊಳು ರತ್ನದಾ ಪರಿಯಲ್ಲಿ ಬೆಳಗುತಿಹ
ತಪತಿಯನು ಸಂತಸದಿ ಸಂವರಣಗೀಯುವೆನು
ಇದಕಿಂತ ಮಿಗಿಲಾದ ಸಂತೋಷವೆನಗಿಲ್ಲ ॥೯೬೬॥

ಎನ್ನುತಲಿ ಆ ಭಾನು ಹರುಷದಲಿ ಭರದಲ್ಲಿ
ಸ್ವರ್ಣದಾ ಆಭರಣ ವಸ್ತ್ರಗಳ ಭೂಷಿತಳ
ಸುತೆಯನ್ನು ತಪತಿಯನು ಗುರುವರಗೆ ಒಪ್ಪಿಸಲು
ತಪತಿಯಾ ಸಹಿತದಲಿ ಧರೆಗಿಳಿದ ಋಷಿವರನು ॥೯೬೭॥

ಬಂದಿರುವ ತಪತಿಯನು ಸಂವರಣ ನೋಡುತಲಿ
ಆನಂದ ಸಾಗರವು ಉಕ್ಕುತಲಿ ಮಿಕ್ಕುತಲಿ
ಋಷಿವರನ ಚರಣಕ್ಕೆ ಎರಗುತಿರೆ ವಸಿಷ್ಠನು
ಈರ್ವರಾ ಮದುವೆಯನು ಮಾಡಿದನು ಸಂಭ್ರಮದಿ ॥೯೬೮॥

ರಾಜ್ಯದಾ ಭಾರವನು ಸಚಿವರಿಗೆ ಒಪ್ಪಿಸುತ
ಸಂವರಣ ಸತಿ ತಪತಿ ಸಹಿತದಲಿ ಸಂತಸದಿ
ಗಿರಿಯಲ್ಲಿ ಗುಹೆಯಲ್ಲಿ ಪರ್ವತದಿ ಕಾನನದಿ
ವಿಹರಿಸುತ ಹನ್ನೆರಡು ವರುಷಗಳ ಕಳೆದಿಹನು ॥೯೬೯॥

ಇತ್ತಲಾ ರಾಜ್ಯದಲಿ ಯಜ್ಞಗಳು ಯಾಗಗಳು
ದಾನಗಳ ಧರ್ಮಗಳ ಕಾರ್ಯಗಳು ನಡೆಯದಿರೆ
ದೇವೇಂದ್ರ ಕೋಪದಲಿ ಮಳೆಯನ್ನು ಸುರಿಸದಿರೆ
ದೇಶದಲಿ ಭೀಕರದ ಬರಗಾಲ ಪಸರಿದುದು ॥೯೭೦॥

ಸಕಲ ಪ್ರಜೆ ಸಂಕಟದಿ ಸಂವರಣನೆಡೆಯಲ್ಲಿ
ಧಾವಿಸುತ ಬರಗಾಲ ಕಷ್ಟವನು ಪೇಳುತಿರೆ
ಕರುಣೆಯಲಿ ಸಂವರಣ ಕರಗುತಲಿ ನೋಯುತಲಿ
ರಾಜ್ಯಕ್ಕೆ ಬಂದಿಹನು ತಪತಿಯಾ ಸಹಿತದಲಿ ||೯೭೧||

ದೇವೇಂದ್ರ ಶಚಿಯಂತೆ ತೇಜದಲಿ ಹೊಳೆಯುತಿಹ
ಸಂವರಣ ವರತಪತಿ ದಂಪತಿಗಳೀರ್ವರು
ಪುರದಲ್ಲಿ ಕಾಲಿಡುತ ಬರುತಲಿರೆ ಭರದಲ್ಲಿ
ದೇವೇಂದ್ರ ಮಳೆಗರೆದ ಜನಮನವ ತಣಿಸುತಲಿ ||೯೭೨||

ಈ ಪರಿಯ ಸಂವರಣ ತಪತಿಯನು ವರಿಸುತಿರೆ
ಆ ತಪತಿ ನಿಮ್ಮಯಾ ಪೂರ್ವಜಳು ಎನಿಸಿಹಳು
ಆ ತಪತಿಯುದರದಲಿ ನಿಮ್ಮಯಾ ಪೌರ್ವಿಕನು
ಜಗಖ್ಯಾತ ಘನವೀರ ಕುರುನೃಪನು ಜನಿಸಿಹನು ||೯೭೩||

ಕುರುಕುಲದಿ ಜನಿಸಿರುವ ಫಲುಗುಣನೆ ಶ್ರೇಷ್ಠನೆ
ಕೌರವನು ನೀನೆನಿಪ ಪರಿಯಲ್ಲಿ ತಪತಿಯಾ
ವಂಶದಲಿ ಜನಿಸಿರುವ ತಾಪತ್ಯ ನೀನೆನಿಪೆ
ಎನ್ನುತಲಿ ಗಂಧರ್ವ ಅರ್ಜುನಗೆ ನುಡಿದಿಹನು ||೯೭೪||

ಕೇಳುವುದು ಜನಮೇಜಯ ನೃಪನೆ ಈ ಪರಿಯೆ
ಫಲುಗುಣನು ಮುನಿವರ ವಸಿಷ್ಠನ ತಪೋಬಲವ
ಕೌತುಕದಿ ಅರಿಯುತಲಿ ಋಷಿವರನ ಅದ್ಭುತದ
ಬ್ರಹ್ಮಬಲ ತಿಳಿಸುವುದು ಎನ್ನುತಲಿ ನುಡಿದಿಹನು ||೯೭೫||

**ಕೌಶಿಕನು ಭೂಪತಿಯು ಬ್ರಹ್ಮರ್ಷಿಯಾದುದನು ।**
**ಗಂಧರ್ವ ಸರಸದಲಿ ಪಾರ್ಥನಿಗೆ ಹೇಳಿದನು ॥**

ಆಲಿಪುದು ಕಲಿಪಾರ್ಥ ಮುನ್ನಿನಲಿ ವಶಿಷ್ಠನು
ಚತುರಂಗ ಬಲಸಹಿತ ವಿಶ್ವಾಮಿತ್ರ ವೀರನನು
ತನ್ನಯ ತಪೋಬಲದಿ ಜಯಿಸಿರುವ ಕಥೆಯನ್ನು
ಪೇಳುವೆನು ಎನ್ನುತಲಿ ಗಂಧರ್ವ ನುಡಿದಿಹನು ||೯೭೬||

ಆ ಕಾನ್ಯಕುಬ್ಜವನು ಆಳುತಿಹ ಧರಣಿಪನು
ಗಾಧಿನೃಪ ಸುತನಾದ ವಿಖ್ಯಾತ ವಿಕ್ರಮನು
ಕುಶಿಕಕುಲ ಘನವೀರ ಆ ವಿಶ್ವಾಮಿತ್ರನು
ಒಂದು ದಿನ ಬೇಟೆಯನು ಆಡಲಿಕೆ ಕಾನನಕೆ ||೯೭೭||

ತನ್ನಯ ಅಮಾತ್ಯರೊಡಗೂಡಿ ತೆರಳುತಲಿ
ಬಹುದೂರ ಸಾಗುತಲಿ ಸುತ್ತುತಲಿ ಅಲೆಯುತಲಿ
ಬಾಯಾರಿ ಹಸಿವೆಯಲಿ ಕಂಗೆಟ್ಟು ಕಳವಳಿಸಿ
ತಾಪವನು ಪರಿಹರಿಸಿಕೊಳ್ಳಲಿಕೆ ಬರುತಿರೆ ||೯೭೮||

ಸನಿಹದಲಿ ಸುಂದರದ ಆಶ್ರಮವ ಕಾಣುತಲಿ
ಸಂತಸದಿ ಬರುತಲಿರೆ ವಶಿಷ್ಠನತಿ ಹರುಷದಲಿ
ಆದರದಿ ಸತ್ಕರಿಸಿ ವಿಧವಿಧದ ಭಕ್ಷ್ಯಗಳ
ಭೋಜ್ಯಗಳ ನೀಯುತಲಿ ಸತ್ಕಾರ ಗೈದಿಹನು ||೯೭೯||

ಥಳಥಳಿಪ ಮುತ್ತುಗಳ ವಜ್ರಗಳ ರತ್ನಗಳ
ಅಗಣಿತದ ಧನಕನಕವೀಯುತಲಿ ವೈಭವದಿ
ಕೌಶಿಕನ ಸತ್ಕಾರಗೈದಿಹನು ಅದ್ಭುತದಿ
ಗಾಧಿಸುತ ಆಶ್ಚರ್ಯಗೊಂಡಿಹನು ಅತುಳದಿ ||೯೮೦||

ಬಡಮುನಿಗೆ ಈ ತೆರದ ಐಶ್ವರ್ಯ ಸಂಪದವು
ಎಲ್ಲಿಂದ ಬಂದಿಹುದು ಎನ್ನುತಲಿ ಯೋಚಿಸುತ
ಸನಿಹದಲಿ ನಿಂತಿರುವ ಸರ್ವಾಂಗ ಸುಂದರದ
ಆ ಕಾಮಧೇನುವನು ನಂದಿನಿಯ ಕಂಡಿಹನು ||೯೮೧||

ಈ ತೆರದ ಆಕಳನು ಜಗದೊಳಗೆ ಕಂಡಿಲ್ಲ
ಅಪ್ರತಿಮ ಸೌಂದರ್ಯದಿಂದೆಸೆವ ಧೇನುವಿದು
ಈ ಧೇನು ಧರಣಿಪನ ಬಳಿಯಿಹುದು ಲೇಸೆಂದು
ಕೌಶಿಕನು ನುಡಿದಿಹನು ಋಷಿವರ ವಸಿಷ್ಠನಿಗೆ ||೯೮೨||

ಅರ್ಬುದ ಕೋಟಿಗಳ ಆಕಳುಗಳೀಯುವೆನು
ಈ ಒಂದು ನಂದಿನಿಯ ಆಕಳವನೀಯುವುದು
ಇಲ್ಲದಿರೆ ಎನ್ನಯಾ ರಾಜ್ಯವನು ಸಂಪದವ
ಎಲ್ಲವನು ಈಯುವೆನು ನಂದಿನಿಯನೀಯುವುದು ||೯೮೩||

ಎನ್ನುತಲಿ ಕೌಶಿಕನು ಕಾತರದಿ ನುಡಿಯುತಿರೆ
ದೇವತೆಯ ಯಜ್ಞಗಳ ಯಾಗಗಳ ಕಾರ್ಯಕ್ಕೆ
ಅತಿಥಿಗಳ ಸತ್ಕಾರ ಪಿತೃಗಳಾ ಕಾರ್ಯಕ್ಕೆ
ನಂದಿನಿಯ ರಕ್ಷಿಪೆನು ಎನ್ನಯಾ ಮಗಳ ಪರಿ ||೯೮೪||

ನಿನ್ನಯಾ ರಾಜ್ಯವನು ಸಕಲವನು ಇತ್ತೊಡೆಯು
ನಂದಿನಿಯ ನಾನೀಯೆ ಎಂದಿಗೂ ಎನ್ನುತಿರೆ
ಕೌಶಿಕನು ಕೋಪದಲಿ ಈ ಶ್ರೇಷ್ಠ ಆಕಳವು
ರಾಜನಾ ಬಳಿ ಇಹುದು ಯೋಗ್ಯವದು ಎನಿಸುವುದು ||೯೮೫||

ನಿನ್ನಂಥ ಬಡಮುನಿಯ ಆಶ್ರಮದಿ ಈ ಧೇನು
ಇರುವದಿದು ಸರ್ವಥಾ ಅನುಚಿತವು ಶೋಭಿಸದು
ಧರಣಿಪನು ನಾನಿರುವೆ ತನ್ನಯಾ ಮಾತನ್ನು
ನಡೆಸುವುದು ನಿನ್ನಯಾ ಕರ್ತವ್ಯವಿರುತಿಹುದು ||೯೮೬||

ವೀರಬಲ ಸಂಪನ್ನ ಕ್ಷತ್ರಿಯನು ನಾನಿರುವೆ
ಬಲದಿಂದ ಆಕಳನು ಸೆಳೆದೊಯ್ವೆ ಎನ್ನುತಲಿ
ನಂದಿನಿಯ ಬಳಬಂದು ಹಿಡಿಯಲಿಕೆ ಯತ್ನಿಸಲು
ಕೋಡಿನಲಿ ಕೌಶಿಕನ ತಿವಿಯುತಲಿ ತಳ್ಳಿದುದು ॥೯೮೭॥

ರೋಷದಲಿ ಕೌಶಿಕನು ಚಾಟಿಯಲಿ ಕೋಲಿನಲಿ
ನಂದಿನಿಯ ಬಡಿಯುತಲಿ ಹಿಂಸೆಯನು ಕೊಡುತಲಿರೆ
ರೋದಿಸುತ ಹಂಬಲಿಸಿ ಹಂಬ ಎಂದೊದರುತಲಿ
ಕಂಬನಿಯ ಸುರಿಸುತಲಿ ವಸಿಷ್ಠನೆಡೆ ಬಂದಿಹುದು ॥೯೮೮॥

ಎನ್ನನ್ನು ರಕ್ಷಿಪುದು ಎನ್ನುತಿರೆ ನಂದಿನಿಯು
ಕೌಶಿಕನು ಕ್ಷತ್ರಿಯನು ವೀರನಿಹ ಶೂರನಿಹ
ಬಲದಿಂದ ಒಯ್ಯುವನು ಕ್ಷಮೆ ಗುಣವು ನನ್ನದಿದೆ
ಶಾಂತಿಯದು ನಮ್ಮ ಗುಣ ಕೋಪವದು ಎಮಗಿಲ್ಲ ॥೯೮೯॥

ನಿನ್ನಯಾ ರಕ್ಷಣೆಯ ನೀ ಮಾಡಿಕೊಳ್ಳುವುದು
ಎನ್ನುತಲಿ ನುಡಿದಿಹನು ಋಷಿವರ ವಸಿಷ್ಠನು
ಅತ್ತಲಾ ಚತುರಂಗ ಬಲಸಹಿತ ಕೌಶಿಕನು
ನಂದಿನಿಯ ಸೆಳೆದೊಯ್ಯುವೆನ್ನುತಲಿ ಬರುತಲಿರೆ ॥೯೯೦॥

ನಂದಿನಿಯ ಬಳಬರುತ ಹಿಡಿಯಲಿಕೆ ಯತ್ನಿಸಲು
ಕೋಡಿನಲಿ ಕೌಶಿಕನ ತಿವಿಯುತಲಿ ತರಿಯುತಿರೆ
ಕೋಲಿನಲಿ ನಂದಿನಿಯ ಬಲವಾಗಿ ಬಡಿಯುತಿರೆ
ಹಂಬಲಿಸಿ ಒದರುತಲಿ ವಸಿಷ್ಠನೆಡೆ ಧಾವಿಸುತ ॥೯೯೧॥

ಎನ್ನನ್ನು ರಕ್ಷಿಪುದು ಎನ್ನುತಿರ ನಂದಿನಿಯು
ಕೌಶಿಕನು ಕ್ಷತ್ರಿಯನು ವೀರನಿಹ ಶೂರನಿಹ
ಬಲದಿಂದ ಒಯ್ಯುತಿಹ ಕ್ಷಮೆ ಎನ್ನ ಗುಣವಿಹುದು
ನಿನ್ನಯಾ ರಕ್ಷಣೆಯ ನೀ ಮಾಡಿಕೊಳ್ಳುವುದು ॥೯೯೨॥

ಎನ್ನುತಲಿ ವಸಿಷ್ಠ ಋಷಿ ನುಡಿಯುತಿರೆ ನೋಯುತಲಿ
ಅತ್ತಲಾ ಕೌಶಿಕನು ಚತುರಂಗ ಬಲಸಹಿತ
ನಂದಿನಿಯ ಸೆಳೆದೊಯ್ಯುವೆನ್ನುತಲಿ ಬರುತಿರಲು
ನಂದಿನಿಯು ಕೋಪದಲಿ ಬಾಲವದು ಬೀಸುತಲಿ ॥೯೯೩॥

ಕಾಲುಗಳಲೊದೆಯುತಲಿ ಹೂಂಕಾರಗೈಯ್ಯುತಲಿ
ಗರ್ಜಿಸುತ ಆರ್ಭಟಿಸಿ ಸೈನ್ಯದಾ ಮಧ್ಯದಲಿ
ನುಗ್ಗುತಿರೆ ಚತುರಂಗ ಬಲಸೈನ್ಯ ಚದುರಿದುದು
ಆ ಕ್ಷಣದಿ ಧೇನುವಿನ ವಿಧ ವಿಧದ ಅಂಗದಲಿ ॥೯೯೪॥

ಅಗಣಿತದ ದ್ರಾವಿಡರ ಶಕ ಯವನ ಶಬರರಾ
ಸೈನಿಕರು ಜನಿಸುತಲಿ ಕೌಶಿಕನ ಸೈನ್ಯವನು
ಮುತ್ತುತಲಿ ಯುದ್ಧವನು ಗೈಯ್ಯುತಲಿ ಓಡಿಸಲು
ಕೌಶಿಕನು ಕಾಣುತಲಿ ಆಶ್ಚರ್ಯಗೊಂಡಿಹನು ॥೯೯೫॥

ಕ್ಷಾತ್ರ ಬಲ ಧಿಕ್ಕಾರ ಬ್ರಹ್ಮ ಬಲ ಬಲವೆ ಬಲ
ಕ್ಷಾತ್ರ ಬಲಕಿಂತಲೂ ಬ್ರಹ್ಮ ಬಲ ಶ್ರೇಷ್ಠ ಬಲ
ಬ್ರಹ್ಮ ಬಲ ಪಡೆಯುವೆನು ಎನ್ನುತಲಿ ಕೌಶಿಕನು
ರಾಜ್ಯವನು ಸಂಪದವ ಎಲ್ಲವನು ತೊರೆಯುತಲಿ ॥೯೯೬॥

ಕಾನನಕೆ ತೆರಳುತಲಿ ಸಾವಿರದ ವರ್ಷಗಳ
ಘೋರತರ ಕಠಿಣತರ ತಪವನ್ನು ಗೈಯ್ಯುತಲಿ
ಮೂಲೋಕ ನಡುಗಿಸುವ ಅದ್ಭುತದ ಬಲವಿರುವ
ಬ್ರಹ್ಮಬಲ ಪಡೆಯುತಲಿ ಬ್ರಹ್ಮರ್ಷಿ ಎನಿಸುತಲಿ ॥೯೯೭॥

ಸ್ವರ್ಗದಾ ಲೋಕದಲಿ ದೇವೇಂದ್ರನೆಡೆಯಲ್ಲಿ
ಮಂಡಿಸುತ ಬ್ರಹ್ಮರ್ಷಿ ಆ ವಿಶ್ವಾಮಿತ್ರನು
ಸೋಮರಸ ಕುಡಿದಿಹನು ಸುರರೆಲ್ಲ ಸ್ತುತಿಸಿದರು
ಎನ್ನುತಲಿ ಗಂಧರ್ವ ಫಲುಗುಣಗೆ ನುಡಿದಿಹನು ॥೯೯೮॥

**ಕಲ್ಮಾಷಪಾದನಾ ಔರ್ವನಾ ನೃಪರುಗಳ**
**ವೃತ್ತಾಂತವರುಹಿದನು ಪಾರ್ಥನಿಗೆ ಖೇಚರನು**

ಜನಮೇಜಯಕ್ಷಿತಿಪ ಕೌಶಿಕ ವಸಿಷ್ಠರಾ
ಮುಂದಣದ ಕಲಹದಾ ವಿಷಯವನು ಆಲಿಪುದು
ಶ್ರೇಷ್ಠಮಿಹ ಇಕ್ಷ್ವಾಕು ವಂಶದಲಿ ಜನಿಸಿರುವ
ಅಪ್ರತಿಮ ವಿಕ್ರಮನು ಕಲ್ಮಾಷಪಾದನೃಪ ॥೯೯೯॥

ಒಂದು ದಿನ ಬೇಟೆಯನು ಆಡಲಿಕೆ ಕಾನನಕೆ
ತೆರಳುತಲಿ ಅಲೆಯುತಲಿ ಬಳಲುತಲಿ ಬೆಂಡಾಗಿ
ಚರಿಸುತಿರೆ ಮಾರ್ಗದಲಿ ಮಧ್ಯದಲಿ ವಸಿಷ್ಠರಾ
ಸುತನಾದ ಶಕ್ತಿ ಬರೆ ಕಲ್ಮಾಷಪಾದನೃಪ ॥೧೦೦೦॥

ಅತ್ತ ಸರಿ ಅತ್ತ ಸರಿ ದಾರಿಯನು ಬಿಡು ಎಂದು
ಕೋಪದಲಿ ನುಡಿಯುತಿರೆ ಆ ಶಕ್ತಿ ನೃಪನಿಂಗೆ
ವಸಿಷ್ಠರಾ ಸುತ ಶಕ್ತಿ ಬ್ರಾಹ್ಮಣನು ನಾನಿಹೆನು
ನೀ ಸರಿದು ನಿಲ್ಲುವುದು ಎನ್ನುತಲಿ ನುಡಿದಿಹನು ॥೧೦೦೧॥

ಕೋಪದಲಿ ಭೂಪತಿಯು ಚಾವಟಿಯ ಕೊಳ್ಳುತಲಿ
ಶಕ್ತಿಯನು ಬಲವಾಗಿ ಹೊಡೆಯುತಿರೆ ಆ ಶಕ್ತಿ
ರೋಷದಲಿ ಅರಸಂಗೆ ತಪಸಿಗಳ ಹಿಂಸಿಸುವ
ರಾಕ್ಷಸನ ಪರಿಯಲ್ಲಿ ನರಮಾಂಸ ತಿನ್ನುವಾ ॥೧೦೦೨॥

ಘೋರತರ ರಾಕ್ಷಸನು ನೀನಾಗಿ ವನದೊಳಗೆ
ನರರನ್ನು ಭಕ್ಷಿಸುತ ಚರಿಸುವುದು ಎನ್ನುತಲಿ
ಶಾಪವನು ಈಯುತಿರೆ ಕಲ್ಮಾಶಪಾದನೃಪ
ರಾಕ್ಷಸನು ಆಗುತಲಿ ಅಲೆಯುತಿರೆ ಕಾನನದಿ ॥೧೦೦೩॥

ಕೌಶಿಕನು ಅರಿಯುತಲಿ ವಸಿಷ್ಠರಾ ಮೇಲಣದ
ಕೋಪದಲಿ ಕಿಂಕರನ ರಾಕ್ಷಸನ ಕರೆಸುತಲಿ
ಕಲ್ಮಾಷಪಾದನಾ ದೇಹದೊಳು ಸೇರುವುದು
ಎನ್ನುತಲಿ ಆಜ್ಞೆಯನು ಈಯುತಲಿ ತೆರಳಿದನು ॥೧೦೦೪॥

ಕಲ್ಮಾಷನಂಗದಲಿ ಕಿಂಕರನು ಸೇರುತಿರೆ
ರಾಕ್ಷಸ ಸ್ವಭಾವಗಳು ಗುಣವೆಲ್ಲ ತೋರುತಿರೆ
ಕಲ್ಮಾಷ ಪಾದನೃಪ ಎಲ್ಲವನು ಮರೆಯುತಲಿ
ನರಮಾಂಸ ತಿನ್ನುವಾ ಆಸೆಯಲಿ ಭರದಲ್ಲಿ ॥೧೦೦೫॥

ಎದುರೊಳಿಹ ಶಕ್ತಿಯನು ಹರಿಯುತಲಿ ತಿನ್ನುತಲಿ
ಹಸಿವೆಯದು ಹಿಂಗದಿರೆ ವಸಿಷ್ಠರಾ ಆಶ್ರಮಕೆ
ನುಗ್ಗುತಲಿ ವಸಿಷ್ಠರಾ ಮಕ್ಕಳನು ಸಕಲರನು
ಭಕ್ಷಣೆಯ ಗೈದಿಹನು ಕೌಶಿಕನ ಮಾಯೆಯಲಿ ॥೧೦೦೬॥

ಮಕ್ಕಳುಗಳೆಲ್ಲರನು ರಕ್ಕಸನು ಭಕ್ಷಿಸಲು
ದುಃಖದಲಿ ವಸಿಷ್ಠಋಷಿ ಪ್ರಾಣವನು ನೀಗುವುದು
ಎನ್ನುತಲಿ ಎತ್ತರದ ಪರ್ವತವನೇರುತಲಿ
ಕೆಳಗಡೆಗೆ ಬೀಳುತಿರೆ ಭೂದೇವಿ ಸಲುಹಿದಳು ॥೧೦೦೭॥

ನದಿಯೊಳಗೆ ಬೀಳುತಿರೆ ತೇಲುತಲಿ ಬಂದಿಹನು
ಸಾಗರದಿ ಧುಮುಕುತಿರೆ ತೆರೆ ಎತ್ತಿ ಹಿಡಿದಿಹವು
ಅಗ್ನಿಯಲಿ ಬೀಳುತಿರೆ ಅಗ್ನಿಯದು ನಂದಿಹುದು
ಎಲ್ಲಿಯೂ ಪ್ರಾಣವದು ತೊಲಗದಿರೆ ವಸಿಷ್ಠಋಷಿ ॥೧೦೦೮॥

ದುಃಖದಲಿ ಆಶ್ರಮಕೆ ತೆರಳುತಿರೆ ಮಾರ್ಗದಲಿ
ಶಕ್ತಿಯಾ ಹೆಂಡತಿಯು ಅದೃಶಂತಿ ಬಳಿ ಬಂದು
ಎನ್ನಯಾ ಬಸುರಿನಲಿ ಶಕ್ತಿಯಾ ಸುತನಿಹನು
ಹನ್ನೆರಡು ವರುಷದಲಿ ಗರ್ಭದಲಿ ಹೊತ್ತಿಹೆನು ॥೧೦೦೯॥

ಎನ್ನುತಲಿ ನುಡಿಯುತಿರೆ ಹರುಷದಿ ವಸಿಷ್ಠನು
ಎನ್ನಯಾ ವಂಶವನು ಉದ್ಧರಿಪ ಶಿಶುವೊಂದು
ಇಹುದೆಂದು ಸಂತಸದಿ ವಸಿಷ್ಠನು ಸೊಸೆ ಸಹಿತ
ಬರುತಲಿರೆ ಮಾರ್ಗದಲಿ ಆನಿತರಲಿ ಎದುರಿನಲಿ ॥೧೦೧೦॥

ಕಲ್ಮಾಷಪಾದನೃಪ ಮುನಿವರನ ತಿನ್ನಲಿಕೆ
ಧಾವಿಸುತ ಬರುತಲಿರೆ ಅದೃಶಂತಿ ಭೀತಿಯಲಿ
ಎಮ್ಮನ್ನು ತಿನ್ನಲಿಕೆ ರಾಕ್ಷಸನು ಬರುತಿಹುದು
ರಕ್ಷಿಪುದು ಎನ್ನುತಲಿ ವಸಿಷ್ಠರಿಗೆ ನುಡಿಯುತಿರೆ ॥೧೦೧೧॥

ಹೇ ಮಗಳೆ ಹೆದರದಿರು ರಾಕ್ಷಸನು ಇವನಲ್ಲ
ಇಕ್ಷ್ವಾಕು ವಂಶದಾ ಶ್ರೇಷ್ಠನೃಪನೀತನಿಹ
ನಿನ್ನಯಾ ಪತಿ ಶಕ್ತಿ ರಕ್ಕಸನು ಆಗೆಂದು
ಈತನಿಗೆ ಶಾಪವನು ಇತ್ತಿಹನು ಎನ್ನುತಲಿ ॥೧೦೧೨॥

ಕರದೊಳಿಹ ಕಮಂಡಲದ ಜಲವನ್ನು ಕೊಳ್ಳುತಲಿ
ನೃಪನನ್ನು ಸಿಂಪಡಿಸೆ ಒಳಗಿರುವ ಕಿಂಕರನು
ರಕ್ಕಸನು ತೊಲಗುತಿರೆ ಶಾಪವದು ಹಿಂಗುತಿರೆ
ಕಲ್ಮಾಷಪಾದನೃಪ ದಿವ್ಯದಾ ತೇಜದಲಿ ॥೧೦೧೩॥

ಮೇಘಗಳು ತೊಲಗಿರುವ ರವಿಯಂತೆ ಹೊಳೆಯುತಲಿ
ತನ್ನಯಾ ಪೂರ್ವವನು ನೆನೆಯುತಲಿ ಹರುಷದಲಿ
ಋಷಿವರ ವಸಿಷ್ಠರಾ ಚರಣಕ್ಕೆ ಎರಗುತಲಿ
ಎನ್ನನ್ನು ಕರುಣೆಯಲಿ ಹರಸುವುದು ಎಂದಿಹನು ॥೧೦೧೪॥

ನಿಮ್ಮಯಾ ಆಜ್ಞೆಯನು ಪಾಲಿಸುವೆ ತಿಳಿಸುವುದು
ಎನ್ನುತಲಿ ನೃಪನುಡಿಯೆ ವಸಿಷ್ಠರು ಸಂತಸದಿ
ವಿಪ್ರರನು ಎಂದಿಗೂ ಹಿಂಸೆಯನು ಮಾಡದಿರು
ಸಕಲರನು ರಾಜ್ಯವನು ಧರ್ಮದಲಿ ಆಳುವುದು ॥೧೦೧೫॥

ಕೇಳುತಲಿ ಕಲ್ಮಾಷಪಾದನೃಪ ನಮಿಸುತಲಿ
ಧರ್ಮದಲಿ ಪ್ರೀತಿಯ ಲಿ ರಾಜ್ಯವನು ಆಳುವೆನು
ಸರ್ವರನು ಮಕ್ಕಳಾ ಪರಿಯಲ್ಲಿ ಪಾಲಿಪೆನು
ಆರಿಗೂ ಹಿಂಸೆಯನು ನಾನೀಯೆ ಎಂದಿಗೂ ॥೧೦೧೬॥

ಇಕ್ಷ್ವಾಕು ವಂಶವನು ಉತ್ಕರ್ಷಗೊಳಿಸಲಿಕೆ
ಶೀಲಗುಣ ಸಂಪನ್ನ ಪುತ್ರನನು ಪಡೆಯುವಾ
ಇಚ್ಛೆಯದು ಎನಗಿಹುದು ಕರುಣಿಪುದು ಎನ್ನುತಲಿ
ವಸಿಷ್ಠರಾ ಸಹಿತದಲಿ ಅರಮನೆಗೆ ನಡೆದಿಹನು ॥೧೦೧೭॥

ಹನ್ನೆರಡು ವರ್ಷಗಳ ನಂತರ ಅಯೋಧ್ಯೆಗೆ
ಕಲ್ಮಾಷಪಾದನೃಪ ವಸಿಷ್ಠರಾ ಸಹಿತದಲಿ
ಬರುತಲಿರೆ ಪುರಜನರು ಸಂಭ್ರಮದಿ ವೈಭವದಿ
ತಳಿರಿನಲಿ ತೋರಣದಿ ಸ್ವಾಗತವ ಗೈದಿಹರು ॥೧೦೧೮॥

ಅರಮನೆಗೆ ತೆರಳುತಲಿ ವಿವಿಧೋಪಚಾರದಲಿ
ಗುರುವರ ವಸಿಷ್ಠನನು ಸತ್ಕಾರಗೈಯ್ಯುತಲಿ
ತನ್ನಯಾ ಸತಿಯನ್ನು ಮದಯಂತಿ ರಾಣಿಯನು
ವಸಿಷ್ಠರಾ ಸೇವೆಯಲಿ ಇರಿಸಿದನು ನೃಪವರನು ॥೧೦೧೯॥

ಕೆಲಕಾಲ ಕಳೆಯುತಿರೆ ಮದಯಂತಿ ಮಹರಾಣಿ
ಋತುಸ್ನಾತೆಯಾಗಿರಲು ಮುನಿವರ ವಸಿಷ್ಠರು
ಶಾಸ್ತ್ರೋಕ್ತ ವಿದ್ಯೆಯಲಿ ರಾಣಿಯನು ಹರಸುತಿರೆ
ಕೆಲದಿನದಿ ಹೊಳೆಯುತಲಿ ಗರ್ಭವತಿಯಾಗಿಹಳು ॥೧೦೨೦॥

ಹನ್ನೆರಡು ವರುಷಗಳ ಪರ್ಯಂತ ಪ್ರಸವಿಸದೆ
ಇರುತಿರಲು ನೋವನ್ನು ತಾಳದಲೆ ಕಲ್ಲಿನಲಿ
ಉದರವನು ಕುಟ್ಟುತಿರೆ ಶಿಶುವೊಂದು ಜನಿಸುತಿರೆ
ಅಶ್ಮಕನು ಎನ್ನುತಲಿ ಹೆಸರನ್ನು ಇಟ್ಟಿಹರು ॥೧೦೨೧॥

ದಿನದಿನದಿ ಬೆಳೆಯುತಲಿ ಅಶ್ಮಕನು ಭೂಪತಿಯು
ಧರ್ಮದಲಿ ಪ್ರೇಮದಲಿ ರಾಜ್ಯವನು ಆಳಿದನು
ಇಕ್ಷ್ವಾಕು ವಂಶದಲಿ ಶ್ರೇಷ್ಠ ನೃಪನೆನಿಸುತಲಿ
ಪೌದನ್ಯಪುರವೆಂಬ ನವನಗರ ಕಟ್ಟಿದನು ॥೧೦೨೨॥

ಫಲ್ಗುಣನೆ ಕೇಳುವುದು ಇತ್ತಲಾ ವಸಿಷ್ಠರಾ
ಸೊಸೆಯಾದದೃಶ್ಯಂತಿ ತೇಜದಲಿ ಹೊಳೆಯುತಿಹ
ಶಕ್ತಿಯಾ ಶಿಶುವೊಂದ ಪ್ರಸವಿಸೆ ವಸಿಷ್ಠರು
ಸಂತಸದಿ ವಿದ್ಯುಕ್ತ ಕರ್ಮಗಳ ಗೈಯ್ಯುತಲಿ ॥೧೦೨೩॥

ತನ್ನಯಾ ವಂಶವನು ಉದ್ಧರಿಪ ಶಿಶುವಿಂಗೆ
ಮರಣವನು ಅಪ್ಪುತಿಹ ತನ್ನನ್ನು ಉಳಿಸಿರುವ
ಅಮ್ಮತದ ಶಕ್ತಿಯಲಿ ಹೊಳೆಯುತಿಹ ಶಿಶುವಿಂಗೆ
ಪರಾಶರ ಎಂಬುವಾ ಹೆಸರನ್ನು ಇಟ್ಟಿಹರು ॥೧೦೨೪॥

ಆ ಶಿಶುವು ಬೆಳೆಯುತಲಿ ವಸಿಷ್ಠರನು ತಾತಯ್ಯ
ಎನ್ನುತಿರೆ ಅದೃಶ್ಯಂತಿ ನಿಜಪತಿಯ ನೆನಪಾಗಿ
ಕಣ್ಣೀರ ಸುರಿಸುತಲಿ ನಿನ್ನಜ್ಜ ಇವರಿಹರು
ನಿನ್ನಯಾ ಪಿತನನ್ನು ರಕ್ಕಸನು ಕೊಂದಿಹನು ॥೧೦೨೫॥

ತಾತಯ್ಯ ಎನ್ನುತಲಿ ಇವರನ್ನು ಕರೆಯುವುದು
ಪಿತನೆಂದು ಕರೆಯುತಿರೆ ದುಃಖವದು ಉಕ್ಕುತಿದೆ
ಆ ತಾಯಿ ಅದೃಶ್ಯಂತಿ ನುಡಿಯುತಿರೆ
ಪರಾಶರನು ಕೋಪದಲಿ ಅರ್ಭಟಿಸಿ ಗರ್ಜಿಸುತ ॥೧೦೨೬॥

ಎನ್ನಯಾ ತಂದೆಯನು ತಿಂದಿರುವ ರಕ್ಕಸನ
ಕುಲವನ್ನು ಮೂಲೋಕ ಸಹಿತದಲಿ ದಹಿಸುವೆನು
ಎನ್ನುತಲಿ ಏಳುತಿರೆ ಮೊಮ್ಮಗನ ಕೋಪವನು
ನೋಡುತಲಿ ವಸಿಷ್ಠರು ಸಂತೈಸಿ ನುಡಿದಿಹರು ॥೧೦೨೭॥

ಪರಾಶರ ಆಲಿಪುದು ಪೂರ್ವದಲಿ ಭೃಗುಋಷಿಯು
ಶಿಷ್ಯನಾ ಕೃತವೀರ್ಯನೆಂಬುವಾ ಖ್ಯಾತನೃಪ
ಯಜ್ಞಗಳ ಮಾಡುತಲಿ ತನ್ನಯಾ ಐಶ್ವರ್ಯ
ಎಲ್ಲವನು ವಿಪ್ರರಿಗೆ ದಾನವನು ಮಾಡಿದನು ॥೧೦೨೮॥

ನಂತರದಿ ಆತನಾ ವಂಶಜರು ನೃಪವರುಗಳು
ಐಶ್ವರ್ಯವಿಲ್ಲದೆಯೆ ಕಷ್ಟದಲಿ ತೊಳಲುತಿರೆ
ತಮ್ಮಯಾ ಐಶ್ವರ್ಯ ದಾನದಲಿ ಕೊಂಡಿರುವ
ವಿಪ್ರರನು ಹಿಂಸೆಯನು ಗೈಯ್ಯುತಲಿ ಕೊಂದಿಹರು ॥೧೦೨೯॥

ಭೃಗುವಂಶವೆಲ್ಲವನು ನಾಶವನು ಮಾಡುವುದು
ಎನ್ನುತಲಿ ಬ್ರಾಹ್ಮಣರ ಸ್ತ್ರೀಯರನು ಮಕ್ಕಳನು
ಸರ್ವರನು ಕತ್ತರಿಸಿ ಸಂಹರಿಸಿ ಕೆಡಹುತಿರೆ
ಓರ್ವಳಾ ಗರ್ಭಿಣಿಯು ಬ್ರಾಹ್ಮಣಿಯು ಗುಪಿತದಲಿ ॥೧೦೩೦॥

ಗರ್ಭದೊಳಿಹ ಶಿಶುವನ್ನು ಯೋಗದಾ ಬಲದಿಂದ
ತನ್ನಯಾ ತೊಡೆಯೊಳಗೆ ಇರಿಸುತಲಿ ರಕ್ಷಿಸಲು
ಕ್ಷತ್ರಿಯರು ಅರಿಯುತಲಿ ಸಾಧ್ವಿಯನು ಕೊಲ್ಲಲಿಕೆ
ಖಡ್ಗವನು ಧರಿಸುತಲಿ ಕೋಪದಲಿ ಬರುತಲಿರೆ ॥೧೦೩೦॥

ಬ್ರಾಹ್ಮಣಿಯ ಕಾಲುಗಳು ಭಯದಿಂದ ಥರಥರನೆ
ನಡುಗುತಿರೆ ತೊಡೆಯೊಡೆದು ಶಿಶುವೊಂದು ಹೊರಬರಲು
ಕೋಟಿರವಿ ತೇಜದಾ ಶಿಶುವನ್ನು ನೋಡುತಲಿ
ಕ್ಷತ್ರಿಯರ ಕಣ್ಣುಗಳು ಕುರುಡಾದವಾಕ್ಷಣದಿ ॥೧೦೩೨॥

ಕ್ಷತ್ರಿಯರು ದೈನ್ಯದಲಿ ಬ್ರಾಹ್ಮಣಿಯ ಪ್ರಾರ್ಥಿಸಲು
ಭೃಗುಕುಲವ ನಾಶವನು ಮಾಡಲಿಕೆ ಯತ್ನಿಸುವ
ನಿಮ್ಮಯಾ ಮೇಲಣದ ಕೋಪದಲಿ ಈ ಶಿಶುವು
ನಿಮ್ಮಯಾ ಕಣ್ಣುಗಳ ಕಳೆದಿಹುದು ಅರಿಯುವುದು ॥೧೦೩೩॥

ನೀವೀಗ ಶಿಶುವಿಂಗೆ ಮೊರೆಹೋಗಿ ಪ್ರಾರ್ಥಿಪುದು
ಎನ್ನುತಿರೆ ಕ್ಷತ್ರಿಯರು ಈ ತೆರದ ಕೃತ್ಯವನು
ನಾವೆಂದು ಗೈಯ್ಯೆವೆಂದೆನ್ನುತಲಿ ಪ್ರಾರ್ಥಿಸಲು
ಆ ಶಿಶುವು ಕಂಗಳನು ಇತ್ತಿಹುದು ಕರುಣೆಯಲಿ ॥೧೦೩೪॥

ತಾಯಿಯಾ ಊರುವಿನ ಎಡೆಯಿಂದ ಜನಿಸಿರುವ
ಶಿಶುವಿಂಗೆ ಔರ್ವನೆಂದೆನ್ನುತಲಿ ನಾಮವನು
ಇರಿಸುತಿರೆ ದಿನದಿನದಿ ಬೆಳೆಯುತಲಿ ಜಗದೊಳಗೆ
ವಿಪ್ರರ್ಷಿ ಎನ್ನುತಲಿ ಖ್ಯಾತಿಯಲಿ ಬೆಳಗಿದನು ।೧೦೩೫।

ತನ್ನಯಾ ತಂದೆಯನು ಭೃಗುಋಷಿಯ ವಂಶಜರ
ವಿಪ್ರರನು ಸ್ತ್ರೀಯರನು ಮಕ್ಕಳನು ಕೊಂದಿರುವ
ಕ್ಷತ್ರಿಯರ ನೃಪಸುತರ ಮೂಲೋಕ ಪ್ರಾಣಿಗಳ
ಸಕಲವನು ನಾಶವನು ಮಾಡುತಲಿ ಎನ್ನಯಾ ।೧೦೩೬॥

ಪಿತೃಗಳನು ಸಂತೋಷಗೊಳಿಸುವೆನು ಎನ್ನುತಲಿ
ಉಗ್ರತಪಗೈಯ್ಯುತಿರೆ ಭೂಲೋಕ ಪ್ರಾಣಿಗಳು
ಸ್ವರ್ಗದಾ ಸುರರೆಲ್ಲ ಪ್ರಳಯವದು ಆಗುವುದು
ಎನ್ನುತಲಿ ಭೀತಿಯಲಿ ಕಳವಳವಗೊಂಡಿಹರು ॥೧೦೩೭॥

ಪಿತೃದೇವತಾದಿಗಳು ಔರ್ವನಾ ಬಳಿಬಂದು
ನಿನ್ನಯಾ ಉಗ್ರತಪ ಶಕ್ತಿಯಲಿ ತಾಪದಲಿ
ಈರೇಳು ಲೋಕಗಳು ಭೀತಿಯಲಿ ನಡುಗುತಿವೆ
ನಿನ್ನಯಾ ಕೋಪಾಗ್ನಿ ಶಮನವನು ಗೊಳಿಸುವುದು ॥೧೦೩೮॥

ಕ್ಷತ್ರಿಯರು ಎಮ್ಮನ್ನು ಸಂಹಾರ ಮಾಡಿಲ್ಲ
ಇಂದ್ರಿಯಗಳೆಲ್ಲವನು ನಿಗ್ರಹವ ಮಾಡಿರುವ
ಸಾವಿರದ ವರುಷಗಳ ಆಯುಷ್ಯವಿರುತಿರುವ
ನಾವೆಲ್ಲ ಬೇಸತ್ತು ಕ್ಷತ್ರಿಯನ ಜೊತೆಯಲ್ಲಿ ॥೧೦೩೯॥

ಕಲಹವನು ನೆಪಮಾಡಿ ನಾವಾಗಿ ಸತ್ತಿಹೆವು
ಈ ಏಳು ಲೋಕಗಳ ನಾಶವನು ಮಾಡದಿರು
ಇದು ನಮಗೆ ಸಮ್ಮತವು ಎನಿತಿಲ್ಲ ಮೊದಲಿಂಗೆ
ಕೋಪವನು ಶಮನವನುಗೊಳಿಪುದು ಎನ್ನುತಲಿ ॥೧೦೪೦॥

ಸಕಲಪಿತೃ ನುಡಿಯುತಿರೆ ಔರ್ವನೃಪ ನುಡಿದಿಹನು
ಎನ್ನಯಾ ತಾಯಿಯಾ ಬಂಧುಗಳ ಬಾಂಧವರ
ಗರ್ಭಿಣೀ ಸ್ತ್ರೀಯರನು ಮಕ್ಕಳನು ನಿರ್ದಯದಿ
ಕ್ಷತ್ರಿಯರು ಗರ್ಜಿಸುತ ಸಂಹಾರ ಮಾಡಿದುದ ॥೧೦೪೧॥

ಎನ್ನಯಾ ತಾಯಿಯಾ ತೊಡೆಯೊಳಗೆ ಶಿಶುವಾಗಿ
ಇರುತಿರುವ ಸಮಯದಲಿ ಕೇಳಿದಾಕ್ಷಣದಲ್ಲಿ
ಕ್ಷತ್ರಿಯರ ಕುಲವನ್ನು ನಾಶವನು ಮಾಡುವೆನು
ಎನ್ನುತಲಿ ಕೋಪವದು ಎನ್ನಲ್ಲಿ ಮೂಡಿಹುದು ॥೧೦೪೨॥

ಪಾಪವನು ಗೈದಿರುವ ದುಷ್ಟರಿಗೆ ಶಿಕ್ಷೆಯನು
ವಿಧಿಸುವುದು ಧರ್ಮವದು ಇಲ್ಲದಿರೆ ಅಧರ್ಮವು
ದುಷ್ಟರನು ಸಂಹರಿಸಿ ಶಿಷ್ಟರನು ಸಲಹುವುದು
ಧರ್ಮದಲಿ ಶಾಸ್ತ್ರದಲಿ ಯೋಗ್ಯವದು ಎನಿಸುವುದು ॥೧೦೪೩॥

ಪಾಪಿಗಳು ಗೈದಿರುವ ದುಷ್ಕೃತ್ಯ ನೋಡುತಲಿ
ದುಷ್ಟರನು ಶಿಕ್ಷಿಸದೆ ಸುಮ್ಮನೆ ಇರುತಿರುವ
ನೃಪರುಗಳು ಪಾಪದಲಿ ಭಾಗಿಗಳಾಗುತಲಿ
ಪಾಪವನು ಸೋಂಕುತಲಿ ದುರ್ಗತಿಯ ಪಡೆಯುವರು ॥೧೦೪೪॥

ಕ್ಷತ್ರಿಯರು ಮಾಡಿರುವ ದುಷ್ಕೃತ್ಯ ನೆನೆಯುತಲಿ
ಎನ್ನಲ್ಲಿ ಕೋಪಾಗ್ನಿ ಧಗಧಗನೆ ಉರಿಯುತಿದೆ
ಕ್ಷತ್ರಿಯರ ಸಹಿತದಲಿ ಲೋಕಗಳ ಎಲ್ಲವನು
ದಹಿಸದೆಯೆ ಕೋಪಾಗ್ನಿ ಶಾಂತವದು ಆಗದಿದೆ ॥೧೦೪೫॥

ಇಲ್ಲದಿರೆ ಕೋಪಾಗ್ನಿ ಎನ್ನನ್ನು ದಹಿಸುವದು
ಎನ್ನುತಲಿ ಆ ಔರ್ವ ನುಡಿಯುತಿರೆ ಪಿತೃಗಳು
ಲೋಕಗಳು ಎಲ್ಲವೂ ನೀರಿನಲಿ ನಿಂತಿಹವು
ನಿನ್ನಯಾ ಕೋಪಾಗ್ನಿ ಸಾಗರದ ಮಧ್ಯದಲಿ ॥೧೦೪೬॥

ವಿಸರ್ಜನೆಯ ಮಾಡಿದರೆ ಲೋಕಗಳ ಸಲುಹುತಿಹ
ಜಲವನ್ನು ವಡವಾಗ್ನಿ ರೂಪದಲಿ ದಹಿಸುವುದು
ಈ ಪರಿಯೆ ಸರ್ವಪಿತೃ ನುಡಿಯುತಿರೆ ಔರ್ವನು
ತನ್ನಯಾ ಕೋಪದಲಿ ಜನಿಸಿರುವ ಅಗ್ನಿಯನು ॥೧೦೪೭॥

ಜಲಧಿಯಲಿ ವಿಸರ್ಜಿಸಲು ಕೋಪಾಗ್ನಿ ಉರಿಯುತಲಿ
ಜ್ವಾಲೆಗಳ ಚಾಚುತಲಿ ವಡವಾಗ್ನಿ ರೂಪದಲಿ
ಸಾಗರದ ಜಲವನ್ನು ಸತತವೂ ಹೀರುತಿದೆ
ಜ್ಞಾನಿಗಳು ಈ ಗೂಢ ವಿಷಯವನು ಅರಿತಿಹರು ॥೧೦೪೮॥

ವೇದದಲಿ ಶಾಸ್ತ್ರದಲಿ ಪರಿಣತನು ನೀನಿರುವೆ
ಕೆಲದುಷ್ಟ ಪಾಪಿಗಳು ಗೈದಿರುವ ಕೃತ್ಯಕ್ಕೆ
ಲೋಕಗಳ ಸರ್ವವನು ನಾಶವನು ಮಾಡುವುದು
ಸಲ್ಲದಿದು ಎನ್ನುತಲಿ ವಸಿಷ್ಠ ನುಡಿದಿಹನು ॥೧೦೪೯॥

ವಸಿಷ್ಠರಾ ನುಡಿಗಳನು ಕೇಳುತಲಿ ಔರ್ವನು
ಲೋಕಗಳ ದಹಿಸುವಾ ಇಚ್ಛೆಯನು ತೊರೆಯುತಲಿ
ತಂದೆಯನು ಕೊಂದಿರುವ ರಾಕ್ಷಸನ ಕುಲವನ್ನು
ಜಗದೊಳಿಹ ರಾಕ್ಷಸರನೆಲ್ಲರನು ಕೊಲ್ಲುವುದು ॥೧೦೫೦॥

ಎನ್ನುತಲಿ ಮಾರಣದ ಯಜ್ಞವನು ಗೈಯ್ಯುತಲಿ
ಮಂತ್ರಗಳನುಚ್ಚರಿಸೆ ಅಗಣಿತದ ರಾಕ್ಷಸರು
ದೀಪದಾ ಹುಳದಂತೆ ಹೋಮದಾ ಕುಂಡದಲಿ
ಅಗ್ನಿಯಲಿ ಬೀಳುತಲಿ ಭಸ್ಮವದು ಆಗಿಹರು ॥೧೦೫೧॥

ಈ ತೆರದ ಭೀಕರದ ಮಾರಣದ ಯಜ್ಞದಲಿ
ರಾಕ್ಷಸರು ಬೀಳುತಲಿ ನಾಶವದು ಆಗುತಿರೆ
ಅತ್ರಿಋಷಿ ನೋಯುತಲಿ ಯಜ್ಞವನು ನಿಲ್ಲಿಸಲು
ಪುಲಸ್ತ್ಯಾದಿ ಮುನಿವರರ ಸಹಿತದಲಿ ಬಂದಿಹನು ॥೧೦೫೨॥

ಅಗಣಿತದ ರಾಕ್ಷಸರು ಅಗ್ನಿಯಲಿ ಬೀಳುತಲಿ
ಭಸ್ಮವದು ಆಗುತಿಹ ದೃಶ್ಯವನು ಕಾಣುತಲಿ
ಪುಲಸ್ತ್ಯಋಷಿ ತನ್ನಯಾ ವಂಶಜರ ಮರಣವನು
ನೋಡುತಲಿ ಮನನೊಂದು ನುಡಿದಿಹ ಪರಾಶರಗೆ ॥೧೦೫೩॥

ಹೇ ಕಂದ ನಿನ್ನಯಾ ಪಿತೃವಿನಾ ಮರಣಕ್ಕೆ
ನಿಜವಾದ ಕಾರಣವನರಿಯದಲೆ ಸುಮ್ಮನೇ
ಸಾವಿರದ ನಿರ್ದೋಷ ದಾನವರ ಪ್ರಾಣಗಳ
ನಾಶವನು ಮಾಡುವುದು ನಿನಗಿದುವೆ ಯೋಗ್ಯವೆ ॥೧೦೫೪॥

ಎನ್ನಯಾ ವಂಶಜರು ಆಗಿರುವ ರಾಕ್ಷಸರ
ಈ ಪರಿಯೆ ಕೊಲ್ಲುವುದು ಯೋಗ್ಯವವುದು ನಿನಗಲ್ಲ
ಸತತವೂ ತಪಸಿನಲಿ ಸ್ವಾಧ್ಯಾಯ ಪರನಾಗಿ
ಶಾಂತದಲಿ ಇರುವುದೇ ವಿಪ್ರರಿಗೆ ಭೂಷಣವು ॥೧೦೫೫॥

ನಿನ್ನಯಾ ಪಿತ ತಾನೆ ಕಲ್ಮಾಷ ಪಾದನಿಗೆ
ನರಮಾಂಸ ತಿನ್ನುವಾ ರಾಕ್ಷಸನು ಆಗೆಂದು
ಶಾಪವದು ಈಯುತಲಿ ತಾನದೇ ರಾಕ್ಷಸಗೆ
ಬಲಿಯಾಗಿ ತನ್ನಯಾ ಪ್ರಾಣವನು ತೆತ್ತಿಹನು ॥೧೦೫೬॥

ಇದಕೆಲ್ಲ ಕೌಶಿಕನು ನೆಪಗಾಗಿ ಕಾರಣನು
ಆಗುತಲಿ ನಿನ್ನಯಾ ತಂದೆಯನು ಕೊಲಿಸಿಹನು
ನಿನ್ನಯಾ ಪಿತ ಶಕ್ತಿ ಕಲ್ಮಾಷ ಪಾದನೃಪ
ಸ್ವರ್ಗದಲಿ ಸುಖವಾಗಿ ಇರುತಿಹರು ಎಂದಿಹನು ॥೧೦೫೭॥

ಘನಮಹಿಮ ಶ್ರೇಷ್ಠಋಷಿ ವಸಿಷ್ಠರಾ ವಂಶದಲಿ
ಜನಿಸುತಲಿ ವೇದಗಳ ಶಾಸ್ತ್ರಗಳನರಿತಿರುವ
ನೀನಿಂತು ಪಾಪದಾ ಕೃತ್ಯವನು ಗೈಯ್ಯುವುದು
ನಿನಗಿದುವೆ ಸಲ್ಲದಿದು ಅಧರ್ಮವದು ಎನಿಸುವುದು ॥೧೦೫೮॥

ನೀಗೈವ ಪಾಪವಿದು ನಿನ್ನಯಾ ಪಿತೃಗಳಿಗೆ
ಸೋಂಕುತಲಿ ಪರದಲ್ಲಿ ದುರ್ಗತಿಯ ಪಡೆಯುವರು
ಈ ವಿಷಯವೆಲ್ಲವನು ವಸಿಷ್ಠರು ಅರಿತಿಹರು
ವಿಧಿನಿಯಮಕನುಗುಣದಿ ಸರ್ವವೂ ನಡೆದಿಹುದು ॥೧೦೫೯॥

ಎನ್ನಯಾ ವಂಶಜರು ಅಗಣಿತದ ದಾನವರು
ಪ್ರಾಣಗಳ ತೆತ್ತಿಹರು ನೀನೀಗ ಯಜ್ಞವನು
ಈ ಕ್ಷಣದಿ ನಿಲ್ಲಿಪುದು ಎನ್ನುತ ಪುಲಸ್ತ್ಯನು
ನುಡಿಯುತಿರೆ ಶಕ್ತಿಸುತ ಆ ಪೌರ್ವ ಕೇಳುತಲಿ ॥೧೦೬೦॥

ವಸಿಷ್ಠರಾ ಆಜ್ಞೆಯಲಿ ಮಾರಣದ ಯಜ್ಞವನು
ಸಮಾಪನವ ಮಾಡುತಲಿ ಯಜ್ಞದಾ ಕುಂಡದಲಿ
ಸ್ಥಾಪಿಸಿದ ಅಗ್ನಿಯನು ಹಿಮಗಿರಿಯ ಕಾನನದಿ
ವಿಸರ್ಜಿಸಲು ವನವೆಲ್ಲ ಭಸ್ಮವದು ಆಗಿಹುದು ॥೧೦೬೧॥

ಈ ತೆರದಿ ಕೌಶಿಕನು ದ್ವೇಷದಲಿ ಇತ್ತಿರುವ
ಕಷ್ಟಗಳನೆಲ್ಲವನು ಬ್ರಹ್ಮಬಲ ತೇಜದಲಿ
ಜಯಿಸಿರುವ ವಸಿಷ್ಠರಾ ಮಹಿಮೆಯನು ಬಣ್ಣಿಸಲು
ಅಸದಳವು ಎನ್ನುತಲಿ ಗಂಧರ್ವ ನುಡಿದಿಹನು ॥೧೦೬೨॥

ಸುರಪತಿಯು ದೇವೇಂದ್ರ ಬೃಹಸ್ಪತಿಯ ಗುರುವೆಂದು
ಸ್ವೀಕರಿಸಿ ಶೌರ್ಯವನು ಕೀರ್ತಿಯನು ಪಡೆದಂತೆ
ಇಕ್ಷ್ವಾಕು ವಂಶದಾ ನೃಪರುಗಳು ಎಲ್ಲರೂ
ವಸಿಷ್ಠರಾ ಗುರುತನದಿ ಕೀರ್ತಿಯನು ಪಡೆದಿಹರು ॥೧೦೬೩॥

ಚಂದ್ರಕುಲ ಕಿರಣಗಳೆ ಪಾಂಡವರೆ ನೀವೆಲ್ಲ
ಶ್ರೇಷ್ಠನಿಹ ಋಷಿವರನ ಕುಲಗುರು ಪುರೋಹಿತನು
ಎನ್ನುತಲಿ ಸ್ವೀಕರಿಸಿ ಆತನ ಅನುಗ್ರಹದಿ
ಚಂದ್ರಾರ್ಕ ಪರ್ಯಂತ ಕೀರ್ತಿಯನು ಪಡೆಯುವುದು ॥೧೦೬೪॥

ಕೇಳುತಲಿ ಫಲುಗುಣನು ಹರುಷದಲಿ ನಮಿಸುತಲಿ
ನಿಮ್ಮಯಾ ನುಡಿಗಳಿಗೆ ನಾವೆಲ್ಲ ಉಪಕೃತರು
ವೇದದಲಿ ಶಾಸ್ತ್ರದಲಿ ಪರಿಣತರು ಎನಿಸಿರುವ
ಪುರೋಹಿತ ಎಮಗಾರು ಇಹರೆಂದು ಕೇಳಿದನು ॥೧೦೬೫॥

ಗಂಧರ್ವ ಹರುಷದಲಿ ಉತ್ಕೋಟ ತೀರ್ಥದಲಿ
ಘನಮಹಿಮ ಧೌಮ್ಯಋಷಿ ಆಶ್ರಮದಿ ವಾಸಿಪರು
ಅವರನ್ನು ನಿಮ್ಮಯಾ ಪುರೋಹಿತರು ಎನ್ನುತಲಿ
ಸ್ವೀಕರಿಸಿ ಕೀರ್ತಿಯನು ಪಡೆಯುವುದು ಎಂದಿಹನು ॥೧೦೬೬॥

ಅರ್ಜುನನು ಸುಪ್ರೀತನಾಗುತಲಿ ಘೋರಶರ
ಆಗ್ನೇಯ ಅಸ್ತ್ರವನು ಗಂಧರ್ವಗರುಹುತಲಿ
ಕೊಡಲು ನೀ ಇಚ್ಛಿಸಿದ ಘನಶೌರ್ಯದಶ್ವಗಳು
ನಿನ್ನ ಬಳಿ ಉಳಿಗಿರಲಿ ಮುಂದಕ್ಕೆ ಬೇಕಾದ ॥೧೦೬೭॥

ಸಮಯದಲಿ ಕೊಳ್ಳುವೆವು ಮಂಗಳವು ನಿನಗೆಂದು
ನುಡಿಯುತಲಿ ಪರಸ್ಪರ ವಂದಿಸುತ ಬೀಳ್ಕೊಂಡು
ಸುಂದರದ ಜಾಹ್ನವಿಯ ತಟದಿಂದ ಪಾಂಡವರು
ಪಯಣವನು ಬೆಳೆಸಿದರು ಘನಘೋರ ಕಾನನದಿ ॥೧೦೬೮॥

ಗಂಧರ್ವ ನುಡಿದಿರುವ ತೆರದಲ್ಲಿ ಪಾಂಡವರು
ಉತ್ಕೋಚಕ ತೀರ್ಥದಾ ಸನಿಹದಲಿ ಆಶ್ರಮದಿ
ವಾಸಿಸುವ ಧೌಮ್ಯ ಋಷಿ ಬಳಿಯಲ್ಲಿ ಸಾಗುತಲಿ
ಸಾಷ್ಟಾಂಗವೆರಗುತಲಿ ವಿನಯದಲಿ ನುಡಿದಿಹರು ॥೧೦೬೯॥

ನೀವೆಮ್ಮ ಪುರೋಹಿತರಾಗುತಲಿ ರಕ್ಷಿಪುದು
ಎನ್ನುತಲಿ ಪ್ರಾರ್ಥಿಸಲು ಧೌಮ್ಯ ಋಷಿ ಹರುಷದಲಿ
ಒಪ್ಪುತಲಿ ಫಲಗಳನು ಕಂದಮೂಲಾದಿಗಳ
ಈಯುತಲಿ ಪಾಂಡವರ ಸತ್ಕಾರಗೈದಿಹನು ॥೧೦೭೦॥

ಜಗದೊಳಗೆ ನಿಮ್ಮನ್ನು ಜಯಿಸುವಾ ವೀರರನು
ಒಬ್ಬರನು ನಾ ಕಾಣೆ ನಿಮ್ಮಯಾ ಶೌರ್ಯದಲಿ
ರಾಜ್ಯವನು ಪಡೆಯುವಿರಿ ಸಂಶಯವು ಇದಕಿಲ್ಲ
ಎನ್ನುತಲಿ ಪಾಂಡವರ ಹರಸಿದನು ಕರುಣೆಯಲಿ ॥೧೦೭೧॥

ಪರಮಗುರು ಘನಮಹಿಮ ಧೌಮ್ಯರಾ ಸಹಿತದಲಿ
ಪಾಂಚಾಲ ನಗರಕ್ಕೆ ತೆರಳಿದರೆ ದ್ರೌಪದಿಯು
ನಮ್ಮನ್ನು ಖಚಿತದಲಿ ವರಿಸುವಳು ಎನ್ನುತಲಿ
ಪಾಂಡವರು ಮನದೊಳಗೆ ಹರುಷದಲಿ ಹಿಗ್ಗಿದರು ॥೧೦೭೨॥

ತಮ್ಮಯಾ ಮುಂದಣದ ಅಭ್ಯುದಯ ಬಯಸುತಿಹ
ಪುರೋಹಿತರು ದೊರೆತಿಹರು ಎನ್ನುತಲಿ ಪಾಂಡವರು
ಧೌಮ್ಯರಾ ಸಹಿತದಲಿ ಪಾಂಚಾಲ ನಗರಕ್ಕೆ
ತೆರಳುವುದು ಎನ್ನುತಲಿ ನಿಶ್ಚಯವ ಮಾಡಿದರು ॥೧೦೭೩॥

**ಪಾಂಚಾಲ ಪಟ್ಟಣಕೆ ಪಾಂಡವರು ಬಂದು ।**
**ಕುಂಬಾರನಾಲಯದಿ ಆಶ್ರಯವ ಪಡೆದಿಹರು ॥**

ಕೇಳುವುದು ಜನಮೇಜಯಕ್ಷಿತಿಪ ಬಳಿಕಿನಲಿ
ಪಾಂಡವರು ಧೌಮ್ಯರಾ ಪುರೋಹಿತರ ಸಹಿತದಲಿ
ಪಯಣವನು ಬೆಳೆಸುತಲಿ ಗಿರಿತೊರೆಯ ದಾಂಟುತಲಿ
ಪಾಂಚಾಲ ಪಟ್ಟಣದ ಹೊರವಲಯ ತಲುಪಿದರು ॥೧೦೭೪॥

ಬಳಿಕಲಾ ಪಾಂಡವರು ಧೌಮ್ಯರಿಗೆ ನಮಿಸುತಿರೆ
ನಿಮಗೆಲ್ಲ ಮಂಗಲವು ಕಲ್ಯಾಣವಾಗುವುದು
ಎನ್ನುತಲಿ ಹರಸುತಿರೆ ಸಕಲರೂ ಪಾಂಡವರು
ಸಂತಸದಿ ಧೌಮ್ಯರನು ನಮಿಸುತಲಿ ಬೀಳ್ಕೊಂಡು ॥೧೦೭೫॥

ಸಾಗರದ ಪರಿಯಲ್ಲಿ ನೆರೆದಿರುವ ಜನಸ್ತೋಮ
ಅಗಣಿತದ ಪುರಜನರ ಪ್ರಜೆಗಳನು ನೋಡುತಲಿ
ನಾವುಗಳು ಭಿಕ್ಷುಕರು ನಮಗಿಲ್ಲಿ ತಂಗಲಿಕೆ
ನಿಲಯವದು ದೊರೆಯದದು ಎನ್ನುತಲಿ ಪಾಂಡವರು ॥೧೦೭೬॥

ಸನಿಹದಲಿ ಇರುತಿರುವ ಕುಂಬಾರನಾಲಯದಿ
ವಾಸ್ತವ್ಯ ಮಾಡುತಲಿ ಪಾತ್ರೆಯನು ಕೊಳ್ಳುತಲಿ
ಭಿಕ್ಷೆಯನು ಬೇಡುತಲಿ ವಿಪ್ರರಾ ವೇಷದಲಿ
ವೀರರಾ ಪಾಂಡವರು ಚರಿಸಿದರು ಗುಪಿತದಲಿ ॥೧೦೭೭॥

**ದ್ರೌಪದಿ ಸ್ವಯಂವರದ ಸಿದ್ಧತೆಯನೆಲ್ಲವನು ।**
**ದ್ರುಪದನೃಪ ಮಾಡಿಹನು ಸಂಭ್ರಮದಿ ವೈಭವದಿ ॥**

ಇತ್ತಲಾ ದ್ರುಪದನೃಪ ತನ್ನಯ ಅಮಾತ್ಯರನು
ಕರೆಸುತಲಿ ಸ್ವಯಂವರ ವಿಷಯವನು ಚರ್ಚಿಸುತ
ವಿಧವಿಧದ ಸಿದ್ಧತೆಯ ಕಾರ್ಯಗಳ ಗೈಯ್ಯಲಿಕೆ
ಸಚಿವರನು ಅಧಿಕಾರಿ ವರ್ಗಗಳ ನಿಯಮಿಸಿದ ॥೧೦೭೮॥

ಹಸ್ತಿನೆಯ ಅರಸರಿಗೆ ಕಾಂಭೋಜ ಭೂಪನಿಗೆ
ಗಾಂಧಾರ ಕೋಸಲದ ಮಾಗಧದ ಮಾದ್ರದಾ
ತೆಂಕಣದ ಕೇರಳದ ಕುಂತಳದ ಚೋಳದ
ಐವತ್ತು ಮೇಲಾರು ದೇಶಗಳ ನೃಪರಿಂಗೆ ॥೧೦೭೯॥

ಮಾಂಡಲಿಕ ಅರಸರಿಗೆ ಸಾಮಂತ ಸಚಿವರಿಗೆ
ಸೇನಾಧಿಪತಿಗಳಿಗೆ ನಾಯಕರು ಗಣ್ಯರಿಗೆ
ಬಂಧುಗಳು ಬಾಂಧವರ್ಗ ಮಿತ್ರರಿಗೆ ಎಲ್ಲರಿಗೆ
ಆಮಂತ್ರೋಣೆಲೆಗಳ ಬರೆಸುತಲಿ ಕಳುಹಿದನು ॥೧೦೮೦॥

ಅತ್ರಿಗಳು ಅಂಗಿರಸ ಜಾಬಾಲಿ ಜಮದಗ್ನಿ
ಕೌಶಿಕಗೆ ಮುದ್ಗಲಗೆ ಯಾಜ್ಞವಲ್ಕ್ಯಾದಿಗಳ
ಮುನಿಗಳಿಗೆ ವಿಪ್ರರಿಗೆ ವೇದಗಳ ವಿದುಷರಿಗೆ
ವೈವಾಹದಾಮಂತ್ರಣೋಲೆಗಳ ಕಳುಹಿದನು ॥೧೦೮೧॥

ಕೇರಿಯಲಿ ಬೀದಿಯಲಿ ಗ್ರಾಮದಲಿ ನಗರದಲಿ
ಎಲ್ಲೆಡೆಗೆ ದೂತರನು ಅಟ್ಟುತಲಿ ದೆಸೆದೆಸೆಗೆ
ದ್ರೌಪದಿ ಸ್ವಯಂವರದ ವಾರ್ತೆಯನು ಭರದಲ್ಲಿ
ಡಂಗುರವ ಹೊಯ್ಸಿದನು ಸಕಲಜನ ನಲಿದಿಹುದು ॥೧೦೮೨॥

ಕೆಳಗಡೆಗೆ ನೀರಿನಲಿ ಬಿಂಬವನು ನೋಡುತಲಿ
ಮೇಲ್ಗಡೆಗೆ ತಿರುಗುತಿಹ ಮತ್ಸ್ಯದಾ ಯಂತ್ರದಲಿ
ತಿರುಗುತಿಹ ಮತ್ಸ್ಯವನು ಕಣ್ಣಿನಲಿ ಭೇದಿಸುತ
ನೆಲದಲ್ಲಿ ಕೆಡುತಲಿಹ ಅಪ್ರತಿಮ ವೀರನಿಗೆ ॥೧೧೮೩॥

ಅಪ್ರತಿಮ ಸೌಂದರ್ಯ ತೇಜದಲಿ ತೊಳಗುತಿಹ
ತ್ರೈಲೋಕ್ಯ ಸುಂದರಿಯ ಮಹಿಳಾ ಶಿರೋಮಣಿಯ
ತನ್ನಯಾ ಮಗಳನ್ನು ದ್ರೌಪದಿಯ ನೀಯುವೆನು
ಎನ್ನುತಲಿ ಡಂಗುರವ ಹೊಯಿಸಿದನು ಎಲ್ಲೆಡೆಗೆ ॥೧೧೮೪॥

ತಳಿರಿನಲಿ ತೋರಣದಿ ಫಡಫಡಿಪ ಧ್ವಜಗಳಲಿ
ರತ್ನಗಳ ಸ್ತಂಭಗಳ ಸ್ವಾಗತ ಕಮಾನಿನಲಿ
ಸಾರಣೆಯ ಕಾರಣೆಯ ರಂಗೋಲಿ ಚಿತ್ರಗಳ
ಇಕ್ಕುತಲಿ ನಗರವನು ಸಿಂಗಾರ ಗೈದಿಹರು ॥೧೧೮೫॥

ಪುರದ ಹೊರವಳಯದಲಿ ಯೋಜನಗಳೆರಡರಲಿ
ವಿಸ್ತಾರ ಬಯಲಿನಲಿ ಹೊಳೆಹೊಳೆವ ರೇಶ್ಮೆಯಾ
ವಸ್ತ್ರದಲಿ ಮುತ್ತುಗಳ ರತ್ನಗಳ ಸ್ತಂಭಗಳ
ಕಣ್ಮನವ ಕಂಗೊಳಿಪ ಛತ್ರನ್ನು ಹೊಡೆದಿಹರು ॥೧೧೮೬॥

ವಿಧವಿಧದ ಪೌರಾಣ ಕಥೆಗಳನು ಚಿತ್ರಿಸುವ
ವಿಧವಿಧದ ಭಂಗಿಯಲಿ ಕುಣಿಯುತಿಹ ನರ್ತಕರ
ನರ್ತಕಿಯರಗಣಿತದ ಚಿತ್ರಗಳು ಶೋಭಿಸುವ
ವರಸಾಲ ಭಂಜಿಕೆಯ ಭಿತ್ತಿಗಳ ರಚಿಸಿಹರು ॥೧೧೮೭॥

ಸುತ್ತಲೂ ಝಗಝಗಿಪ ರೇಶ್ಮೆಯಾ ವಸ್ತ್ರದಲಿ
ಮಧ್ಯದಲಿ ರತ್ನಗಳ ವಜ್ರಗಳ ತೋರಣದ
ಕಳಶದಲಿ ಕನ್ನಡಿಯ ಸೊಬಗಿನಲಿ ಎಸೆಯುತಿಹ
ಸುಂದರದ ವೈವಾಹ ಮಂಟಪವ ರಚಿಸಿಹರು ॥೧೧೮೮॥

ದ್ರುಪದನೃಪ ಕೂಡ್ರಲಿಕೆ ಮಣಿರತ್ನ ಶೋಭಿತದ
ಹೊಳೆಯುತಿಹ ಸ್ವರ್ಣದಾ ಸಿಂಹಾಸನಿರಿಸುತಲಿ
ದೇಶಗಳ ನೃಪರಿಂಗೆ ಅಧಿಕಾರಿ ವರ್ಗಕ್ಕೆ
ಅಗಣಿತದ ಸೊಗಯಿಸುವ ಆಸನಗಳಿರಿಸಿದರು ॥೧೧೮೯॥

ರತ್ನದಾ ಕಂಬಳಿಯ ಎಲ್ಲೆಡೆಗು ಹಾಸಿರುವ
ಕಸ್ತೂರಿ ಜವಾಜಿಗಳ ಗಂಧಗಳ ಸೌರಭವು
ಕುಸುಮಗಳ ಪರಿಮಳವು ಎಲ್ಲೆಡೆಗೆ ಹರಡಿರುವ
ಬೇಗೆಯನು ಪರಿಹರಿಪ ತಂಬೆಲರು ಸೂಸುತಿಹ ॥೧೧೯೦॥

ಘಮಘಮಿಪ ಮಲ್ಲಿಗೆಯ ಸಂಪಗೆಯ ಕೇದಗೆಯ
ವರಪಾರಿಜಾತಗಳ ಪುಷ್ಪಗಳ ಮಾಲೆಗಳ
ವಿಲಸಿತದ ಮಾಮರದ ಪಲ್ಲವದ ತೋರಣದ
ವಿಸ್ತಾರ ಮಂಟಪವು ಸೊಗಯಿಸುತ ಮೆರೆದಿಹುದು ॥೧೧೯೧॥

ಇದು ಮಾಯಮೋಧ್ಯೆಯೊ ಕಾಂಚಿಯಾ ಪಟ್ಟಣವೊ
ವರಮಥುರೆ ಅವಂತಿಯೋ ಇಂದ್ರನಮರಾವತಿಯೊ
ಧರೆಗಿಳಿದು ಬಂದಿಹುದೊ ಎಂಬಂತೆ ಅದ್ಭುತದ
ಸೌಂದರ್ಯ ಸೊಬಗಿನಲಿ ಮಂಟಪವು ಶೋಭಿಸಿತು ॥೧೧೯೨॥

ಅಗಣಿತದ ನೃಪರಿಂಗೆ ಸಾಮಂತ ಸಚಿವರಿಗೆ
ವಾಸಿಸಲು ಸುಂದರದ ಸೌಧಗಳ ರಚಿಸಿಹರು
ಗಜಶಾಲೆ ಹಯಶಾಲೆ ರಥಶಾಲೆ ಗೋಶಾಲೆ
ಮೊದಲಾದ ಪ್ರಾಣಿಗಳ ಶಾಲೆಗಳ ಕಟ್ಟಿಹರು ॥೧೧೯೩॥

ವೇದಾಂತ ವಿದುಷರಿಗೆ ಕವಿಗಮಕಿ ವಿಬುಧರಿಗೆ
ಗಾಯಕರು ನರ್ತಕರು ನಾಟಕ ಕಲಾವಿದರು
ಹರಿಕಥೆಯ ಪರಿಣತರು ಸಣ್ಣಾಟ ಬಯಲಾಟ
ನಿಪುಣರಿಗೆ ಎಲ್ಲರಿಗೆ ನಿಲಯಗಳ ರಚಿಸಿದರು ॥೧೧೯೪॥

ಗಾಂಧಾರ ಕೋಸಲದ ಕಾಂಭೋಜ ಕಾಶ್ಮೀರ
ನಾಗಪುರ ನೇಪಾಳ ಸೌರಾಷ್ಟ್ರ ಮಾಳವದ
ಆ ಚೈತ್ಯ ಮಾಗಧನು ವೈದರ್ಭ ವಿಂಧ್ಯದಾ
ನೃಪರುಗಳು ಪರಿವಾರ ಸಹಿತದಲಿ ಬಂದಿಹರು ॥೧೧೯೫॥

ಅಂಗವಂಗಾದಿಗಳ ಆ ಕಾನ್ಯಕುಬ್ಜದಾ
ಕೇರಳದ ಆ ಚೋಳ ಚೇರಳರು ಪಾಂಡ್ಯರು
ಆ ಆಂಧ್ರ ಕುಂತಲದ ವರಭರತ ವರ್ಷದ
ದೇಶಗಳ ನೃಪರುಗಳು ಸಕಲರೂ ಬಂದಿಹರು ॥೧೧೯೬॥

ವಿರಾಟನೃಪ ಸುತಶಂಖ ಉತ್ತರನ ಸಹಿತದಲಿ
ರುಕ್ಮರಥ ಪೌಂಡ್ರಕನು ಚೇಕಿತನು ಅಂಶುಮನು
ಬಾಹ್ಲಿಕನು ಭಗದತ್ತ ಮಾದ್ರೇಶ ಶಲ್ಯನೃಪ
ವೃಷಸೇನ ಸುಷೇಣಾದಿ ನೃಪರುಗಳು ಬಂದಿಹರು ॥೧೧೯೭॥

ದುರ್ಯೋಧನಾದಿಗಳು ಕೌರವರು ನೂರ್ವರು
ಶಕುನಿಕರ್ಣಾದಿಗಳು ಭಗದತ್ತ ಬೃಹದ್ರಥನು
ಆ ಭೂರಿ ಭೂರಿಶ್ರವನು ಬೃಹತ್‌ಕ್ಷತ್ರ ವೃದ್ಧಕ್ಷತ್ರ
ಗುರುಸುತನು ಅಶ್ವತ್ಥಾಮ ಸಕಲರೂ ಬಂದಿಹರು ॥೧೧೯೮॥

ವಸುದೇವ ಸಾತ್ಯಕಿಯು ಅನಿರುದ್ಧ ಪ್ರದ್ಯುಮ್ನ
ಅಕ್ರೂರ ಉದ್ಧವನು ಕೃತವರ್ಮ ಬಲರಾಮ
ಯಾದವ ಶಿರೋಮಣಿಯು ಆ ದೇವ ಶ್ರೀಕೃಷ್ಣ
ಸಕಲರೂ ಯಾದವರು ಬಂದಿಹರು ಸರಸದಲಿ ॥೧೦೯೯॥

ಜಾಬಾಲಿ ಜಮದಗ್ನಿ ಅತ್ರಿಋಷಿ ಆಂಗಿರಸ
ಆ ಜಹ್ನು ಕೌಶಿಕನು ಕಣ್ವಾದಿ ಋಷಿವರರು
ಆ ಗಾರ್ಗ್ಯ ಮುದ್ಗಲರು ಯಾಜ್ಞವಲ್ಕ್ಯಾದಿಗಳು
ಮುನಿವರರು ಜ್ಞಾನಿಗಳು ಅಗಣಿತದಿ ಬಂದಿಹರು ॥೧೧೦೦॥

ಕವಿಗಮಕಿ ವಾಗ್ಮಿಗಳು ಸಾಹಿತ್ಯವೆಗ್ಗಳರು
ಗಾಯಕರು ನರ್ತಕರು ನಾಟಕದ ನಟವರರು
ಹರಿಕಥೆಯ ಪರಿಣತರು ವಾದ್ಯಗಳ ಕುಶಲಿಗಳು
ಹಾಸ್ಯದ ವಿದೂಷಕರು ತಂಡದಲಿ ಬಂದಿಹರು ॥೧೧೦೧॥

ಸಣ್ಣಾಟ ದೊಡ್ಡಾಟ ಗೊಂಬೆಯಾ ಆಟಗಳ
ಡೊಂಬರಾ ಆಟಗಳ ಮಾಟಗಳ ತಂತ್ರಗಳ
ಆ ಐಂದ್ರ ಜಾಲದಾ ವಿದ್ಯೆಗಳ ಪರಿಣತರ
ನಿಕರಗಳು ಬಂದಿಹವು ತಂಡದಲಿ ಸಂಭ್ರಮದಿ ॥೧೧೦೨॥

ಇತ್ತಲಾ ದ್ರುಪದನೃಪ ಬಂದಿರುವ ನೃಪತಿಗಳ
ಋಷಿವರರ ಮುನಿವರರ ವಿಪ್ರರರನು ಆದರದಿ
ಸ್ವಾಗತಿಸಿ ವಿಧವಿಧದ ಸತ್ಕಾರಗೈಯ್ಯುತಲಿ
ಅವರವರಿಗುಚಿತದಲಿ ನಿಲಯದಲಿ ಇರಿಸಿಹನು ॥೧೧೦೩॥

ಮರುದಿವಸ ದ್ರೌಪದಿಯ ಸ್ವಯಂವರವು ಇರುತಿಹುದು
ಗರಗರನೆ ತಿರುಗುತಿಹ ಯಂತ್ರದೊಳು ಇರುತಿರುವ
ಮತ್ಸ್ಯದಾ ಕಣ್ಣನಲಿ ಭೇದಿಸುತ ಕೆಡಹುತಿಹ
ವೀರನಿಗೆ ತನ್ನಯಾ ಅಪ್ರತಿಮ ಸುಂದರಿಯ ॥೧೧೦೪॥

ಮಗಳನ್ನು ದ್ರೌಪದಿಯನೀಯುವೆನು ಮದುವೆಯಲಿ
ಎನ್ನುತಲಿ ಡಂಗುರವ ಹೊಯ್ಸಿದನು ಎಲ್ಲೆಡೆಗೆ
ಅಂದಿನಾ ರಾತ್ರಿಯಲಿ ನೃಪರುಗಳು ನಿದ್ರಿಸದೆ
ಏಳುತಲಿ ಶೃಂಗಾರಗೊಂಡಿಹರು ವೈಭವದಿ ॥೧೧೦೫॥

ಹೊಳೆಹೊಳೆವ ಮಿಂಚುತಿಹ ರೇಶ್ಮೆಯಾ ವಸ್ತ್ರಗಳ
ಥಳಥಳಿಪ ರತ್ನಗಳ ಹಾರಗಳ ಧರಿಸುತಲಿ
ನಾ ಮೇಲು ತಾ ಮೇಲು ಸುಂದರನು ಎನ್ನುತಲಿ
ದ್ರೌಪದಿಯು ತಮತಮಗೆ ಒಲಿಯುವಳು ಎನ್ನುತಲಿ ॥೧೧೦೬॥

ಮೀಸೆಯನು ತಿರುಹುತಲಿ ಒಬ್ಬರರನೊಬ್ಬರನು
ಕಡೆಗಣ್ಣ ನೋಟದಲಿ ಅಣಕಿಸುತ ಜಂಭದಲಿ
ನೃಪರುಗಳು ನೃಪಸುತರು ಮಾಂಡಲಿಕ ಅರಸುಗಳ
ಸಕಲರೂ ಐತಂದು ಆಸೀನರಾಗಿಹರು ॥೧೧೦೭॥

ಋಷಿವರರು ಮುನಿವರರು ಶಾಸ್ತ್ರಗಳ ಪರಿಣತರು
ವಿಪ್ರರುಗಳಾಗರವು ಜ್ಞಾನಿಗಳು ಪಂಡಿತರು
ಕವಿರತ್ನ ಕವಿತಿಲಕ ಕವಿಶರಭ ನಿಕರಗಳ
ಸಾಹಿತ್ಯ ದಿಗ್ಗಜಗಳಾಸೀನರಾಗಿಹರು ॥೧೧೦೮॥

**ದ್ರೌಪದಿಯು ಸ್ವಯಂವರ ಮಂಟಪಕ್ಕೆ ಬರುವುದು**

ನೆರೆದಿರುವ ನೃಪರುಗಳ ನೋಡುತಲಿ ದ್ರುಪದನೃಪ
ಸ್ನಾನವನು ಗೈಯ್ಯುತಲಿ ನಾಂದಿಯಾ ಕಾರ್ಯವನು
ಹೋಮ ಹವನಾದಿಗಳ ವಿಸ್ತರದಿಗೈಯ್ಯುತಲಿ
ನಿಜಸುತನ ಧೃಷ್ಟದ್ಯುಮ್ನನ ಕರೆಯುತಲಿ ನುಡಿದಿಹನು ॥೧೧೦೯॥

ನಿನ್ನಯಾ ತಂಗಿಯನು ದ್ರೌಪದಿಯ ಬೇಗನೆಯೆ
ಸಭೆಯೊಳಗೆ ಕರೆತಹುದು ಎನ್ನುತಲಿ ನುಡಿಯುತಿರೆ
ಭರದಿಂದ ಅರಮನೆಗೆ ತೆರಳುತಲಿ ಧೃಷ್ಟದ್ಯುಮ್ನ
ಸಖಿಯರಾ ಮಧ್ಯದಲಿ ತಂಗಿಯನು ಕಾಣುತಲಿ ॥೧೧೧೦॥

ಏಳೆನ್ನ ಒಲುಮೆಯಾ ತಂಗಿಯೆ ದ್ರೌಪದಿಯೆ
ನಿನ್ನಯಾ ಭಾಗ್ಯವದು ಫಲಿಸುವಾ ದಿನವಿಂದು
ನಿನ್ನಯಾ ದಾರಿಯನು ದ್ರುಪದನೃಪ ಕಾಯುತಿಹ
ಬೇಗನೆ ಸ್ವಯಂವರದ ಮಂಟಪಕೆ ಬಹುದೆಂದು ॥೧೧೧೧॥

ನುಡಿಯುತಿರೆ ಧೃಷ್ಟದ್ಯುಮ್ನ ದ್ರೌಪದಿಯು ಹರುಷದಲಿ
ಸ್ನಾನವನು ಮಾಡುತಲಿ ಬಹೆನೆಂದು ನುಡಿಯುತಲಿ
ಅರಿಶಿನದಿ ಗಂಧದಲಿ ಎಣ್ಣೆಯನು ತನುವಿಂಗೆ
ಲೇಪಿಸುತ ಸ್ನಾನವನು ಮಾಡಿಸುತ ಸಖಿವೃಂದ ॥೧೧೧೨॥

ಹೊಳೆಹೊಳೆವ ಥಳಥಳಿಪ ಪೀತಾಂಬರುಡಿಸುತಲಿ
ನೊಸಲಿನಲಿ ಕುಂಕುಮದ ತಿಲಕವನು ಇರಿಸುತಲಿ
ಕೊರಳೊಳಗೆ ಮುತ್ತುಗಳ ರತ್ನಗಳ ವಜ್ರಗಳ
ಹಾರಗಳ ಪದಕಗಳ ಸಖಿಯರುಗಳಿಟ್ಟಿಹರು ॥೧೧೧೩॥

ಶಿರದಲ್ಲಿ ಹೊಳೆಹೊಳೆವ ರತ್ನದ ಶಿರೋಮಣಿಯು
ಹೆರಳಿನಲಿ ಸ್ವರ್ಣದಾ ಸಂಪಿಗೆಯು ಕೇದಗೆಯು
ಕರ್ಣದಲಿ ಥಳಥಳಿಪ ವಜ್ರದಾ ಓಲೆಗಳ
ನಾಸಿಕದ ಕೆಂಪೆಸೆವ ರತುನದಾ ನತ್ತನ್ನು ॥೧೧೧೪॥

ತೋಳಿನಲಿ ತೋಳ್ಬಂದಿ ಆ ನಾಗಮುರಿಗೆಗಳ
ಕರಗಳಲಿ ಮಿರುಗುತಿಹ ಕಾಂಚನದ ಬಳೆಗಳನು
ಈರೈದು ಬೆರಳಿಂಗೆ ತೇಜದಲಿ ಹೊಳೆಯುತಿಹ
ಈರೈದು ವಜ್ರದಾ ಉಂಗುರಗಳಿಟ್ಟಿಹರು ॥೧೧೧೫॥

ತಿದ್ದಿರುವ ತೀಡಿರುವ ಪೀತಾಂಬರುಡುವಿಂಗೆ
ನಡುವಿಂಗೆ ಬೆಡಗಿನಾ ಸ್ವರ್ಣದಾ ಕಟಿಬಂಧ
ಪಾದರಸ ಶೋಭಿತದ ಆ ಪಾದದ್ವಯಗಳಿಗೆ
ನೂಪುರಗಳಿರಿಸುತಲಿ ಶೃಂಗಾರಗೈದಿಹರು ॥೧೧೧೬॥

ಈ ಪರಿಯೆ ಸಖಿವೃಂದ ದ್ರೌಪದಿಯು ಸರ್ವಾಂಗ
ಎಲ್ಲವನು ಆಭರಣ ಒಡವೆಗಳ ತೊಡಿಸುತಲಿ
ಎಡಬಲದಿ ದ್ರೌಪದಿಯ ಭುಜಗಳನು ಹಿಡಿಯುತಲಿ
ನಡೆಸುತಲಿ ಮಂಡಪದ ಮಧ್ಯದಲಿ ಬಂದಿಹರು ॥೧೧೧೭॥

ತಾರೆಗಳ ಗಡಣದಲಿ ಆಗಸದ ಮಧ್ಯದಲಿ
ಶರದಋತು ಚಂದ್ರಮನು ಬೆಳಗುತಲಿ ಬರುವಂತೆ
ಸರಸತರ ಲಾವಣ್ಯ ಸೊಬಗಿನಲಿ ಶೋಭಿಸುತ
ದ್ರೌಪದಿಯು ಬಂದಿಹಳು ಸಖಿವೃಂದ ಸಹಿತದಲಿ ॥೧೧೧೮॥

ಬೆಳದಿಂಗಳೆಲ್ಲೆಡೆಗೆ ಪಸರಿಸುವ ಪರಿಯಲ್ಲಿ
ಹೃದಯವನು ಮುದಗೊಳಿಪ ಶೀತಲದ ಚಂದ್ರಿಕೆಯು
ಚಂದ್ರಮುಖಿ ದ್ರೌಪದಿಯ ವದನಾರವಿಂದದಾ
ಸರಸತರ ಕಾಂತಿಯದು ಸಭೆಯೊಳಗೆ ಪಸರಿದುದು ॥೧೧೧೯॥

ಹಗಲಿನಲಿ ಸೂರ್ಯನೇ ಚಂದ್ರಮನು ತಾನಾಗಿ
ಬೆಳದಿಂಗಳಾ ಮಳೆಯ ಸುರಿದಿಹನೊ ಎಂಬಂತೆ
ಶೀತಲದ ವಿಲಸಿತದ ಮನತಣಿಪ ನಲ್ಬೆಳಕು
ಪಸರಿದುದು ಚಂದ್ರಮುಖಿ ದ್ರೌಪದಿಯ ಬರವಿನಲಿ ॥೧೧೨೦॥

ಮಾನಿಪಳು ಇವಳಲ್ಲ ದೇವತೆಯು ತೋರುವಳು
ಪಾರ್ವತಿಯೊ ಸರಸತಿಯೊ ಮಹಲಕುಮಿ ದೇವತೆಯೊ
ಧರೆಗಿಳಿದು ಬಂದಿರುವ ಸ್ವರ್ಗದಾ ದೇವತೆಯೊ
ಎಂಬಂತೆ ದ್ರೌಪದಿಯ ಕಾಣುತಲಿ ನುಡಿದಿಹರು ॥೧೧೨೧॥

ಜಗದೊಳಿಹ ಸೌಂದರ್ಯ ಸಾರವನು ಸಕಲವನು
ಹೀರುತಲಿ ಎರಕವನು ಹೊಯ್ಯುತಲಿ ನಿರ್ಮಿಸಿದ
ಅಪ್ರತಿಮ ಸೌಂದರ್ಯ ಸಾಗರದ ಪುತ್ಥಳಿಯೊ
ಎಂಬಂತೆ ಹೊಳೆಯುತಿಹ ದ್ರೌಪದಿಯ ಕಂಡಿಹರು ॥೧೧೨೨॥

ಹೊಚ್ಚಹೊಸ ಲಾವಣ್ಯರಸದಿಂದ ತುಳುಕುತಲಿ
ನಳನಳಿಸಿ ತೊಳಗುತಿಹ ಅಂಗಗಳ ಚೆಲುವಿನಲಿ
ಕರಿಮೇಘ ಕಾಂತಿಯಲಿ ಹೊಳೆಯುತಿಹ ತನುವಿನಲಿ
ಮಿಂಚಿನಾ ಲತೆಯಂತೆ ಹೊಳೆದಿಹಳು ಆ ಕೃಷ್ಣೆ ॥೧೧೨೩॥

ಭೃಂಗದಾ ಕುಂತಳೆಯು ಕುಂಕುಮದ ಮಸ್ತಕದ
ಬಿಲ್ಲಿನಾ ಹುಬ್ಬಿನಲಿ ಕಿಳಗಡೆಗೆ ಮಿಂಚುತಿಹ
ಮರಿಮೀನದಂತೆಸೆವ ಕಾಂತಿಯುತ ಕಂಗಳಿನ
ಚಂಪಕದ ನಾಸಿಕದ ದಾಡಿಮದ ಅಧರಗಳ ॥೧೧೨೪॥

ಸುಲಿಪಲ್ಲ ಪಂಕ್ತಿಗಳ ಸೂಸುತಿಹ ಕಿರುನಗೆಯು
ನಲ್ದೋಳ ಬಲ್ದೊಲೆಯ ಬಡನಡುವ ತೆಳ್ವಸಿರ
ಸುಳಿನಾಭಿ ಜಂಭೋರು ಆ ಬಾಲೆ ಬರುತಿರಲು
ನೃಪರುಗಳ ಚಿತ್ತಗಳು ಚಂಚಲದಿ ಚಲಿಸಿಹವು ॥೧೧೨೫॥

ತೆಗೆತೆಗೆಯ ಮನ್ಮಥನು ಮಸೆಯುತಲಿ ಎಸೆದಿರುವ
ಘೋರತರ ಕ್ರೂರಲಗು ಹೃದಯವನು ಇರಿಯುತಿದೆ
ತನ್ನಯಾ ಶಕ್ತಿಯನು ಎಲ್ಲವನು ಸೇರಿಸುತ
ಆ ಮದನ ಬಿಟ್ಟಿರುವ ಶರವೀಕೆ ಎಂದಿಹರು ॥೧೧೨೬॥

ಎಮ್ಮಯಾ ಹೃದಯಗಳ ಧಗಧಗನೆ ಸುಡುತಲಿಹ
ರತಿಪತಿಯು ಎಸೆದಿರುವ ಬ್ರಹ್ಮಾಸ್ತ್ರವೀ ಕನ್ಯೆ
ನೃಪರುಗಳ ಮನವನವ ಕಾಮದಲಿ ಸುಡುತಲಿಹ
ಕಾಮಾಗ್ನಿ ಇವಳಿಹಳು ಅಗ್ನಿಸುತೆ ದ್ರೌಪದಿಯು ॥೧೧೨೭॥

ಸಾವಿರದ ವರುಷಗಳ ತಪಗೈವ ಮುನಿವರರು
ಇವಳನ್ನು ನೋಡುತಲಿ ಮೋಹದಲಿ ಸಿಲುಕುವರು
ದೇವೇಂದ್ರ ಮೊದಲಾದ ಸುರರೆಲ್ಲ ನೋಡುತಲಿ
ಮೋಹದಾ ಜಾಲದಲಿ ಬೀಳುವರು ಎಂದಿಹರು ॥೧೧೨೮॥

ಜಗದೊಳಗೆ ಈ ತೆರನ ಅದ್ಭುತದ ಸೌಂದರ್ಯ
ರೂಪದಲಿ ಸೊಗಸುತಿಹ ಬಾಲೆಯನು ಸೃಷ್ಟಿಸುತ
ಕಡುಮೂರ್ಖ ಆ ಬ್ರಹ್ಮ ನಮ್ಮನ್ನು ಕೊಂದಿಹನು
ಎನ್ನುತಲಿ ಬ್ರಹ್ಮನನು ಶಪಿಸಿದರು ಮನದೊಳಗೆ ॥೧೧೨೯॥

ಅಪ್ರತಿಮ ಸೌಂದರ್ಯ ಪ್ರಭೆಯನ್ನು ಸೂಸುತಿಹ
ಸುರಲೋಕ ದೇವತೆಯೊ ಎಂಬಂತೆ ಹೊಳೆಯುತಿಹ
ಇವಳನ್ನು ವರಿಸಲಿಕೆ ಮೂಲೋಕ ವೀರನೇ
ಯೋಗ್ಯನಿಹ ಎನ್ನುತಲಿ ನುಡಿದಿಹರು ನೃಪರುಗಳು ॥೧೧೩೦॥

ಕೆಲಕೆಲರು ನೃಪರುಗಳು ಬೆರಗಿನಲಿ ನೋಡುತಲಿ
ಬಾಪೋಳಿಹ ತಂಬುಲವ ಮೆಲ್ಲದೆಯೆ ಇರ್ದಿಹರು
ಕೆಲಕೆಲರೂ ಧರಣಿಪರು ಮೊಗವೆತ್ತಿ ನೋಡುತಿರೆ
ಮಸ್ತಕ ಕಿರೀಟಗಳು ಜಾರುತಲಿ ಬಿದ್ದಿಹವು ॥೧೧೩೧॥

**ದೃಷ್ಟದ್ಯುಮ್ನ ದ್ರೌಪದಿಗೆ ರಾಜರ ಪರಿಚಯವನ್ನು ಮಾಡಿಸುವುದು**

ಬಳಿಕಲಾ ದ್ರುಪದನೃಪ ದೃಷ್ಟದ್ಯುಮ್ನನು ಕರೆಯುತಲಿ
ನೆರೆದಿರುವ ನೃಪರುಗಳ ಪರಿಚಯವ ದ್ರೌಪದಿಗೆ
ಮಾಡಿಸುವುದೆನ್ನುತಲಿ ನುಡಿಯುತಿರೆ ದೃಷ್ಟದ್ಯುಮ್ನ
ದ್ರೌಪದಿಯ ಸಹಿತದಲಿ ನಡೆದಿಹನು ಸಭೆಯೊಳಗೆ ॥೧೧೩೨॥

ಹೇ ತಂಗಿ ನೋಡಿತ್ತ ಶ್ರೇಷ್ಠನಿಹ ಕುರುಕುಲದ
ಹಸ್ತಿನೆಯ ಪುರದರಸು ದುರ್ಯೋಧನೀತನಿಹ
ದುಶ್ಶಾಸನೀತನಿಹ ದುರ್ಜಯನು ಮೊದಲಾದ
ನೂರ್ವರಾ ಧೃತರಾಷ್ಟ್ರ ನಂದನರು ಇವರಿಹರು ॥೧೧೩೩॥

ಕಣ್ಣೆತ್ತಿ ನೋಡದಲೆ ಏನೊಂದು ನುಡಿಯದಲೆ
ಮೊಗದಿರುಹಿ ಮುಂದಕ್ಕೆ ದ್ರೌಪದಿಯು ಸಾಗುತಿರೆ
ದೃಷ್ಟದ್ಯುಮ್ನ ಮನದೊಳಗೆ ನೋದರಿಯು ಇಂಗಿತವ
ಆಯುತಲಿ ಸಾಗಿದನು ನೃಪರುಗಳ ತೋರಿಸುತ ॥೧೧೩೪॥

ನೋಡಿತ್ತ ಮತ್ಸ್ಯನೃಪ ಬಹುವೀರ ವಿರಾಟನು
ತನ್ನಯಾಸುತರೊಡನೆ ಆ ಶಂಖ ಉತ್ತರನ
ಸಹಿತದಲಿ ಬೀಗನಾ ಕೀಚಕನ ಒಡಗೂಡಿ
ಈ ಕಡೆಗೆ ಕುಳಿತಿಹನು ನೋಡುವುದು ಎಂದಿಹನು ॥೧೧೩೫॥

ಈತನಿಹ ಮಾದ್ರೇಶ ಬಹುವೀರ ಶಲ್ಯನೃಪ
ಮಾಗಧದ ದೊರೆ ಇವನು ಜರಾಸಂಧ ಬಹುಶೂರ
ಆ ಚೇದಿ ನೃಪನಿವನು ಜಗದೊಳಗೆ ಅತಿಬಲನು
ಶಿಶುಪಾಲನೆಂಬುವಾ ಹೆಸರಿನಲಿ ಖ್ಯಾತನಿಹ ॥೧೧೩೬॥

ಕಾಂಭೋಜ ಡಿಂಭಿಕನು ಪೌಂಡ್ರಕನು ವರಹಂಸ
ಸಹದೇವ ಭಗದತ್ತ ಬೃಹದ್ರಥ ವೃದ್ಧಕ್ಷತ್ರ
ಸೈಂಧವ ಜಯದ್ರಥನು ಮಣಿಮಾನ ಸೇನಕರು
ಚೇಕಿತನು ಅಂಶುಮನು ನೃಪರುಗಳು ಇವರಿಹರು ॥೧೧೩೭॥

ಈ ಕಡೆಗೆ ಸೌರಾಷ್ಟ್ರ ಕಲಿಂಗ ವಂಗಗಳ
ವೈದರ್ಭ ವಿಂಧ್ಯದಾ ನಾಗಪುರದರಸುಗಳು
ಗಾಂಧಾರ ಕೋಸಲದ ಕಾಶ್ಮೀರ ನೇಪಾಳ
ಆ ಲಾಳ ಮಾಳವದ ನೃಪರುಗಳ ನೋಡುವುದು ॥೧೧೩೮॥

ವೀರನೀ ಭೂರಿನೃಪ ಭೂರಿಶ್ರವೀತನಿಹ
ಭಗದತ್ತ ಬಾಹ್ಲಿಕನು ಶಿಬಿರುಕ್ಮ ಶ್ರುತಾಯುಧನು
ದೀರ್ಘೋದರೀತನಿಹ ಮಹೋದರೀತನಿಹ
ರುಕ್ಮಾಂಗದೀತನಿಹ ಜಯಬಲನು ಇವನಿಹನು ॥೧೧೩೯॥

ಶೃತಸೇನ ಅಚ್ಯುತನು ಸೃಂಜಯ ಭಗೀರಥನು
ಆ ಸೋಮದತ್ತನಿಹ ಪರಭಾನುದತ್ತನಿಹ
ತೆಂಕಣದ ಕುಂತಳದ ಕೇರಳದ ಆಂಧ್ರದಾ
ಚೇರರನು ಚೋಳರನು ಪಾಂಡ್ಯರನು ನೋಡುವುದು ॥೧೧೪೦॥

ಸುಬಲಸುತ ಶಕುನಿಯಿಹ ವೃಕ್ಷಕ ಬೃಹದ್ಬಲರಿವರು
ಭೋಜನಿವ ಬೃಹಂತನಿವ ಮಣಿಮನಿವ ವಿಕಟನಿವ
ಸತ್ಯಧೃತಿ ವ್ಯಕರಿವರು ನೀಲ ಚಿತ್ರಾಯುಧರು
ಸುದಕ್ಷಿಣನ ಸುಶರ್ಮನನ ನೃಪರುಗಳ ನೋಡೆಂದ ॥೧೧೪೧॥

ಇತ್ತ ಕಡೆ ನೋಡುವುದು ಗುರುದ್ರೋಣನಿರಲಿಗನಿಹ
ಜಗಖ್ಯಾತ ವೀರನಿಹ ಅಶ್ವತ್ಥಾಮ ನೀಕ್ಷಿಪುದು
ವತ್ಸನೃಪ ಕೈತವನು ಸತ್ಯಧೃತಿ ಸೂರ್ಯಧ್ವಜ
ಆ ಸೇನ ಬಿಂದುವನು ಭೂಪರನು ನೋಡೆಂದ ॥೧೧೪೨॥

ಜಗದೊಳಗೆ ಅಪ್ರತಿಮ ಶೌರ್ಯದಾ ತೇಜದಲಿ
ರವಿಯಂತೆ ಹೊಳೆಯುತಲಿ ತನ್ನಯಾ ಸುತರೊಡನೆ
ವೃಷಸೇನ ಚಿತ್ರಸೇನ ಸಹಿತದಲಿ ಕುಳಿತಿರುವ
ಜಗಖ್ಯಾತ ಕಲಿಕರ್ಣ ಈತನಿಹ ನೋಡೆಂದ ॥೧೧೪೩॥

ಕರ್ಣನನು ದಿಟ್ಟಿಸುತ ಭಾವದಲಿ ನೋಡುತಲಿ
ಮನದೊಳಗೆ ಏನನ್ನೊ ಯೋಚಿಸುತ ಕ್ಷಣದೊಳಗೆ
ದೃಷ್ಟಿಯನು ಹೊರಳಿಸುತ ಮೊಗವನ್ನು ತಿರುಹುತಲಿ
ದ್ರೌಪದಿಯು ನಡೆದಿಹಳು ಗಂಭೀರವದನದಲಿ ॥೧೧೪೪॥

ಇತ್ತ ಕಡೆ ಯಾದವಕುಲೋತ್ತಮನ ನೋಡುವುದು
ಶಾಮಲದ ವರ್ಣದಲಿ ಮೇಘದಾ ಕಾಂತಿಯಲಿ
ಹೊಳೆಯುತಿಹ ತನುವಿನಲಿ ಶೋಭಿಸುವ ಮಂಗಳನು
ಯಾದವ ಶಿರೋಮಣಿಯು ಶ್ರೀಕೃಷ್ಣನೀತನಿಹ ॥೧೧೪೫॥

ಶೌರ್ಯವನು ಹೊಗಳುವೊಡೆ ಶಿಶುತನದಿ ಪೂತನಿಯ
ರಕ್ಕಸಿಯ ಕೊಂದಿರುವ ಘನಮಹಿಮನೀತನಿಹ
ಬಾಲ್ಯದಲಿ ಕಂಸನನು ಚಾಣೂರ ಧೇನುಕನ
ಶಕಟಾದಿ ರಕ್ಕಸರ ಕೊಂದಿರುವ ವೀರನಿಹ ॥೧೧೪೬॥

ರೂಪವನು ಹೊಗಳುವೊಡೆ ಮೂಲೋಕ ಮೋಹಿಸುವ
ಮನ್ಮಥನ ರತಿಪತಿಯ ಪೆತ್ತಿರುವ ಪಿತನಿಹನು
ಸಿರಿಯನ್ನು ಪೇಳುವೊಡೆ ಶ್ರೀದೇವಿ ಮಹಲಕುಮಿ
ಸತಿಯಾಗಿ ಈತನಾ ಚರಣಗಳ ಸೇವಿಪಳು ॥೧೧೪೭॥

ಶಕ್ತಿಯನು ಪೇಳುವೊಡೆ ಗೋವರ್ಧನಾಗಿರಿಯ
ಕಿರುಬೆರಳಿನಂಚಿನಲಿ ಎತ್ತಿರುವ ಬಲಯುತನು
ಸೃಷ್ಟಿಯನು ಸೃಷ್ಟಿಸಿದ ಆ ಬ್ರಹ್ಮದೇವನೇ
ಈತನಾ ನಾಭಿಯಲಿ ಜನಿಸಿಹನು ನೋಡೆಂದ ॥೧೧೪೮॥

ಮಹಿಮೆಯನು ಹೊಗಳುವೊಡೆ ವೇದಗಳಿಗಸದಳವು
ಸಾವಿರದ ನಾಲಿಗೆಯ ಶೇಷನಾ ಅಳವಲ್ಲ
ಈತನನು ವರಿಸಿದೊಡೆ ನಿನಗಿಂತ ಮಿಗಿಲಾದ
ಸೌಭಾಗ್ಯ ಶಾಲಿನಿಯು ಆರಿಲ್ಲ ಎಂದಿಹನು ॥೧೧೪೯॥

ದ್ರೌಪದಿಯು ಮಂಗಳನ ಕೃಷ್ಣನಾ ರೂಪವನು
ಕಂಗಳಲಿ ನೋಡುತಲಿ ಹರುಷದಲಿ ಮುಳುಗುತಲಿ
ಭಕುತಿಯಾ ಭಾವದಲಿ ಪುಳಕಿತಳು ಆಗುತಲಿ
ಪುರುಷೋತ್ತಮನೀತನಿಹ ದೇವೋತ್ತಮನೀತನಿಹ ॥೧೧೫೦॥

ಎನ್ನುತಲಿ ಮನದೊಳಗೆ ಭಕುತಿಯಲಿ ವಂದಿಸುತ
ಕರುಣೆಯಲಿ ಪಾಂಡವರ ತೋರಿಸುತ ಸಲಹುವನು
ನಿನ್ನನ್ನೆ ನಂಬಿಹೆನು ನೀ ಎನ್ನ ರಕ್ಷಿಪುದು
ಎನ್ನುತಲಿ ಪ್ರಾರ್ಥಿಸುತ ನಡೆದಿಹಳು ಮುಂದಕ್ಕೆ ॥೧೧೫೦॥

ಲೋಕದಲಿ ಸಮಬಲರು ಆರಿಲ್ಲದಿರುತಿರುವ
ಕೃಷ್ಣನಾ ಅಣ್ಣನಿಹ ಬಲರಾಮನೀತನಿಹ
ಪರನನ್ನು ಕೆಣಕಿರುವ ಕೃಷ್ಣನಾ ಸುತನಿರುವ
ಅಪ್ರತಿಮ ಸುಂದರನು ಮನ್ಮಥನು ಈತನಿಹ ॥೧೧೫೨॥

ಅನಿರುದ್ಧ ಉದ್ಧವನು ಸಾತ್ಯಕಿಯು ಸಾರಣನು
ಅಕ್ರೂರ ಕಲಿಸಾಂಬ ಕೃತಪರ್ವ ಪ್ರದ್ಯುಮ್ನ
ಪಾತಪತಿ ಮೊದಲಾದ ಕೃಷ್ಣನಾ ಸುತರುಗಳು
ಸಕಲರೂ ಯಾದವರೂ ಇವರಿಹರು ಎಂದಿಹನು ॥೧೧೫೩॥

ಕಡೆಗೊಮ್ಮೆ ಕಡೆನೋಟ ಬೀರುತಲಿ ದ್ರುಪದಜೆಯು
ನೃಪರುಗಳನೆಲ್ಲರನು ನೋಡುತಲಿ ಮೊಗದಿರುಹಿ
ಹಿಂಡಿನಾ ಸಹಿತದಲಿ ಹೋಗುತಿಹ ಗಜದಂತೆ
ಸಖಿವೃಂದ ಸಹಿತದಲಿ ಮಂಟಪವ ಹೊಕ್ಕಿಹಳು ॥೧೧೫೪॥

ತಮ್ಮಿಯಾ ರೂಪವನು ನೋಡುತಲಿ ದ್ರೌಪದಿಯು
ಒಮ್ಮನದಿ ಒರಿಸಲಿಕೆ ಒಪ್ಪಿಹಳು ಎನ್ನುತಲಿ
ತಮ್ಮೊಳಗೆ ನುಡಿಯುತಲಿ ಚರ್ಚಿಸುತ ನೃಪರುಗಳು
ಮದುವೆಯಾ ಕನಸಿನಲಿ ಇರ್ದಿಹರು ಹಗಲಿನಲಿ ॥೧೧೫೫॥

ಜಗದೊಳಗೆ ಪಾಂಡವರು ಜೀವಂತ ಇರುತಿಹರು
ಎನ್ನುತಲಿ ಜೋಯಿಸರು ಹೇಳಿದುದು ಸುಳ್ಳಾಯ್ತೆ
ಎನ್ನುತಲಿ ದ್ರುಪದನೃಪ ಚಿಂತಿಸುತ ದುಗುಡದಲಿ
ಪಾಂಡವರ ತೋರಿಸನೆ ನರಯಣನು ಎಂದಿಹನು ॥೧೧೫೬॥

ಚೆಲುವಿನಲಿ ರೂಪದಲಿ ದ್ರೌಪದಿಯು ಒಲಿಸುತಲಿ
ಜಯಿಸಲಿಕೆ ಅಸಮರ್ಥರಾಗಿರುವ ನೃಪರುಗಳ
ನೋಡುತಲಿ ದ್ರುಪದನೃಪ ದುಗುಡದಲಿ ಚಿಂತಿಸುತ
ಪಾಂಡವರ ತೋರಿಸನೆ ನರಯಣನು ಎಂದಿಹನು ॥೧೧೫೭॥

ಬಳಿಕಲಾ ದ್ರುಪದನೃಪ ಸಭೆಯೊಳಗೆ ಕರನೆಗಹಿ
ಮೇಲೆಡೆಗೆ ತಿರುಗುತಿಹ ಮತ್ಸ್ಯದಾ ಯಂತ್ರವನು
ಬಿಲ್ಲಿನಲಿ ಬಾಣವನು ಅಳವಡಿಸಿ ಎಚ್ಚುತಲಿ
ಭೇದಿಸುತ ಕೆಳಗಡೆಗೆ ಕೆಡುತಲಿಹ ವೀರನಿಗೆ ॥೧೧೫೮॥

ಸಕಲಸುಖ ಸಂಸಾರ ಸಾಕಾರ ಸುತೆಯನ್ನು
ದ್ರೌಪದಿಯನೀಯುವೆನು ಎನ್ನುತಲಿ ಸಾರುತಿರೆ
ಅಗಣಿತದ ಸೇವಕರು ಭಾರಿಯಾ ಧನುವನ್ನು
ಇರಿಸುತಿರೆ ಪೂಜೆಯನು ಗೈದಿಹನು ದ್ರುಪದನೃಪ ॥೧೧೫೯॥

ಆಸೆಯಲಿ ಮೀಸೆಯನು ತಿರುಹುತಲಿ ಕಾಂಭೋಜ
ಧರಣಿಪನು ಬಿಲ್ಲಿನಾ ಬಳಿಬಂದು ಠೀಣಿಸುತಲಿ
ಎತ್ತಲಿಕೆ ಯತ್ನಿಸಲು ಮಿಸುಕದಿರೆ ಭಾರಿಧನು
ಬತ್ತಿದಾ ಮುಖದಿಂದ ಪೆಚ್ಚಾಗಿ ಮರಳಿದನು ॥೧೧೬೦॥

ಕೋಸಲದ ಅಧಿಪತಿಯು ಕೌಶಲದಿ ಧನುವನ್ನು
ಮೇಲಕ್ಕೆ ಎತ್ತುತಲಿ ಥರಥರನೆ ನಡುಗುತಲಿ
ಬಿಲ್ಲಿನಾ ಸಹಿತದಲಿ ಧೊಪ್ಪನೇ ಬೀಳುತಿರೆ
ಬಾಲೆಯರು ಕರಹೊಯ್ದು ಗಹಗಹಿಸಿ ನಕ್ಕಿಹರು ॥೧೧೬೧॥

ಖಚಿತದಲಿ ಯಂತ್ರವನು ಭೇದಿಸುತ ದ್ರೌಪದಿಯ
ಕರಹಿಡಿವೆನೆನ್ನುತಲಿ ಮನದೊಳಗೆ ಉಬ್ಬುತಲಿ
ಕನ್ಯೆಯರ ಮೊಗಗಳನು ನೋಡುತಲಿ ಮಗಧನೃಪ
ಆ ಕಲಿ ಜರಾಸಂಧ ಬಂದಿಹನು ಬಿಲ್ಲೆಡೆ ॥೧೧೬೨॥

ವೀರನಿಹ ಬಲಯುತನು ಎನ್ನುತಲಿ ಕಾಣುವನು
ಇವನಿಂಗೆ ದ್ರೌಪದಿಯು ದೊರೆಯುವಳು ಎನ್ನುತಲಿ
ಸಖಿನಿಕರ ಮನದೊಳಗೆ ಯೋಚಿಸುತಲಿರುತಿರಲು
ಮಾಗಧನೃಪ ತಿಣುಕುತಲಿ ಧನುವನ್ನು ಎತ್ತುತಲಿ ॥೧೧೬೩॥

ಬಾಣವನು ಅಳವಡಿಸಿ ಬಿಲ್ಲಿನಲಿ ತೂಗುತಲಿ
ಮತ್ಸ್ಯದಾ ಯಂತ್ರಕ್ಕೆ ಬಿಡುತಲಿರೆ ವೇಗದಲಿ
ಅಂಗುಲದ ಅಂತರದಿ ಗುರಿತಪ್ಪಿ ಬಾಣವದು
ತಾಗದೆಯೆ ಸಾಗುತಲಿ ದೂರದಲಿ ಬಿದ್ದಿಹುದು ॥೧೧೬೪॥

ಸಖಿವೃಂದ ಘೊಳ್ಳೆಂದು ಸಹಗಹಿಸಿ ನಗು ನಗುತ
ಕೇಕೆಯಲಿ ಚಪ್ಪಾಳೆಯಿಕ್ಕುತಿರೆ ಮಾಗಧನು
ಅಪಮಾನ ಸಹಿಸದೆಯೆ ತನುವೆಲ್ಲ ಬೆವರುತಲಿ
ಧನುವೇಕೆ ತಾನೇಕೆ ಸುಡಲೆಂದು ಮರಳಿದನು ॥೧೧೬೫॥

ಮಗಧನಾ ಮಾನವನ ಭಂಗವನು ಮಾಡಿರುವ
ಧನುವಿಂದು ಬಗ್ಗಿಸುತ ಯಂತ್ರವನು ಭೇದಿಸುತ
ನಗುತಲಿಹ ಲಲನೆಯರ ನಗೆಯನ್ನು ಮೆಟ್ಟುತಲಿ
ದ್ರೌಪದಿಯ ಕೈಯನ್ನು ಹಿಡಿಯುವೆನು ಎನ್ನುತಲಿ ॥೧೧೬೬॥

ಆ ಚೇದಿ ನೃಪವರನು ಜಗಖ್ಯಾತ ವಿಕ್ರಮನು
ಶಿಶುಪಾಲನೃತರಲು ಬಿಲ್ಲಿನಾ ಬಳಿಯಲ್ಲಿ
ಅಹುದಹುದು ಮುನ್ನಿನಲಿ ಈತನೇ ದಶಶಿರನು
ಯಂತ್ರವನು ಭೇದಿಸುತ ದ್ರೌಪದಿಯ ವರಿಸುವನು ॥೧೧೬೭॥

ಎನ್ನುತಲಿ ಚಿಂತೆಯಲಿ ಸಖಿವೃಂದ ಮುಳುಗಿರಲು
ಬಿಲ್ಲಿನಾ ಕೆಳಗಡೆಗೆ ಕರಗಳನು ಚಾಚುತಿರೆ
ತ್ರೇತೆಯಲಿ ಹರಸತಿಯು ಪಾರ್ವತಿಯನೊಯ್ಯಲಿಕೆ
ಕೈಲಾಸ ಪರ್ವತದ ತಳದಲ್ಲಿ ಕರಗಳನು ॥೧೧೬೮॥

ಇರಿಸುತಲಿ ಎತ್ತಲಿಕೆ ಯತ್ನಿಸುವ ದಶಶಿರನ
ಪರಿಯಲ್ಲಿ ಕಂಡಿಹನು ಶಿಶುಪಾಲ ಕಡುಗಲಿಯು
ತಿಣುಕುತಲಿ ಹೆಣಗುತಲಿ ಧನುವನ್ನು ಎತ್ತುತಲಿ
ನಡುಗುತಲಿ ಬಿಲ್ಲಿನಾ ಸಹಿತದಲಿ ಬಿದ್ದಿಹನು ॥೧೧೬೯॥

ಸರಸದಲಿ ಚಪಲೆಯರು ಸಖಿನಿಕರ ಲಲನೆಯರು
ಚಪ್ಪಾಳೆ ತಟ್ಟುತಲಿ ಗಹಗಹಿಸಿ ನಗುತಲಿರೆ
ಸಾವಿರದ ಅಲಗುಗಳು ಹೃದಯವನು ಇರಿದಂತೆ
ಆ ಚೈದ್ಯ ಮನದೊಳಗೆ ನೋಯುತಲಿ ನೊಂದಿಹನು ॥೧೧೭೦॥

ಮುಸುಕಿರುವ ಮೇಘಗಳು ಸರಿಯುತಿರೆ ಚಂದ್ರಮನು
ಹೊಳೆ ಹೊಳೆವ ಬೆಳಕಿನಲಿ ಬೆಳಗುತಿಹ ಪರಿಯಲ್ಲಿ
ಚಂದ್ರಮುಖಿ ದ್ರೌಪದಿಯ ಮುಖಚಂದ್ರ ತೇಜದಲಿ
ಹೊಳೆಯುತಲಿ ಬೆಳಗಿದುದು ಆನಂದದಾರ್ಣವದಿ ॥೧೧೭೧॥

ಅಗಣಿತದ ಭೃತ್ಯರುಗಳೈತಂದು ಧನುವನ್ನು
ಎತ್ತುತಲಿ ಕೆಲದಲ್ಲಿ ಇರಿಸುತಿರೆ ಭರದಲ್ಲಿ
ಶಿಶುಪಾಲ ಏಳುತಲಿ ವಸ್ತ್ರಗಳ ಸರಿಪಡಿಸಿ
ಅಪಮಾನ ಸಹಿಸದಲೆ ಕಳವಳದಿ ಕುದಿಯುತಲಿ ॥೧೧೭೨॥

ಮಾಗಧನ ಬಳಿಬಂದು ದ್ರುಪದನೃಪ ಖೂಳನಿಹ
ದುಷ್ಟನಿಹ ಹೀನನಿಹ ಮೋಸದಲಿ ನಮ್ಮನ್ನು
ಅಪಮಾನಗೊಳಿಸಲಿಕೆ ಈ ಭಾರಿ ಧನುವನ್ನು
ಪಣವಿಟ್ಟು ಸಭೆಯೊಳಗೆ ಮಾನವನು ಕಳೆದಿಹನು ॥೧೧೭೩॥

ಮುಂದಿನಾ ಸಮಯದಲಿ ಸೇಡನ್ನು ತೀರಿಪುದು
ನಾವಿಲ್ಲಿ ಕ್ಷಣವೊಂದು ನಿಲ್ಲುವುದು ಸರಿಯಲ್ಲ
ಎನ್ನುತಲಿ ಕೋಪದಲಿ ಶಿಶುಪಾಲ ಮಾಗಧರು
ಹೊರಟಂಟು ತಮ್ಮಯಾ ಪುರಗಳಿಗೆ ತೆರಳಿದರು ॥೧೧೭೪॥

ಆ ಚೈದ್ಯ ಮಾಗಧರ ಭಂಗವನು ಮಾಡಿರುವ
ಘೋರವೀ ಧನುವನ್ನು ಮಣಿಸುತಲಿ ಬಗ್ಗಿಸುತ
ಯಂತ್ರವನು ಭೇದಿಸುವೆ ಎನ್ನುತಲಿ ಕೋಪದಲಿ
ಕಲಿಕರ್ಣ ಬಂದಿಹನು ಬಿಲ್ಲಿನಾ ಬಳಿಯಲ್ಲಿ ॥೧೧೭೫॥

ಆರಿವನು ಭಾನುವಿನ ತೇಜದಲಿ ಹೊಳೆಯುತಿಹ
ಮೂಲೋಕ ವೀರನಾ ಅರ್ಜುನನ ಪರಿಯಲ್ಲಿ
ತೋರುತಿಹ ಈ ಧೀರ ಯಂತ್ರವನು ಭೇದಿಸಲು
ಶಕ್ತನಿಹ ಎನ್ನುತಲಿ ಸಖಿನಿವಹ ನುಡಿದಿಹುದು ॥೧೧೭೬॥

ವೀರನಾ ಕಲಿಕರ್ಣ ಧನುವನ್ನು ಎತ್ತುತಲಿ
ಶರಗಳನು ಅಳವಡಿಸಿ ಗುರಿಯಿಡುತ ತೂಗುತಲಿ
ಹಗ್ಗವನು ಜಗ್ಗುತಲಿ ಝೇಂಕಾರ ಗೈಯುತಲಿ
ಶರಗಳನು ಬಿಟ್ಟಿಹನು ಸಭೆಯೆಲ್ಲ ಬೆರಗಾಗಿ ॥೧೧೭೭॥

ಸಾಸಿವೆಯ ಕಾಳಷ್ಟು ಅಂತರದಿ ಯಂತ್ರವನು
ಸೋಂಕದೆಯೆ ಬಾಣಗಳು ಸಾಗುತಲಿ ಬಿದ್ದಿಹವು
ಕರ್ಣನಾ ತನುವೆಲ್ಲ ಬೆವರಿನಲಿ ನನೆಯುತಲಿ
ತಲೆಯನ್ನು ತಗ್ಗಿಸುತ ಲಜ್ಜೆಯಲಿ ಮರಳಿದನು ॥೧೧೭೮॥

ಜಗದೊಳಗೆ ಅಪ್ರತಿಮ ವೀರರೆಂದೆನಿಸುತಿಹ
ಆ ಚೈದ್ಯ ಮಾಗಧರು ವರಶಲ್ಯ ಕಲಿಕರ್ಣ
ಭಂಗವನು ಪಟ್ಟುದದ ಕಾಣುತಲಿ ಮಿಕ್ಕಿರುವ
ನೃಪರುಗಳು ಇದುವೆಮಗೆ ದುಸ್ಸಾಧ್ಯವಿರುತಿಹುದು ॥೧೧೭೯॥

ಕೈಯನ್ನು ತೋರಿಸುತ ಅಪಲಕ್ಷಣಾಗುವದು
ಉಚಿತಲ್ಲ ಸುಮ್ಮನೇ ಕುಳಿತಿಹುದು ಯೋಗ್ಯವದು
ದ್ರೌಪದಿಯೆ ನಿನಗಿದುವೆ ನಮ್ಮಯಾ ನಮನವಿದು
ಎನ್ನುತಲಿ ಆಶೆಯನು ತೊರೆಯುತಲಿ ಕುಳಿತಿಹರು ॥೧೧೮೦॥

ಸುಮ್ಮನೇ ಕುಳಿತಿಹುದು ಯೋಗ್ಯವದು ಎನ್ನುತಲಿ
ನೃಪನೊಬ್ಬ ಏಳದೇ ಕುಳಿತಿರಲು ಹಲಧರನು
ಬಲರಾಮ ತನ್ನಯಾ ಪೀಠವನು ಇಳಿಯುತಲಿ
ಬಲ್ಲಿನಾ ಬಳಿಯಲ್ಲಿ ನಡೆದಿಹನು ಭರದಲ್ಲಿ ॥೧೧೮೧॥

ಜಗಖ್ಯಾತ ನೃಪರುಗಳು ಮಣ್ಣನ್ನು ಮುಕ್ಕಿದುದ
ಕಾಣುತಲಿ ದುರ್ಯೋಧನಾದಿಗಳು ಅಂಜುತಲಿ
ಏಳದೇ ಇರುತಿರಲು ಹಲಧರನು ಬಲರಾಮ
ಆಸನವನಿಳಿಯುತಲಿ ಸಾಗಿರಲು ಭರದಲ್ಲಿ ॥೧೧೮೨॥

ಸೋದರನು ಶ್ರೀಕೃಷ್ಣ ನೋಡುತಲಿ ತಡೆಯುತಲಿ
ಏನಣ್ಣ ನೀವೆತ್ತ ನಡೆದಿಹಿರಿ ತೀವ್ರದಲಿ
ಅವುದಾ ಕಾರ್ಯವನು ಗೈಯ್ಯಲಿಕೆ ತೆರಳುವಿರಿ
ಎನ್ನುತಲಿ ನುಡಿಯುತಿರೆ ಬಲರಾಮ ನುಡಿದಿಹನು ॥೧೧೮೩॥

ಇಲ್ಲಿಮಗೆ ಬೇರಾವ ಕಾರ್ಯವದು ಇರುತಿಹುದು
ಅತುಳ ಭುಜ ವಿಕ್ರಮನ ಗರ್ವವನು ಭಂಗಿಸಿದ
ಧನುವನ್ನು ಮುರಿಯುತಲಿ ದ್ರೌಪದಿಯ ವರಿಸುವೆನು
ತಡೆಯದಿರು ತಡೆಯದಿರು ಎನ್ನುತಲಿ ನುಡಿದಿಹನು ॥೧೧೮೪॥

ಕೇಳುತಲಿ ಮುರಹರನು ನಗೆಯನ್ನು ಸೂಸುತಲಿ
ಆ ಕುಂತಿದೇವಿಯರು ನಮಗತ್ತೆ ಇರುತಿಹರು
ಅವರ ಆ ಸುತರೆಲ್ಲ ಪಾಂಡವರು ಮೈದುನರು
ಅವರ ಸತಿ ನಮಗಿಹಳು ನಲುಮೆಯಾ ಸೋದರಿಯು ॥೧೧೮೫॥

ಪಾಂಡವರೆ ದ್ರೌಪದಿಯ ವರಿಸುವದು ಖಚಿತವಿದು
ಎಳ್ಳಷ್ಟು ಸಂಶಯವು ಏನಿಲ್ಲ ಎನ್ನುತಿರೆ
ಬೆರಗಿನಲಿ ಮೂಗಿನಲಿ ಬೆರಳಿಟ್ಟು ಬಲರಾಮ
ಮಸ್ತಕ ಕಿರೀಟವನು ತೂಗುತಲಿ ನುಡಿದಿಹನು ॥೧೧೮೬॥

ಅರಗಿನಾ ಅರಮನೆಯ ಉರಿಯೊಳಗೆ ಪಾಂಡವರು
ಸತ್ತಿಹರು ಎನ್ನುತಲಿ ಜಗವೆಲ್ಲ ಅರಿತಿಹುದು
ಪಾರಾಗಿ ಹೋಗುತಲಿ ಅವರೆಂತು ಬದುಕಿಹರು
ಎಂಬುದನ ನಾಪರಿಯೆವೆನ್ನುತಲಿ ನುಡಿದಿಹನು ॥೧೧೮೭॥

ನಿನ್ನಯಾ ನುಡಿಗಳನು ನಂಬುವದು ಅತಿಕಷ್ಟ
ಬಾಲ್ಯದಾ ದಿನದಿಂದ ಇಂದಿನಾ ಪರ್ಯಂತ
ನೀನೊಂದು ನಿಜವಾದ ನುಡಿಯನ್ನು ನುಡಿದಿಲ್ಲ
ನಿನ್ನನ್ನು ನಂಬುವದು ದುಸ್ಸಾಧ್ಯವೆಂದಿಹನು ॥೧೧೮೮॥

ಬಲರಾಮ ಈ ಪರಿಯೆ ನಸುನಗುತ ನುಡಿಯುತಿರೆ
ಸೋದರನೆ ಪಾಂಡವರು ಜಗದೊಳಗೆ ಜೀವಿಪರು
ಪಾಂಡವರೆ ದ್ರೌಪದಿಯ ಗಂಡಂದಿರೆಂಬುವದು
ಆ ಬ್ರಹ್ಮ ಬರೆದಿರುವ ವಿಧಿಲಿಖಿತ ಇರುತಿಹುದು ॥೧೧೮೯॥

ಯಂತ್ರವನು ಭೇದಿಸುತ ಪಾಂಡವರು ದ್ರೌಪದಿಯ
ವರಿಸುವರು ಖಚಿತದಲಿ ಸತ್ಯವಿದು ನಂಬುವುದು
ಇದನಾರು ತಪ್ಪಿಸಲು ಆಗದದು ಎಂದಿಗೂ
ಈಗಲೇ ಪಾಂಡವರ ತೋರಿಪೆನು ಎಂದಿಹನು ॥೧೧೯೦॥

ಕೇಳುತಲಿ ಬಲರಾಮ ಆಶ್ಚರ್ಯಗೊಳ್ಳುತಲಿ
ಪಾಂಡವರು ಜೀವಂತ ಇರುತಿಹುದು ಕೌತುಕವು
ಪಾಂಡವರು ದ್ರೌಪದಿಯ ವರಿಸಿದೊಡೆ ಸಂತಸವು
ನಮ್ಮಯಾ ಅಭ್ಯುದಯ ಎನ್ನುತಲಿ ಕುಳಿತಿಹನು ॥೧೧೯೧॥

ಬಹುಬಲರು ವಿಕ್ರಮರು ಅತಿರಥರು ಧರಣಿಪರು
ಯಂತ್ರವನು ಭೇದಿಸಲು ಅಸಮರ್ಥರಾಗಿಹರು
ಪಣವಿಟ್ಟು ದ್ರುಪದನೃಪ ಕೆಟ್ಟಿಹನು ಎನ್ನುತಲಿ
ಸಖಿವೃಂದ ಚಿಂತೆಯಾ ಕಡಲಿನಲಿ ಮುಳುಗಿದುದು ॥೧೧೯೨॥

ನೆರೆದಿರುವ ನೃಪರೊಳಗೆ ಒಬ್ಬನೂ ಯಂತ್ರವನು
ಭೇದಿಸದೆ ಇರುತಿರಲು ದ್ರುಪದನೃಪ ದುಗುಡದಲಿ
ದ್ರೌಪದಿಗೆ ಜಗದೊಳಗೆ ಗಂಡನೇ ಇಲ್ಲವೇ
ಎನ್ನುತಲಿ ಮನದೊಳಗೆ ಮಿಡುಕಿದನು ಕಳವಳದಿ ॥೧೧೯೩॥

ಛಪ್ಪನ್ನ ದೇಶಗಳ ಭೂಪರೊಳು ಒಬ್ಬನೂ
ತಂಗಿಯನು ವರಿಸಲಿಕೆ ಯೋಗ್ಯವರನಿಲ್ಲವೇ
ಎನ್ನುತಲಿ ಚಿಂತಿಸುತ ದೃಷ್ಟದ್ಯುಮ್ನ ಮುಂದೆಡೆಯ
ಕುಳಿತಿರುವ ವಿಪ್ರರನು ನೋಡುತಲಿ ನುಡಿದಿಹನು ॥೧೧೯೪॥

ನೃಪರುಗಳು ಜೊಳ್ಳಾದ ಕಾಳುಗಳು ಆಗಿಹರು
ಅವರಲ್ಲಿ ಹುರುಳಿಲ್ಲ ಸತ್ವಬಲ ಎನಿತಿಲ್ಲ
ದ್ರೌಪದಿಯ ವರಿಸಲಿಕೆ ರೂಪದಲಿ ಶೌರ್ಯದಲಿ
ಅಸಮರ್ಥರಾಗಿಹರು ಕಡುಬಡವರಾಗಿಹರು ॥೧೯೫॥

ಹೇ ವಿಪ್ರ ಶ್ರೇಷ್ಠರೇ ಭೂಸುರರ ವೃಂದವೆ
ನಿಮ್ಮೊಳಗೆ ಶಕ್ತನಿಹ ಭುಜಬಲನು ಇರ್ದೊಡೆಯು
ಏಳುತಲಿ ಯಂತ್ರವನು ಭೇದಿಸಿದೊಡಾತಂಗೆ
ದ್ರೌಪದಿಯನೀಯುವೆನು ಎನ್ನುತಲಿ ಸಾರಿದನು ॥೧೯೬॥

ಕೇಳುತಲಿ ವಿಪ್ರರುಗಳೆಲ್ಲರೂ ಬೆರಗಾಗಿ
ತಮತಮಗೆ ಗುಜಗುಜಿಸಿ ವಿಧವಿಧದಿ ನುಡಿದಿಹರು
ನಾವೆತ್ತ ಧನುವೆತ್ತ ಪಣವೆತ್ತ ವಧುವೆತ್ತ
ಹಾರುವರಿಗೆತ್ತಣದ ಸಂಬಂಧವೆಂದಿಹರು ॥೧೯೭॥

ವಿಪ್ರರಿಗೆ ಕ್ಷತ್ರಿಯರಿಗೆಲ್ಲಿಯದು ನಂಟುತನ
ಧರ್ಮಕ್ಕೆ ಶಾಸ್ತ್ರಕ್ಕೆ ಸಮ್ಮತವು ಇಲ್ಲವಿದು
ಈ ಪರಿಯ ಅನುಚಿತದ ಕಾರ್ಯವದು ಸಲ್ಲದದು
ವಿಪ್ರರಾ ಧರ್ಮಕ್ಕೆ ಅಪಕೀರ್ತಿ ಸೋಂಕುವುದು ॥೧೯೮॥

ವೇದೋಪನಿಷದುಗಳ ಶಾಸ್ತ್ರಗಳ ತತ್ವಗಳ
ಅಧ್ಯಯನ ಮಾಡುತಲಿ ಜಪತಪವಗೈಯುತಲಿ
ಶಾಂತಿಯಲಿ ಕಾಲವನು ಕಳೆಯುತಿಹ ವಿಪ್ರರಿಗೆ
ಬಡವರಿಗೆ ರಾಜವಧು ತೊಡಕೇಕೆ ಎಂದಿಹರು ॥೧೯೯॥

ಎಮ್ಮಯಾ ಶಕ್ತಿಯನು ಶೌರ್ಯವನು ನೋಡುವೊಡೆ
ವೇದದಲಿ ಶಾಸ್ತ್ರದಲಿ ಪೌರಾಣ ತರ್ಕದಲಿ
ಉಪನಿಷದು ಸ್ಮೃತಿಗಳಲಿ ತತ್ವದ ರಹಸ್ಯದಲಿ
ಎಮ್ಮಯಾ ಕೌಶಲವ ಪರಿಣತೆಯ ನೋಡುವುದು ॥೨೦೦॥

ವ್ಯಾಕರಣ ಛಂದಸ್ಸಲಂಕಾರ ಸೊಗಸಿನಲಿ
ನವರಸದ ಕಾವ್ಯಗಳ ರಸಭರಿತ ರಚನೆಯಲಿ
ವೇದಾಂತ ತತ್ವಗಳ ವಿಸ್ತಾರದ ಪ್ರವಚನದಿ
ನಮ್ಮಯಾ ಜಾಣ್ಮೆಯನು ನೋಡುವುದು ಎಂದಿಹರು ॥೨೦೧॥

ಇಲ್ಲದಿರೆ ಹೂರಣದ ಕರಿಗಡುಬು ಹೋಳಿಗೆಯು
ಸಕ್ಕರೆಯ ಸವಿಯಾದ ಮಂಡಿಗೆಯ ಫಾರಿಗೆಯ
ನೂರಾರು ಉಂಡೆಗಳ ತಿನ್ನುವಾ ಸಾಹಸದಿ
ಎಮ್ಮಯಾ ಶೌರ್ಯವನು ತೋರಿಪೆವು ಎಂದಿಹರು ॥೨೦೨॥

ಶ್ರೀಖಂಡ ಬಾಸುಂದಿ ಕೇಸರಿಯ ಭಾತಿನಲಿ
ಕೋಡುಬಳೆ ಚಕ್ಕುಲಿಯ ಬುರುಬುರಿಯ ವಡೆಗಳಲಿ
ಪಂಚಪಕ್ವಾನ್ನಗಳ ಸವಿರಸದ ಊಟದಲಿ
ನಮ್ಮಯಾ ಶಕ್ತಿಯನು ತೋರಿಪೆವು ಎಂದಿಹರು ॥೨೦೩॥

ತುಪ್ಪವನು ದೊನ್ನೆಯಲಿ ಮೊಗೆಮೊಗೆದು ಕುಡಿಯುವುದು
ಬಾದಾಮಿ ಹಾಲನ್ನು ಕೊಡಕೊಡವ ಕುಡಿಯುವುದು
ಶೇವಿಗೆಯ ಪಾಯಸವ ಸರಭರನೆ ಸುರಿಯುವುದು
ಇವುಗಳಲಿ ಎಮ್ಮಯಾ ಸಾಹಸವ ನೋಡುವುದು ॥೨೦೪॥

ಕಟಕಟನೆ ಚಕ್ಕುಲಿಯ ಕಡಿಯುತಲಿ ತಿನ್ನುವುದು
ಕರಕರನೆ ಹಪ್ಪಳವ ಸಂಡಿಗೆಯ ಕಡಿಯುವುದು
ಸರಸರನೆ ಸಪ್ಪಳದಿ ಸಾರನ್ನು ಕುಡಿಯುವುದು
ಇವುಗಳಲಿ ಎಮ್ಮಯಾ ವಿಕ್ರಮವ ತೋರಿಪೆವು ॥೨೦೫॥

## ಅರ್ಜುನನು ಮತ್ಸ್ಯ ಯಂತ್ರವನ್ನು ಭೇದಿಸುವುದು

ಈ ಪರಿಯ ದ್ವಿಜನಿಕರ ಗುಜುಗುಜಿಸಿ ನುಡಿಯುತಿರೆ
ಸಭೆಯೊಳಗೆ ಮಧ್ಯದಲಿ ಎಸೆಯುತಿಹ ಧರ್ಮಜನು
ಇನ್ನು ತಡ ಮಾಡುವುದು ಸಲ್ಲದದು ಎನ್ನುತಲಿ
ಅರ್ಜುನಗೆ ಕೈಸನ್ನೆ ಮಾಡುತಲಿ ತಿಳಿಸಿದನು ॥೨೦೬॥

ಬಿಳಿಧೋತ್ರ ಉಟ್ಟಿರುವ ಕಚ್ಚೆಯನು ಬಿಗಿದಿರುವ
ಜನಿವಾರ ತೊಟ್ಟಿರುವ ಭಸ್ಮವನು ಇಟ್ಟಿರುವ
ಗಂಧವನು ಲೇಪಿಸಿದ ತನುವಿಂದ ಶೋಭಿಸುವ
ಫಲುಗುಣನು ಎದ್ದಿಹನು ವಿಪ್ರರಾ ಮಧ್ಯದಲಿ ॥೨೦೭॥

ವಿಪ್ರವರ ಏನಿದುವು ಏತಕ್ಕೆ ಎದ್ದಿಹಿರಿ
ಇದು ಧನುವು ಏನೆಂದು ಬಗೆದಿಹಿರಿ ಮನದೊಳಗೆ
ಮಾನಿನಿಯ ಆಸೆಯಾ ಮಂಡಿಗೆಯ ತಿನ್ನಲಿಕೆ
ಮನದೊಳಗೆ ಬಯಸಿಹರೆ ಬರಿಬಯಲು ಭ್ರಮೆಯೊಳಗೆ ॥೨೦೮॥

ನೆಲದಲ್ಲಿ ಹಾರದಾ ಬೆಕ್ಕದುವೆ ಮುಗಿಲಿಂಗೆ
ಹಾರಲಿಕೆ ಯತ್ನವನು ಮಾಡಿದಾ ಪರಿಯಲ್ಲಿ
ನಿಮ್ಮಯಾ ಉತ್ಸಾಹ ಸಾಹಸವು ಮೂರ್ಖತನ
ಎನಿಸುವುದು ಎನ್ನುತಲಿ ದ್ವಿಜರೆಲ್ಲ ನುಡಿದಿಹರು ॥೨೦೯॥

ಕನ್ಯೆಯನು ಬಯಸುವೊಡೆ ನಮ್ಮಯಾ ವಿದ್ಯೆಯಲಿ
ವೇದದಲಿ ಶಾಸ್ತ್ರದಲಿ ಕಾವ್ಯದಲಿ ಪ್ರವಚನದಿ
ನಿಮ್ಮಯಾ ಕೌಶಲವ ಜಾಣ್ಮೆಯನು ತೋರುವುದು
ನಿಮ್ಮದೀ ಘನಯತ್ನ ಹುಚ್ಚುತನ ಎಂದಿಹರು ॥೨೧೦॥

ಕುಸುಮವನು ಗಂಧವನು ಸಮಿಧೆಗಳ ಧರ್ಭೆಗಳ
ಎತ್ತುವಾಕರಗಳಿವು ಧನುವನ್ನು ಎತ್ತುವವೆ
ಕೃಷ್ಣಾಜಿನೆನ್ನುತಲಿ ಸಾಲಿಗ್ರಾಮ ಶಿಲೆಯೆಂದು
ಧನುವನ್ನು ತಿಳಿದಿಹೆಯಾ ಎನ್ನುತಲಿ ನುಡಿದಿಹರು ॥೧೨೧೧॥

ಇದು ಧರ್ಮಶಾಸ್ತ್ರಕ್ಕೆ ಬಾಹಿರವು ಆಗಿಹುದು
ಹಾರುವನು ಕ್ಷತ್ರಿಯರ ಕನ್ನೆಯನು ವರಿಸುವುದು
ವಿಪ್ರರಾ ಕುಲಕಿದುವೆ ಅಪಕೀರ್ತಿಕರವಿಹುದು
ಪಾಪವದು ಸೋಂಕುವುದು ಎನ್ನುತಲಿ ನುಡಿದಿಹರು ॥೧೨೧೨॥

ಕೆಲ ಕೆಲರು ಹೋಗದಿರು ಧನುವನ್ನು ಮುಟ್ಟದಿರು
ವಿಪ್ರರಿಗೆ ಅಪಹಾಸ್ಯವಾಗುವುದು ಎಂದಿಹರು
ಕೆಲಕೆಲರು ಆ ದ್ರೋಣ ಭಾರ್ಗವನು ಬ್ರಾಹ್ಮಣರು
ಬಿಲ್ಲಿನಾ ವಿದ್ಯೆಯಲಿ ಅಪ್ರತಿಮರೆನಿಸಿಹರು ॥೧೨೧೩॥

ಅವರಂತೆ ಈ ವಿಪ್ರ ಬಲ್ಲಿದನು ಶ್ರೇಷ್ಠನಿಹ
ಮೊಗದಲ್ಲಿ ಕ್ಷತ್ರಿಯರ ತೇಜವದು ಚಿಮ್ಮುತಿದೆ
ಅಂಗದಲಿ ಸತ್ವವದು ತುಂಬುತಲಿ ತುಳುಕುತಿದೆ
ಯಂತ್ರವನು ಭೇದಿಸುತ ವಿಜಯನೆಂದೆನಿಸುವನು ॥೧೨೧೪॥

ಎನ್ನುತಲಿ ವಿಪ್ರಕುಲ ನುಡಿಯುತಿರೆ ನೃಪರುಗಳು
ಚಪ್ಪಾಳೆ ತಟ್ಟುತಲಿ ಗಹಗಹಿಸಿ ನಗೆ ಸೂಸಿ
ಮದುವೆಯಾ ಹುಚ್ಚಿನಲಿ ಹಾರುವನ ತಲೆಯದುವೆ
ಕೆಟ್ಟಿಹುದೊ ಎನ್ನುತಲಿ ಅಪಹಾಸ್ಯಗೈದಿಹರು ॥೧೨೧೫॥

ಶುಭ್ರದಾ ಧೋತ್ರದಲಿ ಯಜ್ಞೋಪವೀತದಲಿ
ಲೇಪಿಸಿದ ಭಸ್ಮದಲಿ ತಿಲಕದಲಿ ಗಂಧದಲಿ
ಬೆರಳುಗಳ ಧರ್ಭೆಯಲಿ ಆ ವಿಪ್ರ ಮೆಲ್ಲನೆಯೆ
ನಡೆದಿರಲು ನೃಪರೆಲ್ಲ ನಕ್ಕಿಹರು ಸಭೆಯೊಳಗೆ ॥೧೨೧೬॥

ಬಿಲ್ಲನ್ನು ಎತ್ತುವುದು ಬೆಲ್ಲವದು ಇರುತಿಹುದೊ
ಅಲ್ಲದೊಡೆ ಗಂಧವನು ತೇಯುವಾ ಕೊರಡಿಹುದೊ
ಕುಶದರ್ಭೆ ಸಮಿಧೆಯೋ ತುಳಸಿಯೋ ಎನ್ನುತಲಿ
ಧನುವನ್ನು ತಿಳಿದಿಹನೆ ಹಾರುವನು ಎಂದಿಹರು ॥೧೨೧೭॥

ಅಸ್ತ್ರದಲಿ ಶಾಸ್ತ್ರದಲಿ ಕ್ಷತ್ರಿಯರು ಪರಿಣತರು
ವೇದದಲಿ ಶಾಸ್ತ್ರದಲಿ ಭೂಸುರರು ಕೌಶಲರು
ವಿಪ್ರನೀ ಧನುವನ್ನು ಎತ್ತುವುದು ಅಸದಳವು
ಎನ್ನುತಲಿ ವಿಧವಿಧದಿ ನೃಪರುಗಳು ನುಡಿದಿಹರು ॥೧೨೧೮॥

ನೋಡಿತ್ತ ದ್ರೌಪದಿಯೆ ಬಿಲ್ಲನ್ನು ಎತ್ತುತಲಿ
ನಿನ್ನನ್ನು ವರಿಸಲಿಕೆ ಹಾರುವನು ಬಂದಿಹನು
ಹಾರುವನು ವೈದಿಕನು ನಿನ್ನನ್ನು ವರಿಸುವನು
ಹಾರುವತಿ ನೀನೆಂದು ಸಖಿವೃಂದ ನುಡಿದಿಹುದು ॥೧೨೧೯॥

ನಿನ್ನನ್ನು ಬಯಸುತಲಿ ದೇವೇಂದ್ರ ಧರೆಗಿಳಿದು
ಬಂದಿಹನೊ ಎಂಬಂತೆ ಈ ವಿಪ್ರ ತೋರುವನು
ಕ್ಷಾತ್ರದಾ ತೇಜದಲಿ ಶೌರ್ಯದಲಿ ಹೊಳೆಯುತಿಹ
ಈ ವಿಪ್ರ ಅನುವರನು ನಿನಗೆಂದು ನುಡಿದಿಹರು ॥೧೨೨೦॥

ಯಂತ್ರವನು ಭೇದಿಸಲಿ ಇಲ್ಲದಿರೆ ಇಲ್ಲವದು
ದ್ರೌಪದಿಗೆ ಈತನೇ ಯೋಗ್ಯವರನೆನಿಸುವನು
ನಮ್ಮರಸಿ ವರಿಸುತಲಿ ಹಾರುವತಿಯಾಗುವಳು
ಎನ್ನುತಲಿ ಸರಸದಲಿ ಸಖಿವೃಂದ ನುಡಿದಿಹುದು ॥೧೨೨೧॥

ಮನ್ಮಥನ ಅಪ್ರತಿಮ ಸೌಂದರ್ಯ ಸೊಬಗಿನಲಿ
ಕಣ್ಮನವ ಸೆಳೆಯುತಿಹ ರೂಪದಲಿ ಸೊಗಯಿಸುವ
ಕ್ಷಾತ್ರಬಲ ತೇಜದಲಿ ಹೊಳೆಯುತಿಹ ಅರ್ಜುನನ
ನೋಡುತಲಿ ದ್ರೌಪದಿಯ ಚಿತ್ತವದು ಚಲಿಸಿದುದು ॥೧೨೨೨॥

ಮದನನಾ ಬಾಣದಲಿ ಮನಮೃಗವು ಸಿಲುಕುತಲಿ
ವದನವದು ಕೆಂಪೇರಿ ತನುಪುಳಕವಾಗುತಲಿ
ರೋಮಗಳು ನಿಮಿರುತಲಿ ಫಲುಗುಣನ ಸೌಂದರ್ಯ
ಸಾರವನು ಹೀರುತಲಿ ಕಣ್ಣನಲಿ ಕುಡಿದಿಹಳು ॥೧೨೨೩॥

ಎನ್ನಯಾ ಮನವನ್ನು ಅಪಹರಿಪ ಈ ದ್ವಿಜನು
ದ್ವಿಜನಲ್ಲ ದಿವಿಜನಿಹ ದಿವಿಜಪತಿ ಇರುತಿಹನು
ಇಲ್ಲದಿರೆ ದಿವಿಜಪತಿ ನಂದನನೊ ಅರ್ಜುನನೊ
ಎನ್ನುತಲಿ ಮನದೊಳಗೆ ಸಂಶಯವ ಗೊಂಡಿಹಳು ॥೧೨೨೪॥

ನೋಡಲ್ಲಿ ಬಲರಾಮ ಮೇಘಗಳ ಬಗಿಯುತಲಿ
ತೊಳಗುತಲಿ ಬರುತಲಿಹ ರವಿಯಂತೆ ಹೊಳೆಯುತಲಿ
ವಿಪ್ರರಾ ವೇಷದಲಿ ಅರ್ಜುನನು ಬರುತಿಹನು
ಎನ್ನುತಲಿ ಮುರರಿಪುವು ಹಲಧರಗೆ ನುಡಿದಿಹನು ॥೧೨೨೫॥

ಆ ಕುಂತಿ ಧರ್ಮಜನು ವಾಯುಜನು ಮಾದ್ರಿಜರು
ವಿಪ್ರರಾ ಮಧ್ಯದಲಿ ಸಭೆಯೊಳಗೆ ಕುಳಿತಿಹರು
ಈಗಳೆಯು ಎನ್ನಯಾ ಮಾತನ್ನು ನಂಬುವುದು
ಎನ್ನುತಲಿ ಶ್ರೀಕೃಷ್ಣ ನುಡಿದಿಹನು ನಸುನಗುತ ॥೧೨೨೬॥

ಕೇಳುತಲಿ ಬಲರಾಮ ಆಶ್ಚರ್ಯಗೊಳ್ಳುತಲಿ
ಈ ವಿಷಯ ನಿನಗೆಂತು ತಿಳಿದಿಹುದು ಅಚ್ಚರಿಯು
ಅರಗಿನಾ ಮನೆಯೊಳಗೆ ಪಾಂಡವರು ಪ್ರಾಣಗಳ
ನೀಗಿದರು ಎನ್ನುತಲಿ ಜಗವೆಲ್ಲ ನಂಬಿಹುದು ॥೧೨೨೭॥

ಪಾಂಡವರು ಪಾರಾದ ಬಗೆ ಇದುವೆ ಕೌತುಕವು
ನಿನ್ನಯಾ ಮಹಿಮೆಯನು ಮಾಯೆಯ ಆಟವನು
ಅದ್ಭುತದ ಲೀಲೆಯನು ನಾವೆಂತು ಅರಿಯುವೆವು
ಎನ್ನುತಲಿ ಹಲಧರನು ನಸುನಗುತ ನುಡಿದಿಹನು ॥೧೨೨೮॥

ನೆರೆದಿರುವ ನೃಪನಿಕರ ದ್ವಿಜವೃಂದ ಸಖಿವೃಂದ
ವಿವಿಧಪರಿ ಕಟುನುಡಿಯ ಅಪಹಾಸ್ಯ ನುಡಿಗಳನು
ಮತ್ತೆ ಆ ಪ್ರಶಂಸೆಯಾ ನುಡಿಗಳನು ಕೇಳುತಲಿ
ಮತ್ತ ಗಜಗಾಂಭೀರ್ಯ ಗಮನದಲಿ ನಡೆಯುತಲಿ ॥೧೨೨೯॥

ಬಿಲ್ಲಿನಾ ಬಳಿಬಂದು ಅರ್ಜುನನು ಎದುರಿನಲಿ
ಕುಳಿತಿರುವ ಆ ಭೀಷ್ಮ ದ್ರೋಣರಿಗೆ ಮನದೊಳಗೆ
ನಮಿಸುತಲಿ ಕೃಷ್ಣನನು ನಯನದಲಿ ವಂದಿಸುತ
ಗಣಪತಿಗೆ ಸುರಪತಿಗೆ ಸೂರ್ಯನಿಗೆ ನಮಿಸಿದನು ॥೧೨೩೦॥

ಧನುವಿನಾ ಸುತ್ತಲೂ ಪ್ರದಕ್ಷಿಣೆಯ ಗೈಯ್ಯುತಲಿ
ಮೂಲದಲಿ ಕಮಲಜನ ಮಧ್ಯದಲಿ ವಿಷ್ಣುವನು
ತುದಿಯಲ್ಲಿ ತ್ರಿಪುರಾರಿ ದೇವರಾವ್ಹಾನಿಸುತ
ಧನಂಜಯಗೆ ಭಾವದಲಿ ಶಿರಬಾಗಿ ನಮಿಸಿದನು ॥೧೨೩೧॥

ಬಿಲ್ಲಿದುವೆ ಬಲ್ಲಿದರ ಜಗಖ್ಯಾತ ವಿಕ್ರಮರ
ನೃಪರುಗಳ ಗರ್ವವನು ಭಂಗಿಸಿದೆ ಎನ್ನುತಲಿ
ಕಬ್ಬಿನಾ ಗಣೆಯನ್ನು ಎತ್ತುವಾ ಪರಿಯಲ್ಲಿ
ಧನುವನ್ನು ಎತ್ತುತಲಿ ಝೇಂಕಾರ ಗೈಯ್ಯುತಲಿ ॥೧೨೩೨॥

ಶರವೈದು ಅಳವಡಿಸಿ ಹಗ್ಗವನು ಜಗ್ಗುತಲಿ
ಕಿವಿವರೆಗೆ ಎಳೆಯುತಲಿ ಗುರಿಯಿಡುತ ಬಿಡುತಲಿರೆ
ಕಣ್ಣಿಂಗೆ ಕಾಣದಾ ಪರಿಯಲ್ಲಿ ಸಾಗುತಲಿ
ಮತ್ಸ್ಯವನು ಭೇದಿಸುತ ಯಂತ್ರವನು ಕೆಡಹಿದವು ॥೧೨೩೩॥

**ದ್ರೌಪದಿಯು ಅರ್ಜುನನ ಕೊರಳಲ್ಲಿ ಮಾಲೆಯನ್ನು ಹಾಕುವುದು**

ಚಂದ್ರಮುಖಿ ದ್ರೌಪದಿಯ ವದನವದು ಹೊಳೆಯುತಲಿ
ಪೂರ್ಣಿಮೆಯ ಚಂದ್ರಮನ ತೆರದಲ್ಲಿ ತೊಳಗುತಿರೆ
ಆನಂದ ಸಾಗರವು ಉಕ್ಕುತಲಿ ನಸುನಗುತ
ಕರದೊಳಗೆ ಮಾಲೆಯನು ಹಿಡಿಯುತಲಿ ನಡೆದಿಹಳು ॥೧೨೩೪॥

ದೂರಸರಿ ಮನ್ಮಥನ ಮದ್ದಾನೆ ಬರುತಲಿದೆ
ಹರಿಸುವ ಕ್ರೂರಲುಗು ಮಸೆಯುತಲಿ ಬರುತಲಿದೆ
ಕಾಮನಾ ಹರಿತ ಶರ ಭರದಲ್ಲಿ ಬರುತಲಿದೆ
ಎಂಬಂತೆ ಬೆಳಗುತಲಿ ಪಾಂಚಾಲಿ ಬಂದಿಹಳು ॥೧೨೩೫॥

ಕಮಲದೆಳಕಾಂತಿಯಲಿ ಶೋಭಿಸುವ ವದನದಲಿ
ಬಾಲರವಿ ಕೆಂಪಿನಲಿ ಕೆಂಪೇರ್ದ ಕೆನ್ನೆಯಲಿ
ಫಲಗುಣನ ಬಳಿಬರಲು ತನುಪುಳಕವಾಗುತಲಿ
ಮೈಯೆಲ್ಲ ಬೆವರುತಲಿ ಬೆವರ್ಮುತ್ತು ಸೂಸಿದವು ॥೧೨೩೬॥

ಲಜ್ಜೆಯಲಿ ನಸುನಾಚಿ ಶಿರವನ್ನು ಬಾಗಿಸುತ
ಕಡೆಗಣ್ಣ ನೋಟದಲಿ ಕಿರುನಗೆಯ ಸೂಸುತಲಿ
ಅರ್ಜುನನ ಕೊರಳೊಳಗೆ ಮಾಲೆಯನು ಹಾಕುತಿರೆ
ಜಯಜಯತು ಎನ್ನುತಲಿ ಜಯಕಾರಗೈದಿಹರು ॥೧೨೩೭॥

ನಭದೊಳಗೆ ನೆರೆದಿರ್ದ ಸುರವೃಂದ ನೋಡುತಲಿ
ಹರಸುತಲಿ ಪುಷ್ಪಗಳ ವೃಷ್ಟಿಯನು ಗೈದಿಹರು
ಮಂಗಳದ ವಾದ್ಯಗಳು ನೌಬತ್ತು ಘಂಟೆಗಳು
ಮೊಳಗಿದವು ದೆಸೆದೆಸೆಗೆ ನಿಸ್ವನವ ಪಸರಿಸುತ ॥೧೨೩೮॥

ಹರುಷದಾ ಸಾಗರವು ಮೇರೆಯನು ಮೀರುತಲಿ
ಜಗದೊಳಗೆ ವಿಪ್ರರಾ ಕೀರ್ತಿಯದು ಮೆರೆಯುತಿದೆ
ಎನ್ನುತಲಿ ಭೂಸುರರು ಹರಿದಾಡಿ ಕುಣಿಯುತಲಿ
ಸೆಲ್ಲೆಗಳ ಪಂಚೆಗಳ ನಭದೊಳಗೆ ತೂರಿದರು ॥೧೨೩೯॥

ಸಭೆಯೊಳಗೆ ನೃಪರುಗಳು ದ್ರುಪದನೃಪ ಮೋಸದಲಿ
ಮೂಟದಾ ಧನುವನ್ನು ಇರಿಸುತಲಿ ಎಮ್ಮನ್ನು
ಅಪಮಾನಗೊಳಿಸಿಹನು ಈಗಲೇ ದ್ರುಪದನನು
ಮುತ್ತುತಲಿ ಸೇಡನ್ನು ತೀರಿಪುದು ಎಂದಿಹರು ॥೧೨೪೦॥

ದುರ್ಯೋಧನಾದಿಗಳು ಶಕುನಿ ಕರ್ಣಾದಿಗಳು
ತಮ್ಮಯಾ ಮಾನವನು ಕಳೆದಿಹನು ಎನ್ನುತಲಿ
ಮನದೊಳಗೆ ಕತಕತನೆ ಕುದಿಯುತಲಿ ಕೋಪದಲಿ
ದ್ರುಪದನನು ನಾಶವನು ಮಾಡುವುದು ಎನ್ನುತಲಿ ॥೧೨೪೧॥

ಕಳಕಳದ ರವವನ್ನು ಮಾಡುತಲಿ ಅರ್ಭಟಿಸೆ
ದೃಪದನೃಪ ನೋಡುತಲಿ ದ್ರೌಪದಿಯ ಅರ್ಜುನನ
ರಥದೊಳಗೆ ಕುಳ್ಳಿರಿಸಿ ಸಂದಣಿಯ ದಾಂಟುತಲಿ
ಸಾಗುತಲಿ ಅರಮನೆಗೆ ತಂದಿಹನು ಭರದಲ್ಲಿ ॥೧೨೪೨॥

ಧರಣಿಪರು ಖಡ್ಗಗಳ ಹಿರಿಯುತಲಿ ಝಳಪಿಸುತ
ಬೊಬ್ಬಿರಿದು ಹಾರಾಟ ಚೀರಾಟಗೈಯ್ಯುತಿರೆ
ವಿಪ್ರರುಗಳೆಲ್ಲರೂ ದಿಕ್ಕೆಟ್ಟು ಓಡಿದರು
ಪಾಂಡವರು ಕುಂಬಾರ ಭವನವನು ಹೊಕ್ಕಿಹರು ॥೧೨೪೩॥

ಅಗಣಿತದ ಸೈನ್ಯದಲಿ ಕುರುಪತಿಯು ಕಲಿಕರ್ಣ
ಸಹಿತದಲಿ ಸಾಗುತಲಿ ದ್ರುಪದನಾ ಸೈನ್ಯವನು
ನಾಶವನು ಮಾಡುತಲಿ ಕೋಟೆಗಳ ಕೊತ್ತಳವ
ಕೊಳ್ಳುತಲಿ ಪಾಂಚಾಲ ಪಟ್ಟಣವ ಮುತ್ತಿದರು ॥೧೨೪೪॥

ರಣಕಹಳೆ ವಾದ್ಯಗಳ ರವವನ್ನು ಕೇಳುತಲಿ
ದ್ರುಪದನೃಪ ನುಡಿದಿಹನು ಏಳುವುದು ಮದುಮಗನೆ
ಮದುವೆಯಾ ಮನೆಗವರು ಬೀಯಗರು ಬಂದಿಹರು
ಬಾಣಗಳ ಭೋಜನದಿ ಉಪಚರಿಸು ಎಂದಿಹನು ॥೧೨೪೫॥

ಕೇಳುತಲಿ ರಣರವವ ಫಲುಗುಣನು ಕೋಪದಲಿ
ಶರಧನುವ ಕೊಳ್ಳುತಲಿ ಪ್ರಳಯದಾ ಮೇಘಗಳು
ಆನೆಯಾ ಸೊಂಡಿಲಿನ ಗಾತ್ರದಾ ಮಳೆಯನ್ನು
ಸುರಿವಂತೆ ಬಾಣಗಳ ಮಳೆಯನ್ನು ಸುರಿದಿಹನು ॥೧೨೪೬॥

ಆ ಕಾಲಭೈರವನೊ ಆ ಕಾಲ ರುದ್ರನೋ
ಮೃತ್ಯುವೇ ನರರೂಪ ಧರಿಸುತಲಿ ಬಂದಿಹನೊ
ಎಂಬಂತೆ ಅಗಣಿತದ ಸೈನಿಕರ ಶಿರಗಳನು
ತರಿಯುತಲಿ ಧರಣಿಯಲಿ ಉರುಳಿಸಿದ ಭರದಲ್ಲಿ ॥೧೨೪೭॥

ಕಲಿಕರ್ಣ ಖಾತಿಯಲಿ ಎದುರಿನಲಿ ಐತಂದು
ಬಾಣಗಳ ಬಿಡುತಲಿರೆ ಫಲುಗುಣನು ಕ್ರೋಧದಲಿ
ರಥವನ್ನು ಪುಡಿಗೈದು ರಥಿಕನನು ಇರಿಯುತಲಿ
ಕರ್ಣನಾ ಧನುವನ್ನು ಕತ್ತರಿಸಿ ಕೆಡುಹಿದನು ॥೧೨೪೮॥

ಇತ್ತಲಾ ಕಲಿಭೀಮ ಬೀದಿಬದಿ ಬೆಳೆದಿರ್ದ
ಹೆಮ್ಮರನ ಕೀಳುತಲಿ ಸೈನ್ಯದಲಿ ನುಗ್ಗುತಲಿ
ಹುಳುಗಳನು ಬಡಿದಂತೆ ರಿಪುಗಳನು ಬಡಿಯುತಲಿ
ಜೋಳದಾ ದಂಟುಗಳ ಪರಿಯಲ್ಲಿ ಉರುಳಿಸಿದ ॥೧೨೪೯॥

ಮತ್ಸ್ಯದಾ ಯಂತ್ರವನು ಭೇದಿಸಿದ ವೀರನನ
ನೋಡುತಲಿ ಯುದ್ಧವನು ಮಾಡಲಿಕೆ ಬಂದಿರುವ
ದುರುಳರೀ ಕುರುಡರನು ನೃಪರುಗಳನಿರಿಯುವೆನು
ಎನ್ನುತಲಿ ಶಿರಗಳನು ಬಡಿಯುತಲಿ ಕೆಡುಹಿದನು ॥೧೨೫೦॥

ಶಲ್ಯನೃಪ ಕೋಪದಲಿ ಅಡ್ಡೈಸಿ ಬರುತಿರಲು
ವರಭೀಮ ರೋಷದಲಿ ಹೆಮ್ಮರವನೆತ್ತುತಲಿ
ಅರ್ಭಟಿಸಿ ಬರುತಿರಲು ಪ್ರಾಣದಾ ಭಯದಲ್ಲಿ
ಶಲ್ಯನೃಪ ಸರಿದಿಹನು ಸೈನ್ಯದಲಿ ಮರೆಯಲ್ಲಿ ॥೧೨೫೧॥

ಗಜತುರಗ ರಥಿಕರನು ಹಣಿಯುತಲಿ ಕೊಂದಿಹನು
ರಥಗಳನು ಕುಟ್ಟುತಲಿ ಪುಡಿಪುಡಿಯಗೈದಿಹನು
ಅಗಣಿತದ ವೀರರನು ಯಮಲೋಕಕಟ್ಟಿದನು
ಆ ಕಾಲ ಯಮನಂತೆ ಕಲಿಭೀಮ ಕಂಡಿಹನು ॥೧೨೫೨॥

ಈ ಪರಿಯ ಘನಘೋರ ಯುದ್ಧವದು ನಡೆಯುತಿರೆ
ಕಲಿಕರ್ಣ ಬೆರಗಾಗಿ ಕುರುಪತಿಗೆ ನುಡಿದಿಹನು
ಹಾರುವನ ಜೊತೆಯಲ್ಲಿ ಕದನವದು ನಮಗೇಕೆ
ವಿಪ್ರನಾ ಕೊಂದಿರುವ ದೋಷವದು ಬಹುದೆಮಗೆ ॥೧೨೫೩॥

ಈಗಿರಲಿ ನಮ್ಮಯಾ ಅಪಮಾನ ದ್ರುಪದನಲಿ
ಮುಂದಕ್ಕೆ ನೃಪರುಗಳನೆಲ್ಲರನು ಸೇರಿಸುತ
ದ್ರುಪದನನು ಮುತ್ತುತಲಿ ಸೇಡನ್ನು ತೀರಿಪುದು
ಹಸ್ತಿನಾಪುರಕೀಗ ನಡೆ ಎಂದು ನುಡಿದಿಹನು ॥೧೨೫೪॥

ಅಹುದಹುದು ಕರ್ಣನಾ ನುಡಿ ಇದುವೆ ನಿಜವಿಹುದು
ಹಾರುವನ ಕೊಲ್ಲುವಾ ಪಾಪವದು ನಮಗೇಕೆ
ದ್ರುಪದನನ ದರ್ಪವನು ಮುಂದಕ್ಕೆ ಮುರಿಯುವುದು
ಎನ್ನುತಲಿ ಕುರುರಾಯ ಗಜಪುರಕೆ ಮರಳಿದನು ॥೧೨೫೫॥

ಆಲಿಪುದು ಜನಮೇಜಯ ಕ್ಷಿತಿಪ ಬಳಿಕಿನಲಿ
ವಾಯುಜನು ಹೆಮ್ಮರವ ಬೀಸುತಲಿ ಸಕಲರನು
ನೃಪರುಗಳನಟ್ಟಿಸುತ ಕುಂಬಾರ ಗೃಹ ಹೊಕ್ಕು
ಕುಂತಿಯಾ ಚರಣಕ್ಕೆ ಎರಗಿದನು ಸಂತಸದಿ ॥೧೨೫೬॥

ಇತ್ತಲಾ ಅರ್ಜುನನು ದುರ್ಯೋಧನಾದಿಗಳ
ಕರ್ಣನನು ಧರಣಿಪರನೆಲ್ಲರನು ಜಯಿಸುತಲಿ
ಸಿಂಹದಾ ಗಾಂಭೀರ್ಯ ತೇಜದಲಿ ಹೊಳೆಯುತಲಿ
ದರಹಸಿತ ವದನದಲಿ ಅರಮನೆಗೆ ತೆರಳಿದನು ॥೧೨೫೭॥

ರಾಜಪಥ ಮಧ್ಯದಲಿ ಮೊಗವೆತ್ತಿ ಬರುತಲಿಹ
ದೇವೇಂದ್ರನಂತೆಸೆವ ಅರ್ಜುನನ ನೋಡುತಲಿ
ಇವನಿಂದ ವಿಪ್ರಕುಲ ಕೀರ್ತಿಯದು ಜಗದೊಳಗೆ
ಮೆರೆದಿಹುದು ಎನ್ನುತಲಿ ಭೂಸುರರು ನುಡಿದಿಹರು ॥೧೨೫೮॥

ಫಲುಗುಣನು ಲಲನೆಯಾ ದ್ರೌಪದಿಯ ಬಳಿಬಂದು
ಹೊರಗೆ ಬಾ ಎನ್ನುತಲಿ ಕರಕೊಂಡು ಹೊರಬಂದು
ಕುಂಬಾರ ಮನೆಗೈದು ಹೊರಗಡೆಗೆ ಬಾಗಿಲಲಿ
ದ್ರೌಪದಿಯ ನಿಲ್ಲಿಸುತ ಒಳಗಡೆಗೆ ತೆರಳುತಲಿ ॥೧೨೫೯॥

ಕುಂತಿಯಾ ಚರಣಕ್ಕೆ ಸಾಷ್ಟಾಂಗವೆರಗುತಲಿ
ಅಗಣಿತದ ನೃಪರುಗಳ ಜಯಿಸುತಲಿ ಶೌರ್ಯದಲಿ
ಹೆಣ್ಣನ್ನು ತಂದಿಹೆನು ಎನ್ನುತಿರೆ ಫಲುಗುಣನು
ಹಣ್ಣನ್ನು ತಂದಿಹನು ಎನ್ನುತಲಿ ಕೇಳುತಲಿ ॥೧೨೬೦॥

ಆ ಕುಂತಿ ಸಂತಸದಿ ಲೇಸಾಯ್ತು ಅರ್ಜುನನೆ
ಐವರೂ ಕೂಡಿಯೇ ಭೋಗಿಪುದು ಎನ್ನುತಿರೆ
ಅರ್ಜುನನು ದ್ರೌಪದಿಯ ಒಳಗಡೆಗೆ ಕರೆತಂದು
ನೋಡವ್ವ ಈ ಹೆಣ್ಣ ತಂದಿಹೆನು ಎನ್ನುತಲಿ ॥೧೨೬೧॥

ಈರ್ವರೂ ಕುಂತಿಯಾ ಚರಣಕ್ಕೆ ಎರಗುತಿರೆ
ದ್ರೌಪದಿಯು ನಸುನಾಚಿ ಶಿರಬಾಗಿ ನಿಂದಿರಲು
ಹಣ್ಣನ್ನು ತಂದಿರುವೆ ಎನ್ನುತಲಿ ಕೇಳುತಲಿ
ನೀವೆಲ್ಲ ಭೋಗಿಪುದು ಎನ್ನುತಲಿ ನುಡಿದಿಹೆನು ॥೧೨೬೨॥

ಎನ್ನುತಲಿ ಆ ಕುಂತಿ ನುಡಿಯುತಿರೆ ಅರ್ಜುನನು
ನೀನುಡಿದ ನುಡಿಯದುವೆ ನಮಗೆಲ್ಲ ಲೇಸಾಯ್ತು
ಐವರಿಗೂ ಈಕೆಯೇ ಮೋಹದಾ ಸತಿಯಾಗಿ
ನಿನ್ನಯಾ ಮುದ್ದಿನ ಸೊಸೆಯಾಗಿ ಇರುತಿಹಳು ॥೧೨೬೩॥

ಮಾತೃವೇ ದೇವತೆಯು ಎಂಬುವದು ಶೃತಿವಾಕ್ಯ
ಮಾತೃವಿಗೆ ಮಿಗಿಲಾದ ದೈವವದು ಬೇರಿಲ್ಲ
ಮಾತೃವಿನ ವಚನವನು ಮೀರಲಿಕೆ ಆಗದದು
ವಿಧಿಲಿಖಿತ ಎನ್ನುತಲಿ ಅರ್ಜುನನು ನುಡಿದಿಹನು ॥೧೨೬೪॥

ಧರ್ಮಜನು ಕೇಳುತಲಿ ಇದು ಧರ್ಮ ಬಾಹಿರವು
ವಾಯುಜನು ಜಗದೊಳಗೆ ರೂಢಿ ಇದು ಇಲ್ಲೆಂದ
ಮಾದ್ರಿಜರು ಸಮ್ಮತವು ಅಲ್ಲವಿದು ಎನ್ನುತಲಿ
ಒಪ್ಪದೇ ಇರುತಿರಲು ಅರ್ಜುನನು ನುಡಿದಿಹನು ॥೧೨೬೫॥

ತಾಯಿಯೇ ಜಗದೊಳಿಹ ಪ್ರತ್ಯಕ್ಷ ದೇವತೆಯು
ತಾಯಿಯೇ ಪರದೈವ ಎನ್ನುವದು ಶೃತಿವಾಕ್ಯ
ತಾಯಿಯಾ ವಾಕ್ಯವೇ ಅದು ವೇದ ವಾಕ್ಯವಿದೆ
ತಪ್ಪದೇ ನಡೆಸುವದು ನಮ್ಮಯಾ ಧರ್ಮವಿದೆ ॥೧೨೬೬॥

ತಾಯಿಯಾ ವಚನವದು ಗುರುವಚನವಿದ್ದಂತೆ
ಗುರುವಚನ ಮೀರುವುದು ಪಾಪಕರವೆನಿಸುವದು
ಸತ್ಯದಲಿ ಧರ್ಮದಲಿ ನಡೆಯುತಿಹ ನಮಗೆಲ್ಲ
ಲೋಕದಾ ಅಂಜಿಕೆಯು ಏತಕ್ಕೆ ಎಂದಿಹನು ॥೧೨೬೭॥

ಕಳುವಲ್ಲ ಕೊಲೆಯಲ್ಲ ಹುಸಿಯಲ್ಲ ಮೋಸಲ್ಲ
ಲೋಕದಾ ಸಮ್ಮುಖದಿ ಐವರೂ ದ್ರೌಪದಿಯ
ವರಿಸಿದೊಡೆ ಅವುದೂ ತಪ್ಪಿಲ್ಲ ಎನ್ನುತಿರೆ
ಸಕಲರೂ ಪಾಂಡವರು ಒಪ್ಪಿಗೆಯನಿತ್ತಿಹರು ॥೧೨೬೮॥

ಐವರೂ ಪಾಂಡವರು ಸತಿಯಾಗಿ ದ್ರೌಪದಿಯ
ಸ್ವೀಕರಿಸೆ ಆ ಕುಂತಿ ಸಂಭ್ರಮದಿ ಸಂತಸದಿ
ಹೊಸದಾಗಿ ಬಂದಿರುವ ಮುದ್ದುಸೊಸೆ ದ್ರೌಪದಿಗೆ
ಎಲ್ಲರಿಗೆ ಸರಸದಲಿ ಭೋಜನವನಿತ್ತಿಹಳು ॥೧೨೬೯॥

ತಂದಿರುವ ಭಿಕ್ಷಾನ್ನವೆಲ್ಲವನು ಸೇರಿಸುತ
ಭಾಗೆರಡು ಮಾಡುತಲಿ ಭಾಗೊಂದು ಭೀಮನಿಗೆ
ಈಯುತಲಿ ಉಳಿದರ್ಧ ಭಾಗವನು ಆ ಕುಂತಿ
ದ್ರೌಪದಿಯು ಉಳಿದಿರುವ ಪಾಂಡವರು ಉಂಡಿಹರು ॥೧೨೭೦॥

ಹೊಸದಾಗಿ ಸೊಸೆಯಾಗಿ ಬಂದಿರುವ ದ್ರೌಪದಿಗೆ
ಭೀಮನಾ ಭೋಜನದ ಪರಿಯನ್ನು ತಿಳಿಸುತಲಿ
ಈತನಿಗೆ ಬಲುದೊಡ್ಡ ಭೀಕರದ ಹೊಟ್ಟೆಯಿದೆ
ಚಕ್ಕಡಿಯು ಅನ್ನವದು ಬೇಕಿಹುದು ಎಂದಿಹಳು ॥೧೨೭೧॥

ಎಲ್ಲರಿಗು ಹಿರಿಯನಿಹ ಸೌಮ್ಯನಿಹ ಈತನು
ಈತನಿಹ ನಯವಿದನು ಸದ್ಗುಣನು ಸಾಹಸಿಯು
ಮುಗ್ಧಮನ ಶಿಶುಗಳಂತಿಹರು ಈ ಯಮಳರು
ಎನ್ನುತಲಿ ಅವರವರ ಗುಣಗಳನು ತಿಳಿಸಿದಳು ॥೧೨೭೨॥

ಪಶ್ಚಿಮದಿ ಆ ಸೂರ್ಯ ಅಸ್ತಾದ್ರಿ ಇಳಿಯುತಿರೆ
ಪಾಂಡವರು ಸಂಧ್ಯಾದಿ ಕರ್ಮಗಳ ಗೈಯುತಿರೆ
ಬಾನಿನಲಿ ತಾರೆಗಳ ದೀಪಗಳು ತೊಳಗುತಿರೆ
ನಗರದಲಿ ಮನೆಮನೆಯ ದೀಪಗಳು ಬೆಳಗಿದವು ॥೧೨೭೩॥

ಕುಂಬಾರ ಗೃಹದೊಳಗೆ ದೀಪಕ್ಕೆ ತೈಲವದು
ಇಲ್ಲದೆಯೆ ಮುಸುಕಿರುವ ಘೋರತರ ಕತ್ತಲಲಿ
ದ್ರೌಪದಿಯ ಕಣ್ಬೆಳಕ ಕೊರಲ ಸರ ವಜ್ರಗಳ
ರತ್ನಗಳದೊಡವೆಗಳ ದೀಪ್ತಿಯದು ಬೆಳಗಿದುದು ॥೧೨೭೪॥

ಹುಲ್ಲಿನಾ ಚಾಪೆಯಲಿ ವರಕುಂತಿ ಮಲಗುತಿರೆ
ಅಕೆಯಾ ಚರಣದಲಿ ಪಾಂಡವರು ಒರಗುತಿರೆ
ಐವರಾ ಪಾಂಡವರ ಪಾದಗಳ ಕೆಳಗಡೆಗೆ
ದ್ರೌಪದಿಯು ಮಲಗಿಹಳು ಕೃಷ್ಣಮೃಗ ಚರ್ಮದಲಿ ॥೧೨೭೫॥

ಕುರುವಂಶ ದ್ಯುಮಣಿಗಳು ಜಗಖ್ಯಾತ ವಿಕ್ರಮರು
ಅರಮನೆಯ ವೈಭವದ ರತ್ನದಾ ಮಂಚದಲಿ
ಮಲಗುತಿಹ ಪಾಂಡವರು ಹುಲ್ಲಿನಲಿ ಧರ್ಭೆಯಲಿ
ಕುಂಬಾರನಾಲಯದಿ ಮಲಗುವಾ ವಿಧಿಯಾಯ್ತು ॥೧೨೭೬॥

ಹಾಯಾಗಿ ಒರಗುತಲಿ ಅರ್ಜುನನು ಧರ್ಮಜಗೆ
ಯುದ್ಧದಾ ವಾರ್ತೆಯನು ವಿಸ್ತರಿಸಿ ಪೇಳಿದನು
ಕರ್ಣನಾ ಬಾಣಗಳ ಪುಡಿಗೈದು ಜಯಿಸಿದುದ
ನೃಪರುಗಳನಟ್ಟಿರುವ ವಿಷಯವನು ಉಸುರಿದನು ॥೧೨೭೭॥

ಹೆಮ್ಮರವ ಬೀಸುತಲಿ ಬಡಿಯುತಲಿ ಭೂಪರನು
ದೆಸೆದೆಸೆಗೆ ಚದುರಿಸುತ ಓಡಿಸಿದ ಪರಿಯನ್ನು
ಶಲ್ಯನನು ಬೆನ್ನಟ್ಟಿ ಬಡಿಯುತಲಿ ಜಯಿಸಿರುವ
ಪರಿಯನ್ನು ಕಲಿಭೀಮ ಧರ್ಮಜಗೆ ಉಸುರಿದನು ॥೧೨೭೮॥

ಸಂಗರದ ವಿಧವಿಧದ ವಿಷಯಗಳ ನುಡಿಯುತಲಿ
ಐವರೂ ಪಾಂಡವರು ನಿದ್ರೆಯಲಿ ಮುಳುಗುತಿರೆ
ಯುದ್ಧದಾ ವಿಷಯಗಳ ನುಡಿಯುತಿಹ ಇವರುಗಳು
ಭೂಸುರರು ಇವರಲ್ಲ ಭೂರಮರಣರಿರುತಿಹರು ॥೧೨೭೯॥

ಈ ಪರಿಯ ಯುದ್ಧದಾ ಪರಿಣತೆಯು ಕೌಶಲವು
ವಿಪ್ರರಿಗೆ ಎತ್ತಣದು ಎನ್ನುತಲಿ ದ್ರೌಪದಿಯು
ಉಚಿತದಲಿ ಕ್ಷತ್ರಿಯರು ಇವರಿಹರು ಎನ್ನುತಲಿ
ರಾಜಸುತೆ ಮಲಗಿಹಳು ಕುಂಬಾರನಾಲಯದಿ ॥೧೨೮೦॥

ಹೊರಗಡೆಗೆ ಕತ್ತಲಲಿ ಧೃಷ್ಟದ್ಯುಮ್ನ ನಿಲ್ಲುತಲಿ
ಅಸ್ತ್ರಗಳ ಶಸ್ತ್ರಗಳ ಕಾಳಗದ ವಾರ್ತೆಯನು
ಪಾಂಡವರು ರಾತ್ರಿಯಲಿ ನುಡಿದುದನು ಕೇಳುತಲಿ
ಕ್ಷತ್ರಿಯರು ಇವರಿಹರು ಎನ್ನುತಲಿ ಅರಿತಿಹನು ॥೧೨೮೧॥

ವಿಪ್ರರುಗಳಾದೊಡೆಯು ವೇದಗಳ ಶಾಸ್ತ್ರಗಳ
ತತ್ವಗಳ ವಿಷಯಗಳ ಮಾತುಗಳನಾಡುವರು
ಹಬ್ಬಗಳ ಹರಿದಿನದ ಪಾರ್ಣೆಮೆಯ ಶ್ರಾದ್ಧಗಳ
ತಿಥಿವಾರ ನಕ್ಷತ್ರ ವಿಷಯಗಳ ನುಡಿಯುವರು ॥೧೨೮೨॥

ಇಲ್ಲದಿರೆ ಪಂಡಿಗೆಯ ಹೋಳಿಗೆಯ ಫಾರಿಗೆಯ
ಮೊಗೆಮೊಗೆದು ಸೇವಿಸುವ ಸೇವಿಗೆಯ ಪಾಯಸದ
ಕೆನೆಮೊಸರ ಹಾಲುಗಳ ತುಪ್ಪಗಳ ವಿಧವಿಧದ
ಸವಿಸವಿಯ ಪಕ್ವಾನ್ನ ವಿಷಯಗಳ ಚರ್ಚಿಪರು ॥೧೨೮೩॥

ಗಜ ತುರಗ ಶಸ್ತ್ರಾಸ್ತ್ರ ವಿಷಯಗಳನುಸುರುತಿಹ
ಹಾರುವರು ಇವರಲ್ಲ ನಿಜವಾಗಿ ಕ್ಷತ್ರಿಯರು
ಇದರೊಳಗೆ ಸಂಶಯವು ಎನಿತಿಲ್ಲ ಎನ್ನುತಲಿ
ಧೃಷ್ಟದ್ಯುಮ್ನ ಮರಳುತಲಿ ದ್ರುಪದಂಗೆ ನುಡಿದಿಹನು ॥೧೨೮೪॥

ಇರುಳಿನಲಿ ಶಸ್ತ್ರಾಸ್ತ್ರ ಯುದ್ಧದಾ ವಿಷಯವನು
ವಿಸ್ತರದಿ ನುಡಿಯುತಲಿ ಮಲಗಿಹರು ಅವರೆಲ್ಲ
ಕ್ಷತ್ರಿಯರು ಅವರಿಹರು ದ್ರೌಪದಿಯನೀಯುತಲಿ
ಮದುವೆಯನು ಮಾಡುವುದು ಎನ್ನುತಲಿ ನುಡಿದಿಹನು ॥೧೨೮೫॥

ಕುರುಕುಲದ ರವಿಕಿರಣ ತೇಜದಾ ಪಾಂಡವರ
ಮಂಗಳ ವಿವಾಹವನು ನೋಡಲಿಕೆ ಕಾತರದಿ
ಬಂದಿಹನೊ ಎಂಬಂತೆ ಮೂಡಣದ ಶೈಲದಲಿ
ಬಾಲರವಿ ಹೊಂಗಿರಣ ಸೂಸುತಲಿ ಮೂಡಿಹನು ॥೧೨೮೬॥

ದ್ರುಪದನೃಪ ಸಂಭ್ರಮದಿ ಸಂತಸದ ಪುಳಕದಲಿ
ತಳಿರಿನಲಿ ತೋರಣದಿ ನಗರವನು ಸಿಂಗರಿಸಿ
ವೈಭವದಿ ವೈವಾಹಮಂಡಪವ ರಚಿಸುತಲಿ
ಅಗಣಿತದ ನೃಪರುಗಳ ಕರೆಸಿದನು ಸಮ್ಮುದದಿ ॥೧೨೮೭॥

ಕುಂಬಾರನಾಲಯಕೆ ದ್ರುಪದ ದೊರೆ ತೆರಳುತಲಿ
ಉಚಿತದಲಿ ಪಾಂಡವರನುಪಚರಿಸಿ ವಿನಯದಲಿ
ವಾದ್ಯಗಳ ಮೊಳಗಿಲಿ ಗಜತುರಗ ವೈಭವದಿ
ಪಾಂಡವರ ಕರೆತಂದ ವೈಭವದಿ ಅರಮನೆಗೆ ॥೧೨೮೮॥

ಮಂಗಳದ ಸ್ನಾನವನು ಗೈಯುತಲಿ ಐವರೂ
ಹೊಳಹೊಳೆವ ದಿವ್ಯದಾ ವಸ್ತ್ರಗಳ ಧರಿಸುತಲಿ
ಕೊರಳೊಳಗೆ ಥಳಥಳಿಪ ರತ್ನಗಳ ಹಾರಗಳ
ಬೆರಳಿನಲಿ ವಜ್ರದಾ ಉಂಗುರಗಳಿರಿಸುತಲಿ ॥೧೨೮೯॥

ಮಸ್ತಕದಿ ರತ್ನದ ಕಿರೀಟಗಳ ಧರಿಸುತಲಿ
ರಾಜರಾ ತೇಜದಲಿ ಗಂಭೀರ ಮುದ್ರೆಯಲಿ
ಮೊಗವೆತ್ತಿ ವೀರರಾ ಗಾಂಭೀರ್ಯ ಗಮನದಲಿ
ಐತಂದು ಸಭೆಯೊಳಗೆ ಕೂತಿಹರು ಮೆರೆಯುತಲಿ ॥೧೨೯೦॥

ನಾಂದಿಯನು ಹೋಮವನು ಹವನಾದಿ ಮೊದಲಾದ
ಕಾರ್ಯಗಳ ಗೈಯುತಲಿ ದ್ರುಪದನೃಪ ಹರುಷದಲಿ
ಜೋಗಸೆಯಲಿ ಜಲವನ್ನು ಹಿಡಿಯುತಲಿ ನಿಮ್ಮೊಳಗೆ
ಮತ್ಸ್ಯದಾ ಯಂತ್ರವನು ಭೇದಿಸಿದ ವೀರನವ ॥೧೨೯೧॥

ಬಹುದಿಲ್ಲಿ ಧಾರೆಯನು ಎರೆಯುತಲಿ ಎನ್ನಯಾ
ಕುವರಿಯನು ದ್ರೌಪದಿಯನೀಯುವೆನು ಎನ್ನುತಿರೆ
ಧರ್ಮಜನು ಬೆನ್ನಿನಲಿ ವಾಯುಜನು ಅರ್ಜುನನು
ಯಮಳರೂ ಬಂದಿಹರು ದ್ರುಪದನಾ ಬಳಿಯಲ್ಲಿ ॥೧೨೯೨॥

ಐವರನು ನೋಡುತಲಿ ಜಲವನ್ನು ಬಿಸುಡುತಲಿ
ಒಬ್ಬರಿಗೆ ಮಗಳನ್ನು ಈಯುವುದು ಧರ್ಮವಿದು
ಒಬ್ಬರನು ಕರೆದರೆ ಐವರೂ ಬಂದಿರುವ
ನೀವಾರು ಇರುತಿಹಿರಿ ಹೇಳುವುದು ಎಂದಿಹನು ॥೧೨೯೩॥

ಈತನಿಹ ಎನ್ನಯಾ ಸೋದರನು ಕಲಿಭೀಮ
ಈತನಿಹ ಅರ್ಜುನನು ಮಾದ್ರಿಜರು ಇವರಿಹರು
ನಾ ಹಿರಿಯ ಧರ್ಮಜನು ಎಮ್ಮಯಾ ಮಹತಾಯಿ
ಆ ಕುಂತಿ ನಾವಿಹೆವು ಪಾಂಡವರು ಎಂದಿಹನು ॥೧೨೯೪॥

ಇವರುಗಳು ಪಾಂಡವರು ಎನ್ನುತಲಿ ತಿಳಿಯುತಲಿ
ದ್ರುಪದನಾ ಆನಂದ ಮುಗಿಲನ್ನು ಮುಟ್ಟುತಿರೆ
ಮರುಕ್ಷಣದಿ ಐವರೂ ಒಬ್ಬಳನು ವರಿಸುವದು
ಕಷ್ಟವಿದು ಎನ್ನುತಲಿ ಪಾತಾಳಕಿಳಿದಿಹನು ॥೧೨೯೫॥

ಪಾಂಡವರು ನೀವೆಂದೂ ನಂಬಲಿಕೆ ಆಗದಿದು
ಪಾಂಡವರು ಎಂದಿಗೂ ಸತ್ಯದಲಿ ಧರ್ಮದಲಿ
ನಡೆಯುವರು ಎಂಬುವದು ಜಗವೆಲ್ಲ ಅರಿತಿಹುದು
ಐವರೂ ಒಬ್ಬಳನು ವರಿಸುವುದು ಪಾಪವಿದು ॥೧೨೯೬॥

ನಿಮ್ಮನ್ನು ನಂಬಲಿಕೆ ಆಗದಿದು ಎನ್ನುತಿರೆ
ಐವರಿಗೆ ಈಕೆಯೇ ಸತಿಯೆಂದು ಮಹತಾಯಿ
ಆ ಕುಂತಿ ನುಡಿದಿಹಳು ಅದುವೆಮಗೆ ವೇದನುಡಿ
ಗುರುನುಡಿಯು ಎನ್ನುತಲಿ ಧರ್ಮಜನು ನುಡಿದಿಹನು ॥೧೨೯೭॥

ಗುರುನುಡಿಯ ತಾಯ್ನುಡಿಯ ಮೀರಲಿಕೆ ಆಗದದು
ಮೀರಿದೊಡೆ ನರಕವದು ತಪ್ಪದದು ಖಚಿತದಲಿ
ಕಾಮುಕರು ನಾವಲ್ಲ ಧರ್ಮದಾ ಮಾರ್ಗವನು
ನಾವೆಂದು ಬಿಡದಿಹೆವು ಎನ್ನುತಲಿ ನುಡಿದಿಹನು ॥೧೨೯೮॥

ಒಬ್ಬನಿಗೆ ಗಂಡನಿಗೆ ಬಹುಸತಿಯರೆಂಬುವದು
ಲೋಕದಾ ಪದ್ಧತಿಯು ಧರ್ಮಕ್ಕೆ ಸಮ್ಮತವು
ಒಬ್ಬಳೇ ಹೆಂಡತಿಗೆ ಬಹುಪತಿಗಳೆಂಬುವದು
ನಾವೆಂದು ಲೋಕದಲಿ ಕೇಳಿಲ್ಲ ಕಂಡಿಲ್ಲ ॥೧೨೯೯॥

ಧರ್ಮಕ್ಕೆ ಶಾಸ್ತ್ರಕ್ಕೆ ವಿಪರೀತವಾಗಿಹುದು
ಜಗವೆಲ್ಲ ಈ ಕೃತ್ಯ ಶಪಿಸುವುದು ನಿಂದಿಪುದು
ಎಮ್ಮಯಾ ಪಿತೃವೆಲ್ಲ ನರಕದಲಿ ಬೀಳುವರು
ದುಷ್ಕೀರ್ತಿಕರವೆಂದು ದ್ರುಪದನೃಪ ನುಡಿದಿಹನು ॥೧೩೦೦॥

ಅನಿತರಲಿ ದ್ರುಪದನಾ ದೈವವೇ ಬಂದಿಹುದೊ
ಎಂಬಂತೆ ಘನಮಹಿಮ ವ್ಯಾಸಮುನಿ ಬರುತಲಿರೆ
ಆಸನವನೀಯುತಲಿ ಸತ್ಕಾರ ಗೈಯುತಲಿ
ಸಾಷ್ಟಾಂಗವೆರಗುತಲಿ ದ್ರುಪದನೃಪ ನುಡಿದಿಹನು ॥೧೩೦೧॥

ಎಮ್ಮಯಾ ಭಾಗ್ಯವೇ ಬಂದಂತೆ ಬಂದಿಹಿರಿ
ನಾವೀಗ ಧರ್ಮದಾ ಸಂಕಟದಿ ಸಿಲುಕಿಹೆವು
ಒಬ್ಬಪತಿ ಬಹುಸತಿಯರೆಂಬುವದು ರೂಢಿಯಿದು
ಏಕಸತಿ ಬಹುಪತಿಗಳೆಂಬುವದು ವಿಪರೀತ ॥೧೩೦೨॥

ಪಾಂಡವರು ಐವರೂ ಎನ್ನಯಾ ಕುವರಿಯನು
ದ್ರೌಪದಿಯ ವರಿಸುವದು ಧರ್ಮವೊ ಅಧರ್ಮವೋ
ಎಂಬುವಾ ಚಿಂತೆಯಲಿ ದಾರಿಯದು ಕಾಣದಿದೆ
ಮಾರ್ಗವನು ತೋರುವದು ಎನ್ನುತಲಿ ನುಡಿದಿಹನು ॥೧೩೦೩॥

ಏಳೆನುತ ದ್ರುಪದನನ ಎಬ್ಬಿಸುತ ಅಪ್ಪುತಲಿ
ಧರ್ಮಜನ ವಾಯುಜನ ಅರ್ಜುನನ ಯಮಳರನು
ತೆಗೆತೆಗೆದು ಒಬ್ಬೊಬ್ಬರಪ್ಪುತಲಿ ಪ್ರೀತಿಯಲಿ
ಕುರುಳುಗಳನೇವರಿಸಿ ವ್ಯಾಸಮುನಿ ನುಡಿದಿಹರು ॥೧೩೦೪॥

ಕುರುಕುಲದ ಲತೆಯೊಳಗೆ ಅರಳಿರುವ ಸುಂದರದ
ಕುಸುಮಗಳಿಗೆ ಪಾಂಡವರ್ಗೆ ನಿನ್ನಯಾ ಮಗಳನ್ನು
ಇತ್ತೊಡೆಯು ಜಗದೊಳಗೆ ನಿನಗಿಂತ ಮಿಗಿಲಾದ
ಶ್ರೇಷ್ಠದೊರೆ ಪುಣ್ಯದೊರೆ ಆರಿಲ್ಲ ಎಂದಿಹನು ॥೧೩೦೫॥

ಪಾಂಡವರು ಐವರನು ದ್ರೌಪದಿಯು ವರಿಸಿದೊಡೆ
ದ್ರೌಪದಿಯ ಭಾಗ್ಯಕ್ಕೆ ಎಣೆಯಿಲ್ಲ ಲೋಕದಲಿ
ಜಗದಖಿಲ ನಾರಿಯರ ಮಸ್ತಕದ ವರರತ್ನ
ಸಾಧ್ವೀಶಿರೋಮಣಿಯು ಎನಿಸುವಳು ಎಂದಿಹನು ॥೧೩೦೬॥

ಅಹುದಹುದು ಎನ್ನಯಾ ಇಷ್ಟವೂ ಅದೆ ಇಹುದು
ಈ ತಂಗಿ ಕುಂತಿಯಾ ತನಯರಿಗೆ ಸತತವೂ
ಸತ್ಯದಲಿ ಧರ್ಮದಲಿ ನಡೆವವರ್ಗೆ ಪಾಂಡವರ್ಗೆ
ದ್ರೌಪದಿಯನೀಯುವುದು ಮನದಾಸೆ ಎಂದಿಹನು ॥೧೩೦೭॥

ಆದೊಡೆಯು ಒಬ್ಬಳಿಗೆ ಐವರೂ ಪಾಂಡವರು
ಗಂಡಂದಿರೆಂಬುವುದು ಧರ್ಮಕ್ಕೆ ಅನುಚಿತವು
ಈ ಧರ್ಮ ಸಂಕಟದ ತೊಡಕನ್ನು ಬಿಡಿಸುತಲಿ
ಜಗವೆಲ್ಲ ಒಪ್ಪುವಾ ಪರಿಯಲ್ಲಿ ಮಾರ್ಗವನು ॥೧೩೦೮॥

ಅರುಹಿದೊಡೆ ಈಗಳೇ ನಿಮ್ಮಯಾ ಸಮ್ಮುಖದಿ
ಎನ್ನಯಾ ಕುವರಿಯನು ಐವರಿಗೆ ಪಾಂಡವರ್ಗೆ
ಧಾರೆಯನು ಎರೆಯುತಲಿ ದ್ರೌಪದಿಯನೀಯುತಲಿ
ವೈಭವದಿ ಮದುವೆಯನು ಮಾಡುವೆನು ಎಂದಿಹನು ॥೧೩೦೯॥

ಬಳಿಕಲಾ ವರವ್ಯಾಸ ಕಾಶ್ಯಪನ ದ್ರುಪದನನ
ಪಾಂಡವರ ಸಹಿತದಲಿ ಏಕಾಂತ ಭವನಕ್ಕೆ
ತೆರಳುತಲಿ ದ್ರೌಪದಿಯ ಪೂರ್ವದಾ ವಿಷಯವನು
ಅರುಹುವೆನು ಎನ್ನುತಲಿ ನುಡಿದಿಹನು ದ್ರುಪದನಿಗೆ ॥೧೩೧೦॥

ಮುನ್ನಿನಲಿ ನರಯಣಿಯು ಎಂಬುವಾ ಮುನಿವಧುವು
ಕುಷ್ಠದಾ ರೋಗದಲಿ ಬಳಲುತಿಹ ಮುನಿವರನ
ಸೇವೆಯನು ಮಾಡುತಲಿ ಇರುತಿರಲು ಒಂದುದಿನ
ಮುನಿವರನು ತನ್ನಯಾ ಕೊಳೆತಿರುವ ಬೆರಳನ್ನು ॥೧೩೧೧॥

ಇರಿಸಿರುವ ಅನ್ನವನು ಅಳುಕದೆಯೆ ನರಯಣಿಯು
ಭಕ್ತಿಯಲಿ ಭುಂಜಿಸಲು ಮುನಿವರನು ಕಾಣುತಲಿ
ಸಂತುಷ್ಟನಾಗುತಲಿ ನಿನಗಿಷ್ಟವಾದುದನು
ಬೇಡುವುದು ಈಯುವೆನು ಎನ್ನುತಲಿ ನುಡಿದಿಹನು ॥೧೩೧೨॥

ನರಯಣಿಯು ಹರುಷದಲಿ ದಿವ್ಯದಾ ರೂಪವನು
ಧರಿಸುತಲಿ ಎನ್ನನ್ನು ಭೋಗಿಪುದು ಎನ್ನುತಿರೆ
ಮುನಿವರನು ದಿವ್ಯದಾ ರೂಪವನು ತಾಳುತಲಿ
ರತಿಕ್ರೀಡೆಗೈಯ್ಯುತಲಿ ನರಯಣಿಯ ರಮಿಸಿದನು ॥೧೩೧೩॥

ಎನಿತೊಂದು ರಮಿಸಿದೊಡೆ ನರಯಣಿಯು ತಣಿಯದಿರೆ
ಮುನಿವರನು ಕೋಪದಲಿ ಕ್ಷತ್ರಿಯಳು ನೀನಾಗಿ
ಜನಿಸುವುದು ಎನ್ನುತಲಿ ಶಾಪವನು ಈಯುತಲಿ
ತಪವನ್ನು ಗೈಯ್ಯಲಿಕೆ ಕಾನನಕೆ ತೆರಳಿದನು ॥೧೩೧೪॥

ನಂತರದಿ ನರಯಣಿಯು ಘೋರತಪ ಗೈಯ್ಯುತಲಿ
ಹರನನ್ನು ಒಲಿಸುತಿರೆ ಬೇಕಾದ ವರವನ್ನು
ಬೇಡೆಂದು ಹರನುಡಿಯೆ ಪತಿಯನ್ನು ಕರುಣಿಪುದು
ಎನ್ನುತಲಿ ಐದು ಸಲ ಬೇಡಿದಳು ನರಯಣಿಯು ॥೧೩೧೫॥

ನಿನಗೈದು ಪತಿಗಳನು ಇತ್ತಿಹೆನು ಎನ್ನುತಲಿ
ಹರನುಡಿಯೆ ನರಯಣಿಯು ಕಳವಳಗೊಳ್ಳುತಲಿ
ಒಬ್ಬ ಸತಿಗೈವರು ಗಂಡಂದಿರೆಂಬುವದು
ಧರ್ಮಕ್ಕೆ ವಿಪರೀತ ಸಲ್ಲದದು ಎಂದಿಹಳು ॥೧೩೧೬॥

ಧರ್ಮದಾ ವಿಷಯದಲಿ ಚಿಂತೆಯನು ಮಾಡದಿರು
ಸೂರ್ಯ ಚಂದ್ರಾದಿಗಳು ಆ ಪಂಚ ಭೂತಗಳು
ಸಕಲ ಸಚರಾಚರದ ಪ್ರಾಣಿಗಳು ವಸ್ತುಗಳು
ಸತತವೂ ಎನ್ನಯಾ ಆಜ್ಞೆಯಲಿ ನಡೆಯುತಿವೆ ॥೧೩೧೭॥

ಎನ್ನಯಾ ನುಡಿಯದುವೆ ವೇದನುಡಿ ಶಾಸ್ತ್ರನುಡಿ
ಎನ್ನಯಾ ಮಾರ್ಗವದೆ ಧರ್ಮವದು ಎನಿಸುವದು
ಐವರಿಗೆ ಸತಿಯಾಗಿ ಸಾಧ್ವೀ ಶಿರೋಮಣಿಯು
ಎನಿಸುತಲಿ ಜಗದೊಳಗೆ ನೀ ಮೆರೆವೆ ಎಂದಿಹನು ॥೧೩೧೮॥

ನಿನ್ನಯಾ ಚರಿತೆಯದು ಪಾವನವು ಎನಿಸುತಲಿ
ಜಗದೊಳಗೆ ಅಪ್ರತಿಮ ಪತಿವ್ರತೆ ಎನಿಸುತಲಿ
ನಿನ್ನಯಾ ಕೀರ್ತಿಯದು ಚಂದ್ರಾರ್ಕ ಬೆಳಗುವುದು
ಎನ್ನುತಲಿ ಹರಸುತಲಿ ವರಹರನು ಸರಿದಿಹನು ॥೧೩೧೯॥

ಮುನ್ನಿನಾ ಮುನಿವಧುವು ನರಯಣಿಯು ಶಾಪದಲಿ
ನಿನ್ನಯಾ ಮಗಳಾಗಿ ದ್ರೌಪದಿಯು ಎನಿಸಿಹಳು
ಐವರಾ ಪಾಂಡವರ ಹಿಂದಣದ ವಿಷಯವನು
ವಿವರಿಸುವೆ ಕೇಳೆಂದು ವರವ್ಯಾಸ ನುಡಿದಿಹನು ॥೧೩೨೦॥

ಪೂರ್ವದಲಿ ದೇವೇಂದ್ರ ಶಂಕರನ ಶಾಪದಲಿ
ಕೈಲಾಸಪರ್ವತದ ಗುಹೆಯಲ್ಲಿ ಅಡಗುತಲಿ
ಬಳಲುತಿರೆ ಇವನ ಪರಿ ನಾಲ್ವರೂ ಇಂದ್ರರು
ಸಿಲುಕುತಲಿ ತೊಳಲಿದರು ಹಲವುಗಳ ವರ್ಷದಲಿ ॥೧೩೨೧॥

ಬಳಿಕಲಾ ಕಾತ್ಯಾಯನೀದೇವಿ ಕೃಪೆಯಲ್ಲಿ
ಶಾಪವದು ತೊಲಗುತಿರೆ ಮರ್ತ್ಯದಾ ಲೋಕದಲಿ
ಕ್ಷತ್ರಿಯರ ಕುಲದಲ್ಲಿ ಐವರೂ ಜನಿಸುವುದು
ಐವರಿಗು ಒಬ್ಬಳೇ ಸತಿಯಿಹಳು ಎನ್ನುತಲಿ ॥೧೩೨೨॥

ಹರನುಡಿಯೆ ಐವರೂ ಮನುಜರಾ ಜನ್ಮವದು
ಮೊದಲಿಂಗೆ ಕಷ್ಟವದು ಮೇಲಾಗಿ ಐವರಿಗೆ
ಒಬ್ಬಳೇ ಹೆಂಡತಿಯು ಎಂಬುವದು ಅತಿಕಷ್ಟ
ಬೇರೊಂದು ವರವನ್ನು ಈಯುವದು ಎಂದಿಹರು ||೧೩೨೩||

ಏತಕ್ಕೆ ಚಿಂತಿಪುದು ಇದರೊಳಗೆ ಮೋಸವದು
ಕಪಟವದು ಏನಿಲ್ಲ ಮುನ್ನಿನಲಿ ಮುನಿವಧುವು
ಐಯ್ದು ಸಲ ಪತಿಯನ್ನು ಕರುಣಿಪುದು ಎನ್ನುತಲಿ
ಎನ್ನನ್ನು ಪ್ರಾರ್ಥಿಸಲು ವರವನ್ನು ಇತ್ತಿಹೆನು ||೧೩೨೪||

ಜಗದೊಳಗೆ ನಾರಿಯರ ಮಸ್ತಕದ ಮಣಿ ಎನಿಸಿ
ಸಾಧ್ವೀ ಶಿರೋಮಣಿಯು ನುತಚರಿತೆ ಎನಿಸುತಲಿ
ಕೀರ್ತಿಯಲಿ ಚಂದ್ರಾರ್ಕ ಪರ್ಯಂತ ಮೆರೆಯುವಳು
ಆಕೆಯಾ ಚರಿತೆಯನು ಜಗವೆಲ್ಲ ಪೊಗಳುವದು ||೧೩೨೫||

ಆಕೆಯಾ ವಿಷಯದಲಿ ವಿಪರೀತ ನುಡಿದೊಡೆಯು
ನರಕವದು ತಪ್ಪದದು ಇದು ಹರನ ನುಡಿಯಿಹುದು
ಎನ್ನುತಲಿ ಐವರನು ಹರಸುತಲಿ ವರಹರನು
ಸರಿದಿಹನು ನಿಜವಾಸ ಕೈಲಾಸ ಪರ್ವತಕೆ ||೧೩೨೬||

ಬಳಿಕಿನಲಿ ಇಂದ್ರರುಗಳೈವರೂ ಲೋಕದಲಿ
ಮನುಜರಾ ರೂಪದಲಿ ಕ್ಷತ್ರಿಯರ ಕುಲವಲ್ಲಿ
ಜನಮಗಳ ತಾಳಿಹರು ಅವರುಗಳೆ ಪಾಂಡವರು
ಮುನ್ನಿನಾ ಮುನಿವಧುವಿಂಗೆ ಇವರುಗಳೆ ಪತಿಯಿಹರು ||೧೩೨೭||

ಮುನ್ನಿನಾ ಮುನಿವಧುವು ನಿನ್ನಯಾ ಮಗಳಿಹಳು
ಈ ಪಾಂಡುನಂದನರು ಆ ಇಂದ್ರರೈವರು
ಈ ಮಗಳು ನಿನ್ನಯಾ ಮಗಳಿಹಳು ಪಾಂಡವರು
ನಿನ್ನಯಾ ಅಳಿಯಂದಿರುರುತಿಹರು ಯೋಚಿಪುದು ||೧೩೨೮||

ಬೇಕಾದೊಡೀಗಿವರ ನೋಡುವುದು ಎನ್ನುತಲಿ
ದ್ರುಪದಂಗೆ ದಿವ್ಯದಾ ದೃಷ್ಟಿಯನು ಈಯುತಲಿ
ಯಮ ವಾಯು ಸುರಪತಿಯು ಅಶ್ವಿನೀಕುಮರಿವರು
ಇವರೈದರಿಂದ್ರಗಳು ಇರುತಿಹರು ನೋಡೆಂದ ||೧೩೨೯||

ಹೊಳೆಹೊಳೆವ ಕಾಂಚನದ ತನುವಿನಾ ಕಾಂತಿಯಲಿ
ಮಿರುಗುತಿಹ ವಸ್ತ್ರಗಳ ವಜ್ರಗಳ ರತ್ನಗಳ
ಹಾರಗಳ ಒಡವೆಗಳ ಪ್ರಭೆಯಲ್ಲಿ ಶೋಭಿಸುವ
ಸ್ವರ್ಗದಾ ಸುರರುಗಳ ತೇಜದಲಿ ತೊಳಗುತಿಹ ||೧೩೩೦||

ಐವರೂ ಇಂದ್ರರುಗಳಾ ದಿವ್ಯ ರೂಪಗಳ
ನೋಡುತಲಿ ದ್ರುಪದನೃಪ ತನುಪುಳಕವಾಗುತಲಿ
ರೋಮವದು ನಿಮಿರುತಲಿ ಹರುಷದಾ ಸಾಗರವು
ಮೇರೆಯನು ಮೀರುತಲಿ ಹರಿದಿಹುದು ಭರದಲ್ಲಿ ||೧೩೩೧||

ಕಣ್ದೆರುದು ನೋಡುವುದು ಪಾಂಚಾಲ ಭೂಪತಿಯೆ
ಇವರುಗಳು ಪಾಂಡವರೊ ದಿವಿಜರೋ ಇಂದ್ರರೋ
ಎಂಬುವದ ಚನ್ನಾಗಿ ನೋಡುವುದು ಮನದೊಳಿಹ
ಸಂಶಯವ ತೊರೆಯುವುದು ಎಂದಿಹರು ವ್ಯಾಸಮುನಿ ||೧೩೩೨||

ಎನ್ನಯಾ ಮನದೊಳಿಹ ಶಂಕೆಯದು ದೂರಾಯ್ತು
ಜಗದೊಳಗೆ ಧರ್ಮಕ್ಕೆ ರೂಢಿಗಿದು ಸಮ್ಮತವು
ದ್ರೌಪದಿಯ ಪಾಂಡವರ್ಗೆ ಇತ್ತೊಡೆಯು ಎನ್ನಪರಿ
ಭಾಗ್ಯದೊರೆ ಪುಣ್ಯದೊರೆ ಆರಿಲ್ಲ ಎಂದಿಹನು ||೧೩೩೩||

ಎನ್ನಯಾ ಸುಕೃತವೇ ಮೈದೋರಿ ಬಂದಂತೆ
ನೀವೀಗ ಬಂದಿಹುದು ಎಮ್ಮಯಾ ಭಾಗ್ಯವಿದು
ಎನ್ನುತಲಿ ವ್ಯಾಸರಿಗೆ ದ್ರುಪದನೃಪ ನುಡಿಯುತಿರೆ
ಶುಭವಾಗಲೆನ್ನುತಲಿ ಹರಸಿದರು ವ್ಯಾಸಮುನಿ ||೧೩೩೪||

**ವೈಭವದಿ ಸಡಗರದಿ ಮಂಗಳದ ವಾದ್ಯದಲಿ |**
**ದ್ರುಪದನೃಪ ಪಾಂಡವರ್ಗೆ ದ್ರೌಪದಿಯನಿತ್ತಿಹನು ||**

ಬಳಿಕಲಾ ದ್ರುಪದನೃಪ ಡಂಗುರವ ಸಾರುತಲಿ
ನೃಪರುಗಳ ಪುರಜನರ ವಿಪ್ರರನು ಕರೆಸುತಲಿ
ಹೋಮ ಹವನಾದಿಗಳ ಮಂತ್ರಗಳ ಘೋಷಣೆಯ
ಮಂಗಳದ ವಾದ್ಯಗಳ ನಭಬಿರಿವ ನಾದದಲಿ ||೧೩೩೫||

ಜಗದಖಿಳ ನಾರಿಯರ ಮಸ್ತಕದ ರತ್ನದಾ
ಸಾಧ್ವೀಶಿರೋಮಣಿಯ ಸೌಂದರ್ಯ ಸಾಗರದ
ನಿಧಿಯಾದ ಮುದ್ದಿನಾ ಕುವರಿಯನು ದ್ರೌಪದಿಯ
ಐವರಿಗೆ ಪಾಂಡವರ್ಗೆ ಧಾರೆಯನು ಎರೆದಿಹನು ||೧೩೩೬||

ಧರಣಿಪರು ಪುರಜನರು ಮುನಿಜನರು ಭೂಸುರರು
ಆಬಾಲವೃದ್ಧರು ನೆರೆದಿರುವರೆಲ್ಲರೂ
ಅಕ್ಷತೆಯನೆರಚುತಲಿ ವಧು ವರರ ಹರಸುತಲಿ
ದ್ರುಪದನೃಪ ಧನ್ಯನಿಹ ಎನ್ನುತಲಿ ಹೊಗಳಿದರು ||೧೩೩೭||

ಧನಕನಕಧೇನುಗಳ ದಿವ್ಯಾಂಬರಾದಿಗಳ
ವಿಪ್ರರಿಗೆ ಹೇರಳದಿ ದಾನಗಳನಿತ್ತಿಹನು
ಸವಿಮಧುರ ಪಕ್ವಾನ್ನದೂಟದಲಿ ಸಕಲಜನ
ಸಂತೃಪ್ತರಾಗುತಲಿ ದ್ರುಪದನನು ಹರಸಿದರು ||೧೩೩೮||

ಮರುದಿವಸ ಅರಮನೆಯ ಪರಿವಾರವೆಲ್ಲವೂ
ಬಂಧುಗಳು ಬಾಂಧವರು ಪುರಜನರು ಸಂಭ್ರಮದಿ
ಹಾಡುತಲಿ ಕುಣಿಯುತಲಿ ಬಣ್ಣಗಳನೆರಚುತಲಿ
ಓಕುಳಿಯನಾಡುತಲಿ ಸಂತಸದಿ ನಲಿದಿಹರು ॥೧೩೯॥

ಪಾಂಡವರು ಐವರೂ ದ್ರೌಪದಿಯ ಸಹಿತದಲಿ
ವರವೇದ ವ್ಯಾಸರಾ ಪಾದಕ್ಕೆ ಎರಗುತಿರೆ
ಮುನಿವರನು ಪಾಂಡವರ ಹರುಷದಲಿ ಅಪ್ಪುತಲಿ
ಹರಸುತಲಿ ತೆರಳಿದನು ಬದರಿಯಾ ಆಶ್ರಮಕೆ ॥೧೪೦॥

ಹೇ ಪರೀಕ್ಷಿತ ತನಯ ಕೇಳುವದು ಬಳಿಕಿನಲಿ
ದ್ರೌಪದಿಯ ವೈವಾಹ ವೃತ್ತಾಂತ ಪಸರುತಿರೆ
ಕೌರವರು ಕೇಳುತಲಿ ಕಳವಳದಿ ಕುದಿಯುತಲಿ
ಕಲಿಕರ್ಣ ಸೈಂಧವನು ಮೊದಲಾದ ಅಗಣಿತದ ॥೧೪೧॥

ನೃಪರುಗಳ ಸಹಿತದಲಿ ಪಾಂಚಾಲ ಪಟ್ಟಣವ
ಮುತ್ತುತಲಿ ಘೋರತರ ಯುದ್ಧವನು ಗೈಯ್ಯುತಿರೆ
ಅರ್ಜುನನು ಬಾಣಗಳ ಮಳೆಯನ್ನು ಸುರಿಸುತಲಿ
ನೃಪರುಗಳ ಶಿರಗಳನು ಕೊಚ್ಚುತಲಿ ಕೆಡಹಿದನು ॥೧೪೨॥

ಮೇಘಗಳ ನಿಕರವನು ಬಿರುಗಾಳಿ ಚದುರಿಸುವ
ಪರಿಯಲ್ಲಿ ವಾಯುಜನು ಹೆಮ್ಮರವ ಬೀಸುತಲಿ
ಕೌರವನ ಸೈನ್ಯವನು ಬಡಿಯುತಲಿ ಕೆಡಹುತಲಿ
ಧೂಳಿಯಾ ಪಟಲವನು ಮಾಡುತಲಿ ಚದುರಿಸಿದ ॥೧೪೩॥

ಕೌರವರು ಅಪಮಾನ ನಾರಿಯನು ಅಪ್ಪುತಿರೆ
ಅಕ್ಷೋಹಿಣೀ ಸೈನ್ಯ ಹತರಾಗಿ ಬೀಳುತಿರೆ
ಮುಂದಕ್ಕೆ ಸೇಡನ್ನು ತೀರಿಪುದು ಎನ್ನುತಲಿ
ಗಜಪುರಕೆ ಮರಳಿದರು ದ್ರುಪದನನು ಶಪಿಸುತಲಿ ॥೧೪೪॥

ಹೊಳೆಹೊಳೆವ ಉಜ್ವಲದ ಉದಯರವಿ ಕಿರಣಗಳ
ಪರಿಯಲ್ಲಿ ಪಾಂಡವರ ಶೌರ್ಯದ ಪ್ರತಾಪಗಳ
ಪ್ರಭೆಯುದುವೆ ಪಸರುತಲಿ ದೆಸೆದೆಸೆಯ ಬೆಳಗಿದುದು
ಪಾಂಡವರ ಕೀರ್ತಿಯದು ಜಗದೊಳಗೆ ಮೆರೆದಿಹುದು ॥೧೪೫॥

**ದ್ರೌಪದಿಯ ಮದುವೆಯಾ ವಾರ್ತೆಯನು ಕೇಳುತಲಿ ।**
**ಶ್ರೀಕೃಷ್ಣ ಯಾದವರ ಸಹಿತದಲಿ ಬಂದಿಹನು ॥**

ಕೇಳುತಲಿ ದ್ರೌಪದಿಯ ಮದುವೆಯಾ ವಾರ್ತೆಯನು
ನಂದನಾ ನಂದನನು ಯಾದವ ಶಿರೋಮಣಿಯು
ವಸುದೇವ ದೇವಕಿಯ ತನಯನು ಶ್ರೀಕೃಷ್ಣ
ಯಾದವರ ಸಹಿತದಲಿ ಬಂದಿಹನು ಸಂತಸದಿ ॥೧೪೬॥

ಬರುತಲಿಹ ಶ್ರೀಕೃಷ್ಣರಾಯನನು ಕಾಣುತಲಿ
ಪಾಂಡವರು ಹರುಷದಲಿ ಇದಿರ್ಗೊಂಡು ಕರೆತರಲು
ಕುಂತಿಯಾ ಚರಣಕ್ಕೆ ಎರಗುತಲಿ ಮುರರಿಪುವು
ಪಾಂಡವರ ತೆಗೆ ತೆಗೆದು ಅಪ್ಪಿದನು ಪ್ರೇಮದಲಿ ॥೧೪೭॥

ತಂದಿರುವ ಧನಕನಕ ಗಜತುರಗ ಉಡುಗೊರೆಯ
ಪಾಂಡವರಿಗೀಯುತಲಿ ಪೀತಾಂಬರಾದಿಗಳ
ಮುತ್ತುಗಳ ವಜ್ರಗಳ ಸ್ವರ್ಣದಾಭರಣಗಳ
ದ್ರೌಪದಿಗೆ ಲಲನೆಯರ್ಗೆ ಇತ್ತಿಹನು ಶ್ರೀಕೃಷ್ಣ ॥೧೪೮॥

ಸುತರುಗಳೆ ಕೇಳಿವನು ಎಮ್ಮಣ್ಣ ವಸುದೇವ
ಯಾದವನ ಸುತನಿಹನು ನಿಮಗೆಲ್ಲ ಮಾವನಿಹ
ಯಾದವರು ಬಂಧುಗಳು ಬಾಂಧವರು ಎನ್ನುತಲಿ
ಆ ಕುಂತಿ ಪಾಂಡವರ ಐವರಾ ಕರಗಳನು ॥೧೪೯॥

ಲೋಕವನು ರಕ್ಷಿಸುವ ಘನಮಹಿಮ ಕೃಷ್ಣನಾ
ಕರದಲ್ಲಿ ಇರಿಸುತಲಿ ಹೃದಯವದು ಉಕ್ಕುತಲಿ
ಹಾಲಿನಲಿ ಅದ್ದುವುದು ನೀರಿನಲಿ ಮುಳುಗಿಪುದು
ಐವರನು ನಿನ್ನಯಾ ಕೈಯಲ್ಲಿ ಕೊಟ್ಟಿಹೆನು ॥೧೫೦॥

ಅಡವಿಯಲಿ ಐವರೀ ಮಕ್ಕಳನು ಪಡೆಯುತಲಿ
ಪತಿ ಮರಣವಪ್ಪುತಿರೆ ಗಜಪುರಕೆ ಮರಳುತಿರೆ
ದಾಯಾದಿ ಮತ್ಸರದಿ ಕೌರವರು ಮೋಸದಲಿ
ವಿಷವನ್ನು ಕೊಟ್ಟಿಹರು ಬೆಂಕಿಯೊಳು ಸುಟ್ಟಿಹರು ॥೧೫೧॥

ನಿಮ್ಮಯಾ ಚರಣಗಳ ಕರುಣೆಯಲಿ ಬದುಕುತಲಿ
ಕಾನನದಿ ವಿಧವಿಧದ ಕಷ್ಟಗಳ ಸಹಿಸುತಿರೆ
ದ್ರೌಪದಿಯ ಮಂಗಲದ ಮದುವೆಯದು ಜರುಗುತಲಿ
ನಿಮ್ಮಯಾ ದರುಶನವು ಲಭಿಸಿದುದು ಎಂದಿಹಳು ॥೧೫೨॥

ಹೇ ಅತ್ತೆ ನಿಮ್ಮಯಾ ಕಷ್ಟಗಳ ಅರಿತಿಹೆನು
ಈ ಪಂಚ ಪಾಂಡವರು ಎನ್ನಯಾ ಪ್ರಾಣಗಳು
ಎನ್ನಯಾ ಚಿತ್ತವದು ನಿಮ್ಮನ್ನೆ ನೆನೆಯುತಲಿ
ಸತತವು ಚಿಂತಿಪುದು ನೋಯುವದು ನವೆಯುವದು ॥೧೫೩॥

ಪ್ರಾಣಗಳು ತೊರೆಯುತಿರೆ ದೇಹವದು ಇರುತಿಹುದೆ
ನಿಮ್ಮನ್ನು ತೊರೆಯುತಲಿ ನಾನೆಂತು ಜೀವಿಪೆನು
ಕಾನನದೊಳಿರುತಿರಲಿ ಅರಮನೆಯೊಳಿರುತಿರಲಿ
ಪಾಂಡವರ ರಕ್ಷಿಪುದು ಎನ್ನಯಾ ಭಾರವದು ॥೧೫೪॥

ಎನ್ನುತಲಿ ವೇದೋಪನಿಷದಗಳ ಅಳವಿಂಗೆ
ದೊರೆಯದಿಹ ಕಾಣದಿಹ ಆ ದೇವ ಶ್ರೀ ಕೃಷ್ಣ
ನಾಟಕದ ನರನಂತೆ ನಟಿಸುತಲಿ ನುಡಿಯುತಲಿ
ಕುಂತಿಯಾ ಚರಣಕ್ಕೆ ಎರಗಿದನು ವಿನಯದಲಿ ||೧೩೫೫||

ಎದುರಿನಲಿ ಧರ್ಮಜನು ವಾಯುಜನು ಮತ್ತೆಯು
ಎಡದಲ್ಲಿ ಅರ್ಜುನನು ಮಾದ್ರಿಯಾ ತನುಜರಿರೆ
ಬಲಗಡೆಗೆ ದೇವತೆಯು ವರಕುಂತಿ ದ್ರೌಪದಿಯು
ಯಾದವರ ಸಹಿತದಲಿ ಮೆರೆದಿಹನು ಕಂಸಾರಿ ||೧೩೫೬||

ದ್ರುಪದನಾ ಆನಂದ ಸಾಗರವು ಉಕ್ಕುತಲಿ
ಪಾಂಚಾಲ ಪರಿವಾರ ಪಾಂಡವರು ಯಾದವರು
ಸಕಲರೂ ಸಂಭ್ರಮದಿ ಒಸಗೆಯಲಿ ಪ್ರೀತಿಯಲಿ
ವೈಭವದಿ ಹರುಷದಾ ಉತ್ಸವದಿ ನಲಿದಿಹರು ||೧೩೫೭||

ಯಾದವರ ಸೈನ್ಯವದು ಪುರದ ಹೊರ ಬಾಹೆಯಲಿ
ಬೀಡಾರ ಮಾಡಿರಲು ಕೌರವನ ಗುಪ್ತದಳ
ಅರಿಯುತಲಿ ಭರದಲ್ಲಿ ಗಜಪುರಕೆ ತೆರಳುತಲಿ
ಯಾದವರು ಬಂದಿರುವ ವಾರ್ತೆಯನು ಅರುಹಿದರು ||೧೩೫೮||

**ಭೀಷ್ಮರಾ ಹಿತವಚನ ಕೇಳುತಲಿ ಧೃತರಾಷ್ಟ್ರ |**
**ಪಾಂಡವರ ಕರೆತರಲು ವಿದುರನನು ಕಳುಹಿದನು ||**

ಕೇಳುತಲಿ ಅಂಧ ನೃಪ ಧೃತರಾಷ್ಟ್ರ ಕಳವಳದಿ
ಗಾಂಗೇಯ ವಿದುರನನು ಮಕ್ಕಳನು ಶಕುನಿಯನು
ಕರ್ಣನನು ಸಚಿವರನು ಬಂಧುಗಳ ಬಾಂಧವರ
ಎಲ್ಲರನು ಕರೆಸುತಲಿ ನುಡಿದಿಹನು ದುಗುಡದಲಿ ||೧೩೫೯||

ಕೇಳಿದಿರೆ ನೀವುಗಳು ಯಾದವರ ಸಹಿತದಲಿ
ಕಂಸಾರಿ ಪಾಂಚಾಲ ಪಟ್ಟಣಕೆ ಬಂದಿಹನು
ಆ ದ್ರುಪದ ಮುರರಿಪುವು ಪಾಂಡವರು ಒಂದಾಗಿ
ನೆರೆದಿರಲು ನಮಗಿನ್ನು ಉಳಿವಿಲ್ಲ ಎಂದಿಹನು ||೧೩೬೦||

ಆ ಭೀಮ ಅರ್ಜುನನು ಅತಿ ಬಲರು ವಿಕ್ರಮರು
ಮೇಲಾಗಿ ಕೃಷ್ಣನಾ ಸಹಾಯವು ಅವರಿಗಿದೆ
ಉರಿಯುತಿಹ ಜ್ವಾಲೆಯಲಿ ಗಾಳಿಯದು ಸೇರುತಿರೆ
ಪ್ರಜ್ವಲಿಸಿ ಕಾನನವ ಸುಡವಿಹುದೆ ಎಂದಿಹನು ||೧೩೬೧||

ಕೇಳುತಲಿ ಕಲಿಕರ್ಣ ಆ ಶಕುನಿ ಸೈಂಧವನು
ಚಿಂತೆಯನು ಮಾಡದಿರಿ ಆ ಭೀಮ ಅರ್ಜುನನ
ಶೌರ್ಯವನು ಅರಿತಿಹೆವು ಕ್ಷಣದಲ್ಲಿ ಜಯಿಸುವೆವು
ಆ ಕೃಷ್ಣಗೊಲ್ಲನಿಹ ಅವನಾವ ಶೂರನಿಹ ||೧೩೬೨||

ದಿವಿಜರಾ ಸಹಿತದಲಿ ಅವರೆಲ್ಲ ಬಂದೊಡೆಯು
ಗಾಳಿಯಾ ಪಟದಂತೆ ಧೂಳಿಯನು ಮಾಡುವೆವು
ಯುದ್ಧದಲಿ ಎಮ್ಮಯಾ ಶೌರ್ಯವನು ನೋಡುವುದು
ಎನ್ನುತಲಿ ಬರಿಬಯಲ ಜಂಭವನು ಕೊಚ್ಚಿಹರು ||೧೩೬೩||

ನಿಮ್ಮಯಾ ಪೌರುಷದ ಮಾತುಗಳು ಸಾಕಿನ್ನು
ನಿನ್ನೆಯೇ ನಿಮ್ಮಯಾ ಶೌರ್ಯವನು ಕಂಡಿಹೆವು
ಸೋಲನ್ನು ಅನುಭವಿಸಿ ದಿಕ್ಕೆಟ್ಟು ಓಡುತಲಿ
ಬಂದುದನು ಮರೆತಿಹರೆ ಎಂದಿಹನು ಆ ಭೀಷ್ಮ ||೧೩೬೪||

ನಂಬದಿರು ನೆಚ್ಚದಿರು ಮಕ್ಕಳೀ ಮಾತುಗಳ
ಆ ಭೀಮ ಪಾರ್ಥರನು ಜಯಿಸುವವರಾರಿಲ್ಲ
ನಿನ್ನಯಾ ವಂಶವನು ನಿರ್ಮೂಲ ಮಾಡದಿರು
ಬೇರಿನಾ ಸಹಿತದಲಿ ಕುಲವೃಕ್ಷ ಕೆಡುಹದಿರು ||೧೩೬೫||

ಕರೆಸುವದು ವಿದುರನನು ಒಸಗೆಯಲಿ ಕಳುಹಿಸುತ
ಪಾಂಡವರ ಕರೆತಂದು ಧನಕನಕ ರಾಜ್ಯವನು
ಪಾಲೆರಡು ಮಾಡುತಲಿ ಪಾಂಡವರಿಗೀಯುತಲಿ
ಸರಸದಲಿ ಜೀವಿಪುದು ಲೇಸೆಂದನಾ ಭೀಷ್ಮ ||೧೩೬೬||

ಅಹುದಹುದು ಭೀಷ್ಮನಾ ಮತವೆಮ್ಮ ಮತವಿಹುದು
ದುಷ್ಟರೀ ಸುತರುಗಳ ಮಾತುಗಳ ಕೇಳುತಲಿ
ಕಷ್ಟಗಳ ಕೊಟ್ಟಿಹೆನು ಪಾಂಡುವಿನ ತನಯರಿಗೆ
ಸ್ವರ್ಗದಲಿ ಸೋದರನು ಆ ಪಾಂಡು ನವೆಯನೆ ||೧೩೬೭||

ಬಾ ವಿದುರ ಬೇಗನೇ ಪಾಂಚಾಲ ಪಟ್ಟಣಕೆ
ತೆರಳುತಲಿ ಪಾಂಡವರ ಮನವನ್ನು ತಿದ್ದುತಲಿ
ಒಪ್ಪಿಸುತ ಕರೆತಹುದು ಹಿಂದಿನದು ಮರೆಯುತಲಿ
ಕೌರವರು ಪಾಂಡವರು ಪ್ರೀತಿಯಲಿ ಬದುಕುವುದು ||೧೩೬೮||

ಎನ್ನುತಿರೆ ಆ ವಿದುರ ವಜ್ರಗಳ ಮುತ್ತುಗಳ
ಸ್ವರ್ಣದಾಭರಣಗಳ ಉಡುಗೊರೆಯ ಸಹಿತದಲಿ
ಭೀಷ್ಮಾದಿ ಬಾಂಧವರ ಹಿತನುಡಿಯ ಕೊಳ್ಳುತಲಿ
ಮಂಗಲ ಮುಹೂರ್ತದಲಿ ಪಯಣದಲಿ ನಡೆದಿಹನು ||೧೩೬೯||

ಹಳ್ಳಿಗಳ ಪಟ್ಟಣವ ಜನಪದವ ದಾಂಟುತಲಿ
ಪಾಂಚಾಲ ನಗರದಲಿ ಅರಮನೆಗೆ ಬರುತಿರಲು
ಪಾಂಡವರು ನೋಡುತಲಿ ಹರುಷವದು ಉಕ್ಕುತಲಿ
ತೆಗೆತೆಗೆದು ಅಪ್ಪಿದರು ಹರ್ಷಜಲ ಸುರಿಸುತಲಿ ||೧೩೭೦||

ದೊಡ್ಡಪ್ಪ ಧೃತರಾಷ್ಟ್ರ ದೊಡ್ಡವ್ವ ಗಾಂಧಾರಿ
ದುರ್ಯೋಧನಾದಿಗಳು ಬಂಧುಗಳು ಕ್ಷೇಮವೇ
ಆ ಭೀಷ್ಮ ಗುರುದ್ರೋಣ ಬಾಂಧವರು ಕುಶಲರೇ
ಎನ್ನುತಲಿ ವಿದುರನನು ಕೇಳಿದರು ಪಾಂಡವರು ॥೧೩೭೧॥

ಬಳಿಕಲಾ ಪಾಂಡವರು ಕಾನನದ ಕಷ್ಟಗಳ
ದ್ರೌಪದಿಯ ಮಂಗಲದ ವೈವಾಹ ವಿಷಯವನು
ಮೇಲಾಗಿ ಯಾದವ ಶಿರೋಮಣಿಯ ಕೃಷ್ಣನಾ
ದರುಶನದ ಲಾಭವನು ವಿಸ್ತರಿಸಿ ಪೇಳಿದರು ॥೧೩೭೨॥

ವರವಿದುರ ಧನಕನಕ ವಸ್ತ್ರಾದಿಗಳ ಉಡುಗೊರೆಯ
ಪಾಂಡವರ್ಗೆ ದ್ರೌಪದಿಗೆ ದ್ರುಪದಂಗೆ ಯಾದವರ್ಗೆ
ಪ್ರದ್ಯುಮ್ನ ಅನಿರುದ್ಧ ಬಾಂಧವರ್ಗೆ ಈಯುತಲಿ
ಅರವಿಂದನಾಭನಾ ಚರಣಕ್ಕೆ ಎರಗಿದನು ॥೧೩೭೩॥

ಶ್ರೀಕೃಷ್ಣ ವಿದುರನನು ತೆಗೆದಪ್ಪಿ ಸಂತಸದಿ
ಭೀಷ್ಮಾದಿ ಬಂಧುಗಳ ಕ್ಷೇಮವನು ಕೇಳುತಲಿ
ಪಾಂಡವರ ಏಳಿಗೆಯ ಸಹಿಸದಾ ಧೃತರಾಷ್ಟ್ರ
ಇವರನ್ನು ಒಮ್ಮೆಯೂ ಕನಸಿನಲಿ ನೆನೆಯುವನೆ ? ॥೧೩೭೪॥

ನೀ ಬಂದೆ ಒಳಿತಿಹುದು ಗಜಪುರದ ವಾರ್ತೆಯನು
ನಾಳೆಯಲಿ ವಿಸ್ತರದಿ ನಮಗೆಲ್ಲ ಅರುಹುವುದು
ಪಯಣದಲಿ ದಣಿದಿರುವೆ ವಿಶ್ರಾಂತಿ ಕೊಳ್ಳುವದು
ಎನ್ನುತಲಿ ಕಳುಹಿದನು ವಿಶ್ರಾಂತಿ ಧಾಮದಲಿ ॥೧೩೭೫॥

ಮಾರುದಿವಸ ಪಾಂಡವರು ಮುರವೈರಿ ವರವಿದುರ
ಆ ಮಂತ್ರ ಶಾಲೆಯಲಿ ಸೇರಿಯುತಿರೆ ವರವಿದುರ
ಧೃತರಾಷ್ಟ್ರ ಭೂಪತಿಯು ಮನದೊಳಿಹ ಇಂಗಿತವ
ಭೀಷ್ಮಾದಿ ಬಾಂಧವರ ಮತವನ್ನು ಅರುಹಿದನು ॥೧೩೭೬॥

ಪೂರ್ವದಲಿ ಗೈದಿರುವ ದುಷ್ಕೃತ್ಯ ಮರೆಯುತಲಿ
ದಾಯಾದಿ ದ್ವೇಷವನು ತೊರೆಯುತಲಿ ಪ್ರೇಮದಲಿ
ಗಜಪುರಕೆ ನೀವೆಲ್ಲ ಸಂತಸದಿ ಐತಂದು
ಭೀಷ್ಮಾದಿ ಬಂಧುಗಳನೆಲ್ಲರನು ಕಾಂಬುವುದು ॥೧೩೭೭॥

ಹಸ್ತಿನಾಪುರದೆಲ್ಲ ಸಂಪದದಿ ರಾಜ್ಯದಲಿ
ಸರಿ ಅರ್ಧ ಭಾಗವನು ಕೊಳ್ಳುತಲಿ ಪ್ರೇಮದಲಿ
ನೀವೆಲ್ಲ ಕೂಡಿಹುದು ಇಲ್ಲದಿರೆ ಬೇರೆಡೆಗೆ
ನಿಮ್ಮಯಾ ರಾಜಧಾನಿಯನು ನಿರ್ಮಿಸುತ ॥೧೩೭೮॥

ಅಲ್ಲಿಯೇ ವಾಸಿಪುದು ನಮಗೆಲ್ಲ ಸುಖಕರವು
ಎನ್ನುತಲಿ ಕೃಷ್ಣಂಗೆ ಧರ್ಮಜಗೆ ಭೀಮನಿಗೆ
ಪಾರ್ಥಂಗೆ ಯಮಳರಿಗೆ ಆ ಕುಂತಿ ದ್ರೌಪದಿಗೆ
ಒಪ್ಪುವಾ ತೆರದಲ್ಲಿ ಸಂಧಿಯನು ನುಡಿದಿಹನು ॥೧೩೭೯॥

**ವಿದುರನಾ ನುಡಿಗೇಳ್ದು ದ್ವೇಷವದು ಅಳಿಯುತಲಿ**
**ಪಾಂಡವರು ಮತ್ತೆ ಆ ಹಸ್ತಿನೆಗೆ ಮರಳಿದರು ||**

ಮನದೊಳಿಹ ಕಲ್ಮಷವು ದ್ವೇಷದಾ ಭಾವನೆಯು
ಬೇರಿನಾ ಸಹಿತದಲಿ ನಶಿಸುತಿರೆ ಧರ್ಮಜನು
ಕುಂತಿಯಾ ಸಹಿತದಲಿ ಪಾಂಡವರು ಸಮ್ಮತಿಸೆ
ಶ್ರೀಕೃಷ್ಣ ಯಾದವರು ಪಾಂಚಾಲರೊಪ್ಪುತಿರೆ ॥೧೩೮೦॥

ಸಕಲರೂ ಹರುಷದಲಿ ಮಂಗಳ ಮುಹೂರ್ತದಲಿ
ಪಯಣದಲಿ ಸಾಗುತಲಿ ಗಜಪುರಕೆ ಬರುತಿರಲು
ಪುರದ ಹೊರ ಬಾಹೆಯಲಿ ಕೌರವರು ಬಾಂಧವರು
ಇದಿರ್ಗೊಂಡು ಕರೆತಂದರರಮನೆಗೆ ವೈಭವದಿ ॥೧೩೮೧॥

ಐವರೂ ಪಾಂಡವರು ಕಾಣಿಕೆಯನೀಯುತಲಿ
ಗಾಂಗೇಯ ಧೃತರಾಷ್ಟ್ರ ಗಾಂಧಾರಿ ಅರಸಿಯರ್ಗೆ
ದ್ರೋಣಾದಿ ಗುರುಗಳಿಗೆ ಚರಣಕ್ಕೆ ಎರಗುತಲಿ
ಆನಂದ ಬಾಷ್ಪಗಳ ಸುರಿಸಿದರು ಸಂತಸದಿ ॥೧೩೮೨॥

ಪ್ರೇಮದಾ ಬುಗ್ಗೆಯದು ಚಿಮ್ಮುತಲಿ ಸಕಲರೂ
ಭೀಷ್ಮಾದಿ ಬಾಂಧವರು ಒಬ್ಬರನು ಒಬ್ಬರನು
ತೆಗೆತೆಗೆದು ಪಾಂಡವರನಪ್ಪಿದರು ಗಾಢದಲಿ
ಆನಂದಾರ್ಣವದಿ ಸಕಲರೂ ಮುಳುಗಿದರು ॥೧೩೮೩॥

ಬಳಿಕಲಾ ಧೃತರಾಷ್ಟ್ರ ಕೌರವರ ಸೈಂಧವನ
ಕಲಿಕರ್ಣ ಸೌಬಲನ ಗುರುತನುಜರೆಲ್ಲರನು
ಕರೆಸುತಿರೆ ಸಕಲರೂ ಪಾಂಡವರನಪ್ಪುತಲಿ
ಹಿಂದಣದ ವೈರವನು ಮರೆಯುತಲಿ ನಲಿದಿಹರು ॥೧೩೮೪॥

ಯಾದವರ ಪಾಂಚಾಲ ಪಾಂಡವರ ಸಕಲರಾ
ಸುಮಧುರದ ಬಾಂಧವ್ಯ ಬೆಸುಗೆಯಲಿ ಸಂತಸದಿ
ನಲಿಯುತಲಿ ಹರುಷದಾ ಉತ್ಸವವ ಗೈಯ್ಯುತಿರೆ
ಹಿಂದಣದ ದ್ವೇಷವದು ಮರೆಯಾಯ್ತು ನಿಮಿಷದಲಿ ॥೧೩೮೫॥

ಕೌರವರು ಪಾಂಡವರು ಅನ್ಯೋನ್ಯ ಪ್ರೀತಿಯಲಿ
ಬೇಟೆಯಲಿ ಆಟದಲಿ ಜೂಜಿನಲಿ ಕೇಳಿಯಲಿ
ಹರುಷದಲಿ ಪ್ರೇಮದಾ ಶಸಿರಸದ ಪುಳಕದಲಿ
ವರುಷಗಳ ಐದನ್ನು ಕಳೆದಿಹರು ಕ್ಷಣವಾಗಿ ॥೧೩೮೬॥

**ಸರಿ ಅರ್ಧ ರಾಜ್ಯವನು ಸಿರಿಯನ್ನು ಕೊಳ್ಳುತಲಿ ।**
**ಪಾಂಡವರು ತೆರಳಿದರು ಆ ವಾರಣಾವತಕೆ ॥**

ಒಂದು ದಿನ ಅಂಧನೃಪ ಶ್ರೀಕೃಷ್ಣ ಧರ್ಮಜರ
ಗಾಂಗೇಯ ಗುರುದ್ರೋಣ ದುರ್ಯೋಧನಾದಿಗಳ
ಕರೆಸುತಲಿ ದಾಯಾದಿ ಬಂಧುಗಳು ದೂರದಲಿ
ಇರ್ದೊಡೆಯು ಪ್ರೀತಿಯದು ವರ್ಧಿಪುದು ಎಂದಿಹನು ‖೧೩೮೭‖

ಸಕಲ ಈ ಇಭಪುರದ ರಾಜ್ಯವನು ಸಿರಿಯನ್ನು
ಸರಿಅರ್ಧ ಭಾಗೆರಡು ಮಾಡುತಲಿ ಒಂದನ್ನು
ಪಾಂಡವರು ಕೊಳ್ಳುತಲಿ ಸನಿಹದಲಿ ಮೆರೆಯುತಿಹ
ಆ ಇಂದ್ರ ಪ್ರಸ್ಥದಲಿ ರಾಜ್ಯವನು ಆಳುವುದು ‖೧೩೮೮‖

ಹಸ್ತಿನಾಪುರದಲ್ಲಿ ದುರ್ಯೋಧನಾಳುವುದು
ಪಾಂಡವರು ಕೌರವರು ಆವುದಾ ದ್ವೇಷವದು
ಇಲ್ಲದೆಯೆ ರಾಜ್ಯಗಳ ಆಳುವುದು ಹಿತಕರವು
ಇದು ನಮ್ಮ ಮತವಿಹುದು ನಿಮ್ಮ ಮತವೇನೆಂದ ‖೧೩೮೯‖

ಅಹುದಹುದು ನೀ ನುಡಿದ ನುಡಿ ಇದುವೆ ನಿಜವಿಹುದು
ಬಂಧುಗಳು ಸನಿಹದಲಿ ಇರ್ದೊಡೆಯು ಕಲಹಗಳ
ಬೀಜಗಳು ಬಿತ್ತುತಲಿ ವಂಶದಾ ವೃಕ್ಷವದು
ದ್ವೇಷದಾ ಜ್ವಾಲೆಯಲಿ ದಹಿಸುತಲಿ ನಶಿಸುವದು ‖೧೩೯೦‖

ಎನ್ನುತಲಿ ಗಾಂಗೇಯ ನುಡಿಯುತಿರೆ ಗುರುದ್ರೋಣ
ಮುರಹರನು ಧರ್ಮಜನು ಸಂತಸದಿ ಸಮ್ಮತಿಸೆ
ಹಿಮದಿಂದ ಸಾಗರದ ಪರ್ಯಂತ ರಾಜ್ಯವನು
ಗಜತುರಗರಥಗಳನು ರತ್ನಗಳ ವಜ್ರಗಳ ‖೧೩೯೧‖

ಅಗಣಿತದ ಸಿರಿಯನ್ನು ಪಾಲೆರಡು ಮಾಡುತಲಿ
ಆವುದೂ ಕುಂದಿಲ್ಲ ಕಸರಿಲ್ಲ ಪರಿಯಲ್ಲಿ
ಇತ್ತಂಡ ಒಲುಮೆಯಲಿ ಒಪ್ಪುವಾ ತೆರದಲ್ಲಿ
ಸರಿ ಅರ್ಧ ರಾಜ್ಯವನು ಧರ್ಮಜಗೆ ಇತ್ತಿಹನು ‖೧೩೯೨‖

ಸಕಲರೂ ಹರುಷದಲಿ ಧೃತರಾಷ್ಟ್ರ ಭೂಪತಿಯ
ಔದಾರ್ಯ ಗುಣಗಳನು ಮೆಚ್ಚುತಲಿ ಹೊಗಳಿದರು
ಪಾಂಡವರು ಎಲ್ಲಿಯೇ ಹಾಯಾಗಿ ಸುಖದಿಂದ
ಜೀವಿಸುತ ಇರುತಿರಲಿ ಎಂದಿಹನು ಅಂಧನೃಪ ‖೧೩೯೩‖

ಮಂಗಳ ಮುಹೂರ್ತದಲಿ ಸೋದರರ ಸಹಿತದಲಿ
ಧರ್ಮಜನು ಕುಂತಿಯಾ ಸಹಿತದಲಿ ಹೊರಡುತಿರೆ
ಅರಮನೆಯ ನಾರಿಯರು ಹೊನ್ನಿನಾ ಆರತಿಯ
ಎತ್ತುತಲಿ ಬೆಳಗಿದರು ಕುರುರವಿಯ ಕಿರಣಗಳ ‖೧೩೯೪‖

ತಾಂಬೂಲ ಸಕ್ಕರೆಯ: ಕೊಳ್ಳುತಲಿ ಪಾಂಡವರು
ಧೃತರಾಷ್ಟ್ರ ರಾಯಂಗೆ ಭೀಷ್ಮರಿಗೆ ದ್ರೋಣಂಗೆ
ವಿದುರಂಗೆ ಗಾಂಧಾರಿ ದೇವಿಯರ್ಗೆ ಅರಸಿಯರ್ಗೆ
ನಮಿಸುತಿರೆ ಭೀಷ್ಮಾದಿ ಬಾಂಧವರು ಅಪ್ಪಿದರು ‖೧೩೯೫‖

ಗಜಪುರವ ತೊರೆಯುತಲಿ ಪಾಂಡವರು ಹೊರಡುತಿರೆ
ವಾರ್ತೆಯದು ಪಸರಿಸುತ ಪುರಜನರು ದುಃಖದಲಿ
ಗಜಪುರದ ಪುಣ್ಯವದು ತೊರೆಯುತಲಿ ಹೋಗುತಿದೆ
ಎನ್ನುತಲಿ ಧರ್ಮಜನ ಚರಣಕ್ಕೆ ಎರಗಿದರು ‖೧೩೯೬‖

ಧೃತರಾಷ್ಟ್ರ ಧರಣಿಪನ ಅರಮನೆಯೊಳಿರಿಸುತಲಿ
ಭೀಷ್ಮಾದಿ ಬಂಧುಗಳು ಹೊರಕೊಳದ ಪರ್ಯಂತ
ಪಾಂಡವರ ಕಳುಹಿಸುತ ಸುಖದಿಂದ ಜೀವಿಪುದು
ಮಂಗಳವು ನಿಮಗೆಂದು ಹರಸುತಲಿ ಮರಳಿದರು ‖೧೩೯೭‖

ಪಯಣದಲಿ ಸಾಗುತಲಿ ಪಾಂಡವರು ಭರದಲ್ಲಿ
ಇಂದ್ರನಾ ಅಮರಪುರಿ ಭೋಗಪುರಿ ಪರಿಯಲ್ಲಿ
ಧರಣಿಯಲಿ ಮೆರೆಯುತಿಹ ಸುಂದರದ ರಮಣೀಯ
ವರ ಇಂದ್ರ ಪ್ರಸ್ಥದಾ ನಗರಕ್ಕೆ ಬಂದಿಹರು ‖೧೩೯೮‖

ಹೊನ್ನಿನಾ ಕಳಶದಲಿ ಹೊಳೆಯುತಿಹ ಗೋಪುರದ
ಅಗಣಿತದ ಗುಡಿಗಳಾ ಸ್ವರ್ಣದಾ ಭವನಗಳ
ಮುಗಿಲನ್ನು ಮುದ್ದಿಡುವ ಉಪ್ಪರಿಗೆ ಸೌಧಗಳ
ಆ ಇಂದ್ರ ಪ್ರಸ್ಥದಾ ಪಟ್ಟಣಕೆ ಬಂದಿಹರು ‖೧೩೯೯‖

ಇದು ವಿಶ್ವಕರ್ಮನೇ ನಿರ್ಮಿಸಿದ ನಗರವೋ
ಅಮರಪುರಿ ಧರೆಗಿಳಿದು ಬಂದಿಹುದೋ ಎಂಬಂತೆ
ವಜ್ರಗಳ ಪಚ್ಚೆಗಳ ರತ್ನಗಳ ಹಾರಗಳ
ತೋರಣದ ನಗರವದು ಹೊಳೆದಿಹುದು ಪ್ರಭೆಯಲ್ಲಿ ‖೧೪೦೦‖

ಧ್ವಜಗಳಲಿ ತಳಿರಿನಲಿ ತೋರಣ ಕಮಾನಿನಲಿ
ನಗರವನು ಸಿಂಗರಿಸಿ ಪುರಜನರು ಸಂತಸದಿ
ಬಂದಿರುವ ಪಾಂಡವರ ಸ್ವಾಗತಿಸಿ ನಮಿಸುತಲಿ
ವಾದ್ಯದಾ ವೈಭವದಿ ಕರೆತಂದರರಮನೆಗೆ ‖೧೪೦೧‖

ಅಮರಪುರ ಅರಮನೆಯ ದೇವೇಂದ್ರ ಪೊಗುವಂತೆ
ರಾಜೇಂದ್ರ ಧರ್ಮಜನು ಸೋದರರ ಸಹಿತದಲಿ
ಶ್ರೀಕೃಷ್ಣ ಯಾದವರ ಪಾಂಚಾಲರೊಡಗೂಡಿ
ವರ ಇಂದ್ರ ಪ್ರಸ್ಥದಾ ಅರಮನೆಯ ಹೊಕ್ಕಿಹನು ‖೧೪೦೨‖

ಆನಂದ ಸಾಗರವು ಉಕ್ಕುತಲಿ ಪುರಜನರು
ಐತಂದು ಉಡುಗೊರೆಯ ಕಾಣಿಕೆಯ ನೀಯುತಲಿ
ಧರ್ಮದಾ ಮೂರುತಿಯು ಧರ್ಮಜನು ದೊರೆಯಾಗಿ
ಬಂದಿಹುದು ಭಾಗ್ಯವದು ಎನ್ನುತಲಿ ನಲಿದಿಹರು ॥೧೪೦೩॥

ಬಳಿಕಲಾ ಧರ್ಮಜನು ಬಂಧುಗಳ ಸಕಲರನು
ಆದರದಿ ಉಪಚರಿಸಿ ಉಡುಗೊರೆಯನೀಯುತಲಿ
ಕಳುಹುತಿರೆ ಯಾದವ ಶಿರೋಮಣಿಯು ಶ್ರೀಕೃಷ್ಣ
ದ್ವಾರಕೆಗೆ ಹೊರಡಲಿಕೆ ಅನುವಾಗುತಿರುತಿರಲು ॥೧೪೦೪॥

ಧರ್ಮಸುತ ಭೀಮಾದಿ ಸೋದರರ ಸಹಿತದಲಿ
ಕೃಷ್ಣನಾ ಪದಯುಗದಿ ಸಾಷ್ಟಾಂಗವೆರಗುತಲಿ
ದ್ರೌಪದಿಯು ಭರದಿಂದಲೈತಂದು ಎರಗುತಲಿ
ಸಕಲರೂ ಆನಂದ ಭಾಷ್ಪಗಳ ಸುರಿಸಿದರು ॥೧೪೦೫॥

ನಿಮ್ಮಯಾ ಕರುಣೆಯಲಿ ವಿಷದಲ್ಲಿ ಬದುಕಿದೆವು
ನಿಮ್ಮಯಾ ದಯದಿಂದ ಉರಿಯೊಳಗೆ ಉಳಿದಿಹೆವು
ಮತ್ತೆ ಈ ದ್ರೌಪದಿಯ ಸಾಧ್ವಿಯನು ವರಿಸಿದೆವು
ನಮ್ಮನ್ನು ಸತತವೂ ರಕ್ಷಿಪುದು ಎನ್ನುತಲಿ ॥೧೪೦೬॥

ಪಾಂಡವರು ನುಡಿಯುತಿರೆ ಕರುಣಾಳು ಯಾದವನು
ಬಂಧುಗಳ ವೈರವನು ಪೋಸದಾ ಬಲೆಗಳನು
ತಿಳುಹಿಸುತ ಎಚ್ಚರದಿ ಇಹುದೆಂದು ಹೇಳುತಲಿ
ವರಕುಂತಿಗೆರಗುತಲಿ ದ್ವಾರಕೆಗೆ ತೆರಳಿದನು ॥೧೪೦೭॥

ಕಳವು ಕೊಲೆಸುಲಿಗೆಗಳು ಓಸೆಯ ದರೋಡೆಯದು
ಇಲ್ಲದೆಯೆ ಧರ್ಮಜನ ರಾಜ್ಯವದು ಮೆರೆದಿಹುದು
ವೇದಗಳ ಮಂತ್ರಗಳ ಯಜ್ಞಗಳ ಯಾಗಗಳ
ಧರ್ಮದಾ ಕಾರ್ಯದಲಿ ರಾಜ್ಯವದು ಮೆರೆದಿಹುದು ॥೧೪೦೮॥

ನಳ ನಹುಳ ಬಲಿ ಭರತ ವರಪುರು ಹರಿಶ್ಚಂದ್ರರಾ
ಆ ಸತ್ಯ ಸಂಧರಾ ಪರಂಪರೆಯೊಳಿಸೆಯುತಿಹ
ಧರ್ಮಸುತ ಧರ್ಮದಲಿ ಸತ್ಯದಲಿ ಪ್ರೇಮದಲಿ
ರಾಜ್ಯವನು ಆಳಿದನು ಕೀರ್ತಿಯಲಿ ಮೆರೆಯುತಲಿ ॥೧೪೦೯॥

ಕೃತಯುಗದಿ ಧರ್ಮವದು ನಾಲ್ಕರಾ ಪಾದದಲಿ
ಇರ್ದಿಹುದು ತ್ರೇತೆಯಲಿ ಪಾದೊಂದು ನಶಿಸುತಲಿ
ದ್ವಾಪರದಿ ಪಾದೆರಡು ಇರುತಿರಲು ಮತ್ತೆಯು
ಧರ್ಮಜನ ರಾಜ್ಯದಲಿ ನಾಲ್ಕರಲಿ ಮೆರೆದಿಹುದು ॥೧೪೧೦॥

ಒಂದು ದಿನ ಧರ್ಮಸುತ ಸಭೆಯೊಳಗೆ ಸಿಂಹದಾ
ಪೀಠದಲಿ ಕುಳಿತಿರಲು ಚಂದ್ರನಾ ಮಂಡಲವು
ಧರೆಗಿಳಿದು ಬಂದಂತೆ ದೇವ ಮುನಿ ನಾರದರು
ಬರುತಲಿರೆ ಎಲ್ಲರೂ ಸಾಷ್ಟಾಂಗವೆರಗಿದರು ॥೧೪೧೧॥

ಅರಮನೆಗೆ ನಾರದರ ಕರೆತಂದು ಧರ್ಮಜನು
ಅರ್ಘ್ಯ ಪಾದ್ಯಾದಿಗಳ ಮಧು ಪರ್ಕವೀಯುತಲಿ
ವಿಧವಿಧದಿ ಸತ್ಕಾರ ಗೈಯ್ಯುತಲಿ ಧರ್ಮಜನು
ಸಾಷ್ಟಾಂಗವೆರಗುತಲಿ ನಮಿಸುತಲಿ ನುಡಿದಿಹನು ॥೧೪೧೨॥

ನೀವಿಂದು ಬಂದಿಹುದು ಎಮ್ಮಯಾ ಸುಕೃತಮಿದು
ಎಮ್ಮಯಾ ಅರಮನೆಯು ಪಾವನವು ಆಯ್ತಿಂದು
ತಾವುಗಳು ಬಂದಿರುವ ಕಾರಣವನುಸುರುವುದು
ತಮ್ಮಯಾ ಆಜ್ಞೆಯನು ಪಾಲಿಪೆನು ಎಂದಿಹನು ॥೧೪೧೩॥

ನಾರದರು ಸಂಪ್ರೀತರಾಗುತಲಿ ಹರುಷದಲಿ
ಧರ್ಮಜನೆ ನಿನ್ನಯಾ ಸರಿಸಮರು ನೃಪರುಗಳು
ದೇವೇಂದ್ರ ದಿವಿಜರಲಿ ಮರ್ತ್ಯರಲಿ ನಾಕಾಣೆ
ಧರ್ಮವೇ ಮೈವೆತ್ತು ಬಂದಂತೆ ನೀನಿರುವೆ ॥೧೪೧೪॥

ಭೀಮಾದಿ ಸೋದರರು ಮೂಲೋಕವೀರರು
ಐವರಾ ಅರಸಿ ಈ ದ್ರೌಪದಿಯು ಜಗದೊಳಗೆ
ಸಾಧ್ವೀಶಿರೋಮಣಿಯು ನುತಚರಿತೆ ಎನಿಸಿಹಳು
ನಿನ್ನಯಾ ಭಾಗ್ಯಕ್ಕೆ ಎಣೆಯುಂಟೆ ಜಗದೊಳಗೆ ॥೧೪೧೫॥

ಐವರಿಗೆ ಒಬ್ಬಳೇ ಸತಿಯಾಗಿ ಇರುತಿಹುದು
ಜಗದೊಳಗೆ ವಿಪರೀತ ಇದು ವಿಷಮ ಪರಿಯಿಹುದು
ಅತಿಸಣ್ಣ ವಿಷಯವದು ದಾಯಾದಿ ಕಲಹಕ್ಕೆ
ಕಾರಣವು ಆಗುತಲಿ ಕುಲವನ್ನು ನಶಿಸುವದು ॥೧೪೧೬॥

**ಸುಂದೋಪಸುಂದರರ ಈರ್ವರಾ ಬಂಧುಗಳ ।**
**ಕಲಹದಾ ವಿಷಯವನು ಉಸುರಿದರು ನಾರದರು ॥**

ಕಥೆಯೊಂದ ಹೇಳುವೆನು ಪೂರ್ವದಲಿ ಒಬ್ಬಳೇ
ತಾಯಿಯಲಿ ಜನಿಸಿರುವ ಸುಂದೋಪಸುಂದರರು
ತಮ್ಮಯಾ ಶಕ್ತಿಯಲಿ ದಿವಿಜರನು ಮನುಜರನು
ಹಿಂಸಿಸುತ ಉಪಟಳವ ಕಷ್ಟಗಳನೀಯುತಿರೆ ॥೧೪೧೭॥

ಸುರರುಗಳು ಬ್ರಹ್ಮನನು ಮೊರೆಹೊಗಲು ಆ ಅಜನು
ಸ್ವರ್ಗದೊಳು ಇರುತಿರುವ ಒಬ್ಬೊಬ್ಬ ಲಲನೆಯರ
ತಿಲಮಾತ್ರ ಸೌಂದರ್ಯ ಸಾರವನು ಕೊಳ್ಳುತಲಿ
ಅಪ್ರತಿಮ ಸುಂದರಿ ತಿಲೋತ್ತಮೆಯ ಸೃಷ್ಟಿಸುತ ॥೧೪೧೮॥

ಭೂಲೋಕಕ್ಕೆದುತಲಿ ಸುಂದೋಪಸುಂದರರ
ನಾಶವನು ಗೈಯ್ಯುವುದು ಎನ್ನುತಲಿ ಹೇಳುತಿರೆ
ಹೊಚ್ಚ ಹೊಸ ಯೌವ್ವನದ ತಾರುಣ್ಯ ತೇಜದಲಿ
ತೊಳಗುತಿಹ ಅಪ್ರತಿಮ ಸುಂದರಿ ತಿಲೋತ್ತಮೆಯು ॥೧೪೧೯॥

ಸಭದಿಂದ ಇಳಿಯುತಲಿ ಸುಂದೋಪಸುಂದರರ
ಮುಂದೆಡೆಗೆ ಸುಳಿಯುತಿರೆ ಚಕಿತದಲಿ ಮೋಹಿಸುತ
ಚೆಲುವೆಯಾ ಎಡಗೈಯ್ಯ ಬಲಗೈಯ್ಯ ಹಿಡಿಯುತಲಿ
ನಾ ಮೊದಲು ಇವಳನ್ನು ಕಂಡಿಹೆನು ಎನ್ನುತಲಿ ॥೧೪೨೦॥

ನಾ ಮೊದಲು ಇವಳನ್ನು ಮುಟ್ಟಿಹೆನು ಎನ್ನುತಲಿ
ನಾನಿವಳ ವರಿಸುವೆನು ನಾನಿವಳ ವರಿಸುವೆನು
ಎನ್ನುತಲಿ ತಮ್ಮೊಳಗೆ ಹೊಯ್ದಾಡಿ ಬಡಿದಾಡಿ
ಕಲಹದಲಿ ಈರ್ವರೂ ಪ್ರಾಣಗಳ ಬಿಟ್ಟಿಹರು ॥೧೪೨೧॥

ಈ ಪರಿಯ ಸೋದರರು ಒಬ್ಬಳನು ಬಯಸುತಲಿ
ತಮ್ಮೊಳಗೆ ಕಚ್ಚಾಡಿ ಅಸುಗಳನು ನೀಗಿಹರು
ಕಾರಣದಿ ಐವರಿಗೆ ಸತಿಯಾದ ದ್ರೌಪದಿಯು
ಕಲಹಕ್ಕೆ ಕಾರಣವು ಆಗದೇ ಇರುತಿರಲಿ ॥೧೪೨೨॥

ನಿಮಗೊಂದುಪಾಯವನು ಹೇಳುವೆನು ಕೇಳುವುದು
ಒಂದೊಂದು ವರುಷದಾ ಪರ್ಯಂತ ಕಾಲದಲಿ
ಒಬ್ಬೊಬ್ಬ ಪತಿಯೊಡನೆ ದ್ರೌಪದಿಯು ಇರುತಿಹುದು
ವರುಷ್ಯೆದುಕೊಮ್ಮೆಮ್ಮೆ ಒಬ್ಬೊಬ್ಬನೊಡನಿಹುದು ॥೧೪೨೩॥

ಮಂಚದಲಿ ದ್ರೌಪದಿಯ ಸಹಿತದಲಿ ಪತಿಯಿರಲು
ಸೋದರನು ನೋಡಿದರೆ ಪಾಪವನು ನೀಗಲಿಕೆ
ವರುಷವೊಂದುಪರ್ಯಂತ ತೀರ್ಥಗಳ ಯಾತ್ರೆಯನು
ಮಾಡುತಲಿ ಚರಿಸುವುದು ಎಂದಿಹನು ಮುನಿವರನು ॥೧೪.೪॥

ನಾರದರ ಹಿತನುಡಿಯ ಕೇಳುತಲಿ ಧರ್ಮಜನು
ಸಕಲರೂ ಸೋದರರು ಸಮ್ಮತಿಸಿ ನಮಿಸುತಿರೆ
ನಿಮಗೆಲ್ಲ ಮಂಗಳವು ಶುಭವಾಗಲೆನ್ನುತಲಿ
ನಾರದರು ನಡೆದಿಹರು ನರಯಣನ ನೆನೆಯುತಲಿ ॥೧೪೨೫॥

**ಶಯ್ಯೆಯಲಿ ಧರ್ಮಜನ ದ್ರೌಪದಿಯ ಕಾಣುತಲಿ**
**ಅರ್ಜುನನು ತೀರ್ಥಗಳ ಯಾತ್ರೆಯನು ಕೈಕೊಂಡ ॥**

ಕೇಳುವುದು ಜನಮೇಜಯಾವನೀಶ ಮುಂದಣದ
ದುರ್ಘಟನೆಯೊಂದನ್ನು ಪಾರ್ಥಂಗೆ ವರುಷೊಂದು
ಕಾಲವನು ದೇಶವನು ತಿರುಗುತಲಿ ತೀರ್ಥಗಳ
ಕ್ಷೇತ್ರಗಳ ಚರಿಸುವಾ ವಿಧಿಯಾಯ್ತು ಹೇಳುವೆನು ॥೧೪೨೬॥

ಇಂತಿರಲು ಒಂದಿರುಳು ಭೂಸುರರ ಗೋವುಗಳ
ಕಳ್ಳರುಗಳಪಹರಿಸೆ ವಿಪ್ರರಾ ವೃಂದವದು
ಬಾಯ್ಬಿಡುತ ಹಲುಬುತಲಿ ಗೋಳಿಡುತ ರೋದಿಸುತ
ಅರಮನೆಯ ಬಾಗಿಲಿಗೆ ಬರುತಲಿರೆ ಅರ್ಜುನನು ॥೧೪೨೭॥

ಕೇಳುತಲಿ ಕಳವಳದಿ ವಿಪ್ರರನು ಭರದಲ್ಲಿ
ಬಂದಿರುವ ಕಷ್ಟಗಳ ಕೇಳುತಲಿ ಸಂತೈಸಿ,
ದುಷ್ಟರಾ ಕಳ್ಳರನು ಬೆನ್ನಟ್ಟಿ ಸಂಹರಿಸಿ
ನಿಮ್ಮಯಾ ಗೋವುಗಳ ತಂದೀವೆ ಎನ್ನುತಲಿ ॥೧೪೨೮॥

ನುಡಿಯುತಲಿ ವಿಪ್ರರನು ಕಳುಹಿಸುತ ಅರ್ಜುನನು
ಧನುವನ್ನು ಶರಗಳನು ಕೊಳ್ಳಲಿಕೆ ಧರ್ಮಜನು
ಮಲಗಿರುವ ಸೆಜ್ಜೆಯಾ ನಿಲಯಕ್ಕೆ ಬರುತಿರಲು
ಮುನ್ನಿನಲಿ ನಾರದರ ನುಡಿಗಳನು ನೆನೆಯುತಲಿ ॥೧೪೨೯॥

ಸತಿ ಪತಿಯು ಶಯ್ಯೆಯಲಿ ಮಲಗಿರುದ ನೋಡಿದರೆ
ಪಾತಕವು ಬಹುದೆಂದು ಮುನಿವರನು ನುಡಿದಿಹನು
ಈ ಸಮಯ ಧರ್ಮಜನು ಸತಿಯೊಡನೆ ಮಲಗಿಹನು
ನಾನೀಗ ಕಾಂಬುವದು ಪಾಪವದು ಎನಿಸುವುದು ॥೧೪೩೦॥

ಆದೊಡೀ ಭೂಸುರರ ಕಷ್ಟಗಳ ಕಳೆಯದಿರೆ
ಪಾಪವುದು ಎನಿಸುವುದು ಇದು ಉಭಯ ಸಂಕಟವು
ಏನನ್ನು ಮಾಡುವದು ಎನ್ನುತಲಿ ಚಿಂತಿಸುತ
ಶಾಸ್ತ್ರದಾ ದೃಷ್ಟಿಯಲಿ ಯೋಚಿಸುತಲಿರುತಿರಲು ॥೧೪೩೧॥

ಧರ್ಮಸುತ ಶಯ್ಯೆಯಲಿ ಸತಿಯೊಡನೆ ಮಲಗಿರುವ
ಕಾಣುತಿರೆ ದೋಷವನು ಕಳೆಯಲಿಕೆ ಹನ್ನೆರಡು
ವರುಷಗಳ ಪರ್ಯಂತ ತೀರ್ಥಗಳ ಕ್ಷೇತ್ರಗಳ
ಪರ್ಯಟನ ಗೈಯ್ಯುವಾ ವಿಧಿಯುಂಟು ಆದೊಡೆಯು ॥೧೪೩೨॥

ವಿಪ್ರರಾ ಕಷ್ಟಗಳ ಕಳೆಯದಾ ಪಾಪಕ್ಕೆ
ಶಾಸ್ತ್ರದಲಿ ಧರ್ಮದಲಿ ಪರಿಹಾರ ಒಂದಿಲ್ಲ
ನರಕವೇ ಗತಿಯಿಹುದು ಎನ್ನುತಲಿ ನಿಶ್ಚಯಿಸಿ
ಧರ್ಮಜನು ಮಲಗಿರುವ ಶಯ್ಯೆಯಾ ಗೃಹಹೊಕ್ಕು ॥೧೪೩೩॥

ಶರಗಳನು ಧನುವನ್ನು ಕೊಳ್ಳುತಲಿ ಫಲುಗುಣನು
ನಿಮ್ಮನ್ನು ಕಂಡುದಕೆ ಹನ್ನೆರಡು ವರುಷಗಳ
ಪರ್ಯಂತ ತೀರ್ಥಗಳ ಪರ್ಯಟನ ಗೈಯ್ಯುವೆನು
ಎನ್ನುತಲಿ ಧರ್ಮಜನ ಚರಣಕ್ಕೆ ಎರಗುತಲಿ ॥೧೪೩೪॥

ಹೊರಟಂತು ಕಳ್ಳರನು ಕುರಿಗಳಾ ಪರಿಯಲ್ಲಿ
ಸದೆಬಡಿದು ಗೋವುಗಳ ವಿಪ್ರರಿಗೆ ಈಯುತಿರೆ
ಮಂಗಳವು ಶುಭಕರವು ನಿನಗೆಂದು ಹರಸಿದರು
ಅರ್ಜುನನ ಕೀರ್ತಿಯದು ಮೂಜಗದಿ ಮೆರೆದಿಹುದು ॥೧೪೩೫॥

**ಆ ನಾಗಲೋಕದಾ ನಾಗಪತಿಸುತೆಯನ್ನು ।**
**ನಾಗಿಣಿ ಉಲೂಪಿಯನು ಕಲಿಪಾರ್ಥ ವರಿಸಿದನು ॥**

ಕೇಳುವುದು ಪಾರಿಕ್ಷಿತವನೀಶ ನಂತರದಿ
ಆಪಾರ್ಥ ಜಾಹ್ನವಿಯ ತೀರಕ್ಕೆ ಐತಂದು
ನದಿಯೊಳಗೆ ಮೀಯುತಲಿ ಅರ್ಘ್ಯವನು ಈಯುತಲಿ
ಯಜ್ಞವನು ಮಾಡಲಿಕೆ ಅತ್ತಿತ್ತ ನೋಡುತಿರೆ ॥೧೪೩೬॥

ಎದುರಿನಲಿ ಓರ್ವಳಾ ಸುಂದರಿಯು ನಾಗವಧು
ಸುಳಿಯುತಲಿ ಬೆಡಗಿನಲಿ ಒಯ್ಯಾರ ಒನಪಿನಲಿ
ಅರ್ಜುನನ ಮೋಹಿಸುತ ಮರುಳಾಗಿ ಮಾಡುತಲಿ
ಪಾತಾಳ ಲೋಕಕ್ಕೆ ಕೊಂಡೊಯ್ದಳರಮನೆಗೆ ॥೧೪೩೭॥

ಅಲ್ಲಿಯೇ ಸಾಮಗ್ರಿ ಸಲಕರಣೆ ಎಲ್ಲವೂ
ಇರುತಿರುವ ಯಜ್ಞದಾ ಕುಂಡವನು ನೋಡುತಲಿ
ಯಜ್ಞವನು ಗೈಯ್ಯುತಲಿ ಅರ್ಜುನನು ಎದುರಿನಲಿ
ನಿಂದಿರುವ ವಧುವಿಂಗೆ ನೀನಾರು ಎಂದಿಹನು ॥೧೪೩೮॥

ನಾನಲ್ಲಿ ಇರುತಿಹೆನು ಈ ದೇಶವಾವುದಿದೆ
ಎನ್ನುತಿರೆ ಫಲುಗುಣನು ಇದು ನಾಗಲೋಕವಿದೆ
ಐರಾವತೆಂಬುವಾ ನಾಗನಾ ವಂಶದಲಿ
ಜನಿಸಿರುವ ಕೌರವ್ಯ ಅಹಿಪತಿಯ ಮಗಳಿಹೆನು ॥೧೪೩೯॥

ಉಲೂಪಿ ಎಂಬುವಾ ಹೆಸರಿನಲಿ ಖ್ಯಾತಳಿಹೆ
ನೀರಿನಲಿ ಸ್ನಾನವನು ಗೈಯುತಿಹ ನಿನ್ನನ್ನು
ನೋಡುತಲಿ ಮನ್ಮಥನ ಬಾಧೆಯಲಿ ಸಿಲುಕುತಲಿ
ಪಾತಾಳ ಲೋಕಕ್ಕೆ ನಿನ್ನನ್ನು ತಂದಿಹೆನು ॥೧೪೪೦॥

ಕಾಮದಾ ಬಾಧೆಯಲಿ ತೊಳಲುತಲಿ ಬಳಲಿರುವ
ಎನ್ನನ್ನು ರಮಿಸುತಲಿ ತಣಿಸುವುದು ಎಂದಿಹಳು
ಅರ್ಜುನನು ಕೇಳುತಲಿ ಅಣ್ಣನಾ ಆಜ್ಞೆಯಲಿ
ನಾ ಬ್ರಹ್ಮಚರ್ಯೆಯನು ಪಾಲಿಸುತಲಿಹೆನೆಂದ ॥೧೪೪೧॥

ಧರ್ಮವನು ಮೀರುತಲಿ ನಾನೆಂದು ನಡೆಯದಿಹೆ
ನಿನ್ನಯಾ ಇಚ್ಛೆಯನು ಸಲಿಸಲಿಕೆ ಆಗದದು
ಎನ್ನುತಿರೆ ಫಲುಗುಣನು ನಾಗಸುತೆ ದೈನ್ಯದಲಿ
ಎನ್ನಯಾ ಕಾಮವನು ನೀ ಸಲಿಸದಿರ್ದೊಡೆಯು ॥೧೪೪೨॥

ಇಲ್ಲಿಯೇ ಎದುರಿನಲಿ ಪ್ರಾಣವನು ತ್ಯಜಿಸುವೆನು
ಸ್ತ್ರೀ ಹತ್ಯೆ ದೋಷವದು ನಿನ್ನನ್ನು ಸೋಂಕುವುದು
ಎನ್ನಯಾ ಪ್ರಾಣವನು ಉಳಿಸುವುದು ಧರ್ಮವದು
ಎನ್ನುತಿರೆ ಅರ್ಜುನನು ಉಲೂಪಿಯನು ವರಿಸುತಲಿ ॥೧೪೪೩॥

ಮುದದಿಂದ ರಮಿಸುತಲಿ ಸಂತುಷ್ಟಗೊಳಿಸುತಲಿ
ರಾತ್ರಿಯನು ಕಳೆಯುತಿರೆ ಮರುದಿನದಿ ಸಂತಸದಿ
ನಾಗಸುತೆ ಅರ್ಜುನನ ನದಿತಟದೊಳಿರಿಸುತಲಿ
ಮಗುದೊಮ್ಮೆ ಪಾರ್ಥನನ ಬಿಗಿದಪ್ಪಿಕೊಳ್ಳುತಲಿ ॥೧೪೪೪॥

ಭೂಮಿಯೊಳು ಅಪ್ರತಿಮ ಸಾಹಸಿಯು ಆದಂತೆ
ನೀರಿನಲಿ ಅಪ್ರತಿಮ ಸಾಹಸಿಯು ನೀನಾಗು
ಜಲಚರದ ಪ್ರಾಣಿಗಳು ವಶವಾಗಿ ಇರುತಿರಲಿ
ಎನ್ನುತಲಿ ಹರಸುತಲಿ ನಿಜನಿಲಯಕೈದಿಹಳು ॥೧೪೪೫॥

ಕೆಲದಿನದಿ ನಾಗಸುತೆ ಗರ್ಭವನು ಧರಿಸುತಲಿ
ನವಮಾಸ ತುಂಬುತಿರೆ ಸುಕುಮಾರ ಜನಿಸುತಲಿ
ನಿಜಪಿತನ ಅರ್ಜುನನ ಪರಿಯಲ್ಲಿ ಜಗದೊಳಗೆ
ಅದ್ಭುತ ಪರಾಕ್ರಮಿಯು ಎನ್ನುತಲಿ ಬೆಳಗಿದನು ॥೧೪೪೬॥

ಪಾರಿಕ್ಷಿತವನೀಶ ಕೇಳುವುದು ಬಳಿಕಿನಲಿ
ಆ ಪಾರ್ಥ ಉನ್ನತದ ಹಿಮಗಿರಿಯ ತಪ್ಪಲಲಿ
ಪಾವನದ ನದಿಗಳಲಿ ಸ್ನಾನವನು ಗೈಯ್ಯುತಲಿ
ಮುನಿಗಳಿಗೆ ಎರಗುತಲಿ ಪಯಣದಲಿ ನಡೆದಿಹನು ॥೧೪೪೭॥

**ಫಲಗುಣನು ಚಿತ್ರಾಂಗದೆ ಚೆಲುವೆಯನು ವರಿಸುತಲಿ**
**ಜಗಖ್ಯಾತ ಕಲಿ ಬಭ್ರುವಾಹನನ ಪಡೆದಿಹನು ॥**

ಪೂರ್ವದಾ ಕ್ಷೇತ್ರಗಳ ತೀರ್ಥಗಳ ಚರಿಸುತಲಿ
ಅಂಗವಂಗಾದಿಗಳ ಕಲಿಂಗವನು ದಾಟುತಲಿ
ಸಾಗರದ ತೀರ್ಥಗಳ ನೋಡುತಲಿ ಮೀಯುತಲಿ
ಸುಂದರದ ಮಣಿಪುರದ ನಗರಕ್ಕೆ ಬಂದಿಹನು ॥೧೪೪೮॥

ನೃಪವರನ ಆ ಚಿತ್ರವಾಹನನ ಕಾಣಲಿಕೆ
ಅರ್ಜುನನು ಬರುತಿರಲು ಅರಮನೆಯ ತೋಟದಲಿ
ಅರಳಿರುವ ಗುಲಾಬಿಯಾ ಅಲರಂತೆ ಶೋಭಿಸುವ
ಆ ರಾಜಸುತೆಯನ್ನು ನೋಡಿದನು ಚಕಿತದಲಿ ॥೧೪೪೯॥

ಒಬ್ಬರರನೊಬ್ಬರನು ಕಣ್ಣನ್ನು ಮಿಟುಕಿಸದೆ
ನೆಟ್ಟಿರುವ ನೋಟದಲಿ ನೋಡುತಿರೆ ಈರ್ವರೂ
ಹೃದಯದೊಳು ಪ್ರೇಮದಾ ಬೀಜವದು ಮೊಳೆಯುತಲಿ
ಆ ಕ್ಷಣದಿ ಪ್ರಣಯದಾ ಬಲೆಯೊಳಗೆ ಸಿಲುಕಿದರು ॥೧೪೫೦॥

ಸುರಸ್ತ್ರೀಯು ಸೌಂದರ್ಯ ಸೊಬಗಿನಲಿ ಶೋಭಿಸುವ
ಸುಂದರಿಯು ನೀನಾರು ಎನ್ನುತಲಿ ಫಲುಗುಣನು
ಕೇಳುತಿರೆ ಮಣಿಪುರದ ರಾಜ್ಯದಾ ಭೂಪತಿಯು
ಚಿತ್ರಾಂಗದಾ ನಾಮ ಸುಕುಮಾರಿ ನಾನಿಹೆನು ||೧೪೫೧||

ಎನ್ನುತಿರೆ ರಾಜಸುತೆ ನಿನ್ನನ್ನು ನೋಡುತಲಿ
ಮೋಹಿಸುತ ಮನ್ಮಥನ ಬಾಣದಲಿ ಸಿಲುಕಿಹೆನು
ಎನ್ನನ್ನು ವರಿಸುತಲಿ ಮನವನ್ನು ತಣಿಸುವುದು
ಎನ್ನುತಿರೆ ಅರ್ಜುನನು ರಾಜಸುತೆ ನುಡಿದಿಹಳು ||೧೪೫೨||

ಎನ್ನಯಾ ಹಿತನಿದಕೆ ಒಪ್ಪಿದೊಡೆ ಸಂತಸದಿ
ನಿನ್ನನ್ನು ವರಿಸುವೆನು ಎನ್ನುತಲಿ ನುಡಿದಿಹಳು
ಅರ್ಜುನನು ಆ ಚಿತ್ರವಾಹನನ ಭೂಪತಿಯ
ಕಾಣುತಲಿ ತನ್ನಯಾ ಇಷ್ಟವನು ನುಡಿದಿಹನು ||೧೪೫೩||

ನಾ ವೀರ ಕ್ಷತ್ರಿಯನು ನಿನ್ನಯಾ ಸುತೆಯನ್ನು
ಎನಗಿತ್ತು ಮದುವೆಯನು ಮಾಡುವುದು ಎನ್ನುತಿರೆ
ಕ್ಷತ್ರಿಯರ ಶೌರ್ಯದಾ ತೇಜದಲಿ ಹೊಳೆಯುತಿಹ
ಪಾರ್ಥನನು ನೋಡುತಲಿ ನೃಪವರನು ನುಡಿದಿಹನು ||೧೪೫೪||

ಕ್ಷಾತ್ರದಾ ತೇಜದಲಿ ಹೊಳೆಯುತಿಹ ನಿನ್ನನ್ನು
ನೋಡಿದೊಡೆ ನೀ ವೀರನೆಂಬುವದು ಕಾಣುವುದು
ನಿನ್ನಯಾ ಕುಲಗೋತ್ರವಾವುದಿದೆ ಪೇಳುವುದು
ಎನ್ನುತಿರೆ ಭೂಪತಿಯು ಅರ್ಜುನನು ನುಡಿದಿಹನು ||೧೪೫೫||

ಜಗದೊಳಗೆ ಖ್ಯಾತಮಿಹ ಕುರುಕುಲದ ಪಾಂಡುವಿನ
ಸುತನಿಹೆನು ಅರ್ಜುನನು ಎಂಬುವಾ ಹೆಸರಿಹುದು
ಬಿಲ್ಲಿನಾ ವಿದ್ಯೆಯಲಿ ಎನಗಾರು ಸಮರಿಲ್ಲ
ಮೂಲೋಕ ಜಯಿಸುವಾ ವೀರನಿಹೆ ಎಂದಿಹನು ||೧೪೫೬||

ಆ ಚಿತ್ರವಾಹನನು ಕೇಳುತಲಿ ಸಂತಸದಿ
ಕುರುಕುಲದ ಸಂಭೂತ ಶ್ರೇಷ್ಠನೇ ಅರ್ಜುನನೆ
ಎನಗೀಕೆ ಒಬ್ಬಳೇ ಮಗಳಿಹಳು ಬೇರಿಲ್ಲ
ಇವಳಲ್ಲಿ ಜನಿಸುವಾ ಮಗನನ್ನು ತಪ್ಪದೆಯೆ ||೧೪೫೭||

ನಮಗೀಯಲೊಪ್ಪಿದರೆ ಸುತೆಯನ್ನು ಈಯುವೆನು
ಎನ್ನುತಲಿ ನುಡಿಯುತಿರೆ ಅರ್ಜುನನು ಸಮ್ಮತಿಸೆ
ಮಗಳನ್ನು ಈಯುತಲಿ ಮದುವೆಯನು ಮಾಡುತಿರೆ
ಚಿತ್ರಾಂಗದೆಯೊಡನೆ ಅರ್ಜುನನು ರಮಿಸಿದನು ||೧೪೫೮||

ಕೆಲವು ದಿನ ಉರುಳುತಿರೆ ಆ ಚಿತ್ರ ನಾಗಸುತೆ
ಗರ್ಭವನು ಧರಿಸುತಲಿ ಅದ್ಭುತ ಪರಾಕ್ರಮಿಯು
ಜಗದೊಳಗೆ ಅತಿಬಲನು ಬಹು ಶೂರ ಎನಿಸಿರುವ
ಕಲಿ ಬಭ್ರುವಾಹನನ ಸುತನನ್ನು ಪೆತ್ತಿಹಳು ||೧೪೫೯||

ವರುಷಗಳ ಮೂರನ್ನು ಕಳೆಯುತಿರೆ ಅರ್ಜುನನು
ಸತಿ ಚಿತ್ರಾಂಗದೆಯನಪ್ಪುತಲಿ ಗಾಢದಲಿ
ಶಿಶುವಿನಾ ಶಿರವನ್ನು ಸವರುತಲಿ ಮೂಸುತಲಿ
ನೃಪನನ್ನು ನಮಿಸುತಲಿ ಪಯಣವನು ಬೆಳೆಸಿದನು ||೧೪೬೦||

**ತೆಂಕಣಕೆ ಸಾಗುತಲಿ ತುಂಗೆಯಲಿ ಮೀಯುತಲಿ |**
**ಫಲುಗುಣನು ಪಯಣದಲಿ ಗೋಕರ್ಣಕೈದಿದನು ||**

ಬಳಿಕಲಾ ಅರ್ಜುನನು ತೆಂಕಣಕೆ ಸಾಗುತಲಿ
ಗೋದೆಯಲಿ ಕೃಷ್ಣೆಯಲಿ ಮೀಯುತಲಿ ನಡೆಯುತಲಿ
ದಕ್ಷಿಣದ ಕಾಶಿ ಎಂದೆನಿಸುತಲಿ ಮೆರೆಯುತಿಹ
ಪಂಪಾಪತೀಪುರಕೆ ಬರುತಿರಲು ಸಂತಸದಿ ||೧೪೬೧||

ಪಂಪಾ ಸರೋವರದಿ ಪಾವನದ ತುಂಗೆಯಲಿ
ಸ್ನಾನವನುಗೈಯ್ಯುತಲಿ ನಿರ್ಮಲದ ಮನಸಿನಲಿ
ಹರಹರನೆ ರಕ್ಷಿಪುದು ಪುರಹರನೆ ಕರುಣಿಪುದು
ಎನ್ನುತಲಿ ಪಂಪಾಪುರೇಶ್ವರನ ಪೂಜಿಸುತ ||೧೪೬೨||

ಪಯಣವನು ಬೆಳೆಸುತಲಿ ಕಾವೇರಿ ತೀರದಲಿ
ಶೋಭಿಸುವ ಶ್ರೀರಂಗನಾಥನನು ಅರ್ಚಿಸುತ
ತೆಂಕಣದ ತುದಿಯಲ್ಲಿ ಮೂರರಾ ಕಡಲುಗಳ
ಸಂಗಮದಿ ರಾಮೇಶ್ವರೆಡೆಯಲ್ಲಿ ಬರುತಿರಲು ||೧೪೬೩||

ಹರುಷದಲಿ ಸಾಗರದಿ ಸ್ನಾನವನು ಗೈಯ್ಯುತಲಿ
ಭಕುತಿಯಲಿ ಭಾವದಲಿ ಶ್ರೀರಾಮ ಸ್ಥಾಪಿಸಿದ
ಪುಣ್ಯ ರಾಮೇಶ್ವರನ ಲಿಂಗವನು ಪೂಜಿಸುತ
ಹರಹರನೆ ಪೊರೆಯುವುದು ರಾಮೇಶ ರಕ್ಷಿಪುದು ||೧೪೬೪||

ಎನ್ನುತಲಿ ಸಾಷ್ಟಾಂಗವೆರಗುತಲಿ ಭಕುತಿಯಲಿ
ಸನಿಹದಲಿ ಇಕ್ಷ್ವಾಕು ಕುಲತಿಲಕ ರಾಘವನು
ಸುಗ್ರೀವ ಹನುಮಂತ ಮೊದಲಾದ ವಾನರರ
ನೆರವಿನಲಿ ನಿರ್ಮಿಸಿದ ಸೇತುವೆಯ ನೋಡಿದನು ||೧೪೬೫||

ಬಳಿಕಿನಲಿ ಫಲಪುಷ್ಪ ದ್ರುಮನಿಕರ ಮಧ್ಯದಲಿ
ಪ್ರಕೃತಿಯಾ ಸೌಂದರ್ಯ ಸೊಬಗಿನಲಿ ಶೋಭಿಸುವ
ಸೌಭದ್ರ ಪೌಲೋಮ ಅಗಸ್ತ್ಯ ಕಾರಂಧ
ಭರದ್ವಾಜ ಎಂಬುವಾ ಪಂಚಕದ ಸರಸಿಗಳ ||೧೪೬೬||

ರಮ್ಯದಾ ಪರಿಸರಕೆ ಬರುತಿರಲು ಅರ್ಜುನನು
ಒಬ್ಬರೂ ಸುಳಿಯದಿಹ ನಿರ್ಜನದ ಸುಂದರದ
ಸರಸಿಗಳ ಕಾಣುತಲಿ ಸನಿಹದಲಿ ಇರುತಿರುವ
ಋಷಿಗಳಿಗೆ ಎರಗುತಲಿ ಕೇಳಿದನು ಕೌತುಕದಿ ॥೧೪೬೭॥

ಸುಂದರದ ಸರಸಿಗಳ ತ್ಯಜಿಸಲಿಕೆ ಕಾರಣವು
ಏನೆಂದು ಕೇಳುತಿರೆ ಒಂದೊಂದು ಮೊಸಳೆಯದು
ಸರಸಿಯಲಿ ವಾಸಿಸುತ ಸ್ನಾನವನು ಗೈಯ್ಯುವಾ
ಮನುಜರನು ಸೆಳೆದೊಯ್ದು ಭಕ್ಷಿಪುದು ಎಂದಿಹರು ॥೧೩೬೮॥

ಅರ್ಜುನನು ಕೇಳುತಲಿ ಸ್ನಾನವನು ಮಾಡಲಿಕೆ
ಸೌಭದ್ರ ತೀರ್ಥದೊಳು ಧುಮುಕುತಿರೆ ಮೊಸಳೆಯದು
ಭರದಿಂದ ಅರ್ಜುನನ ಕಾಲ್ಪಿಡಿದು ಎಳೆಯುತಲಿ
ನುಂಗಲಿಕೆ ಯತ್ನಿಸುತಲಿರುತಿರಲು ಭರದಲ್ಲಿ ॥೧೪೬೯॥

ಫಲುಗುಣನು ಮೊಸಳೆಯಾ ದವಡೆಗಳ ಬಿಗ್ಗಿಸುತ
ಕಾಲ್ಬಿಡಿಸಿಕೊಳ್ಳುತಲಿ ಮೊಸಳೆಯನು ಎಳೆಯುತಲಿ
ಮೇಲಕ್ಕೆ ಬರುತಿರಲು ಆಕ್ಷಣದಿ ಮೊಸಳೆಯದು
ಸುಂದರಿಯು ಸ್ತ್ರೀಯಳಾ ರೂಪವನು ತಾಳುತಲಿ ॥೧೪೭೦॥

ಅರ್ಜುನನ ಬಳಿಯಲ್ಲಿ ನಿಲ್ಲುತಿರೆ ಕೌತುಕದಿ
ನೀನಾರು ಹೇಳುವುದು ಮೊಸಳೆಯಾ ರೂಪದಲಿ
ಇಂದಿನಾ ಪರ್ಯಂತ ನೀರಿನೊಳು ನೀನಿರ್ದೆ
ಎನ್ನುತಲಿ ನುಡಿಯುತಿರೆ ಆ ಲಲನೆ ನುಡಿದಿಹಳು ॥೧೪೭೧॥

ಸ್ವರ್ಗದಲಿ ವಿಹರಿಸುವ ನಾನೊಬ್ಬಳಪ್ಸರೆಯು
ಒಂದುದಿನ ಸೌರಭಿಯು ಬುದ್ಬುದಾ ಸಮೀಚಿಯರ
ವರಲತಾ ನಾಲ್ವರಾ ಗೆಳತಿಯರ ಸಹಿತದಲಿ
ಕುಬೇರನಾ ಅರಮನೆಗೆ ನಡೆದಿರಲು ಮಾರ್ಗದಲಿ ॥೧೪೭೨॥

ಸುಂದರ ಶರೀರದಲಿ ಬೆಳಗುತಿಹ ದ್ವಿಜನೋರ್ವ
ತಪಗೈಯ್ಯುತಿರುವುದನು ಕಾಣುತಲಿ ಮನಸೋತು
ಐವರೂ ಆತನಾ ರೂಪಕ್ಕೆ ಮರುಳಾಗಿ
ತಪವನ್ನು ಕೆಡಿಸಲಿಕೆ ಹಾಡುತಲಿ ಕುಣಿಯುತಲಿ ॥೧೪೭೩॥

ವಿಘ್ನವನು ಮಾಡುತಿರೆ ಎಚ್ಚರವಗೊಳ್ಳುತಲಿ
ಎಮ್ಮನ್ನು ಮೋಹಿಸದೆ ಆ ವಿಪ್ರ ಕೋಪದಲಿ
ಮೊಸಳೆಯಾ ರೂಪಗಳ ತಾಳುತಲಿ ಶತವರುಷ
ನೀರೊಳಗೆ ವಾಸಿಪುದು ಎನ್ನುತಲಿ ಶಪಿಸಿಹನು ॥೧೪೭೪॥

ಭಯಭೀತರಾಗುತಲಿ ಚಿಂತೆಯಲಿ ಕಳವಳದಿ
ಯೌವ್ವನದ ಮದದಿಂದ ಪೀಡೆಯನು ಕೊಟ್ಟಿಹೆವು
ಅಬಲೆಯರು ನಾವಿಹೆವು ಅಪರಾಧ ಮನ್ನಿಪುದು
ಎಮ್ಮನ್ನು ಮನ್ನಿಪುದು ಎನ್ನುತಲಿ ಪ್ರಾರ್ಥಿಸಲು ॥೧೪೭೫॥

ಕರುಣೆಯಲಿ ಆ ವಿಪ್ರ ವರುಷ ಶತ ಕಳೆಯುತಲಿ
ಕಲಿಪಾರ್ಥ ನಿಮ್ಮನ್ನು ನೀರಿಂದ ಹೊರತೆಗೆಯೆ
ಬಂಧನವು ಕಳಚುತಲಿ ನಿಜರೂಪ ತಳೆಯುವಿರಿ
ಎನ್ನುತಲಿ ಹರಸುತಲಿ ಅಭಯವನು ಇತ್ತಿಹನು ॥೧೪೭೬॥

ಆ ಸಮಯ ದೇವಮುನಿ ನಾರದರು ಐತಂದು
ತಂಕಣದ ತೀರದಲಿ ಶೋಭಿಸುವ ಸುಂದರದ
ಸರಸಿಗಳ ಮಧ್ಯದಲಿ ನೀವುಗಳು ವಾಸಿಪುದು
ಎನ್ನುತಲಿ ಮಾರ್ಗವನು ಸೂಚಿಸುತ ತೆರಳಿದರು ॥೧೪೭೭॥

ಇಂದೆನ್ನ ಶಾಪದಾ ಬಂಧನವು ತೊಲಗಿಹುದು
ಉಳಿದೆನ್ನ ನಾಲ್ವರಾ ಗೆಳತಿಯರ ಬಂಧನವ
ಕಳಚುವುದು ಎನ್ನುತಿರೆ ಅರ್ಜುನನು ಭರದಲ್ಲಿ
ಸರಸಿಗಳ ನಾಲ್ಕರಲಿ ವಾಸಿಸುವ ಮೊಸಳೆಗಳ ॥೧೪೭೮॥

ಹೊರಗೆಳೆದು ತರುತಲಿರೆ ಆ ಕ್ಷಣದಿ ನಾಲ್ವರೂ
ಸುಂದರಿಯರಪ್ಸರೆಯು ನಿಜರೂಪ ತಾಳುತಲಿ
ಅರ್ಜುನಗೆ ಎರಗುತಲಿ ಸ್ವರ್ಗಕ್ಕೆ ತೆರಳುತಿರ
ಕಲಿಪಾರ್ಥ ಸರಸಿಗಳ ಪಾವನವ ಗೈದಿಹನು ॥೧೫೭೯॥

ಆ ಸಮಯ ಸತಿ ಚಿತ್ರಾಂಗನೆಯ ನೆನೆಯುತಲಿ
ಕಾಂಬುವಾ ಕೌತುಕದಿ ಮಣಿಪುರಕೆ ಬಂದಿಹನು
ಆ ಚಿತ್ರ ವಾಹನನು ಸತ್ಕಾರ ಗೈಯ್ಯುತಿರೆ
ಅರ್ಜುನನು ಪರ್ಯಟನ ವೃತ್ತಾಂತವರುಹಿದನು ॥೧೪೮೦॥

ಕೆಲದಿನಗಳುರುಳುತಿರೆ ಹೊರಡಲಿಕೆ ಅನುವಾಗಿ
ಈ ಸುತನು ಕಲಿ ಬಬ್ರುವಾಹನನು ಎನ್ನಂತೆ
ಜಗದೊಳಗೆ ವಿಕ್ರಮನು ಅತಿಶೂರನೆನಿಸುವನು
ಇವನನ್ನು ಜಯಿಸುವದು ದುಸ್ಸಾಧ್ಯವೆಂದಿಹನು ॥೧೪೮೧॥

ಪೂರ್ವದಲಿ ನಾ ನುಡಿದ ಪರಿಯಲ್ಲಿ ಈತನನು
ಕನ್ಯೆಯಾ ಶುಲ್ಕಾಗಿ ನಿನಗೀವೆ ಸ್ವೀಕರಿಸು
ನಾನಿಂದು ಹೊರಡುವೆನು ಪಯಣದಲಿ ಎನ್ನುತಲಿ
ಆ ಚಿತ್ರವಾಹನಗೆ ಅರ್ಜುನನು ನುಡಿದಿಹನು ॥೧೪೮೨॥

ಆಗಲಾ ಸತಿ ಚಿತ್ರ ಭರದಿಂದ ಐತಂದು
ನಿಮ್ಮಯಾ ವಿರಹವನು ನಾನೆಂತು ಸಹಿಸುವೆನು
ಎನ್ನುತಲಿ ದುಃಖವದು ಉಮ್ಮಳಿಸಿ ಉಕ್ಕುತಲಿ
ಕಂಬನಿಯ ಸುರಿಸುತಲಿ ರೋಧಿಸುತ ನುಡಿಯುತಿರೆ ॥೧೪೮೩॥

ಚಿಂತೆಯನು ಮಾಡದಿರು ಹೇ ಚಿತ್ರ ಸಾಧ್ವಿಯೆ
ಎಮ್ಮಣ್ಣ ಧರ್ಮಜನು ಬೇಗನೇ ಸಕಲರಾ
ರಾಜರನು ಜಯಿಸುತಲಿ ರಾಜಸೂಯಾಧ್ವರವ
ಮಾಡುವನು ಆ ಸಮಯ ನಿನ್ನಯಾ ಪಿತಬಹನು ॥೧೪೮೪॥

ಪಿತನೊಡನೆ ಸುತಬಭ್ರುವಾಹನನ ಸಹಿತದಲಿ
ಸಂತಸದಿ ನೀ ಬಹುದು ಧರ್ಮಜನು ವಾಯುಜನು
ಸೋದರರು ಎಲ್ಲರೂ ನಿನ್ನನ್ನು ಪ್ರೀತಿಪರು
ಮಗು ಬಭ್ರುವಾಹನನ ಎಲ್ಲರೂ ಮುದ್ದಿಪರು ॥೧೪೮೫॥

ಮಹಮಾತೆ ವರದೇವಿ ನಿನ್ನತ್ತೆ ಆ ಕುಂತಿ
ಮುದ್ದಿನಾ ಸೊಸೆಯಾದ ನಿನ್ನನ್ನು ಪ್ರೀತಿಯಲಿ
ಬಿಗಿದಪ್ಪಿಕೊಳ್ಳುವಳು ನೀ ಧನ್ಯೆ ಎಂದೆನಿಪೆ
ಚಿಂತೆಯನು ಮಾಡದಿರು ಎನ್ನುತಲಿ ನುಡಿದಿಹನು ॥೧೪೮೬॥

ಎನ್ನಂತೆ ಈ ಮಗುವು ಅದ್ಭುತ ಪರಾಕ್ರಮಿಯು
ಮೂಲೋಕ ವೀರನೆಂದೆನಿಸುತಲಿ ಬೆಳಗುವನು
ಇವನನ್ನು ನೋಡುತಲಿ ವಿರಹವನು ಮರೆಯುತಲಿ
ಜೋಕೆಯಲಿ ರಕ್ಷಿಸುತ ಕಾಲವನು ಕಳೆಯುವುದು ॥೧೪೮೭॥

ಎನ್ನುತಲಿ ಸತಿಯನ್ನು ಸಂತೈಸಿ ಆ ಪಾರ್ಥ
ವರಚಿತ್ರವಾಹನನ ಬೀಳ್ಕೊಂಡು ಹೊರಡುತಲಿ
ಪಶ್ಚಿಮದ ಸಾಗರದ ತೀರದಲಿ ಮೆರೆಯುತಿಹ
ದಕ್ಷಿಣದ ವರಕಾಶಿ ಎಂದೆನಿಪ ಪಾವನದ ॥೧೪೮೮॥

ಗೋಕರ್ಣ ಕ್ಷೇತ್ರಕ್ಕೆ ಐತಂದು ಹರುಷದಲಿ
ಸಾಗರದಿ ಸ್ನಾನವನು ಮಾಡುತಲಿ ಶುದ್ಧದಲಿ
ಮಹಬಲನ ಈಶ್ವರನ ಲಿಂಗವನು ಪೂಜಿಸುತ
ಭಕುತಿಯಲಿ ಸ್ತುತಿಸುತಲಿ ಸಾಷ್ಟಾಂಗವೆರಗಿದನು ॥೧೪೮೯॥

**ಕಪಟಮುನಿ ವೇಷದಲಿ ರೈವತದಿ ಅರ್ಜುನನು ।**
**ಸುಭದ್ರೆಯನು ಅಪಹರಣಗೈಯ್ಯುತಲಿ ವರಿಸಿಹನು ॥**

ಬಳಿಕಲಾ ಕೊಂಕಣದ ಸಹ್ಯಾದ್ರಿ ಪರ್ವತದಿ
ಮೆರೆಯುತಿಹ ಘನಮಹಿಮ ತ್ರ್ಯಂಬಕೇಶ್ವರನ
ದರ್ಶನವಕೊಳ್ಳುತಲಿ ಪಯಣವನು ಬೆಳೆಸುತಲಿ
ಸೌರಾಷ್ಟ್ರ ದೇಶಕ್ಕೆ ಬರುತಿರಲು ಆ ಪಾರ್ಥ ॥೧೪೯೦॥

ಯಾದವನ ಮಾಧವನ ಶ್ರೀಕೃಷ್ಣರಾಯನನ
ನೆನೆಯುತಲಿ ಸಾಗುತಲಿ ಪ್ರಭಾಸದಾ ಕ್ಷೇತ್ರಕ್ಕೆ
ಬರುತಿರಲು ಶ್ರೀಕೃಷ್ಣನರಿಯುತಲಿ ಫಲುಗುಣನ
ಕಾಣುವಾ ಕಾತರದಿ ಧಾವಿಸುತ ಬಂದಿಹನು ॥೧೪೯೧॥

ಭಕುತರನು ಕಾಣುತಲಿ ಪ್ರೇಮವದು ಉಕ್ಕುತಿಹ
ದೇವನಾ ಪರಿಯಲ್ಲಿ ಭಕ್ತಸಖ ಪಾರ್ಥನನು
ನೋಡುತಲಿ ಆನಂದ ಸಾಗರವು ಉಕ್ಕುತಲಿ
ಬಿಗಿದಪ್ಪಿಕೊಂಡಿಹನು ಹರ್ಷಾಶ್ರು ಸುರಿಸುತಲಿ ॥೧೪೯೨॥

ಇಂದಿನಲಿ ಈರ್ವರೂ ಮಿತ್ರರುಗಳಲ್ಲದೆಯೆ
ಪೂರ್ವದಾ ಜನ್ಮದಲಿ ನರನಾರಣೇಂಬುವಾ
ಪ್ರೇಮದಾ ಸಖರಿರ್ದು ದಿವ್ಯದಾ ಆತ್ಮೀಯ
ಆನಂದ ಸಾಗರದಿ ಮುಳುಗಿದರು ಈರ್ವರು ॥೧೪೯೩॥

ಏನಿದುವೆ ಸನ್ಯಾಸಿ ವೇಷವನು ಧರಿಸಿರುವೆ
ತಾರುಣ್ಯ ವಯಸಿನಲಿ ಸನ್ಯಾಸಿತನವೆತ್ತ
ಸನ್ಯಾಸಿಯಾಗಲಿಕೆ ನಿನಸತಿಯು ದ್ರೌಪದಿಯು
ಸಮ್ಮತಿಯನಿತ್ತಿಹಳೆ ಎನ್ನುತಲಿ ನುಡಿದಿಹನು ॥೧೪೯೪॥

ಜಗದೊಳಿಹ ಅಣುರೇಣು ತೃಣಕಾಷ್ಠವೆಲ್ಲವನು
ವ್ಯಾಪಿಸಿಹ ನಿನಗಾವ ಅರಿಯದಾ ವಿಷಯವಿದೆ
ಸುಮ್ಮನೆ ಏತಕ್ಕೆ ನಗೆಯಾಟವಾಡುವಿರಿ
ಎನ್ನುತಲಿ ಅರ್ಜುನನು ಸಕಲವನು ತಿಳುಹಿದನು ॥೧೪೯೫॥

ಕೆಲವು ದಿನ ಹರುಷದಲಿ ಕಳೆಯುತಲಿ ಸುಂದರದ
ರೈವತಕ ಪರ್ವತಕೆ ಸಂತಸದಿ ಬಂದಿಹರು
ಮೊದಲಿಂಗೆ ಶ್ರೀಕೃಷ್ಣನರುಹಿದಾ ಪರಿಯಲ್ಲಿ
ಪರ್ವತವ ಶೃಂಗಾರಗೊಳಿಸಿರ್ದರತುಳದಲಿ ॥೧೪೯೬॥

ಬರುತಲಿರೆ ಈರ್ವರನು ಸ್ವಾಗತವ ಗೈಯ್ಯುತಲಿ
ಆದರದಿ ಸತ್ಕಾರಗೈದಿಹರು ಭವ್ಯದಲಿ
ಮೃಷ್ಟಾನ್ನದೂಟದಲಿ ಗಾಯನದಿ ನೃತ್ಯದಲಿ
ಆ ಪಾರ್ಥ ಶ್ರೀಕೃಷ್ಣ ರಾತ್ರಿಯನು ಕಳೆದಿಹರು ॥೧೪೯೭॥

ಅರ್ಜುನನು ದ್ವಾರಕೆಗೆ ಬಹನೆಂಬ ವಾರ್ತೆಯನು
ಚರರಿಂದ ಕಳಿಸುತಿರೆ ತಳಿರಿನಲಿ ತೋರಣವಿ
ನಗರವನು ಕೊಳಗಳನು ವನಗಳನು ಬೀದಿಯನು
ಶೃಂಗಾರಗೈದಿಹರು ಅರ್ಜುನನ ಸ್ವಾಗತಕೆ ॥೧೪೯೮॥

ಬೀದಿ ಬದಿ ಸಾವಿರದ ಸ್ತ್ರೀಪುರುಷರೆಲ್ಲರೂ
ಆ ಬಾಲ ವೃದ್ಧರೂ ಅರ್ಜುನನ ನೋಡಲಿಕೆ
ಕಿಕ್ಕಿರಿದು ನಿಂತಿರಲು ಶ್ರೀಕೃಷ್ಣ ಅರ್ಜುನರ
ದಿವ್ಯರಥ ಹೊಳೆಯುತಲಿ ಬರುತಲಿರೆ ಭರದಲ್ಲಿ ॥೧೪೯೯॥

ನೆರೆದಿರ್ದ ಜನಸ್ತೋಮ ಹರ್ಷವದು ಉಕ್ಕುತಲಿ
ಜಯಜಯತು ಶ್ರೀಕೃಷ್ಣ ಜಯಜಯತು ಕಲಿಪಾರ್ಥ
ಎನ್ನುತಲಿ ಜಯಕಾರ ಗೈಯ್ಯುತಲಿ ಅಬ್ಬರದಿ
ಮಂಗಳದ ವಾದ್ಯದಲಿ ಸ್ವಾಗತವ ಗೈದಿಹರು ॥೧೫೦೦॥

ರಥದಿಂದ ಇಳಿಯುತಲಿ ವರಪಾರ್ಥ ಯಾದವರ
ಹಿರಿಯರಿಗೆ ಎರಗುತಲಿ ಹರಕೆಯನು ಕೊಳ್ಳುತಲಿ
ಕಿರಿಯರನು ಹರಸುತಲಿ ಸರಿಸಮರನಪ್ಪುತಲಿ
ಕೃಷ್ಣನಾ ಅರಮನೆಗೆ ತೆರಳಿದನು ಹರುಷದಲಿ ॥೧೫೦೧॥

ಕೆಲವು ದಿನ ಸುಖದೊಳಗೆ ಸೌಧದಲಿ ಇರುತಿರಲು
ಪ್ರತಿವರುಷ ಜರುಗುತಿಹ ರೈವತಕ ಪರ್ವತದ
ಉತ್ಸವವು ಬರುತಲಿರೆ ಪುರದೊಳಿಹ ಸಕಲ ಪ್ರಜೆ
ಸಂಭ್ರಮದಿ ನೆರೆದಿಹರು ಪರ್ವತದ ಬಯಲಿನಲಿ ॥೧೫೦೨॥

ವರವೃಷ್ಣಿ ಅಂಧಕರ ಭೋಜರಾ ಅರಸುಗಳು
ಅಗಣಿತದ ಯಾದವರು ದಿವ್ಯಾಂಬರಾಭರಣ
ಧರಿಸುತಲಿ ಸೊಗಸಿನಲಿ ರಥಗಳನು ಏರುತಲಿ
ಉತ್ಸವಕೆ ಬಂದಿಹರು ವೈಭವದಿ ವಾದ್ಯದಲಿ ॥೧೫೦೩॥

ಪರ್ವತದ ದೇವರನು ದೇವತೆಯ ಪೂಜಿಸುತ
ಧನಕನಕ ಗೋವುಗಳ ದಾನಗಳನೀಯುತಲಿ
ಪಕ್ವಾನ್ನದೂಟದಲಿ ನೃತ್ಯದಲಿ ಗಾಯನದಿ
ಮನವನ್ನು ತಣಿಸುತಲಿ ಉತ್ಸವವ ಗೈಯ್ಯುತಿರೆ ॥೧೫೦೪॥

ಶ್ರೀಕೃಷ್ಣ ಫಲುಗುಣನು ಉತ್ಸವವನೆಲ್ಲವನು
ನೋಡುವಾ ತವಕದಲಿ ಪರ್ವತದ ಸುತ್ತಲೂ
ಚರಿಸುತಲಿ ಫಲಪುಷ್ಪ ದ್ರುಮಗಳನು ನೋಡುತಲಿ
ನೆರೆದಿರುವ ಸಂಭ್ರಮದ ಜನನಿಕರ ವೀಕ್ಷಿಸುತ ॥೧೫೦೫॥

ಬರುತಲಿರೆ ತಾರೆಗಳ ಮಧ್ಯದಲಿ ತೊಳಗುತಿಹ
ಪೌರ್ಣಮಿಯ ಚಂದ್ರನಾ ಪರಿಯಲ್ಲಿ ಬೆಳಗುತಿಹ
ಬೆಳದಿಂಗಳಾ ಕಾಂತಿ ಸೊಬಗಿನಲಿ ಶೋಭಿಸುವ
ಸರ್ವಾಂಗ ಭೂಷಿತಳ ಸುಂದರಿಯನೋರ್ವಳನು ॥೧೫೦೬॥

ಸಖಿಯರಾ ಮಧ್ಯದಲಿ ಕುಳಿತಿಹುದ ಕಾಣುತಲಿ
ಅರ್ಜುನನು ಕಣ್ದುಂಬಿ ಆಕರ್ಷಿತಾಗುತಲಿ
ಚಲಿಸದಾ ನೋಟದಲಿ ಚೆಲುವೆಯನು ನೋಡುತಲಿ
ಮೋಹದಲಿ ಸಿಲುಕುತಲಿ ನಡೆಯದೆ ನಿಂತಿರಲು ॥೧೫೦೭॥

ಶ್ರೀಕೃಷ್ಣನರಿಯುತಲಿ ಮುಗುಳ್ನಗೆಯ ಸೂಸುತಲಿ
ಏನಿದುವೆ ಸನ್ಯಾಸಿ ಸುಂದರಿಯ ಯುವತಿಯನು
ಈ ಪರಿಯ ನೋಡುವದು ಯೋಗ್ಯವದು ಎನಿಸುವುದೆ
ವನವಾಸ ಕೈಕೊಂಡ ನಿನಗಿದುವ ಉಚಿತವೇ ॥೧೫೦೮॥

ಮೂಲೋಕ ಗೆಲ್ಲುವಾ ವೀರ ನೀ ಸನ್ಯಾಸಿ
ಮನ್ಮಥನ ಬಾಣಕ್ಕೆ ಸಿಲುಕುವುದು ಯೋಗ್ಯವೆ
ಎನ್ನುತಿರೆ ಶ್ರೀಕೃಷ್ಣ ಆ ಪಾರ್ಥ ನಸುನಾಚಿ
ನೀ ಎಲ್ಲ ಬಲ್ಲವನು ನಾ ಉಸುರೆನೆಂದಿಹನು ॥೧೫೦೯॥

ನಿನ್ನಯಾ ಇಂಗಿತವನರಿತಿಹೆನು ಕಲಿಪಾರ್ಥ
ವಸುದೇವ ಮಹಿಮನಾ ಮುದ್ದಿನಾ ಮಗಳಾದ
ಬಲರಾಮನೊಲುಮೆಯಾ ಸೋದರಿಯು ಎನಿಸಿರುವ
ಎನ್ನಯಾ ಸೋದರಿಯು ಸುಭದ್ರೆ ಇವಳೆಂದ ॥೧೫೧೦॥

ಇವಳನ್ನು ವರಿಸುವದು ನಿನ್ನಿಚ್ಛೆ ಇರ್ದೊಡೆಯು
ಎನ್ನಯಾ ಪಿತನೊಡನೆ ಪ್ರಸ್ತಾಪಗೈಯ್ಯುವೆನು
ಎನ್ನುತಿರೆ ಅರ್ಜುನನು ನಸುನಾಚಿ ತಲೆಬಾಗಿ
ಎಲ್ಲವನು ಅರಿತಿರುವೆ ನಾನೆಂತು ಉಸುರುವೆನು ॥೧೫೧೧॥

ಸ್ವರ್ಗದಾ ಲಲನೆಯರ ಸೌಂದರ್ಯ ಸಾರವನು
ಹೀರುತಲಿ ಸೇರಿಸುತ ನಿರ್ಮಿಸಿದ ಪುತ್ಥಳಿಯು
ತೆರದಲ್ಲಿ ತೇಜದಲಿ ಶೋಭಿಪ ಸುಭದ್ರೆಯನು
ನೋಡಿದೊಡೆ ಮನಸೋಲದವರಾರು ಎಂದಿಹನು ॥೧೫೧೨॥

ಇವಳನ್ನು ವರಿಸಿದೊಡೆ ಎನಗಿಂತ ಜಗದೊಳಗೆ
ಭಾಗ್ಯರೂ ಆರಿಲ್ಲ ಮಂಗಳವು ಲಭಿಸುವುದು
ಸುಭದ್ರೆಯನು ಪಡೆಯುವಾ ಮಾರ್ಗವನು ಸೂಚಿಪುದು
ಎನ್ನುತಲಿ ಕೃಷ್ಣನಿಗೆ ಕಲಿಪಾರ್ಥ ನುಡಿದಿಹನು ॥೧೫೧೩॥

ಜಗದೇಕ ವೀರನೀ ಎನ್ನಯಾ ತಂಗಿಯನು
ವರಿಸುವೊಡೆ ಮಿಗಿಲಾದ ಆನಂದವೆನಗಿಲ್ಲ
ಶಾಸ್ತ್ರದಲಿ ಕ್ಷತ್ರಿಯರ್ಗೆ ಸ್ವಯಂವರವು ವಿಧಿಸಿಹುದು
ಆದೊಡೆಯು ಸ್ತ್ರೀಯರಾ ಹೃದಯವದು ತಿಳಿಯದಿದೆ ॥೧೫೧೪॥

ನಿನ್ನನ್ನು ವರಿಸುವಳೊ ಇಲ್ಲವೋ ಸಂಶಯವು
ಕಾರಣದಿ ಅಪಹರಣ ಗೈಯ್ಯುವದು ಯೋಗ್ಯವದು
ಹೇ ವೀರ ಶ್ರೇಷ್ಠನೇ ಗುಪಿತದಲಿ ಸುಭದ್ರೆಯನು
ಅಪಹರಣಗೈಯ್ಯುವದು ಯೋಗ್ಯವದು ಎಂದಿಹನು ॥೧೫೦೫॥

ಭರದಲ್ಲಿ ಶ್ರೀಕೃಷ್ಣ ದೂತರನು ಕಳುಹಿಸುತ
ಧರ್ಮಜಗೆ ಅಪಹರಣ ವಿಷಯವನು ತಿಳಿಸುತಲಿ
ಸಮ್ಮತಿಯ ಕೊಳ್ಳುತಲಿ ಸಖನಿಂಗೆ ಅರ್ಜುನಗೆ
ಬಾಲಕಿಯನಪಹರಣಗೈಯ್ಯುವುದು ಎಂದಿಹನು ॥೧೫೦೬॥

ಶ್ರೀಕೃಷ್ಣನಾಜ್ಞೆಯಲಿ ವರಶೈಬ್ಯ ಸುಗ್ರೀವ
ಕೃಷ್ಣನಾ ಕುದುರೆಗಳ ಹೂಡಿರುವ ಹೊಳೆಹೊಳೆವ
ರಥವೊಂದನೇರುತಲಿ ಕಲಿಪಾರ್ಥ ಪರ್ವತದಿ
ಬೇಟೆಯಾ ನೆಪದಲ್ಲಿ ಸಾಗಿದನು ಭರದಲ್ಲಿ ॥೧೫೦೭॥

ಆ ಸಮಯ ಯಾದವನ ಸೋದರಿ ಸುಭದ್ರೆಯು
ಸಖಿನಿಕರ ಸಹಿತದಲಿ ಪರ್ವತದ ದೇವತೆಯ
ಕುಲದೇವರರ್ಚಿಸುತ ಪರ್ವತದ ಸುತ್ತಲೂ
ಪ್ರದಕ್ಷಿಣೆಯ ಗೈಯ್ಯುತಲಿ ಸಾಗಿರಲು ಆ ಕ್ಷಣದಿ ॥೧೫೦೮॥

ಅರ್ಜುನನು ಐತಂದು ರಥದಿಂದ ಇಳಿಯುತಲಿ
ಸಖಿಯರಾ ಮಧ್ಯದಲಿ ಭರದಿಂದ ನುಗ್ಗುತಲಿ
ಕೋಮಲೆ ಸುಭದ್ರೆಯನು ಕುಸುಮವನು ಎತ್ತುವಾ
ಪರಿಯಲ್ಲಿ ನಯದಿಂದ ಎತ್ತುತಲಿ ಕೊಳ್ಳುತಲಿ ॥೧೫೦೯॥

ರಥದಲ್ಲಿ ಮೆತ್ತನೆಯ ಆಸನದಿ ಕೂಡ್ರಿಸುತ
ಕುದುರೆಗಳ ಬೆನ್ನನ್ನು ಚಪ್ಪರಿಸಿ ಹುಯ್ಯೆಂದು
ಕಡಿವಾಣ ಜಗ್ಗುತಲಿ ರಥವನ್ನು ಓಡಿಸುತ
ವರ ಇಂದ್ರ ಪ್ರಸ್ಥದೆಡೆ ಪಯಣವನು ಬೆಳೆಸಿದನು ॥೧೫೧೦॥

ಸಖಿವೃಂದ ಹಾಹಾರಿ ಆಕ್ರೋಶಗೈಯ್ಯುತಿರೆ
ಸುಭದ್ರೆಯನು ರಕ್ಷಿಸುವ ಆ ಅಂಗರಕ್ಷಕರು
ಆ ರಾಜಭಟರುಗಳು ದ್ವಾರಕೆಗೆ ತೆರಳುತಲಿ
ಸಭೆಯೊಳಗೆ ಕುಳಿತಿರ್ದ ಅಧಿಕಾರಿವರ್ಗಕ್ಕೆ ॥೧೫೧೧॥

ಸುಭದ್ರೆಯಾ ಅಪಹರಣ ವೃತ್ತಾಂತವರುಹುತಿರೆ
ನಗರವದು ಕೇಳ್ವಂತೆ ಯುದ್ಧದಾ ಭೇರಿಯನು
ಹೊಡಿಸುತಿರೆ ಅಗಣಿತದ ಸೈನಿಕರು ಯುವಕರು
ಆಯುಧವಕೊಳ್ಳುತಲಿ ಯಾದವರು ಬಂದಿಹರು ॥೧೫೧೨॥

ಭೇರಿಯಾ ನಾದವನು ಕೇಳುತಲಿ ಸಕಲರೂ
ಆ ವೃಷ್ಣಿ ಅಂಧಕರ ಭೋಜರಾ ಅರಸುಗಳು
ಸೈನಿಕರು ಸಕಲರೂ ಖಡ್ಗಗಳ ಹಿರಿಯುತಲಿ
ಅರ್ಭಟಿಸಿ ಕೂಗುತಲಿ ಧಾವಿಸುತ ಬಂದಿಹರು ॥೧೫೧೩॥

ಅನಿರುದ್ಧ ಪ್ರದ್ಯುಮ್ನ ಅಕ್ರೂರ ಸಾತ್ಯಕಿಯು
ಉದ್ಧವನು ಕೃತವರ್ಮ ಸತ್ಯಕಿಯು ಸಾತ್ಯಕಿಯು
ಪೃಥು ವಿಪೃಥು ಹಾರ್ದಿಕ್ಯ ಮೊದಲಾದ
ಯಾದವರು ಕ್ರೋಧದಲಿ ಧಾವಿಸುತ ಬಂದಿಹರು ॥೧೫೧೪॥

ಹೊಳೆಯುತಿಹ ನೀಲದಾ ವಸನವನು ಧರಿಸುತಲಿ
ಬಲರಾಮ ಸಭೆಯೊಳಗೆ ಬರುತಿರಲು ಸಕಲರೂ
ಮೌನದಲಿ ಶಾಂತದಲಿ ಸ್ತಬ್ಧದಲಿ ಇರುತಿರಲು
ಹಲಧರನು ನುಡಿದಿಹನು ಸಭಿಕರಿಗೆ ಸಕಲರಿಗೆ ॥೧೫೧೫॥

ಮಂದಮತಿ ವೀರರೇ ನೀವೇನು ಮಾಡುವಿರಿ
ಚತುರನಿಹ ಶ್ರೀಕೃಷ್ಣ ಏನನ್ನು ನುಡಿಯದಲೆ
ಸುಮ್ಮನೇ ಕುಳಿತಿಹನು ಇವನಮತವರಿಯದಲೆ
ನೀವುಗಳು ವ್ಯರ್ಥದಲಿ ಗರ್ಜನೆಯ ಗೈಯ್ಯುವಿರಿ ॥೧೫೧೬॥

ಎನ್ನಯಾ ತಂಗಿಯನು ಸುಭದ್ರಾ ದೇವಿಯನು
ಹಸ್ತಿನಾಪುರದರಸು ದುರ್ಯೋಧನಂಗಿತ್ತು
ವೈಭವದಿ ಮದುವೆಯನು ಮಾಡುವಾ ಸಂಭ್ರಮದಿ
ನಾನಿರ್ದೆ ಎನಗಿಂತ ಚತುರನಿಹ ಈ ಕೃಷ್ಣ ॥೧೫೧೭॥

ಕಪಟದಲಿ ಪಾರ್ಥಂಗೆ ಸೋದರಿ ಸುಭದ್ರೆಯನು
ಅಪಹರಣ ಗೈಯ್ಯಲಿಕೆ ತಿಳುಹಿಸುತ ನಮಗೆಲ್ಲ
ಮೋಸವನು ಮಾಡಿಹನು ಮತ್ತೇನು ಅರಿಯದಾ
ಪರಿಯಲ್ಲಿ ಮೌನದಲಿ ಕುಳಿತಿಹನು ಎಂದಿಹನು ॥೧೫೧೮॥

ಕೃಷ್ಣನಾ ಮತವನ್ನು ಅರಿಯುತಲಿ ಮುಂದಣದ
ಕಾರ್ಯವನು ಯೋಚಿಸುತ ಗೈಯ್ಯುವುದು ಎನ್ನುತಲಿ
ಹೇ ಕೃಷ್ಣ ಇಂದಿನಾ ಘೋರತರ ಸಮಯದಲಿ
ನಿನ್ನಯ ಅಭಿಪ್ರಾಯ ಖಚಿತದಲಿ ತಿಳಿಸುವುದು ॥೧೫೧೯॥

ನಿನ್ನಯಾ ಇಚ್ಛೆಯಲಿ ಅರ್ಜುನನ ಕರೆತಂದು
ಎಮ್ಮಯಾ ಅರಮನೆಯೊಳಿರಿಸುತಲಿ ಆದರದಿ
ಸತ್ಕಾರಗೈದುದಕೆ ಬಾಲಕಿಯ ಅಪಹರಣ
ಮಾಡುತಲಿ ಉಡುಗೊರೆಯನಿತ್ತಿಹನೆ ಅರ್ಜುನನು ॥೧೫೨೦॥

ಉಂಡಮನೆ ಗಳಗಳನು ಎಣಿಸುವಾ ಭಂಡನಿವ
ಖೂಳನೀ ಅರ್ಜುನನ ರುಂಡವನು ತೆಗೆಯುತಲಿ
ವಧೆಗೈವೆನೆನ್ನುತಲಿ ನೇಗಿಲವ ಜಡಿಯುತಲಿ
ಜಡೆಯನ್ನು ಅಪ್ಪಳಿಸಿ ಕ್ರೋಧದಲಿ ನುಡಿದಿಹನು ॥೧೫೩೧॥

ಹಾವಿನಾ ಹೆಡೆಯನ್ನು ತುಳಿದಂತೆ ಅರ್ಜುನನು
ಎನ್ನಯಾ ಸೋದರಿಯ ಅಪಹರಣಗೈದಿಹನು
ವಿಖ್ಯಾತ ಕುರುಕುಲಕೆ ದುಷ್ಕೀರ್ತಿಕರವಾದ
ಈ ದುಷ್ಟಕಾರ್ಯವನು ಹೇಸದಲೆ ಮಾಡಿಹನು ॥೧೫೩೨॥

ಕಳ್ಳನಾ ತೆರದಲ್ಲಿ ಬಾಲಕಿಯ ಕದ್ದೊಯ್ದ
ಪಾರ್ಥನಾ ಶಿರವನ್ನು ತರಿಯುತಲಿ ಕೆಡಹುವೆನು
ಪೃಥ್ವಿಯೊಳು ಕುರುಕುಲವು ಇಲ್ಲದಾ ಪರಿಯಲ್ಲಿ
ನಾಶವನು ಮಾಡುವೆನು ಎನ್ನುತಲಿ ಗರ್ಜಿಸಿದ ॥೧೫೩೩॥

ಅಹುದಹುದು ಬಲರಾಮ ನುಡಿದ ನುಡಿ ನಿಜವಿಹುದು
ಈಗಲೇ ಅರ್ಜುನನ ವಧಿಸುವೆವು ಎನ್ನುತಲಿ
ಕ್ರೋಧದಲಿ ಸಕಲರೂ ಸನ್ನದ್ಧರಾಗುತಲಿ
ಆಕಾಶವೆತ್ತರಕೆ ಗರ್ಜನೆಯ ಗೈದಿಹರು ॥೧೫೩೪॥

ನಸುನಗುತ ವಸುದೇವಸುತಶೌರಿ ಶ್ರೀಕೃಷ್ಣ
ಶಾಂತದಲಿ ನಯವಾಗಿ ಯದುವೀರ ವಿಕ್ರಮಕೆ
ಭರದಲ್ಲಿ ಕಾರ್ಯವನು ಗೈವುದು ಅನುಚಿತವು
ನೀವೆಲ್ಲ ಸಮಚಿತ್ತ ತೂಕದಲಿ ಯೋಚಿಪುದು ॥೧೫೩೫॥

ನಮ್ಮಯಾ ವಂಶಕ್ಕೆ ಅಪಮಾನಕರವೆನಿಪ
ಆವುದೇ ಕಾರ್ಯವನು ಅರ್ಜುನನು ಮಾಡಿಲ್ಲ
ನಮ್ಮಯಾ ವಂಶಕ್ಕೆ ಶ್ರೇಯಕರ ಅಭ್ಯುದಯ
ಎನಿಸುವಾ ಮಂಗಲದ ಕಾರ್ಯವನು ಮಾಡಿಹನು ॥೧೫೩೬॥

ಜಗಖ್ಯಾತ ಕುರುಕುಲದಿ ಜನಿಸಿರುವ ಅರ್ಜುನನು
ನಮ್ಮನ್ನು ಧನದಾಸೆಯುಳ್ಳವರು ಮತ್ತೆಯು
ಕನ್ಯೆಯಾ ಶುಲ್ಕಾರ್ಥ ಆಶಿಪರು ಎನ್ನುತಲಿ
ಹೀನದಾ ದೃಷ್ಟಿಯಲಿ ಎಮ್ಮನ್ನು ನೋಡಿಲ್ಲ ॥೧೫೩೭॥

ಸ್ವಯಂವರದಿ ಸುಭದ್ರೆಯು ತನ್ನನ್ನು ವರಿಸದೆಯೆ
ಇರಬಹುದು ಎನ್ನುವಾ ಶಂಕೆಯನು ತಾಳುತಲಿ
ಕ್ಷತ್ರಿಯರ ವೀರರ್ಗೆ ಯೋಗ್ಯವಿಹ ಮಾರ್ಗದಲಿ
ಬಾಲಕಿ ಸುಭದ್ರೆಯನು ಅಪಹರಣ ಗೈದಿಹನು ॥೧೫೩೮॥

ಇದರೊಳಗೆ ಆವುದೂ ದೋಷವನು ಕಾಣದಿದೆ
ಮೇಲಾಗಿ ಅರ್ಜುನನು ಮೂಲೋಕ ವೀರನಿಹ
ಜಗದೊಳಗೆ ಶ್ರೇಷ್ಠವಿಹ ಕುರುಕುಲದಿ ಜನಿಸಿಹುದು
ಖ್ಯಾತನಿಹ ಶಾಂತನುವ ಮೊಮ್ಮಗನು ಇರುತಿಹನು ॥೧೫೩೯॥

ಮೇಲಾಗಿ ಕಲಿಪಾರ್ಥ ನಮಗನ್ಯನಿರುತಿಹನೆ
ನಮ್ಮತ್ತೆ ಪ್ರೀತಿಯಾ ಕುಂತಿಯಾ ಸುತನಿಹನು
ಯಾದವರ ಕುರುಕುಲದ ಸಂಬಂಧ ಬೆಸುಗೆಯದು
ಎನಿತೊಂದು ಮಂಗಲವು ಶುಭಕರವು ಯೋಚಿಪುದು ॥೧೫೪೦॥

ಧುರದೊಳಗೆ ಹರನೊಬ್ಬನುಳಿಯುತಲಿ ಅನ್ಯರಿಗೆ
ಅರ್ಜುನನ ಗೆಲ್ಲಲಿಕೆ ಆರಿಗೂ ಅಸದಳವು
ಎನ್ನಯಾ ಅಶ್ವಗಳು ಅವನ ರಥವೆಳೆಯುತಿವೆ
ನಿಮ್ಮನ್ನು ಕ್ಷಣದೊಳಗೆ ಜಯಿಸುವನು ಎಂದಿಹನು ॥೧೫೪೧॥

ಕೃಷ್ಣನಾ ನುಡಿಗಳನು ಕೇಳುತಲಿ ಸಲಕರೂ
ಅಹುದಹುದು ಕೃಷ್ಣನಾ ನುಡಿಗಳವು ನಿಜವಿಹುದು
ಯದುಕುಲದ ಕುರುಕುಲದ ಸಂಬಂಧ ಬೆಸುಗೆಯದು
ಮಂಗಲವು ಶುಭಕರವು ಎನ್ನುತಲಿ ನುಡಿದಿಹರು ॥೧೫೪೨॥

ಕೂಡಲೇ ಅರ್ಜುನನ ಸಂತೈಸಿ ದ್ವಾರಕೆಗೆ
ಕರೆತಹುದು ಎನ್ನುತಲಿ ಹಲಧರನು ಹರ್ಷದಲಿ
ಹೇಳುತಿರೆ ಯಾದವರು ವೀರರಾಕ್ಷಣದಲ್ಲಿ
ಧಾವಿಸುತ ಅರ್ಜುನನ ಕರೆತಂದರೊಲವಿನಲಿ ॥೧೫೪೩॥

ವಸುದೇವ ದೇವಕಿಯು ಬಲರಾಮ ಶ್ರೀಕೃಷ್ಣ
ಬಂಧುಗಳು ಬಾಂಧವರು ಸಕಲರೂ ನೆರೆಯುತಲಿ
ಬಾಲಕಿ ಸುಭದ್ರೆಯನು ಅರ್ಜುನಗೆ ಈಯುತಲಿ
ಸಂಭ್ರಮದಿ ವೈಭವದಿ ಮದುವೆಯನು ಮಾಡಿದರು ॥೧೫೪೪॥

ವರುಷವೊಂದು ಪರ್ಯಂತ ಹರುಷದಲಿ ಸುಖದೊಳಗೆ
ಅರ್ಜುನನು ದ್ವಾರಕೆಯ ಪುರದೊಳಗೆ ಕಳೆಯುತಲಿ
ಹನ್ನೊಂದು ವರ್ಷಗಳ ವನವಾಸ ಮುಗಿಸುತಲಿ
ಕೃಷ್ಣಂಗೆ ನಮಿಸುತಲಿ ಯಾತ್ರೆಯಲಿ ನಡೆದಿಹನು ॥೧೫೪೫॥

**ಸುಭದ್ರೆಯಾ ಸಹಿತದಲಿ ಫಲುಗುಣನು ಐತಂದು ।**
**ಧರ್ಮಜನ ಚರಣಕ್ಕೆ ಎರಗಿದನು ಹರುಷದಲಿ ॥**

ಪುಷ್ಕರದ ತೀರ್ಥದಲಿ ವಾಸಿಸುತ ನಂತರದಿ
ಹನ್ನೆರಡು ವರುಷಗಳ ವನವಾಸ ಕಳೆಯುತಲಿ
ನಿಜಸತಿ ಸುಭದ್ರೆಯಳ ಸಹಿತದಲಿ ಮುದದಿಂದ
ಇಂದ್ರಪ್ರಸ್ಥಕ್ಕೆ ಬಂದಿಹನು ಹರುಷದಲಿ ॥೧೫೪೬॥

ಅರಮನೆಗೆ ತೆರಳುತಲಿ ಗುರುಗಳಿಗೆ ಎರಗುತಲಿ
ಧರ್ಮರಾಜಗೆ ಸತಿಸಹಿತ ಚರಣದಲಿ ಎರಗುತಲಿ
ಮಹತಾಯಿ ಕುಂತಿಯಾ ಬಳಿಯಲ್ಲಿ ಸಾಗುತಲಿ
ಸಾಷ್ಟಾಂಗವೆರಗಿದನು ಸುಭದ್ರೆಯಾ ಸಹಿತದಲಿ ॥೧೫೪೭॥

ವಸುದೇವನಣ್ಣನಾ ಮಗಳಾ ಸುಭದ್ರೆಯನು
ಕಾಣುತಲಿ ಪ್ರೀತಿಯದು ಉಕ್ಕುತಲಿ ಆ ಕುಂತಿ
ನೀ ಎನ್ನ ಮುದ್ದಿನಾ ಮಗಳಿರುವೆ ಸೊಸೆಯಿರುವೆ
ಎನ್ನುತಲಿ ಹರ್ಷದಲಿ ಬಿಗಿದಪ್ಪಿಕೊಂಡಿಹಳು ॥೧೫೪೮॥

ಬಳಿಕಲಾ ಅರ್ಜುನನು ಸತಿ ಸುಭದ್ರಾ ದೇವಿಗೆ
ದ್ರೌಪದಿಯ ಬಳಿಸಾಗಿ ಗವಳಿಗರ ಮಗಳೆಂದು
ಅರ್ಜುನನ ವರಿಸಿಹೆನು ಎನ್ನುತಲಿ ಹೇಳುವುದು
ಎನ್ನುತಲಿ ತಿಳುಹುತಲಿ ಸುಭದ್ರೆಯ ಕಳುಹಿದನು ॥೧೫೪೯॥

ಗೊಲ್ಲರಾ ವೇಷದಲಿ ಬಂದಿರುವ ಬಾಲಿಕೆಯ
ದ್ರೌಪದಿಯು ನೋಡುತಲಿ ನೀನಾರು ಹೇಳುವುದು
ನಿನ್ನಯಾ ಮುಖದೊಳಗೆ ರಾಜಸುತೆ ತೇಜವಿದೆ
ಸ್ವರ್ಗದಾ ಸೌಂದರ್ಯ ಸೊಬಗಿನಲಿ ಹೊಳೆಯುತಿಹೆ ॥೧೫೫೦॥

ಹಾಲನ್ನು ಮಾರುವಾ ಹೆಂಗುಸಿನ ವೇಷವದು
ನಿನಗೆತ್ತ ಬಂದಿಹುದು ನೀನಾರು ಹೇಳುವುದು
ಎನ್ನುತಲಿ ದ್ರೌಪದಿಯು ಬೆರಗಿನಲಿ ನುಡಿಯುತಿರೆ
ಸುಭದ್ರೆ ನುಡಿದಿಹಳು ಅಭದ್ರದಾ ಸ್ವರದಲ್ಲಿ ॥೧೫೫೧॥

ನಿಜವಾಗಿ ಗವಳಿಗನ ಮಗಳಿಹೆನು ನಂಬುವುದು
ಘನಮಹಿಮ ವಸುದೇವ ಗವಳಿಗನ ಮಗಳಿಹೆನು
ದನಗಳನು ಕಾಯುವಾ ಗೋಪಾಲ ಕೃಷ್ಣನಾ
ಸೋದರಿ ಸುಭದ್ರೆಯಾಳು ನಾನಿಹೆನು ಎಂದಿಹಳು ॥೧೫೫೨॥

ಮೇಲಾಗಿ ನಮ್ಮತ್ತೆ ಕುಂತಿಯಾ ಸೊಸೆಯಿಹೆನು
ಕುಂತಿಯಾ ಮೋಹದಾ ಸುತನಾದ ಅರ್ಜುನನ
ಕೈಹಿಡಿದ ಸತಿಯಿಹೆನು ನಿನ್ನಯಾ ಸೇವಕಿಯು
ಎನ್ನುತಲಿ ದ್ರೌಪದಿಗೆ ಸಾಷ್ಟಾಂಗವೆರಗಿದಳು ॥೧೫೫೩॥

ಕೇಳುತಲಿ ದ್ರೌಪದಿಯ ಹೃದಯವದು ಕರಗುತಲಿ
ಏಳೆನ್ನ ತಂಗಿಯೆ ಮುದ್ದಿನ ಸುಭದ್ರೆಯೆ
ಏಳೆಂದು ಎಬ್ಬಿಸುತ ಗಾಢದಲಿ ಅಪ್ಪುತಲಿ
ನೀ ಎನ್ನ ತಂಗಿಯಿಹೆ ಎನ್ನುತಲಿ ನುಡಿದಿಹಳು ॥೧೫೫೪॥

ಗೋವುಗಳ ಕಾಯುತಿಹ ಗೋಪಾಲಕೃಷ್ಣನು
ಎನ್ನಯಾ ಅಣ್ಣನಿಹ ನೀ ಅವನ ಸೋದರಿಯು
ಕಾರಣದಿ ನೀ ಎನಗೆ ಒಲುಮೆಯಾ ತಂಗಿಯಿಹೆ
ಎನ್ನುತಲಿ ಸುಭದ್ರೆಯನು ಬಿಗಿದಪ್ಪಿಕೊಂಡಿಹಳು ॥೧೫೫೫॥

ಅನಿತರಲಿ ವರಪಾರ್ಥ ಬರುತಲಿರೆ ದ್ರೌಪದಿಯು
ಹುಸಿಮುನಿಸ ನಟಿಸುತಲಿ ಗೌರಿ ಮೇಲ್ಗಂಗೆಯನು
ಆ ಹರನು ತಂದಂತೆ ಎನ್ನಯಾ ಮೇಲಾಕೆ
ತಂದಿರುವೆ ಅವಳಲ್ಲಿ ಗೊಲ್ಲಳಲಿ ಹೋಗುವುದು ॥೧೫೫೬॥

ಇಲ್ಲೇಕೆ ಬಂದಿಹಿರಿ ಎನ್ನನ್ನು ಮರೆಯುವುದು
ಎನ್ನುತಲಿ ಕಪಟಾಶ್ರು ಸುರಿಸುತಲಿ ನುಡಿಯುತಿರೆ
ಅರ್ಜುನನು ಕಳವಳದಿ ಎನ್ನಯಾ ಹೃದಯವನು
ಇರಿಯುತಿಹ ಶರನುಡಿಯ ನುಡಿಯದಿರು ಎಂದಿಹನು ॥೧೫೫೭॥

ನಿನ್ನಲ್ಲಿ ಎನ್ನಯಾ ಪ್ರೇಮವದು ಅಚಲವಿದೆ
ನಿನ್ನಣ್ಣ ದೇವನಾ ಶ್ರೀಕೃಷ್ಣದೇವರಾಯನಾ
ಪ್ರೇಮದಾ ಸೋದರಿಯು ನಿನಗಿವಳು ತಂಗಿಯು
ಇವಳಿಂದ ಅಭ್ಯುದಯವು ಎಮಗಿಹುದು ಎಂದಿಹನು ॥೧೫೫೮॥

ನಿಮ್ಮೊಳಗಿನಿಂಗಿತವ ತಿಳಿಯಲಿಕೆ ನುಡಿದಿಹೆನು
ಎನ್ನಯಾ ನುಡಿಗಳನು ಮರೆಯುತಲಿ ಕ್ಷಮಿಸುವುದು
ಶ್ರೀಕೃಷ್ಣ ದೇವನಾ ಜೊತೆಯಲ್ಲಿ ಬಾಂಧವ್ಯ
ಬೆಳೆದಿಹುದು ಎಮ್ಮಯಾ ಭಾಗ್ಯವದು ಎಂದಿಹಳು ॥೧೫೫೯॥

ಧರ್ಮಜನು ಮಾರುತಜನು ಅರ್ಜುನನು ಮಾದ್ರಿಜರು
ಆ ಕುಂತಿ ದ್ರೌಪದಿ ಸುಭದ್ರೆಯರು ಸಕಲರು
ಬಂಧುಗಳು ಬಾಂಧವರು ಮೃಷ್ಟಾನ್ನದೂಟದಲಿ
ಸಂತಸದಿ ಗಾಯನದಿ ನೃತ್ಯದಲಿ ನಲಿದಿಹರು ॥೧೫೬೦॥

**ಮುರಹರನು ಹಲಧರನ ಯಾದವರ ಸಹಿತದಲಿ ।**
**ಪಾಂಡವರ ಕಾಣಲಿಕೆ ಹರುಷದಲಿ ಬಂದಿಹನು ॥**

ಆ ಸಮಯ ಫಲುಗುಣನು ಸುಭದ್ರೆಯ ಸಹಿತದಲಿ
ವರ ಇಂದ್ರ ಪ್ರಸ್ಥಕ್ಕೆ ಬಂದಿರುವ ವಾರ್ತೆಯನು
ಕೇಳುತಲಿ ಶ್ರೀಕೃಷ್ಣ ಹಲಧರನ ಸಹಿತದಲಿ
ಉಡುಗೊರೆಯನೀಯಲಿಕೆ ಪಯಣದಲಿ ಹೊರವಂಟ ॥೧೫೬೧॥

ವರವೃಷ್ಣಿ ಅಂಧಕರ ಭೋಜರಾ ಅರಸುಗಳು
ಅಕ್ರೂರ ಸಾತ್ಯಕಿಯು ಅನಿರುದ್ಧ ಪ್ರದ್ಯುಮ್ನ
ಉದ್ಧವನು ಕೃತವರ್ಮ ಮೊದಲಾದ ಯಾದವರು
ಬಳುವಳಿಯ ಸಹಿತದಲಿ ಜೊತೆಯಲ್ಲಿ ನಡೆದಿಹರು ॥೧೫೬೨॥

ಶ್ರೀಕೃಷ್ಣನರಸಿಯರು ರುಕ್ಮಿಣಿಯು ವರಭಾಮೆ
ಅರಮನೆಯ ಅಗಣಿತದ ಸುರಸುಂದರಾಂಗಿಯರು
ದಿವ್ಯಾಂಬರಾಭರಣ ಧರಿಸುತಲಿ ಮೆರೆಯುತಲಿ
ಮನ್ಮಥನ ಸೈನ್ಯದಾ ಪರಿಯಲ್ಲಿ ನಡೆದಿಹರು ||೧೫೬೩||

ಯಾದವರ ಸಹಿತದಲಿ ಶ್ರೀಕೃಷ್ಣ ಬಹನೆಂಬ
ವಾರ್ತೆಯನು ಕೇಳುತಲಿ ಆ ಇಂದ್ರ ಪ್ರಸ್ಥವನು
ತಳಿರಿನಲಿ ತೋರಣದಿ ಸಾರಣೆಯ ಕಾರಣೆಯ
ಬಣ್ಣದಾ ಸೊಬಗಿನಲಿ ಶೃಂಗಾರ ಗೈದಿಹರು ||೧೫೬೪||

ಪರಿಮಳದ ಪುಷ್ಪಗಳ ಹಾಸಿಗೆಯು ಹಾಸಿರುವ
ಗಂಧನದ ಸುಮಧುರದ ವಾಸನೆಯು ಪಸರಿರುವ
ಬೀದಿಯಾ ಇಕ್ಕೆಲದಿ ಸ್ತ್ರೀಪುರುಷರೆಲ್ಲರು
ಕೃಷ್ಣನನು ನೋಡುವಾ ತವಕದಲಿ ನೆರೆದಿಹರು ||೧೫೬೫||

ಧರ್ಮಜನು ಕೃಷ್ಣನನು ಸ್ವಾಗತವ ಮಾಡಲಿಕೆ
ಆ ನಕುಲ ಸಹದೇವರೀರ್ವರನು ಕಳುಹಿದನು
ಶ್ರೀಕೃಷ್ಣ ಯಾದವರ ಸಹಿತದಲಿ ನಗರದಲಿ
ಬರುತಲಿರೆ ಮಾರ್ಗದಲಿ ಇಕ್ಕೆಲದಿ ನೆರೆದಿರ್ದ ||೧೫೬೬||

ಅಗಣಿತದ ಜನಸ್ತೋಮ ನೋಡುತಲಿ ಶ್ರೀಕೃಷ್ಣ
ಹರುಷದಲಿ ಕಿರುನಗೆಯ ಸೂಸುತಲಿ ಕೈಬೀಸಿ
ಹರಸುತಲಿ ಸಾಗುತಿರೆ ಸಕಲಜನ ಸಂತಸದಿ
ನಭಬಿರಿವ ತೆರದಲ್ಲಿ ಜಯಕಾರಗೈದಿಹರು ||೧೫೬೭||

ಅರಮನೆಗೆ ಶ್ರೀಕೃಷ್ಣ ಹಲಧರನು ಬರುತಿರಲು
ಧರ್ಮಜನು ಆದರದಿ ಸತ್ಕರಿಸಿ ಕೃಷ್ಣನಾ
ಚರಣಕ್ಕೆ ಸಾಷ್ಟಾಂಗವೆರಗುತಲಿ ಹರ್ಷದಲಿ
ಬಾಷ್ಪಗಳ ಸುರಿಸುತಲಿ ನುಡಿದಿಹನು ಪುಲಕಿತದಿ ||೧೫೬೮||

ವಿಷದೊಳಗೆ ಬದುಕಿದೆವು ಉರಿಯೊಳಗೆ ಉಳಿದಿಹೆವು
ವನವನದಿ ಅಲೆಯುತಲಿ ಕಷ್ಟಗಳ ಸಹಿಸುತಲಿ
ನಿಮ್ಮಯಾ ಕರುಣೆಯಲಿ ದ್ರೌಪದಿಯ ವರಿಸಿಹೆವು
ನಿಮ್ಮಯಾ ಕರುಣೆಯನು ನಾವೆಂತು ವರ್ಣಿಪೆವು ||೧೫೬೯||

ಒಸಗೆ ಮೇಲೊಸಗೆಯದು ತಾನೆಸೆದು ಬಂದಂತೆ
ಮತ್ತೆ ಈ ಪಾರ್ಥನಿಗೆ ನಿನ್ನಯಾ ಸೋದರಿಯ
ಚೆಲುವೆಯ ಸುಭದ್ರೆಯನು ಈಯುತಲಿ
ಮದುವೆಯಾ ಸಂಭ್ರಮವು ಘಟಿಸಿದುದು ಎಂದಿಹನು ||೧೫೭೦||

ಎಂದಿಗೂ ಧೃಢವಾಗಿ ನಿನ್ನನ್ನು ನಂಬಿಹೆವು
ಕುಡಗೋಲು ಕುಂಬಳದ ಕಾಯಿಯನು ನಿನ್ನಯಾ
ಕೈಯಲ್ಲಿ ಕೊಟ್ಟಿಹೆವು ಅಡ್ಡಾಗಿ ಹೆಚ್ಚುವದು
ಇಲ್ಲದಿರೆ ಉದ್ದಾಗಿ ಹೆಚ್ಚುವದು ಎಂದಿಹನು ||೧೫೭೧||

ಸುಮ್ಮನೇ ನಮ್ಮನ್ನು ಹೊಗಳದಿರಿ ವ್ಯರ್ಥದಲಿ
ನಿಮ್ಮಯಾ ಸತ್ಯವದು ಧರ್ಮವದು ಚರಿತೆಯದು
ನಿಮ್ಮನ್ನು ಕಾಯ್ದಿಹುದು ನಾವೇನು ಮಾಡಿಲ್ಲ
ಎನ್ನುತಲಿ ಶ್ರೀಕೃಷ್ಣ ಧರ್ಮಜಗೆ ನುಡಿದಿಹನು ||೧೫೭೨||

ಬಳಿಕಲಾ ಶ್ರೀಕೃಷ್ಣ ಬಳಿಯಲ್ಲಿ ನಿಂದಿರ್ದ
ಫಲುಗುಣನ ಮರುತಜನ ಮಾದ್ರಿಜರ ಕ್ಷೇಮವನು
ಕೇಳುತಲಿ ಧನಕನದುಡುಗೊರೆಯನೀಯುತಲಿ
ಭರದಿಂದ ಅರಮನೆಯ ಒಳಗಡೆಗೆ ತೆರಳುತಲಿ ||೧೫೭೩||

ಕುಳಿತಿರ್ದ ಕುಂತಿಯಾ ಚರಣದಲಿ ಶಿರವನ್ನು
ಇಳುಹುತಲಿ ಸಾಷ್ಟಾಂಗವೆರಗಿದನು ವಿನಯದಲಿ
ವೇದಗಳು ಉಪನಿಷದು ಅರಸುತಲಿ ಕಾಣದಿಹ
ಆ ದೇವ ಕುಂತಿಯಾ ಚರಣಕ್ಕೆ ಎರಗಿದನು ||೧೫೭೪||

ಸಾವಿರದ ಗಜತುರಗ ಹೇಮಮಯ ರಥಗಳನು
ಹೇರಳದ ರತ್ನಗಳ ಮುತ್ತುಗಳ ಹಾರಗಳ
ದಿವ್ಯಾಂಬರಾದಿಗಳ ಹೊಳೆಹೊಳೆವ ಬಳುವಳಿಯ
ಶ್ರೀಕೃಷ್ಣ ಪಾಂಡವರ್ಗೆ ಇತ್ತಿಹನು ಉಚಿತದಲಿ ||೧೫೭೫||

ರುಕ್ಮಿಣಿಯು ವರಭಾಮೆ ದ್ರೌಪದಿ ಸುಭದ್ರೆಯರ್ಗೆ
ವಿಧವಿಧದ ಸ್ವರ್ಣದಾ ಆಭರಣ ವಸ್ತ್ರಗಳ
ರತ್ನಗಳ ಹಾರಗಳ ಪೀತಾಂಬರಾದಿಗಳ
ಅಗಣಿತದ ಕಾಣಿಕೆಗಳಿತ್ತಿಹರು ಸಕಲರಿಗೆ ||೧೫೭೬||

ಯಾದವರು ವಧುವರಗೆ ಪಾಂಡವರ್ಗೆ ಸರ್ವರಿಗೆ
ಬಾಂಧವರ್ಗೆ ಮಿತ್ರರಿಗೆ ಅರಮನೆಯ ನಾರಿಯರ್ಗೆ
ಉಡುಗೊರೆಯನೀಯುತಿರೆ ಧರ್ಮಜನು ಪಾಂಡವರು
ಯಾದವರ್ಗೆ ಬಳುವಳಿಗಳಿತ್ತಿಹನು ಉಚಿತದಲಿ ||೧೫೭೭||

ಯದುವಂಶ ಕುರುವಂಶವೆರಡುಗಳ ಬೆಸುಗೆಯಲಿ
ಉಭಯ ಕುಲದೇಳಿಗೆಯ ಅಭ್ಯುದಯದುತ್ಸವದಿ
ಪಾಂಡವರು ಯಾದವರು ನೆರೆದಿರುವ ಸಕಲರೂ
ಸಂಭ್ರಮದಿ ಸಂತಸದಿ ಕುಣಿದಾಡಿ ನಲಿದಿಹರು ||೧೫೭೮||

ಹೋಳಿಗೆಯು ಮಂಡಿಗೆಯು ಪಾಯಸದ ಸವಿಸವಿಯು
ಪಕ್ವಾನ್ನದೂಟವನು ಸವಿಯುತಲಿ ತೇಗುತಲಿ
ಸುಮಧುರದ ಸಂಗೀತ ಗಾಯನದಿ ನೃತ್ಯದಲಿ
ಆನಂದ ಸಾಗರದಿ ಸಕಲರೂ ತೇಲಿದರು ॥೧೫೭೯॥

ಅರ್ಜುನ ಸುಭದ್ರೆಯರ ಉಟಣೆಗಳ ಹಾಡುಗಳ
ರುಕ್ಮಿಣಿಯು ಭಾಮೆಯರ ಚತುರೋಕ್ತಿ ಹಾಸ್ಯಗಳ
ಕೃಷ್ಣನಾ ಮಧುರೋಕ್ತಿ ವಸುದೇವ ದೇವಕಿಯ
ಕುಶಿಯಾ ಹರಕೆಯಲಿ ಉತ್ಸವವು ರಂಜಿಸಿತು ॥೧೫೮೦॥

ಯಾದವರು ಪಾಂಡವರು ಮರುದಿವಸ ಮುದದಿಂದ
ರಂಗುಗಳನೆರಚುತಲಿ ಓಕುಳಿಯನಾಡಿದರು
ಧರ್ಮಜನು ಕೃಷ್ಣಂಗೆ ಕೃಷ್ಣನಾ ಅರ್ಜುನಗೆ
ಬಲರಾಮ ಭೀಮಂಗೆ ಬಣ್ಣಗಳ ನೆರಚಿದರು ॥೧೫೮೧॥

ರುಕ್ಮಿಣಿಯು ದ್ರೌಪದಿಗೆ ದ್ರೌಪದಿಯು ಭಾಮೆಯಲಿ
ರೋಹಿಣಿ ಸುಭದ್ರೆಯರು ಓಕುಳಿಯನಾಡಿದರು
ಅರಮನೆಯ ನಾರಿಯರು ಹಾಡುತಲಿ ಕುಣಿಯುತಲಿ
ಜೀಕಳಿಯ ಬಣ್ಣಗಳನೆರಚುತಲಿ ಕುಣಿದಿಹರು ॥೧೫೮೨॥

ಸಕಲರೂ ಬಣ್ಣಗಳನೆರಚುತಲಿ ಕುಣಿಯುತಲಿ
ಹಾಡುತಲಿ ಸಂತಸದಲಿ ಕೇಕೆಯಲಿ ನಲಿದಿಹರು
ಧರ್ಮಜನ ಕೀರ್ತಿಯದು ಇಂದ್ರನಾ ಪರಿಯಲ್ಲಿ
ಮೂಜಗದಿ ಪಸರಿಸುತ ಬೆಳಗುತಲಿ ಮೆರೆದಿಹುದು ॥೧೫೮೩॥

ಕೆಲದಿನಗಳುರುಳುತಿರೆ ಧರ್ಮಜನು ಬಲರಾಮ
ಮೊದಲಾದ ಯಾದವರ ಭಾಂಧವರಿಗೆಲ್ಲರಿಗೆ
ಮರ್ಯಾದೆ ಗೈಯ್ಯುತಲಿ ಉಡುಗೊರೆಯನೀಯುತಲಿ
ಕಳುಹಿಸಿದ ಸಕಲರನು ಕೃಷ್ಣನನು ಉಳಿಯುತಲಿ ॥೧೫೮೪॥

**ಶಚಿಯಲ್ಲಿ ಜಯಂತ ಜನಿಸಿರುವ ಪರಿಯಲ್ಲಿ ।**
**ಜಗವೀರ ಅಭಿಮನ್ಯು ಜನಿಸಿಹ ಸುಭದ್ರೆಯಲಿ ॥**

ಬಳಿಕಲಾ ಶ್ರೀಕೃಷ್ಣ ಸಖಿಪಾರ್ಥ ಸಹಿತದಲಿ
ಯಮುನೆಯಾ ತೀರದಲಿ ಬೇಟೆಗಳನಾಡುತಲಿ
ನದಿಕೊಳದ ಸುಂದರದ ತಾಣದಲಿ ವಿಹರಿಸುತ
ತಣಿಯುತಲಿ ಸುಖದಿಂದ ಕಾಲವನು ಕಳೆದಿಹರು ॥೧೫೮೫॥

ಇಂತಿರಲು ಪಾರ್ಥನಲಿ ವರಸಾಧ್ವಿ ಸುಭದ್ರೆಯು
ಗರ್ಭವನು ಧರಿಸುತಲಿ ನವಮಾಸ ತುಂಬುತಿರೆ
ದೇವೇಂದ್ರನಾ ಸತಿಯು ಶಚಿದೇವಿ ಜಯಂತನನು
ಹಡೆದಂತೆ ಜಗವೀರ ಶಿಶುವನ್ನು ಹೆತ್ತಿಹಳು ॥೧೫೮೬॥

ಧರ್ಮಸುತ ಹೇರಳದ ಧನಕನಕ ವಸ್ತ್ರಗಳ
ಗೋವುಗಳ ದಾನಗಳ ಭೂಸುರರಿಗಿತ್ತಿಹನು
ಸಕ್ಕರೆಯ ಸಿಹಿಯನ್ನು ವೀಳ್ಯದೆಲೆ ಹಂಚಿದನು
ವರ ಇಂದ್ರ ಪ್ರಸ್ಥದಾ ಸಕಲ ಪ್ರಜೆ ನಲಿದಿಹುದು ॥೧೫೮೭॥

ಭಯವಿಲ್ಲದಿರುತಿರುವ ಕೋಪಿಷ್ಟನಾಗಿರುವ
ಶತ್ರುಗಳ ಮರ್ದನವ ಮಾಡುವಾ ಶೂರನಿಹ
ಅದ್ಭುತ ಪರಾಕ್ರಮದ ವಿಕ್ರಮದ ಶಿಶುವಿಂಗೆ
ಅಭಿಮನ್ಯು ಎಂಬುವಾ ಹೆಸರನ್ನು ಇಟ್ಟಿಹರು ॥೧೫೮೮॥

ನಾಮಕರಣಾದಿಗಳ ಕಾರ್ಯಗಳ ಗೈಯ್ಯುತಿರೆ
ಶುಕ್ಲದಾ ಚಂದ್ರಮನ ಪರಿಯಲ್ಲಿ ದಿನದಿನದಿ
ಹೊಳೆಹೊಳೆವ ತೇಜದಲಿ ಬೆಳೆಯುತಿರೆ ಪ್ರಭೆಯಲ್ಲಿ
ವೇದಗಳ ಶಾಸ್ತ್ರಗಳ ಕಲಿಸಿಹರು ಮುನಿವರರು ॥೧೫೮೯॥

ಮೂಲೋಕ ವಿಕ್ರಮನು ಕಲಿಪಾರ್ಥ ಪುತ್ರನಿಗೆ
ಬಿಲ್ಲಿನಾ ವಿದ್ಯೆಯನು ಜಾಣ್ಮೆಯನು ಕಲಿಸಿಹನು
ಮಂತ್ರ ಮುಕ್ತಾದಿಗಳ ನಾಲ್ಕರಾ ಪಾದಗಳ
ಧನುರ್ವಿದ್ಯೆ ಗೂಢವನು ಕಲಿಸಿಹನು ತನಯಂಗೆ ॥೧೫೯೦॥

ನಿಜಪಿತನ ಪಾರ್ಥನಾ ಪರಿಯಲ್ಲಿ ಅಭಿಮನ್ಯು
ಧನುರ್ವಿದ್ಯೆ ಮೊದಲಾದ ಶಸ್ತ್ರಾಸ್ತ್ರ ಕೌಶಲವ
ಕಲಿಯುತಲಿ ಫಲುಗುಣಗೆ ಸರಿಸಮನು ಪರಿಣತನು
ಎನಿಸುತಲಿ ಜಗದೊಳಗೆ ಕೀರ್ತಿಯಲಿ ಮೆರೆದಿಹನು ॥೧೫೯೦॥

ದ್ರೌಪದಿಯು ಐವರಾ ಪತಿಗಳಲಿ ಐವರನು
ಪರ್ವತದ ಸರಿಸಮರು ಅಪ್ರತಿಮ ವೀರರನು
ಸಂಗ್ರಾಮ ಶೂರರನು ಪುತ್ರರನು ಪಡೆದಿಹಳು
ಶಿಶುಗಳಿಗೆ ಯೋಗ್ಯಮಿಹ ಹೆಸರುಗಳನಿಟ್ಟಿಹರು ॥೧೫೯೨॥

ವಿಂಧ್ಯದಾ ಪರ್ವತದ ಪರಿಯಲ್ಲಿ ಶತ್ರುಗಳ
ಶರಗಳನು ತಡೆಯುತಲಿ ನಾಶವನು ಗೈಯ್ಯುವನು
ಎನ್ನುತಲಿ ಧರ್ಮಜನ ಪುತ್ರನಿಗೆ ಪ್ರತಿವಿಂಧ್ಯ
ಎಂಬುವಾ ಖ್ಯಾತಮಿಹ ಹೆಸರನ್ನು ಇಟ್ಟಿಹರು ॥೧೫೯೩॥

ಸಾವಿರದ ವರಸೋಮಯಾಗಗಳ ಗೈಯ್ಯುತಲಿ
ಭೀಮನಲಿ ಪಡೆದಿರುವ ರವಿಚಂದ್ರ ತೇಜದಲಿ
ಹೊಳೆಯುತಲಿ ಜಗವನ್ನು ಬೆಳಗುತಿಹ ಶಿಶುವಿಂಗೆ
ಸುತಸೋಮನೆಂಬುವಾ ನಾಮವನು ಇಟ್ಟಿಹರು ॥೧೫೯೪॥

ವನವಾಸ ಸಮಯದಲಿ ಜಗಖ್ಯಾತ ಕಾರ್ಯಗಳ
ಗೈಯ್ಯುತಲಿ ಮರಳುತಲಿ ದ್ರೌಪದಿಯು ಬಸುರಿನಲಿ
ಅರ್ಜುನನು ಪಡೆದಿರುವ ವಿಕ್ರಮದ ಶಿಶುವಿಂಗೆ
ಶ್ರುತ ಕರ್ಮನೆಂಬುವಾ ಹೆಸರನ್ನು ಇಟ್ಟಿಹರು ॥೧೫೯೫॥

ಕುರುಕುಲದ ಶ್ರೇಷ್ಠನೃಪ ರಾಜರ್ಷಿ ಮಹಾತ್ಮನು
ಎನಿಸುತಲಿ ಜಗದೊಳಗೆ ಖ್ಯಾತಿಯಲಿ ಮೆರೆದಿರ್ಪ
ಆ ಶತಾನೀಕನಾ ಹೆಸರನ್ನು ಕೀರ್ತಿಯನು
ವರ್ಧಿಸುವ ನಕುಲನಾ ಶಿಶುವಿಂಗೆ ಇಟ್ಟಿಹರು ॥೧೫೯೬॥

ಅಗ್ನಿಯಾ ದೇವತೆಯು ಸ್ವರೂಪದಂತಿರುವ
ಕೃತ್ತಿಕಾ ತಾರೆಯಲಿ ದ್ರೌಪದಿಯು ಬಸುರಿನಲಿ
ಜನಿಸಿರುವ ಸಹದೇವ ಪುತ್ರನಿಗೆ ಬಹುಶ್ರುತಗೆ
ಶ್ರುತಸೇನ ಎಂಬುವಾ ಹೆಸರನ್ನು ಇಟ್ಟಿಹರು ॥೧೫೯೭॥

ಆ ಧೌಮ್ಯ ಕುಲಗುರುವು ಚೌಲೋಪನಯನಾದಿ
ಕಾರ್ಯಗಳ ಗೈಯ್ಯುತಲಿ ಆ ರಾಜ ಪುತ್ರರಿಗೆ
ವೇದಗಳ ಶಾಸ್ತ್ರಗಳ ಮೀಮಾಂಸೆ ತರ್ಕಗಳ
ಪೌರಾಣವೆಲ್ಲವನು ವಿಸ್ತರದಿ ಕಲಿಸಿಹರು ॥೧೫೯೮॥

ದಿನದಿನದಿ ಐವರೂ ಆ ರಾಜಪುತ್ರರು
ಸಿತಪಕ್ಷ ಚಂದಿರನ ತೇಜದಲಿ ವರ್ಧಿಸುತ
ಪಾಂಡವರನೆಲ್ಲರನು ಸಂತೋಷಗೊಳಿಸುತಲಿ
ಪಾರ್ಥನಲಿ ಶಸ್ತ್ರಾಸ್ತ್ರ ವಿದ್ಯೆಗಳ ಕಲಿತಿಹರು ॥೧೫೯೯॥

**ಪಾವಕನು ವಿಪ್ರನಾ ವೇಷದಲಿ ಐತಂದು ।**
**ಖಾಂಡವವ ದಹಿಸಲಿಕೆ ಪಾರ್ಥನನು ಪ್ರಾರ್ಥಿಸಿದ ॥**

ಇಂತಿರಲು ಒಂದುದಿನ ಬೇಸಿಗೆಯು ಕಾಲದಲಿ
ಫಲುಗುಣನು ಕೃಷ್ಣಂಗೆ ತಾಪವದು ಹೆಚ್ಚಿಹುದು
ಯಮುನೆಯಲಿ ಮೀಯುತಲಿ ವನದೊಳಗೆ ವಿಹರಿಸುತ
ಬೇಟೆಯನು ಆಡುತಲಿ ಮನವನ್ನು ತಣಿಸುವುದು ॥೧೬೦೦॥

ಎನ್ನುತಲಿ ನುಡಿಯುತಿರೆ ಶ್ರೀಕೃಷ್ಣನೊಪ್ಪುತಿರೆ
ಈರ್ವರೂ ಯಮುನೆಯಾ ತೀರಕ್ಕೆ ಐತಂದು
ನದಿಯೊಳಗೆ ಮೀಯುತಲಿ ಸುಂದರದ ವನದೊಳಗೆ
ಚರಿಸುತಲಿ ವಿಹರಿಸುತ ಮನವನ್ನು ತಣಿಸುತಲಿ ॥೧೬೦೧॥

ಬೇಂಟೆಯನು ಆಡುತಲಿ ವಿಶ್ರಮಿಸಲೋಸುಗವೆ
ದ್ರುಮದಡಿಯ ವಿಧವಿಧದ ಮಾತುಗಳನಾಡುತಲಿ
ಕುಳಿತಿರಲು ಉಜ್ವಲದ ಕಾಂತಿಯಲಿ ಹೊಳೆಯುತಲಿ
ಶೋಭಿಸುವ ದೇಹದಾ ದ್ವಿಜನೋರ್ವ ಬಂದಿಹನು ॥೧೬೦೨॥

ಪುಟವಿಕ್ಕಿದಾ ಸ್ವರ್ಣದಂತೆಸೆವ ಪ್ರಭೆಯಲ್ಲಿ
ಅಗ್ನಿಯಾ ತೇಜದಲಿ ಮಿರುಗುತಿಹ ವದನದಲಿ
ಕೆಂಡದಲಿ ಕಾಂತಿಯಲಿ ಉರಿಯುತಿಹ ಕಂಗಳಲಿ
ಹಳದಿಯಾ ಹಸಿರ್ಗೆಂಪು ಮೀಸೆಗಳ ಗಡ್ಡಗಳ ॥೧೬೦೩॥

ಜಡೆಯನ್ನು ಬಿಟ್ಟಿರುವ ವಲ್ಕಲವನುಟ್ಟಿರುವ
ಜನಿವಾರ ತೊಟ್ಟಿರುವ ರವಿಯಂತೆ ಹೊಳೆಹೊಳೆವ
ದಿವಿಜರಾ ಪರಿಯಲ್ಲಿ ಶೋಭಿಸುವ ದ್ವಿಜನೋರ್ವ
ಈರ್ವರಾ ಬಳಿಬಂದು ನುಡಿದಿಹನು ದೈನ್ಯದಲಿ ॥೧೬೦೪॥

ನಾನೊಬ್ಬ ಬಡವಿಪ್ರ ಬಹು ಹಸಿವೆ ಆಗಿಹುದು
ಆಹಾರವಿಲ್ಲದೆಯೆ ಬಹುದಿವಸ ಬಳಲಿಹೆನು
ವಿಪುಳದಲಿ ಸುಗ್ರಾಸ ಭೋಜನವನೀಯುತಲಿ
ಎನ್ನನ್ನು ತಣಿಸುವುದು ಎನ್ನುತಲಿ ನುಡಿದಿಹನು ॥೧೬೦೫॥

ಇದು ಆವ ಗಹನವಿದೆ ಈಗಲೇ ಈಯುವೆನು
ನಿನಗಾವ ಭೋಜನವು ಇಷ್ಟವಿದೆ ಪೇಳುವುದು
ಆವ ವಿಧ ಪಕ್ವಾನ್ನ ಬೇಕಿಹುದು ಹೇಳುವುದು
ಎನ್ನುತಲಿ ಅರ್ಜುನನು ವಿಪ್ರಂಗೆ ನುಡಿದಿಹನು ॥೧೬೦೬॥

ವಿಪ್ರನನು ಆರೆಂದು ಅರಿಯದಲೆ ಭರದಲ್ಲಿ
ವಚನವನು ಈಯುವುದು ಮೂರ್ಖತನವೆನ್ನುತಲಿ
ಮಾಧವನು ನುಡಿಯುತಿರೆ ಹಸಿದವಗೆ ಅನ್ನವನು
ಈಯುವದು ಎಮ್ಮಯಾ ಧರ್ಮವಿದೆ ಎಂದಿಹನು ॥೧೬೦೭॥

ನೀವಾರು ಹೇಳುವುದು ಆಹಾರವೆಂಥಹದು
ಬೇಕಿಹುದು ಎನ್ನುತಲಿ ಅರ್ಜುನನು ನುಡಿಯುತಿರೆ
ಸಾಮಾನ್ಯ ಭೂಸುರನು ನಾನಲ್ಲ ತಿಳಿಯುವುದು
ಜಗವನ್ನು ಸುಡಬಲ್ಲ ನಾ ಅಗ್ನಿ ಇರುತಿಹೆನು ॥೧೬೦೮॥

ಸಾಮಾನ್ಯ ಸಾರನ್ನ ಹುಳಿಯನ್ನ ಬೇಕಿಲ್ಲ
ಸನಿಹದಲ್ಲಿ ಇರುತಿರುವ ದೇವೇಂದ್ರ ರಕ್ಷಿಸುವ
ಅಗಣಿತದ ಪಶುಪಕ್ಷಿ ಪ್ರಾಣಿಗಳ ಸಹಿತದಲಿ
ವಿಖ್ಯಾತ ಖಾಂಡವದ ವನವನ್ನು ಈಯುವದು ॥೧೬೦೯॥

ಇಲ್ಲಿಯೇ ಇಂದ್ರನಾ ಸಖನಾದ ತಕ್ಷಕನು
ಸತಿಸುತರ ಸಹಿತದಲಿ ವಾಸವನು ಮಾಡುತಿಹ
ಈ ಮೊದಲು ವನವನ್ನು ದಹಿಸಲಿಕೆ ಯತ್ನಿಸಲು
ಮಳೆಗರೆದು ಎನ್ನನ್ನು ತಣ್ಣಗೆಯೆ ಮಾಡಿದನು ॥೧೬೧೦॥

ದೇವೇಂದ್ರ ಸುರಿಸುತಿಹ ಪ್ರಳಯದಾ ಮಳೆಯನ್ನು
ಬಾಣಗಳ ಜಾಲವನು ನಿರ್ಮಿಸುತ ತಡೆಗಟ್ಟಿ
ಗಜಸಿಂಹ ಮೊದಲಾದ ಪ್ರಾಣಿಗಳ ಸಹಿತದಲಿ
ಖಾಂಡವದ ವನವನ್ನು ಈಯುವುದು ಎಂದಿನು ॥೧೬೧೧॥

ಜನಮೇಜಯ ಕ್ಷಿತಿಪ ಕೇಳುತಲಿ ಕೌತುಕದಿ
ಪಾವಕನು ಖಾಂಡವದ ವನವನ್ನು ಮಾತ್ರವೇ
ಏತಕ್ಕೆ ದಹಿಸಲಿಕೆ ಇಷ್ಟವನು ಪಟ್ಟಿಹನು
ಎಂಬುವುದ ಹೇಳುವುದು ಎನ್ನುತಲಿ ನುಡಿದಿಹನು ॥೧೬೧೨॥

ಹೇ ಪರೀಕ್ಷಿತ ತನಯ ಕೇಳುವುದು ಮುನ್ನಿನಲಿ
ಇಂದ್ರನಾ ಸರಿಸಮನು ನರಪತಿಯು ಶ್ವೇತಕಿಯು
ಅಗಣಿತದ ಯಜ್ಞಗಳ ವ್ರತಗಳನು ಮಾಡುತಿರೆ
ಅನವರತ ಯಜ್ಞದಾ ಧೂಮಗಳ ಬಾಧೆಯಲಿ ॥೧೬೧೩॥

ಋತ್ವಿಜರ ಕಣ್ಣುಗಳು ಕುರುಡಾಗುತಿರುತಿರಲು
ಶ್ವೇತಕಿಗೆ ಶತವರುಷ ಕಾಲದಾ ಯಜ್ಞಗಳ
ಮಾಡುವಾ ಇಚ್ಛೆಯದು ಉಂಟಾಗುತಿರುತಿರಲು
ಭೂಲೋಕ ಋತ್ವಿಜರ ಶ್ವೇತಕಿಯು ಪ್ರಾರ್ಥಿಸಲು ॥೧೬೧೪॥

ಒಬ್ಬರೂ ಒಪ್ಪದೇ ಇರುತಿರಲು ಕೊನೆಯಲ್ಲಿ
ಘೋರತರ ಕಠಿಣತರ ತಪವನ್ನು ಗೈಯ್ಯುತಿರೆ
ಹರಮೆಚ್ಚಿ ಪ್ರತ್ಯಕ್ಷವಾಗುತಲಿ ನಿನಗಾವ
ವರಬೇಕು ಕೇಳುವುದು ಎನ್ನುತಲಿ ನುಡಿಯುತಿರೆ ॥೧೬೧೫॥

ಶತವರುಷ ಯಾಗವನು ಮಾಡುವಾ ಆಶೆಯಿದೆ
ನೀನಯೋ ಋತ್ವಿಜನು ಆಗುತಲಿ ಮಾಡುವುದು
ಎನ್ನುತಲಿ ನುಡಿಯುತಿರೆ ಋತ್ವಿಜವ ನಾ ವಹಿಸೆ
ಎನ್ನಂಶ ಋತ್ವಿಜನನೋರ್ವನನನೀಯುವೆನು ॥೧೬೧೬॥

ಜಗದೊಳಗೆ ಖ್ಯಾತಮಿಹ ಎನ್ನಂಶನಿರುತಿರುತಿರುವ
ದೂರ್ವಾಸ ಮುನಿವರನ ಋತ್ವಿಜನನೀಯುವೆನು
ದೂರ್ವಾಸ ಋಷಿವರನ ಹಿರಿತನದಿ ಶತಯಾಗ
ನೀ ಗೈವುದೆನ್ನುತಲಿ ಹರಸಿದನು ಪರಶಿವನು ॥೧೬೧೭॥

ಬಳಿಕಲಾ ಮಹದೇವ ದೂರ್ವಾಸಮುನಿವರನ
ನೆನೆಯುತಿರೆ ಬರುತಿರಲು ಶ್ವೇತಕಿಯ ಶ್ವೇತಯಾಗ
ಗೈಯ್ಯಲಿಕೆ ಋತ್ವಿಜನು ನೀನಾಗಿ ನಡೆಸುವುದು
ಎನ್ನುತಲಿ ನುಡಿದಿಹನು ದೂರ್ವಾಸ ಮುನಿವರಗೆ ॥೧೬೧೮॥

ಹರನಂಶ ದೂರ್ವಾಸ ಮುನಿವರನ ಗುರುತನದಿ
ಶ್ವೇತಕಿಯು ಶತಯಾಗ ಮಾಡುತಲಿ ವೈಭವದಿ
ಅಗ್ನಿಯಲಿ ಅಗಣಿತದ ಹವಿಸನ್ನು ಘೃತವನ್ನು
ಅರ್ಪಿಸಲು ಅಗ್ನಿಯದು ಪ್ರಜ್ವಲಿಸಿ ಉರಿದಿಹುದು ॥೧೬೧೯॥

ಪಾವಕನು ಯಾಗದಾ ಹವಿಸನ್ನು ಘೃತವನ್ನು
ಸವಿಸವಿದು ಕುಡಿಯುತಲಿ ಜಠರಾಗ್ನಿ ಮಾಂದ್ಯದಾ
ರೋಗದಲಿ ಬಳಲುತಲಿ ಅಪಚನದಿ ನರಳುತಲಿ
ಬ್ರಹ್ಮನಾ ಬಳಿಬಂದು ಪ್ರಾರ್ಥನೆಯ ಗೈದಿಹನು ॥೧೬೨೦॥

ಶತಯಾಗ ಘೃತವನ್ನು ಕುಡಿಕುಡಿದು ಅಪಚನದಿ
ರೋಗದಲಿ ನರಳುತಲಿ ಅನ್ನವನು ತೊರೆದಿಹನು
ಪಚನದಾ ಶಕ್ತಿಯನು ಕರುಣಿಪುದು ಪರಮೇಷ್ಠಿ
ಎನ್ನುತಲಿ ಪ್ರಾರ್ಥಿಸಲು ಪರಬ್ರಹ್ಮ ನುಡಿದಿಹನು ॥೧೬೨೧॥

ಚಿಂತೆಯನು ಮಾಡದಿರು ಹುತವಹನೆ ಕೇಳುವುದು
ಮುನ್ನಿನಲಿ ಸುರರುಗಳು ವಾಸಿಸುತಲಿರುತಿರ್ದ
ಇಂದ್ರನಾ ಖಾಂಡವದ ವನವನ್ನು ದಹಿಸುವುದು
ನಿನ್ನಯಾ ರೋಗವದು ತೊಲಗುವುದು ಎಂದಿಹನು ॥೧೬೨೨॥

ಖಾಂಡವದ ವನದೊಳಿಹ ಪ್ರಾಣಿಗಳ ಮೇದಸ್ಸು
ಔಷಧದ ಗಿಡಗಳನು ಮೂಲಿಕೆಯ ಭಕ್ಷಿಸಲು
ರೋಗವದು ತೊಲಗುತಲಿ ಜಠರಾಗ್ನಿ ಪ್ರಜ್ವಲಿಸಿ
ಪಚನದಾ ಶಕ್ತಿಯದು ವರ್ಧಿಪುದು ಎಂದಿಹನು ॥೧೬೨೩॥

ನರನಾರಣೆಂಬುವರು ಮಹಋಷಿಗಳೀರ್ವರು
ಅರ್ಜುನನಂ ಶ್ರೀಕೃಷ್ಣರೆಂಬುವಾ ಹೆಸರಿನಲಿ
ಜಗದೊಳಗೆ ಜನ್ಮವನು ತಾಳುತಲಿ ಇಂದ್ರನಾ
ಖಾಂಡವದ ವನವನ್ನು ನಿನಗೀವರೆಂದಿಹನು ॥೧೬೨೪॥

ಫಲುಗುಣನು ಶ್ರೀಕೃಷ್ಣ ಬಂದುದನು ಅರಿಯುತಲಿ
ವಿಪ್ರನಾ ವೇಷದಲಿ ಆ ಅಗ್ನಿ ಐತಂದು
ಖಾಂಡವದ ವನವನ್ನು ದಹಿಸಲಿಕೆ ಕೇಳುತಿರೆ
ಫಲುಗುಣನು ನುಡಿದಿಹನು ವಿಪ್ರನಿಗೆ ವಿನಯದಲಿ ॥೧೬೨೫॥

ಯುದ್ಧವನು ಮಾಡಲಿಕೆ ಎಮ್ಮಯಾ ಬಳಿಯಲ್ಲಿ
ಇಂದ್ರನನು ದಿವಿಜರನು ಶೌರ್ಯದಲಿ ಗೆಲ್ಲಲಿಕೆ
ಬಿಲ್ಲುಗಳು ಬಾಣಗಳು ಶಸ್ತ್ರಾಸ್ತ್ರ ಒಂದಿಲ್ಲ
ಎನ್ನುತಿರೆ ಆ ಅಗ್ನಿ ವರ ವರುಣದೇವನನ ॥೧೬೨೬॥

ಮನದೊಳಗೆ ನೆನೆಯುತಿರೆ ಬರುತಿರಲು ನುಡಿದಿಹನು
ಮುನ್ನಿನಲಿ ಸೋಮನೃಪ ನಿನಗಿತ್ತ ದಿವ್ಯದಾ
ಗಾಂಡಿವದ ಧನುವನ್ನು ಅಕ್ಷಯದ ಶರಗಳನು
ಅರ್ಜುನಗೆ ಈಯುವುದು ಎನ್ನುತಲಿ ಬೇಡಿದನು ॥೧೬೨೭॥

ವರವರುಣ ಹೊಳೆ ಹೊಳೆವ ಗಾಂಡಿವವ ತೆಗೆಯುತಲಿ
ಮೂಲೋಕ ಜಯಿಸುವಾ ಗಾಂಡಿವದ ಧನುವನ್ನು
ಅಕ್ಷಯದ ಶರಗಳನು ಕಪಿಧ್ವಜದ ರಥವನ್ನು
ಮೂಲೋಕ ವೀರನಿಗೆ ಅರ್ಜುನನಿಗಿತ್ತಿಹನು ॥೧೬೨೮॥

ಬಳಿಕಲಾ ಪಾವಕನು ಶ್ರೀಕೃಷ್ಣ ದೇವಂಗೆ
ವಜ್ರದಲಿ ನಿರ್ಮಿಸಿದ ಆಗ್ನೇಯ ಅಸ್ತ್ರಕ್ಕೆ
ಸರಿಸಮವು ಎನಿಸುತಿಹ ಜಗವೆಲ್ಲ ಸುಡಬಲ್ಲ
ಅದ್ಭುತದ ಶಕ್ತಿಯಾ ಚಕ್ರವನು ಇತ್ತಿಹನು ॥೧೬೨೯॥

ನಿನ್ನಯಾ ಕರದೊಳಗೆ ಈ ಚಕ್ರ ಇಹತನಕ
ಎದುರು ಬಹ ದಿವಿಜರನು ಯಕ್ಷರನು ದನುಜರನು
ಶತ್ರುಗಳ ಸಕಲರನು ಸಂಹಾರಗೈಯ್ಯುತಲಿ
ಮರಳುತಲಿ ನಿನ್ನಯಾ ಕರವನ್ನು ಸೇರುವುದು ॥೧೬೩೦॥

ಬಳಿಕಲಾ ಜಗದೊಳಗೆ ಅಪ್ರತಿಮ ಎನಿಸುತಿಹ
ದೈತ್ಯರನು ಕ್ಷಣದೊಳಗೆ ನಾಶವನು ಮಾಡುತಿಹ
ಅಮೋಘವಿರುತಿರ್ಪ ಕೌಮೋದಕೀ ಗದೆಯ
ಮಾಧವನಿಗಿತ್ತಿಹನು ವರವರುಣದೇವನು ॥೧೬೩೧॥

ದಿವ್ಯಾಸ್ತ್ರ ಪಡೆಯುತಲಿ ಕೃಷ್ಣಾರ್ಜುನೀರ್ವರೂ
ಸಂತುಷ್ಟರಾಗುತಲಿ ಹುತವಹಗೆ ನುಡಿದಿಹರು
ನೀನಿತ್ತ ಶಸ್ತ್ರಾಸ್ತ್ರ ರಥದಿಂದ ದಾನವರ
ಸುರರನ್ನು ಶತ್ರುಗಳ ಸಕಲರನು ವಧಿಸುವೆವು ॥೧೬೩೨॥

ತಕ್ಷಕನ ರಕ್ಷಿಸಲು ಸಕಲರಾ ಸುರರೊಡನೆ
ಸುರಪತಿಯು ಯುದ್ಧಕ್ಕೆ ಬಂದೊಡೆಯು ನೀನಿತ್ತ
ಗಾಂಡಿವವ ಹಿಡಿಯುತಲಿ ಶರಮಳೆಯ ಸುರಿಸುತಲಿ
ಸುರಪತಿಯ ಜಯಿಸುವೆವು ಚಿಂತೆಯನು ಮಾಡದಿರು ॥೧೬೩೩॥

ಶ್ರೀಕೃಷ್ಣ ಚಕ್ರವನು ಧರಿಸುತಲಿ ನಿಂತೊಡೆಯು
ಜಗವೆಲ್ಲ ಒಂದಾಗಿ ಯುದ್ಧಕ್ಕೆ ಬಂದೊಡೆಯು
ಸರ್ವರನು ಸಂಹಾರಗೈಯ್ಯುತಲಿ ನಿಮಿಷದಲಿ
ಜಯಸಿರಿಯ ವರಿಸುವನು ಸಂಶಯವು ಇದಕಿಲ್ಲ ॥೧೬೩೪॥

ಇಂದ್ರನಾ ಭಯತೊರೆದು ಖಾಂಡವದ ವನವನ್ನು
ಎಲ್ಲವನು ಆಕ್ರಮಿಸಿ ಆವರಿಸಿ ಭಕ್ಷಿಪುದು
ನಿನ್ನಯಾ ರಕ್ಷಣೆಗೆ ನಾವೀರ್ವರಿರುತಿಹೆವು
ಎನ್ನುತಲಿ ಅರ್ಜುನನು ಪಾವಕನಿಗೊರೆದಿಹನು ॥೧೬೩೫॥

ಕೃಷ್ಣಾರ್ಜುನೀರ್ವರಾ ನುಡಿಗಳನು ಕೇಳುತಲಿ
ಯಜ್ಞೇಶ್ವರತ್ಯಂತ ಹರ್ಷದಲಿ ಸಂತಸದಿ
ಕೆಂಡಗಳನುಗುಳುತಿಹ ನೀಳಮಿಹ ಜ್ವಾಲೆಯಾ
ನಾಲಗೆಯ ಚಾಚುತಲಿ ಖಾಂಡವವ ದಹಿಸಿದನು ॥೧೬೩೬॥

**ಪಾವಕನು ದಳ್ಳುರಿಯ ನಾಲಗೆಯ ಚಾಚುತಲಿ ।**
**ಖಾಂಡವವ ದಹಿಸುತಲಿ ಭಸ್ಮವನು ಮಾಡಿಹನು ॥**
ಸುತ್ತಲೂ ಮುತ್ತುತಲಿ ಎಲ್ಲವನು ತಬ್ಬುತಲಿ
ಛಿಳಿ ಛಿಟಲು ಛಟ ಛಟನೆ ದಿಮಿದಿಮಿಯು ಸಿಮಿಸಿಮಿಯು
ದುಮುದುಮುನೆ ಉರಿಯುತಲಿ ದ್ರುಮಲತೆಯ ಗುಲ್ಮಗಳ
ಕಾನನವನೆಲ್ಲವನು ಭಸ್ಮವನು ಮಾಡಿಹನು ॥೧೬೩೭॥

ಉರುಳುತಲಿ ಬೀಳುವಾ ಮರಗಳಾ ನಾದವದು
ದಶದಿಶೆಯ ನಡುಗಿಸುತ ಭೂಮಿಯನು ಕಂಪಿಸಿತು
ಪಶುಪಕ್ಷಿ ಪ್ರಾಣಿಗಳು ಕೂಗುತಲಿ ಚೀರುತಲಿ
ಕಳವಳದಿ ಭಯದಿಂದ ದೆಸೆದೆಸೆಗೆ ಓಡಿದವು ॥೧೬೩೮॥

ಹುಲಿಕರಡಿ ಸಿಂಹಗಳು ಆನೆಗಳು ಚಿರತೆಗಳು
ಜಿಂಕೆಗಳು ಮೊದಲಾದ ಕಾನನದ ಪ್ರಾಣಿಗಳು
ಉರಿಯುತಿಹ ಜ್ವಾಲೆಯಲಿ ಮಧ್ಯದಲಿ ಸಿಲುಕುತಲಿ
ದಹಿಸುತಲಿ ಸಕಲವೂ ಭಸ್ಮವದು ಆಗಿಹವು ॥೧೬೩೯॥

ಖಾಂಡವದ ವನದಿಂದ ಹುಳವೊಂದು ಪಾರಾಗಿ
ಹೋಗದಿಕೆ ಆಗದಾ ಪರಿಯಲ್ಲಿ ಈರ್ವರೂ
ಸುತ್ತಲೂ ನೋಡುತಲಿ ಪಶುಪಕ್ಷಿ ಪ್ರಾಣಿಗಳ
ಎಲ್ಲವನು ಭಕ್ಷಿಸಲು ಪಾವಕಗೆ ಇತ್ತಿಹರು ॥೧೬೪೦॥

ಅಕಟಕಟ ಖಗಮೃಗದ ಸಂಕುಲವು ಚೀರುತಲಿ
ಉರಿಯೊಳಗೆ ಬೀಳುತಿಹ ಸಮಯದಲಿ ಕೂಗುತಿಹ
ಆರ್ತದಾ ನಾದವದು ಸಾಗರದ ಮಂಥನದಾ
ಭೀಕರದ ನಾದದಾ ಪರಿಯಲ್ಲಿ ಪಸರಿದುದು ॥೧೬೪೧॥

ಜ್ವಾಲೆಯಾ ಝಳವನ್ನು ತಾಳದೆಯ ಪಕ್ಷಿಗಳು
ಗಗನಕ್ಕೆ ಹಾರುತಿರೆ ಫಲುಗುಣನು ನೋಡುತಲಿ
ಬಾಣಗಳ ಮಳೆಗರೆದು ಪಕ್ಷಿಗಳನೆಲ್ಲವನು
ಅಗ್ನಿಯಾ ಬಾಯೊಳಗೆ ಬೀಳ್ವಂತೆ ಕೆಡಹಿದನು ॥೧೬೪೨॥

ಶುಕಪಿಕವು ಕಾಕಗಳು ಚಾತಕ ಭರಧ್ವಾಜ
ಹಂಸಗಳ ನವಿಲುಗಳ ಗೀಜಗ ಚಕೋರಗಳ
ಆ ಚಕ್ರವಾಕಗಳ ಮರಕುಟಕ ಪಕ್ಷಿಗಳ
ನಿಕರಗಳು ಚೀರುತಲಿ ಬಿದ್ದಿಹವು ವಹ್ನಿಯಲಿ ||೧೬೪೩||

ಹುಲಿಕರಡಿ ಸಿಂಹಗಳು ಆನೆಗಳು ಚಿಗರೆಗಳು
ಪ್ರಾಣದಾ ಭಯದಿಂದ ದಿಕ್ಕೆಟ್ಟು ಓಡುತಲಿ
ಕಾನನವು ಬಿರಿವಂತೆ ಕೂಗುತಲಿ ಚೀರುತಲಿ
ಅಗ್ನಿಯೊಳು ಬೀಳುತಲಿ ಪ್ರಾಣಗಳ ತೆತ್ತಿಹವು ||೧೬೪೪||

ಅರೆಬೆಂದ ಪ್ರಾಣಿಗಳು ಅರೆಸುಟ್ಟ ಪಕ್ಷಿಗಳು
ನಭಭಿರಿವ ತೆರದಲ್ಲಿ ಆರ್ತದಾ ನಾದದಲಿ
ಪಟಪಟನೆ ಒಣಗಿದೆಲೆ ಉದುರುತಲಿ ಬೀಳ್ವಂತೆ
ಉರಿಯೊಳಗೆ ಬೀಳುತಲಿ ಒದ್ದಾಡಿ ಸತ್ತಿಹವು ||೧೬೪೫||

ಇದು ಪ್ರಳಯ ಕಾಲದಾ ಭೀಕರದ ಜ್ವಾಲೆಯೋ
ಪರಶಿವನು ನೊಸಲಿನಾ ನಯನವನು ತೆರೆಯುತಲಿ
ಕೆಂಡವನು ಸುರಿಸುತಲಿ ಮೂಲೋಕ ಸುಡುತಿಹನೊ
ಎಂಬಂತೆ ಘೋರಾಗ್ನಿ ಖಾಂಡವವ ದಹಿಸಿದುದು ||೧೬೪೬||

ಸನಿಹದೊಳು ಸರಸಿಗಳು ಕೆರೆತೊರೆಯು ಬಾವಿಗಳು
ನೀರೆಲ್ಲ ಕುದಿಕುದಿದು ಆವಿಯಲಿ ಒತ್ತುತಿರೆ
ಮೀನುಗಳು ಮೊಸಳೆಗಳು ಜಲಚರದ ಪ್ರಾಣಿಗಳು
ನೆಗೆಯುತಲಿ ಅಗ್ನಿಯಲಿ ಬೀಳುತಲಿ ಸತ್ತಿಹವು ||೧೬೪೭||

ಜ್ವಾಲೆಯಾ ನಾಲಗೆಯು ಗಗನವನು ಚುಂಬಿಸಲು
ಸುರರಿಂಗೆ ಝಳಸೋಂಕೆ ಭಯದಿಂದ ಧಾವಿಸುತ
ಇಂದ್ರನಾ ಬಳಿಬಂದು ಮೂಲೋಕವೆಲ್ಲವನು
ಯಜ್ಞೇಶ ಸುಡುತಿಹನು ರಕ್ಷಿಪುದು ಎಂದಿಹರು ||೧೬೪೮||

ಸುಡುತಲಿಹ ಖಾಂಡವದ ವನವನ್ನು ನೋಡುತಲಿ
ದೇವೇಂದ್ರ ಕೋಪದಲಿ ರಥವೇರಿ ಹೊರಡುತಲಿ
ಪ್ರಳಯದಾ ಮೇಘಗಳ ಮಾಲೆಗಳ ಬೀಸುತಲಿ
ಭೀಕರದ ಮಳೆಗರೆದ ಉರಿಯುತಿಹ ಅಗ್ನಿಯಲಿ ||೧೬೪೯||

ಸುರಿಯುತಿಹ ಜಲಧಾರೆ ಅಗ್ನಿಯಲಿ ಬೀಳುತಲಿ
ಆವಿಯಾ ರೂಪದಲಿ ನಭದೆಡೆಗೆ ನೆಗೆಯುತಿರೆ
ಇಂದ್ರನತಿ ಕ್ರೋಧದಲಿ ನಿಬಿಡವಿಹ ಮೋಡಗಳ
ಜಾಲವನು ಬೀಸುತಲಿ ಪ್ರಳಯಮಳೆ ಸುರಿಸಿಹನು ||೧೬೫೦||

ಫಲಗುಣನು ಗಾಂಡಿವವ ಕೊಳ್ಳುತಲಿ ಅಗಣಿತದ
ಶರಗಳನು ಅಳವಡಿಸಿ ಜಗ್ಗುತಲಿ ಬಿಡುತಲಿರೆ
ಗಾಳಿಪಟ ಹಾರ್ವಂತೆ, ಮೇಘಗಳ ಜಾಲವದು
ಹಾರುತಲಿ ಹರಿಯುತಲಿ ದೆಸೆದೆಸೆಗೆ ಚದುರಿದುದು ||೧೬೫೧||

ಪಶುಪಕ್ಷಿ ಪ್ರಾಣಿಗಳು ಹೋಗದಾ ತೆರದಲ್ಲಿ
ಅರ್ಜುನನು ಶರಜಾಲ ನಿರ್ಮಾಣ ಗೈದಿಹನು
ಹುಳುವೊಂದು ನೊರಜೊಂದು ಪಾರಾಗಿ ಪೋಗದಲೆ
ಸರ್ವವೂ ಅಗ್ನಿಯಲಿ ನಾಶವನು ಹೊಂದಿಹವು ||೧೬೫೨||

ಖಾಂಡವದ ವನವನ್ನು ದಹಿಸುತಿಹ ಸಮಯದಲಿ
ಇಂದ್ರನಾ ಮಿತ್ರನಿಹ ತಕ್ಷಕನು ದೈವದಲಿ
ಕುರುಕ್ಷೇತ್ರಕೈದಿರಲು ಸತಿಸುತರು ಬಿಲದೊಳಗೆ
ವಾಸಿಸುತಲಿರ್ದಿಹರು ದುರ್ದೈವ ವಿಧಿಯಲ್ಲಿ ||೧೬೫೩||

ಉರಿಯುತಿಹ ಭೀಕರದ ಜ್ವಾಲೆಯದು ನಾಲಗೆಯ
ಬಿಲದೊಳಗೆ ಚಾಚುತಲಿ ಅಲ್ಲಿರುವ ತಕ್ಷಕನ
ವೀರಸತಿ ನಾಗಿಣಿಯು ಸುತ ಅಶ್ವಸೇನನನು
ರಕ್ಷಿಸಲು ಬಾಲದಾ ಪರ್ಯಂತ ನುಂಗುತಲಿ ||೧೬೫೪||

ರಭಸದಲಿ ಗಗನಕ್ಕೆ ಹಾರುತಿರೆ ಭರದಲ್ಲಿ
ನಾಗಿನಿಯು ನಭದೆಡೆಗೆ ಹಾರುತಿದೆ ಅರ್ಜುನನೆ
ತುತ್ತೊಂದು ಕಡಿಮೆಯದು ಆಗುತಿದೆ ನನಗಿಂದು
ಬೇಗನೇ ಬಾಣವನು ಎಸೆಯುತಲಿ ನಾಗಿನಿಯು ||೧೬೫೫||

ಎನ್ನಯಾ ಬಾಯೊಳಗೆ ಬೀಳ್ವಂತೆ ಮಾಡುವುದು
ಎನ್ನುತಲಿ ಆ ಅಗ್ನಿ ಭರದಲ್ಲಿ ನುಡಿಯುತಿರೆ
ಫಲುಗುಣನು ತೀಕ್ಷ್ಣದಾ ಬಾಣಗಳ ಬಿಡುತಲಿರೆ
ನಾಗಿಣಿಯು ಹೆಡೆತರಿದು ಉರಿಯೊಳಗೆ ಬಿದ್ದಿಹುದು ||೧೬೫೬||

ಆ ಅಶ್ವಸೇನ ನೃಪ ಹೊರನೆಗೆದು ಭರದಲ್ಲಿ
ಈ ಸೇಡ ತೀರಿಸದೆ ನಾನೆಂದು ಬಿಡೆನೆಂದು
ಅರ್ಜುನನೆ ನಿನ್ನಯಾ ಶಿರವನ್ನು ತರಿಯುವೆನು
ಎನ್ನುತಲಿ ಕರ್ಣನಾ ಶರವನ್ನು ಹೊಕ್ಕಿಹುದು ||೧೬೫೭||

**ತಕ್ಷಕನ ಪತ್ನಿಯನು ಫಲುಗುಣನು ವಧಿಸುತಿರೆ ।**
**ಆ ಕ್ಷಣದಿ ದೇವೇಂದ್ರ ಯುದ್ಧವನು ಗೈದಿಹನು ॥**

ನಾಗಿನಿಯ ಶಿರಕೆಳಗೆ ಬೀಳುತಿರೆ ದೇವೇಂದ್ರ
ತಕ್ಷಕನ ಸತಿವಧೆಯ ಕಾಣುತಲಿ ಕ್ರೋಧದಲಿ
ದಿವಿಜರಾ ಸಹಿತದಲಿ ಯುದ್ಧಕ್ಕೆ ಐತಂದು
ಕೃಷ್ಣಾರ್ಜುನೀರ್ವರಲಿ ಬಾಣಮಳೆಗರೆದಿಹನು ||೧೬೫೮||

ಬಿರುಗಾಳಿ ಮೇಘಗಳ ನಿಕರವನು ಚದುರಿಸುವ
ಪರಿಯಲ್ಲಿ ದಿವಿಜರಾ ಶರಗಳನು ಅರ್ಜುನನು
ಖಂಡಿಸಲು ಶ್ರೀಕೃಷ್ಣ ಚಕ್ರವನು ಎಸೆಯುತಲಿ
ಯಕ್ಷರಾ ದಾನವರ ಶಿರಗಳನು ತರಿದಿಹನು ॥೧೬೫೯॥

ದೇವೇಂದ್ರ ಕೃಷ್ಣಾರ್ಜುನೀರ್ವರಾ ಶೌರ್ಯವನು
ನೋಡುತಲಿ ವಜ್ರಾಯುಧೆತ್ತುತಲಿ ಭರದಲ್ಲಿ
ಈಗಲೇ ಈರ್ವರನು ಕೊಲ್ಲುವೆನು ಎನ್ನುತಲಿ
ಐರಾವತೇರುತಲಿ ಕ್ರೋಧದಲಿ ಧಾವಿಸಲು ॥೧೬೬೦॥

ಯಮಧರ್ಮ ಧನಪತಿಯು ಅಷ್ಟವಸು ಮರುತಗಳು
ಅಶ್ವಿನೀ ದೇವತೆಯು ಮೊದಲಾದ ಸುರರೆಲ್ಲ
ಘೋರತರ ಶಸ್ತ್ರಾಸ್ತ್ರ ಆಯುಧವ ಕೊಳ್ಳುತಲಿ
ಅರ್ಜುನನ ಕೊಲ್ಲಲಿಕೆ ಸುತ್ತಲೂ ಮುತ್ತಿಹರು ॥೧೬೬೧॥

ಪ್ರಳಯದಾ ಕಾಲವದು ಸನ್ನಿಹಿತವಾಗಿದೆಯೊ
ಎಂಬಂತೆ ಎಲ್ಲೆಡೆಗೆ ಭೀತಿಯದು ಪಸರಿಸಿತು
ಅರ್ಜುನನು ಅಂಜದೆಯು ಬಾಣಗಳನೆಚ್ಚುತಲಿ
ಸುರರನ್ನು ದಿಕ್ಕೆಟ್ಟು ಚದುರಿಸುತ ಓಡಿಸಿದ ॥೧೬೬೨॥

ಪಾರ್ಥನಾ ಶೌರ್ಯವನು ದೇವೇಂದ್ರ ನೋಡುತಲಿ
ಮಂದರದ ಪರ್ವತದ ಶಿಖರವನು ಎತ್ತುತಲಿ
ಬೀಸುತಿರೆ ಅರ್ಜುನನು ಅಗಣಿತದ ಶರಗಳನು
ಎಚ್ಚುತಲಿ ಪರ್ವತವ ಪುಡಿಪುಡಿಯು ಗೈದಿಹನು ॥೧೬೬೩॥

ಕಲ್ಪಾಂತ ಮಳೆಯಂತೆ ಅರ್ಜುನನು ಶರಮಳೆಯ
ಸುರಿಸುತಲಿ ದಾನವರ ಯಕ್ಷರನು ಕೊಲ್ಲುತಿರೆ
ಶ್ರೀಕೃಷ್ಣ ಕ್ರೋಧದಲಿ ಘನಘೋರ ಚಕ್ರವನು
ಗಂಧರ್ವ ದಿವಿಜರೆಡೆ ಬೀಸುತಲಿ ಬಿಡುತಲಿರೆ ॥೧೬೬೪॥

ಭೀಕರದ ಚಕ್ರವದು ತಿರುಗುತಲಿ ಬರುತಲಿರೆ
ಸುರರೆಲ್ಲ ಭಯದಿಂದ ಯುದ್ಧವನು ಗೆಲ್ಲುವುದು
ಅಸದಳವು ತಮಗೆಂದು ದೆಸೆದೆಸೆಗೆ ಓಡುತಿರೆ
ಅಶರೀರ ವಾಣಿಯದು ನಭದಲ್ಲಿ ನುಡಿದಿಹುದು ॥೧೬೬೫॥

ಕೃಷ್ಣಾರ್ಜುನೀರ್ವರೂ ಮುನ್ನಿನಾ ಜನ್ಮದಲಿ
ನರನಾರಣೆಂಬುವರು ಖ್ಯಾತವಿಹ ಋಷಿವರರು
ಇವರನ್ನು ಜಯಿಸುವವರಾರಿಲ್ಲ ಜಗದೊಳಗೆ
ಜಗವಂದ್ಯ ಪೂಜಾರ್ಹ ಋಷಿವರರು ಇರುತಿಹರು ॥೧೬೬೬॥

ಇವರೊಡನೆ ಯುದ್ಧವನು ತ್ಯಜಿಸುತಲಿ ತೆರಳುವುದು
ನಿನಗಿದುವೆ ಹಿತಕರವು ಶುಭಕರವು ಎನಿಸುವುದು
ಖಾಂಡವದ ವನವನ್ನು ದಹಿಸುವುದು ದೇವರಾ
ಸಂಕಲ್ಪವಿರುತಿಹುದು ಚಿಂತೆಯನು ಮಾಡದಿರು ॥೧೬೬೭॥

ಖಾಂಡವದ ವನವನ್ನು ದಹಿಸುವಾ ಮೊದಲಿಂಗೆ
ನಿನ್ನಯಾ ಸ್ನೇಹಿತನು ತಕ್ಷಕನು ದೈವದಲಿ
ಕುರುಕ್ಷೇತ್ರ ತಾಣಕ್ಕೆ ಕ್ಷೇಮದಲಿ ತೆರಳಿಹನು
ನೀ ಮರಳಿ ಹೋಗುವುದು ಎನ್ನುತಲಿ ನುಡಿದಿಹುದು ॥೧೬೬೮॥

ಅಶರೀರ ವಾಣಿಯನು ಕೇಳುತಲಿ ಸುರಪತಿಯು
ಸುರರೊಡನೆ ಸ್ವರ್ಗಕ್ಕೆ ಸಂತಸದಿ ತೆರಳಿದನು
ಯಜ್ಞೇಶ ಮುದದಿಂದ ಖಾಂಡವದ ವನವನ್ನು
ಹದಿನೈದು ದಿನತನಕ ಸಂಪೂರ್ಣ ದಹಿಸಿದನು ॥೧೬೬೯॥

ಶ್ರೀಕೃಷ್ಣ ಚಕ್ರವನು ತಿರುಗಿಸುತ ಬೀಸುತಲಿ
ಧಾವಿಸುವ ದಾನವರ ದೈತ್ಯರಾ ದೇಹಗಳ
ತರಿಯುತಲಿ ಭುಗಿಲೆನಿಪ ಅಗ್ನಿಯಲಿ ಉರುಳಿಸುತ
ಹುಲಿಕರಡಿ ಪ್ರಾಣಿಗಳನೆಲ್ಲವನು ಕೆಡಹಿದನು ॥೧೬೭೦॥

ಆ ಸಮಯ ಮರೆಯಲ್ಲಿ ಮಯದೈತ್ಯ ಓಡಲಿಕೆ
ಯತ್ನಿಸಲು ಪಾವಕನು ನರವೇಷ ಧರಿಸುತಲಿ
ಈ ಮಯನ ಭಕ್ಷಿಸಲು ನನಗೀಯಬೇಕೆಂದು
ಕೃಷ್ಣನನು ಪ್ರಾರ್ಥಿಸಲು ಶ್ರೀಕೃಷ್ಣನಾಕ್ಷಣದಿ ॥೧೬೭೧॥

ಚಕ್ರವನು ಎತ್ತುತಲಿ ಎಸೆಯಲಿಕೆ ಯತ್ನಿಸಲು
ಜೀವದಾ ಆಸೆಯಲಿ ಮಯದೈತ್ಯ ಧಾವಿಸುತ
ಅರ್ಜುನನ ಚರಣಕ್ಕೆ ಎರಗುತಲಿ ದೈನ್ಯದಲಿ
ರಕ್ಷಿಪುದು ಎನ್ನನ್ನು ಎನ್ನುತಲಿ ಪ್ರಾರ್ಥಿಸಲು ॥೧೬೭೨॥

ಶರಣಾಗಿ ಬಂದಿರುವ ಶತ್ರುಗಳ ರಕ್ಷಿಪುದು
ಕ್ಷತ್ರಿಯರ ಧರ್ಮವಿದೆ ನಿನ್ನನ್ನು ರಕ್ಷಿಪುದು
ಎನ್ನಯಾ ಕರ್ತವ್ಯ ಚಿಂತೆಯನು ಮಾಡದಿರು
ಎನ್ನುತಲಿ ಮಯನಿಂಗೆ ಭರವಸೆಯನಿತ್ತಿಹನು ॥೧೬೭೩॥

ಈ ತೆರದಿ ಅರ್ಜುನನು ಅಸುರಂಗೆ ಅಭಯವನು
ಕೊಡುತಿರಲು ಯಾದವನು ಎತ್ತಿರುವ ಚಕ್ರವನು
ಕರುಣೆಯಲಿ ಕೆಳಗಿಳಿಸೆ ಪಾವಕನು ನಮುಚಿಯಾ
ಸೋದರನ ಮಯನನ್ನು ತ್ಯಜಿಸುತಲಿ ಸರಿದಿಹನು ॥೧೬೭೪॥

ಖಾಂಡವದ ವನದೊಳಗೆ ವಾಸಿಸುತಲಿರುತಿರ್ದ
ಆ ಅಶ್ವಸೇನಸ್ವಪ ಮಯದೈತ್ಯ ಮತ್ತೆಯು
ಆ ನಾಲ್ಕು ಶಾರ್ಙರಾ ಪಕ್ಷಿಗಳು ಈ ಆರು
ಪ್ರಾಣಿಗಳು ಅಗ್ನಿಯಲಿ ದಹಿಸದೆಯೆ ಬದುಕಿದವು ॥೧೬೭೫॥

ಪ್ರಳಯದಾ ಜ್ವಾಲೆಯದು ಖಾಂಡವದ ವನವನ್ನು
ಸುಡುತಲಿರೆ ಆ ನಾಲ್ಕು ಶಾರ್ಙರಾ ವಿಹಗಗಳು
ದಹಿಸದಲೆ ಆವಪರಿ ಬದುಕಿದವು ಎಂಬುದನು
ಪೇಳುವುದು ಎನ್ನುತಲಿ ಪಾರಿಕ್ಷಿತೊರೆದಿಹನು ॥೧೬೭೬॥

**ಖಾಂಡವದ ಜ್ವಾಲೆಯಲಿ ಜೀವಂತ ಉಳಿದಿರ್ದ ।**
**ಶಾರ್ಙರಾ ವಿಹಗಗಳ ವೃತ್ತಾಂತವರುಹಿದನು ॥**

ಕೇಳುವುದು ಜನಮೇಜಯ ಕ್ಷಿತಿಪ ಮುನ್ನಿನಲಿ
ವರಮಂದ ಪಾಲಋಷಿ ತಪಸಿನಾ ಫಲದಿಂದ
ಪಿತೃಲೋಕ ತೆರಳುತಲಿ ಪುಣ್ಯದಾ ಲೋಕಗಳ
ಕಾಣದೆ ಇರುತಿರಲು ಯಮನಿಂಗೆ ನುಡಿದಿಹನು ॥೧೬೭೭॥

ಅಗಣಿತದ ಪುಣ್ಯದಾ ಕಾರ್ಯಗಳ ಗೈದಿಹೆನು
ಪುಣ್ಯದಾ ಲೋಕಗಳು ದೊರೆಯದಿಹ ಕಾರಣವ
ಪೇಳುವುದು ಎನ್ನುತಲಿ ಆ ಮಂದಪಾಲ ಋಷಿ
ನುಡಿಯುತಿರೆ ಯಮಧರ್ಮ ಋಷಿವರಗೆ ನುಡಿದಿಹನು ॥೧೬೭೮॥

ವೇದಗಳ ಅಧ್ಯಯನ ಗೈಯ್ಯುತಲಿ ಋಷಿ ಋಣವ
ಯಜ್ಞಗಳ ಗೈಯ್ಯುತಲಿ ದೇವಋಣ ತೀರಿಸಿಹೆ
ಸಂತಾನವಿಲ್ಲದೆಯೆ ಪಿತೃಋಣವ ತೀರಿಸದೆ
ಇರುತಿರಲು ಪುಣ್ಯದಾ ಲೋಕಗಳು ಕಾಣಸವು ॥೧೬೭೯॥

ಪುತ್ರರನು ನೀ ಪಡೆದು ಪುಣ್ಯದಾ ಲೋಕಗಳ
ಪಡೆಯುತಲಿ ಸುಖಿಯಾಗಿ ನೀನಿಹುದು ಎನ್ನುತಲಿ
ಯಮಧರ್ಮ ನುಡಿಯುತಿರೆ ಆ ಮಂದಪಾಲ ಋಷಿ
ಸಂತಾನ ಪಡೆಯಲಿಕೆ ಯೋಚನೆಯಗೈಯ್ಯುತಲಿ ॥೧೬೮೦॥

ಪಕ್ಷಿಗಳು ಶೀಘ್ರದಲಿ ವಿಪುಳದಲಿ ಮಕ್ಕಳನು
ಪಡೆಯುವವು ಎನ್ನುತಲಿ ಶಾರ್ಙರಾ ಪಕ್ಷಿಯಾ
ರೂಪವನು ತಾಳುತಲಿ ಜರಿತೆಯನು ವಿಹಗವನು
ಸೇರುತಲಿ ಮರಿಗಳನು ನಾಲ್ವರನು ಪಡೆದಿಹಳು ॥೧೬೮೧॥

ಪಕ್ಷಿಗಳ ಚಾಂಚಲ್ಯ ಗುಣದಿಂದ ಮಂದಪಾಲ
ಲಪಿತೆಯಳು ಎಂಬುವಾ ಪಕ್ಷಿಯನು ನೋಡುತಲಿ
ಮೋಹಿಸುತ ಜರಿತೆಯಾನು ನಾಲ್ವರನು ಮಕ್ಕಳನು
ತೊರೆಯುತಲಿ ಹೋಗುತಿರೆ ಆ ಜರಿತೆ ದಿನದಿನವು ॥೧೬೮೨॥

ಆಹಾರವೀಯುತಲಿ ಆ ನಾಲ್ಕು ಮರಿಗಳನು
ಪೋಷಿಸುತಲಿರುತಿರಲು ಖಾಂಡವದ ವನದೊಳಗೆ
ಒಂದುದಿನ ಆ ಮಂದಪಾಲ ಖಗ ಹೊಸಸತಿಯ
ಲಪಿತೆಯಾ ಸಹಿತದಲಿ ಗಗನದಲಿ ಚರಿಸುತಿರೆ ॥೧೬೮೩॥

ಪ್ರಳಯಾಗ್ನಿ ಧಗಧಗನೆ ಉರಿಯುತಲಿ ಖಾಂಡವವ
ಸುಡುವುದನು ಕಾಣುತಲಿ ತನ್ನಯಾ ಮರಿ ಎಲ್ಲ
ಅಗ್ನಿಯಲಿ ಸಾಯುವವು ಎನ್ನುತಲಿ ಚಿಂತಿಸುತ
ಪಾವಕನ ಸ್ತುತಿಸಿದನು ವಿಧವಿಧದಿ ದೈನ್ಯದಲಿ ॥೧೬೮೪॥

ಸಂತುಷ್ಟನಾಗುತಲಿ ಮಂದಪಾಲರ್ಷಿಗೆ
ನಿನ್ನಯಾ ಇಷ್ಟವನು ಮನಸಿನಾ ಬಯಕೆಯನು
ತಿಳುಹುವುದು ನಾನೀವೆ ಎನ್ನುತಲಿ ಯಜ್ಞೇಶ
ನುಡಿಯುತಿರೆ ಆ ಮಂದಪಾಲ ಮುನಿ ನುಡಿದಿಹನು ॥೧೬೮೫॥

ಖಾಂಡವದ ವನವನ್ನು ದಹಿಸುತಿಹ ಸಮಯದಲಿ
ಎನ್ನಯಾ ಮಕ್ಕಳನು ನಾಲ್ಕನ್ನು ಕರುಣೆಯಲಿ
ಪುಕ್ಕಗಳು ರೆಕ್ಕೆಗಳು ಕೂದಲೆಳೆ ಕೊಂಕದಲೆ
ಉರಿಯಝಳ ಸೋಂಕದಲೆ ರಕ್ಷಿಪುದು ಎಂದಿಹನು ॥೧೬೮೬॥

ಚಿಂತೆಯನು ಮಾಡದಿರು ಎಳ್ಳನಿತು ಮುನಿಖಗನೆ
ನಿನ್ನಯಾ ಮಕ್ಕಳನು ಸೋಂಕದೆಯೆ ರಕ್ಷಿಪೆನು
ಎನ್ನುತಲಿ ವರ ಅಗ್ನಿ ಅಭಯವನು ಈಯುತಿರೆ
ಆ ಮಂದಪಾಲಮುನಿ ಸಂತಸದಿ ತೆರಳಿದನು ॥೧೬೮೭॥

ಪಾವಕನು ಜ್ವಾಲೆಯಾ ನಾಲಗೆಯ ಚಾಚುತಲಿ
ಪಸರುತಲಿ ಸನಿಹದಲಿ ಬರುತಲಿರೆ ತಾಯ್ಖಗವು
ಮರಿಗಳನು ರಕ್ಷಿಸಲು ಚಿಂತಿಸುತ ಕಳವಳದಿ
ಮಕ್ಕಳಿಗೆ ಆ ತಾಯಿ ಜರಿತೆ ಖಗ ನುಡಿದಿಹುದು ॥೧೬೮೮॥

ಬಿಲದೊಳಗೆ ನಿಮ್ಮನ್ನು ಇರಿಸುತಲಿ ಮೇಲಕ್ಕೆ
ಮಣ್ಣಿಂದ ಮುಚ್ಚುತಲಿ ಬೇರೆಡೆಗೆ ತೆರಳುವೆನು
ಅಗ್ನಿಯದು ನಿಮ್ಮನ್ನು ಸ್ಪರ್ಶಿಸದೆ ಸುಡದಿಹುದು
ಎನ್ನುತಿರೆ ಆ ಜರಿತೆ ಮರಿ ಎಲ್ಲ ನುಡಿದಿಹವು ॥೧೬೮೯॥

ಬಿಲದೊಳಗೆ ಸೇರಿದೊಡೆ ಇಲಿ ನಮ್ಮ ತಿನ್ನುವದು
ನೆಲವನ್ನು ಕೆದರುತಲಿ ಪಶುಪಕ್ಷಿ ತಿಂಬುವವು
ಅದಕಿಂತ ಅಗ್ನಿಯಲಿ ದಹಿಸುತಲಿ ಸಾಯುತಲಿ
ಸದ್ಗತಿಯ ಪಡೆಯುವೆವು ಶ್ರೇಯವದು ನಮಗಿಹುದು ॥೧೬೯೦॥

ದೈವದಲಿ ಪಾವಕನು ನಮ್ಮನ್ನು ಸುಡದಿರಲು
ಮತ್ತೆ ನೀ ಮರಳುತಲಿ ನಮ್ಮನ್ನು ಕೂಡುವದು
ಈಗ ನೀ ಪತಿಯನ್ನು ಅರಸುತಲಿ ಸೇರುತಲಿ
ಮಕ್ಕಳನು ಪಡೆಯುವುದು ಎನ್ನುತಲಿ ನುಡಿದಿಹವು ॥೧೭೯೧॥

ಋಷಿವರನ ಪುತ್ರರುಗಳಾಗಿರುವ ಜ್ಞಾನಿಗಳು
ಪಕ್ಷಿಗಳು ಈ ಪರಿಯ ನುಡಿಯುತಿರೆ ತಾಯಿ ಖಗ
ತೆರಳುತಿರೆ ಹುತವಹನ ಧಗಧಗನೆ ಉರಿಯುತಲಿ
ಸನಿಹದಲಿ ಬರುತಲಿರೆ ಮರಿ ಎಲ್ಲ ದೈನ್ಯದಲಿ ॥೧೭೯೨॥

ಮುಂಗಾಲ್ಗಳೆರಡನ್ನು ಎತ್ತುತಲಿ ನಮಿಸುತಲಿ
ಅಗ್ನಿಯನು ದೈನ್ಯದಲಿ ಪ್ರಾರ್ಥನೆಯ ಗೈದಿಹವು
ಎಮ್ಮಯಾ ಆ ತಂದೆ ಎಲ್ಲಿಹನೊ ಗೊತ್ತಿಲ್ಲ
ನಮ್ಮನ್ನು ತೊರೆಯುತಲಿ ಆ ತಾಯಿ ತೆರಳಿಹಳು ॥೧೭೯೩॥

ಈ ಸಮಯ ನಮ್ಮನ್ನು ರಕ್ಷಿಸುವರಾರಿಲ್ಲ
ನೀನೀಗ ನಮ್ಮಯಾ ತಾಯ್ತಂದೆಯಾಗಿರುವೆ
ನಿನ್ನಯಾ ಮಕ್ಕಳುಗಳೆನ್ನುತಲಿ ರಕ್ಷಿಪುದು
ಎನ್ನುತಲಿ ದೈನ್ಯದಲಿ ಪ್ರಾರ್ಥನೆಯ ಗೈದಿಹವು ॥೧೭೯೪॥

ಪ್ರಾಣಗಳನುಳಿಸುತಲಿ ನೀ ಎಮ್ಮ ರಕ್ಷಿಪುದು
ಎಮ್ಮನ್ನು ದಹಿಸದೆಯೆ ದಯೆಯಿಂದ ಸಲಹುವುದು
ಎನ್ನುತಲಿ ಮುನಿಸುತರು ಜ್ಞಾನಿಗಳು ಪಕ್ಷಿಗಳು
ಅಗ್ನಿಯನು ದೈನ್ಯದಲಿ ಪ್ರಾರ್ಥನೆಯ ಗೈದಿಹವು ॥೧೭೯೫॥

ಸುಪ್ರೀತನಾಗುತಲಿ ಹುತವಹನು ಹರುಷದಲಿ
ನಿಮ್ಮಯಾ ಭಕ್ತಿಯನು ಆ ಬ್ರಹ್ಮ ಜ್ಞಾನವನು
ತಿಳಿಯುತಲಿ ಸಂತುಷ್ಟನಾಗಿಹೆನು ನೀವೀಗ
ಬೇಡಿದುದನೀಯುವೆನು ಕೇಳುವುದು ಎಂದಿಹನು ॥೧೭೯೬॥

ಕಾಡೊಳಗೆ ವಾಸಿಸುವ ಅತಿಕ್ರೂರ ಬೆಕ್ಕುಗಳು
ನಿತ್ಯವೂ ಹಿಂಸೆಯನು ನಮಗೀಯುತಿಹವು
ಬೆಕ್ಕುಗಳನೆಲ್ಲವನು ನಾಶವನು ಮಾಡುವುದು
ಎನ್ನುತಿರೆ ಮಾರ್ಜಾಲವೆಲ್ಲವನು ದಹಿಸಿದನು ॥೧೭೯೭॥

ಬಳಿಕಲಾ ವರದಗ್ನಿ ಆ ನಾಲ್ಕು ಪಕ್ಷಿಗಳ
ಮುಟ್ಟದೆಯೆ ಝುಳವನ್ನು ತಟ್ಟಿಸದೆ ತಾನಿಹದೆ
ಖಾಂಡವದ ವನವನ್ನು ಸರ್ವವನು ವ್ಯಾಪಿಸುತ
ಧಗಧಗನೆ ಉರಿಯುತಲಿ ಭಸ್ಮವನು ಮಾಡಿಹನು ॥೧೭೯೮॥

ಆ ಮಂದಪಾಲ ಖಗ ಅಗ್ನಿಯಲಿ ಸುತರುಗಳ
ಗತಿ ಏನು ಆಗಿಹುದೊ ಎನ್ನುತಲಿ ಚಿಂತಿಸುತ
ರೆಕ್ಕೆಗಳು ಬಲಿಯದಿಹ ಎಳೆಮಕ್ಕಳವರುಗಳು
ಅಗ್ನಿಯೊಳು ದಹಿಸುತಲಿ ಭಸ್ಮವದು ಆಗಿಹವೊ ॥೧೭೯೯॥

ಅಕಟಕಟ ನಾನೆಂತು ಕಡುಪಾಪಿ ಕೊಲೆಗಡುಕ
ಸತಿಸುತರ ಗತಿ ಎನಗೆ ತಿಳಿಯದಿದೆ ಈ ಕ್ಷಣದಿ
ಅವರಬಳಿ ಹೋಗುವೆನು ಎನ್ನುತಲಿ ಅಳುತಲಿರೆ
ಆಗಲಾ ಸತಿಲಪಿತೆ ಮತ್ಸರದಿ ನುಡಿದಿಹನು ॥೧೮೦೦॥

ಸುತರುಗಳ ಗತಿ ನಿನಗೆ ನೆಪಮಾತ್ರವಿರುತಿಹುದು
ನನ ಸವತಿ ಜರಿತೆಯನು ನೆನೆಯುತಲಿ ಮೋಹದಲಿ
ಎನ್ನನ್ನು ತೊರೆಯುತಲಿ ಹೋಗಲಿಕೆ ಇಚ್ಛಿಸುವೆ
ಎಳ್ಳನಿತು ಪ್ರೇಮವದು ನಿನಗಿಲ್ಲ ಎನ್ನಲ್ಲಿ ॥೧೮೦೧॥

ಚಂಚಲದ ಮನಸಿನಾ ಹೀನನಾ ಪತಿಯನ್ನು
ದುಷ್ಟನನು ಭ್ರಷ್ಟನನು ಪಡೆಯುತಲಿ ನಾ ಕೆಟ್ಟೆ
ಏಕಾಕಿಯಾಗುತಲಿ ವನದೊಳಗೆ ಚಲಿಸುವೆನು
ಮಾಡಿದ್ದನುಣ್ಣುವೆನು ಎನ್ನುತಲಿ ನುಡಿದಿಹಳು ॥೧೮೦೨॥

ಹೇ ಲಪಿತೆ ಕಾಮೋಪಭೋಗದಲಿ ಸ್ವೇಚ್ಛೆಯಲಿ
ಲಲನೆಯಲಿ ಹಿಂದುಗಡೆ ನಾನಲೆಯುತಿಹನಿಲ್ಲ
ಮೋಕ್ಷದಾ ಸಾಧನೆಗೆ ಸಂತಾನ ಪಡೆಯಲಿಕೆ
ನಾ ಪಕ್ಷಿ ಜನ್ಮವನು ಧರಿಸಿಹೆನು ಎಂದಿಹನು ॥೧೮೦೩॥

ಪಡೆದಿರುವ ಸುತರುಗಳ ಅಗ್ನಿಯಲಿ ದಹಿಸುತಲಿ
ಇರುತಿರಲು ನಾನೆಂತು ಸುಮ್ಮನೇ ಇರುತಿಹುದು
ನಿನ್ನಿಚ್ಛೆ ಬಂದಂತೆ ನೀನಿಹುದು ಎನ್ನುತಲಿ
ವರಮಂದಪಾಲ ಮುನಿ ಖಾಂಡವಕೆ ಬಂದಿಹನು ॥೧೮೦೪॥

ಇತ್ತಲಾ ಹುತವಹನೆ ಖಾಂಡವವ ದಹಿಸುತಲಿ
ಸಂತುಷ್ಟನಾಗುತಲಿ ಶಾಂತಿಯೊಳು ಇರುತಿರಲು
ಜರಿತಖಗ ಸಂತಸದಿ ಪ್ರೀತಿಯಲಿ ನಾಲ್ವರನು
ಸುತರನ್ನು ಕೊಂಕಿನಲಿ ಮುದ್ದಾಡಿ ನಲಿದಿಹಳು ॥೧೮೦೫॥

ಒಂದೊಂದು ಮರಿಯನ್ನು ಗಾಢದಲಿ ಅಪ್ಪುತಲಿ
ತನ್ನಯಾ ಕೊಂಕನ್ನು ಮರಿಗಳಾ ಕೊಂಕಿನಲಿ
ಇರಿಸುತಲಿ ಹರುಷದಲಿ ಆನಂದ ಬಾಷ್ಪವನು
ಸುರಿಸುತಲಿ ಸುತರನ್ನು ಸಾಂತ್ವನವಗೊಳಿಸಿದಳು ॥೧೮೦೬॥

ಆಗಲಾ ಮಂದಪಾಲ ಮುನಿವರನು ಬರುತಿರಲು
ಸತಿಸುತರು ಕಡೆಗಣ್ಣ ನೋಟದಲಿ ನೋಡುತಲಿ
ತಾತ್ಸಾರಗೈಯ್ಯುತಲಿ ಮಡಿಸದೇ ಇರುತಿರಲು
ದುಃಖದಲಿ ಮಂದಪಾಲ ಋಷಿವರನು ನುಡಿದಿಹನು ॥೧೭೦೭॥

ಹೇ ಜರಿತೆ ನಿನ್ನನ್ನು ತೊರೆಯುತಲಿ ಚಂಚಲದಿ
ಆ ಲಪಿತೆ ಸತಿಯೊಡನೆ ತೆರಳಿದುದು ನಿಜವಿಹುದು
ಅಲ್ಲಿಯೂ ನಾನೆಂದು ಸುಖದಿಂದ ಇರಲಿಲ್ಲ
ನನ್ನನ್ನು ಸ್ವೀಕರಿಸು ಎನ್ನುತಲಿ ನುಡಿದಿಹನು ॥೧೭೦೮॥

ಮುನ್ನವಲಿ ಎನ್ನನ್ನು ತೊರೆಯುತಲಿ ಹೋಗಿರ್ದೆ
ನೀ ಅತುಳ ಚಂಚಲನು ನಾನಿನ್ನ ನಂಬದಿಹೆ
ಸುಂದರಿಯು ಆ ಲಪಿತೆ ಬಿಗ ಬಳಿಗೆ ಹೋಗುತಲಿ
ಸುಖವಾಗಿ ಇಹುದೆಂದು ಆ ಜರಿತೆ ನುಡಿದಿಹಳು ॥೧೭೦೯॥

ನಿನ್ನನ್ನು ಸುತರನ್ನು ನೋಡುವಾ ಆತುರದಿ
ಪ್ರೀತಿಯುದು ಉಕ್ಕುತಲಿ ನಾವಿಲ್ಲಿ ಬಂದಿಹೆನು
ನೀನಿಂತು ಕಠಿಣದಲಿ ಕ್ರೂರದಲಿ ನುಡಿಯುವುದೆ
ಸ್ತ್ರೀಯರನು ಎಂದಿಗೂ ನಂಬಲಿಕೆ ಆಗದದು ॥೧೭೧೦॥

ಹೇ ಸುತರೆ ಸ್ತ್ರೀಯರಿಗೆ ಮಕ್ಕಳುಗಳಾದೊಡೆಯು
ಗಂಡನಾ ಮೇಲಿರುವ ಪ್ರೀತಿಯುದು ತೊಲಗುವದು
ಪತಿಯನ್ನು ತಾತ್ಸಾರ ಗೈಯ್ಯುತಲಿ ನಿಂದಿಪರು
ಎನ್ನುತಲಿ ಆ ಮಂದಪಾಲ ಮುನಿ ನುಡಿದಿಹನು ॥೧೭೧೧॥

ಸುತರುಗಳು ಕೇಳುತಲಿ ನಾಚಿಕೆಯು ಗೊಳ್ಳುತಲಿ
ಪಿತೃವಿನಾ ಚರಣಕ್ಕೆ ಪ್ರೀತಿಯುಲಿ ಎರಗುತಲಿ
ವರಜರಿತೆ ಸಾಧ್ವೀ ಶಿರೋಮಣಿಯು ಆ ಜರಿತೆ
ಕಂಬನಿಯು ಸುರಿಸುತಲಿ ಪತಿಚರಣಕೆರಗಿದಳು ॥೧೭೧೨॥

ಬಳಿಕಲಾ ವರಮಂದಪಾಲ ಋಷಿ ಮುದದಿಂದ
ಆನಂದ ಸಾಗರದಿ ಮುಳುಗುತಲಿ ಹರುಷದಲಿ
ಸತಿ ಜರಿತೆ ಸುತರೊಡನೆ ಸುಂದರದ ನದಿವನದ
ಸ್ಥಳದೆಡೆಗೆ ಸಾಗುತಲಿ ಸುಖದೊಳಗೆ ಇರ್ದಿಹನು ॥೧೭೧೩॥

ಇಂತು ಆ ವರಅಗ್ನಿ ಖಾಂಡವದ ವನವನ್ನು
ಪ್ರಾಣಿಗಳ ಸಹಿತದಲಿ ಸಕಲವನು ಭಕ್ಷಿಸುತ
ಸಂತಸದಿ ಸಂಪೂರ್ಣ ತೃಪ್ತಿಯುಲಿ ತೇಗುತಲಿ
ಸಶರೀರ ರೂಪದಲಿ ತಾ ಪ್ರಕಟವಾಗಿಹನು ॥೧೭೧೪॥

ಆ ಸಮಯ ದೇವೇಂದ್ರ ಮರುತ ಗಣ ಸಹಿತದಲಿ
ನಭದಿಂದ ಇಳಿಯುತಲಿ ಕೃಷ್ಣಾರ್ಜುನೇರ್ವರಿಗೆ
ಸುರರಿಂಗೆ ಗೈಯ್ಯಲಿಕೆ ಆಗದಿಹ ಕಾರ್ಯವನು
ನೀವೀರ್ವರದ್ಭುತದ ಸಾಹಸದಿ ಗೈದಿಹಿರಿ ॥೧೭೧೫॥

ನೀವುಗಳು ಮಾನವರಿಂಗಸದಳವು ಎನಿಸುವಾ
ವರವನ್ನು ಬೇಡುವುದು ಎನ್ನುತಿರೆ ದೇವೇಂದ್ರ
ಫಲುಗುಣನು ಸಂತಸದಿ ಸಕಲ ದಿವ್ಯಾಸ್ತ್ರಗಳ
ಈಯುವುದು ಎನ್ನುತಿರೆ ಸುರಪತಿಯು ನುಡಿದಿಹನು ॥೧೭೧೬॥

ಕೆಲದಿನದ ನಂತರದಿ ಪರಶಿವನು ಮೆಚ್ಚುತಲಿ
ನಿನ್ನನ್ನು ಕರುಣಿಸುವ ಸಮಯದಲಿ ನಾ ಬಂದು
ಅಗ್ನ್ಯಾಸ್ತ್ರ ಮೊದಲಾದ ದಿವ್ಯಾಸ್ತ್ರವೆಲ್ಲವನು
ನಿನಗೀವೆ ಸಂತಸದಿ ಎನ್ನುತಲಿ ನುಡಿದಿಹನು ॥೧೭೧೭॥

ಮಾಧವನೆ ನಿನಗಾವ ವರ ಇಷ್ಟ ಎನ್ನುತಿರೆ
ಪಾರ್ಥನಾ ಜೊತೆಯಲ್ಲಿ ಶಾಶ್ವತದ ಸಖ್ಯವನು
ಎನಗೀವುದೆನ್ನುತಲಿ ಯಾದವನು ನುಡಿಯುತಿರೆ
ತಥಾಸ್ತು ಎನ್ನುತಲಿ ದೇವೇಂದ್ರ ತೆರಳಿದನು ॥೧೭೧೮॥

ಬಳಿಕಲಾ ಪಾವಕನು ಕೃಷ್ಣಾರ್ಜುನೇರ್ವರಿಗೆ
ನಿಮ್ಮಿಯಾ ಬಲದಿಂದ ಖಾಂಡವದ ವನವನ್ನು
ಭಕ್ಷಿಸುತ ಸಂಪೂರ್ಣ ತೃಪ್ತಿಯನು ಪಡೆದಿಹನು
ನಿಮ್ಮಿಷ್ಟವಿದ್ದೆಡೆಗೆ ನೀವೀಗ ತೆರಳುವುದು ॥೧೭೧೯॥

ಎನ್ನುತಲಿ ವರಅಗ್ನಿ ಅದೃಶ್ಯನಾಗುತಿರೆ
ಕೇಶವನು ಅರ್ಜುನನ ಮಯಸಹಿತ ಅತ್ತಿತ್ತ
ಸುಂದರದ ವನದೊಳಗೆ ಚರಿಸುತಲಿ ವಿಹರಿಸುತ
ಯಮುನೆಯಾ ತೀರಕ್ಕೆ ಐತಂದು ಕುಳಿತಿಹನು ॥೧೭೨೦॥

— ಆದಿಪರ್ವ ಸಮಾಪ್ತವಾದುದು —

***

ಇತಿ ಶ್ರೀ ಕೋಟಿಕುಲ ಸಂಭೂತ ವಿರುಪಾಕ್ಷಸುತ
ಕವಿವರ ಲಕ್ಷ್ಮಣ ಕುಮಾರವ್ಯಾಸ ಕುಮಾರ ವಿರಚಿತಮಪ್ಪ
ಶ್ರೀಕೃಷ್ಣ ಕರುಣಾಮೃತ ಪಾನಪುಷ್ಟ ಲಲಿತಪದ ವಿನ್ಯಾಸ ವಿಲಾಸ ವಿಸ್ತರದ
ಸರಸ ಜಾನಪದಿ ಶೈಲಾಂಚಿತಮಪ್ಪ ಶ್ರೀ ಮನ್ಮಹಾಭಾರತ ಕಾವ್ಯದೊಳ್
— ಆದಿಪರ್ವ ಸಮಾಪ್ತವಾದುದು —

# ಸಭಾಪರ್ವ

**ಸುರಶಿಲ್ಪಿ ಮಯದನುಜ ಇಂದ್ರಸಭೆ ಕಾಣಿಸುವ ।**
**ರಾಜಸೂಯಾಧ್ವರದ ದಿವ್ಯಸಭೆ ರಚಿಸಿಹನು ॥**

ಜನಮೇಜಯಾಧಿಪನೆ ಕೇಳುವುದು ಮಯದನುಜ
ಅರ್ಜುನಗೆ ಕರಮುಗಿದು ವಿನಯದಲಿ ನುಡಿದಿಹನು
ಕೋಪದಲಿ ಕೃಷ್ಣನಾ ಚಕ್ರವನು ಎಸೆಯುತಲಿ
ಎನ್ನಯಾ ಶಿರವನ್ನು ತರಿಯಲಿಕೆ ಯತ್ನಿಸಲು ॥೧॥

ವರಅಗ್ನಿ ಎನ್ನನ್ನು ಉರಿಯುತಲಿ ದಹಿಸಲಿಕೆ
ಧಾವಿಸುತ ಬರುತಿರಲು ನೀ ಎನ್ನ ರಕ್ಷಿಸಿದೆ
ಎನ್ನಯಾ ಪ್ರಾಣವನು ಉಳಿಸಿರುವ ಶ್ರೇಷ್ಠಂಗೆ
ನಿನಗಾವ ಕಾರ್ಯವನು ನಾ ಗೈವುದೆಂಬುದನು ॥೨॥

ಹೇಳುವುದು ಎನ್ನುತಲಿ ಮಯದನುಜ ನುಡಿಯುತಿರೆ
ನಿನ್ನಯಾ ನುಡಿಗಳನು ಕೇಳುತಲಿ ಹರುಷದಲಿ
ನಾ ತೃಪ್ತನಾಗಿಹೆನು ನಿನ್ನನ್ನು ಪ್ರೀತಿಪೆನು
ನೀ ಹೋಗಬಹುದೆಂದು ಅರ್ಜುನನು ನುಡಿದಿಹನು ॥೩॥

ಸುರಶಿಲ್ಪಿ ಆ ವಿಶ್ವಕರ್ಮನಾ ಪರಿಯಲ್ಲಿ
ದಾನವರ ಅತಿಶ್ರೇಷ್ಠ ವರಶಿಲ್ಪಿ ನಾನಿಹೆನು
ನಿನಗೊಂದು ದಿವ್ಯಮಿಹ ಕಾರ್ಯವನು ಗೈಯ್ಯುವಾ
ಆಸೆಯದು ಎನಗಿಹುದು ಹೇಳುವುದು ಎಂದಿಹನು ॥೪॥

ನಿನಗಿಷ್ಟ ಇರ್ದೊಡೆಯು ಎನ್ನಯಾ ಮಿತ್ರಂಗೆ
ಕೃಷ್ಣಂಗೆ ಕಾರ್ಯವನು ಗೈಯ್ಯುತಲಿ ಈಯುತಿರೆ
ಅದುವೆಮಗೆ ಕೊಟ್ಟಂತೆ ಭಾವಿಪುದು ಸಂತಸವು
ಎನ್ನುತಲಿ ಅರ್ಜುನನು ನುಡಿದಿಹನು ದನುಜಂಗೆ ॥೫॥

ಆಗಲಾ ಮುರವೈರಿ ಮನದೊಳಗೆ ನೆನೆಯುತಲಿ
ದಾನವರ ವರಶಿಲ್ಪಿ ಮಯದನುಜ ಶ್ರೇಷ್ಠನೆ
ಏನಾದರೊಂದನ್ನು ಮಾಡಿಕೊಡುವಾಸೆಯದು
ನಿನಗಿರ್ದಪಡೊಯು ಧರ್ಮಜ ಮಹಾತ್ಮಂಗೆ ॥೬॥

ಜಗದೊಳಗೆ ಅಪ್ರತಿಮ ಎನಿಸುತಿಹ ಅದ್ಭುತದ
ಸುರನರರ ದಾನವರ ಶಿಲ್ಪಕಲೆ ಸೌಂದರ್ಯ
ಸಕಲವನು ಸೇರಿಸುತ ಸ್ವರ್ಗವನು ಮೀರಿಸುವ
ವರ ಸಭಾಮಂದಿರವ ರಚಿಸುವುದು ಎಂದಿಹನು ॥೭॥

ಎನ್ನುತಲಿ ಶ್ರೀಕೃಷ್ಣ ನುಡಿಯುತಿರೆ ಮಯದನುಜ
ಸಕಲಗ್ರಹ ತಾರೆಗಳು ಶುಭದೊಳಗೆ ಇರುತಿರಲು
ಮಂಗಳ ಮುಹೂರ್ತದಲಿ ಭೂಮಿಯನು ಪೂಜಿಸುತ
ಈರೈದು ಸಾವಿರದ ಮೊಳಗಳಾ ಭೂಮಿಯನು ॥೮॥

ಅಳೆಯುತಲಿ ಶಿಲೆಗಳನು ಸುತ್ತಲೂ ಇರಿಸುತಲಿ
ಸಾವಿರದ ದಾನವರ ಕರೆಸುತಲಿ ಮಯದನುಜ
ಅಪ್ರತಿಮ ಸುಂದರದ ಸಭಾಮಂದಿರವನು
ಶೀಘ್ರದಲಿ ನಿರ್ಮಿಸಲು ಪ್ರಾರಂಭಗೈದಿಹನು ॥೯॥

**ಕುಂತಿಯಾ ಚರಣಕ್ಕೆ ಎರಗುತಲಿ ಮುರಹರನು ।**
**ಪಾಂಡವರ ಹರಸುತಲಿ ದ್ವಾರಕೆಗೆ ತೆರಳಿಹನು ॥**

ಬಹಳ ದಿನ ಪರ್ಯಂತ ಯಾದವ ಶಿರೋಮಣಿಯು
ಶ್ರೀಕೃಷ್ಣ ಪಾಂಡವರ ಜೊತೆಯಲ್ಲಿ ಸಂತಸದಿ
ಕಾಲವನು ಕಳೆಯುತಲಿ ತಾಯ್ತಂದೆ ನೋಡುವಾ
ಕಾತರವು ಹೆಚ್ಚುತಿರೆ ಧರ್ಮಜಗೆ ನುಡಿದಿಹನು ॥೧೦॥

ದ್ವಾರಕೆಯ ತೊರೆಯುತಲಿ ಅತುಳ ದಿನ ತೆರಳಿದವು
ವಸುದೇವ ದೇವಕಿಯ ನೋಡುವಾ ಆಸೆಯದು
ಬಲವಾಗಿ ಮೂಡಿಹುದು ಹೋಗಿಬಹೆನೆನ್ನುತಲಿ
ನುಡಿಯುತಲಿ ವರಅತ್ತೆ ಕುಂತಿಯೆಡೆ ತೆರಳುತಲಿ ॥೧೧॥

ಚರಣಗಳ ಸ್ಪರ್ಶಿಸುತ ಸಾಷ್ಟಾಂಗವೆರಗುತಲಿ
ನಮಿಸುತಿರೆ ಮಹಮಾತೆ ಆ ಕುಂತಿ ಕೃಷ್ಣನನು
ಆನಂದ ಬಾಷ್ಪದಲಿ ಅಪ್ಪುತಲಿ ಪ್ರೀತಿಯಲಿ
ಶಿರವನ್ನು ಮೂಸುತಲಿ ಹೋಗಿ ಬಾ ಎಂದಿಹಳು ॥೧೨॥

ಬಳಿಕಲಾ ಕೇಶವನು ಸೋದರಿ ಸುಭದ್ರೆಯನು
ಕಾಣುತಲಿ ವಾತ್ಸಲ್ಯ ಉಕ್ಕುತಲಿ ಮರುಗಳಿಗೆ
ವಿರಹದಾ ವೇದನೆಯು ಮೂಡುತಿರೆ ತೋರಿಸದೆ
ಯಾದವನು ನಸುನಗುತ ಸೋದರಿಗೆ ನುಡಿದಿಹನು ॥೧೩॥

ವರಭಾವ ಮೈದುನರ ಅತ್ತೆಯಾ ಜೊತೆಯಲ್ಲಿ
ನಯವಿನಯ ರೀತಿಯಲಿ ಗೌರವದಿ ನಡೆಯುವುದು
ಎನ್ನುತಲಿ ಹಿತವಿರುವ ನುಡಿಗಳನು ಹೇಳುತಿರೆ
ಅಣ್ಣನಾ ಚರಣಕ್ಕೆ ಸುಭದ್ರೆ ಎರಗಿದಳು ॥೧೪॥

ಶ್ರೀಕೃಷ್ಣ ಆ ಕೃಷ್ಣೆ ದ್ರೌಪದಿಯ ಬಳಿಬರಲು
ಎಳೆಗರುವು ತಾಯಬಳಿ ಧಾವಿಸುತ ಬರುವಂತೆ
ದ್ರೌಪದಿಯು ಧಾವಿಸುತ ಐತಂದು ಯಾದವನ
ಪಾದದಲಿ ಕಂಬನಿಯ ಸುರಿಸುತಲಿ ನುಡಿದಿಹಳು ॥೧೫॥

ಎನ್ನೊಡನೆ ಹುಟ್ಟಿರುವ ಆ ದೃಷ್ಟದ್ಯುಮ್ನನು
ಅವನೊಬ್ಬ ಅಣ್ಣನಿಹ ಎರಡನೆಯ ನೀ ಅಣ್ಣ
ಇಲ್ಲಿ ಇರು ಇಲ್ಲವೇ ದ್ವಾರಕೆಯೊಳಿರ್ದೊಡೆಯು]
ಎಮ್ಮನ್ನು ರಕ್ಷಿಸುವ ಭಾರವದು ನಿನ್ನದಿದೆ ॥೧೬॥

ಎನ್ನುತಲಿ ನುಡಿಯುತಿರೆ ದ್ರೌಪದಿಯನೆಬ್ಬಿಸುತ
ಮಮ ಪ್ರಾಣ ಪಾಂಡವರ ರಕ್ಷಿಸುವ ಭಾರವದು
ಎನ್ನದಿದೆ ಎನ್ನುತಲಿ ತಂಗಿಯನು ಸಂತೈಸಿ
ಧೌಮ್ಯರಾ ಬಳಿಬಂದು ಸಾಷ್ಟಾಂಗವೆರಗುತಲಿ ॥೧೭॥

ಅರ್ಜುನನ ಅಪ್ಪುತಲಿ ಯಮಳರನು ಹರಸುತಲಿ
ಕುಶಲಗಳ ಕ್ಷೇಮಗಳ ನುಡಿಗಳನು ನುಡಿಯುತಲಿ
ದಿವಿಜರಾ ಮಧ್ಯದಲಿ ದೇವೇಂದ್ರ ಎಸೆವಂತೆ
ಪಾಂಡವರ ಮಧ್ಯದಲಿ ಶ್ರೀಕೃಷ್ಣನೆಸೆದಿಹನು ॥೧೮॥

ಮಂಗಳದ ಸ್ನಾನವನು ಮಾಡುತಲಿ ಮಾಧವನು
ಪಯಣದಾ ಕಾಲದಲಿ ವಿಧಿಸಿರುವ ಕಾರ್ಯಗಳ
ಗೈಯುತ್ತಲಿ ವಿಪ್ರರಿಗೆ ದಾನಗಳನೀಯುತಲಿ
ದಿವ್ಯಾಂಬರಾಭರಣವೆಲ್ಲವನು ಧರಿಸಿಹನು ॥೧೯॥

ಅರಮನೆಗೆ ಪ್ರಾಂಗಣದಿ ಬರುತಿರಲು ಭೂಸುರರು
ಸ್ವಸ್ತಿಯನು ನುಡಿಯುತಲಿ ಅಕ್ಷತೆಯ ಸುರಿಸುತಿರೆ
ಅಸುರಾರಿ ನಮಿಸುತಲಿ ಹರಕೆಯನು ಕೊಳ್ಳುತಲಿ
ಗರುಡನಾ ಧ್ವಜವೆಸೆವ ರಥದೊಳಗೆ ಕುಳಿತಿಹನು ॥೨೦॥

ಹೊಳೆಹೊಳೆವ ದಿವ್ಯಾಸ್ತ್ರ ಶಸ್ತ್ರಾಸ್ತ್ರ ತುಂಬಿರುವ
ವರಶೈಬ್ಯ ಸುಗ್ರೀವ ಅಶ್ವಗಳ ಹೂಡಿರುವ
ಸ್ವರ್ಣದಾ ರಥವನ್ನು ಧರ್ಮಜನು ಏರುತಲಿ
ಕಡಿವಾಣ ಕೊಳ್ಳುತಲಿ ತಾ ಮುಂದೆ ಕುಳಿತಿಹನು ॥೨೧॥

ಅರ್ಜುನನು ಕೃಷ್ಣನಾ ಸನಿಹದಲಿ ಕೂಡ್ರುತಲಿ
ಚಿನ್ನದಾ ಚಾಮರವ ಸರಸದಲಿ ಬೀಸುತಿರೆ
ವಾಯುಜನು ಮಾದ್ರಿಜರು ಋತ್ವಿಜರು ಪೌರಜನ
ಸಕಲರೂ ವರರಥವನನುಸರಿಸಿ ನಡೆದಿಹರು ॥೨೨॥

ಯೋಜನದ ಅರ್ಧವನು ಕ್ರಮಿಸುತಲಿ ಬರುತಿರಲು
ಯಾದವನು ಧರ್ಮಜಗೆ ಮರಳಲಿಕೆ ಸೂಚಿಸಲು
ಧರ್ಮಸುತ ರಥವಿಳಿಯೆ ಶ್ರೀಕೃಷ್ಣನಿಳಿಯುತಲಿ
ಧರ್ಮಜನ ಚರಣಕ್ಕೆ ಸಾಷ್ಟಾಂಗವೆರಗಿದನು ॥೨೩॥

ಬಳಿಬಂದು ಎಬ್ಬಿಸುತ ಧರ್ಮಜನು ಗಾಢದಲಿ
ಶ್ರೀಕೃಷ್ಣನಪ್ಪಿದನು ಯಾದವನು ಅರ್ಜುನನ
ಸಖ್ಯತ್ವ ಪ್ರೀತಿಯಲಿ ಬಿಗಿಯಾಗಿ ಅಪ್ಪುತಿರೆ
ಮರುತಜನು ಕೃಷ್ಣನನು ಆಲಂಗಿಸುತ್ತಿರಲು ॥೨೪॥

ಮಾದ್ರಿಜರು ಯಾದವನ ಚರಣಕ್ಕೆ ಎರಗುತಿರೆ
ಶ್ರೀಕೃಷ್ಣ ಸುತ್ತಲೂ ನೆರೆದಿರುವ ಸರ್ವರಿಗೆ
ನಮಿಸುತಲಿ ಅಭಯದಾ ಹಸ್ತದಲಿ ಹರಸುತಲಿ
ರಥವೇರಿ ಕೂಡ್ರುತಲಿ ಧರ್ಮಜನ ಕರೆಯುತಲಿ ॥೨೫॥

ದಾಯಾದಿ ಬಂಧುಗಳು ಅತಿಧೂರ್ತರಿರುತಿಹರು
ಮೋಸವನು ಗೈಯುವರು ಎಚ್ಚರದಿ ನೀವಿಹುದು
ಶೀಘ್ರದಲಿ ನಾ ಮತ್ತೆ ಬಹೆನೆಂದು ಹೇಳುತಲಿ
ಹರಸುತಿರೆ ಮಂದದಲಿ ರಥ ಸರಿದು ಸಾಗಿಹುದು ॥೨೬॥

ದೃಷ್ಟಿಯದು ಹಸರುವಾ ಪರ್ಯಂತ ರಥವನ್ನು
ಪಾಂಡವರು ಎವೆಯನ್ನು ಇಕ್ಕದಿಹ ನೋಡುತಲಿ
ನಿಂತಿರಲು ಮನವೆಲ್ಲ ಕೃಷ್ಣನಾ ಜೊತೆಯಲ್ಲಿ
ತೆರಳಿಹುದು ಖಿನ್ನದಲಿ ಅರಮನೆಗೆ ಮರಳಿದರು ॥೨೭॥

ಬಂಧುಗಳ ಬಾಂಧವರ ಸುಹೃದರನು ಸೋದರರ
ಕಳಿಸುತಲಿ ಧರ್ಮಜನು ಕೃಷ್ಣನಾ ಒಲುಮೆಯನು
ಕರುಣೆಯನು ಮನದೊಳಗೆ ನೆನೆಯುತಲಿ ಹರ್ಷದಲಿ
ದ್ರೌಪದಿಯ ಸಹಿತದಲಿ ಮುದದಿಂದ ಇರ್ದಿಹನು ॥೨೮॥

ಅತ್ತಲಾ ಮುರಹರನು ದ್ವಾರಕೆಗೆ ತೆರಳುತಲಿ
ಕುಂತಿಯಾ ಕ್ಷೇಮವನು ಪಾಂಡವರ ಕುಶಲವನು
ತಿಳಿಸುತಲಿ ಸೋದರಗೆ ಬಲರಾಮಗೆರಗುತಲಿ
ಪ್ರದ್ಯುಮ್ನ ಅನಿರುದ್ಧ ಸಾಂಬನನು ಅಪ್ಪುತಲಿ ॥೨೯॥

ಸಾತ್ಯಕಿಯ ಉಗ್ರಸೇನಾದಿಗಳ ಯಾದವರ
ಇನ್ನಿತರ ಬಾಂಧವರ ಕ್ಷೇಮವನು ಕೇಳ್ಳುತಲಿ
ದೇವೇಂದ್ರ ಸತಿಶಚಿಯ ನಿಲಯವನು ಹೊಗುವಂತೆ
ಶ್ರೀಕೃಷ್ಣ ರುಕ್ಮಿಣಿಯ ಮಂದಿರವ ಹೊಕ್ಕಿಹನು ॥೩೦॥

**ಮೈನಾಕ ಗಿರಿಯೊಳಿಹ ರತ್ನಗಳ ಕೊಳ್ಳುತಲಿ ।**
**ಸಭೆಯನ್ನು ಶೃಂಗಾರಗೊಳಿಸಿದನು ಮಯದನುಜ ॥**

ಇತ್ತಲಾ ಮಯದನುಜ ಅರ್ಜುನನ ಕರೆಯುತಲಿ
ಮುನ್ನಿನಲಿ ಕೈಲಾಸ ಪರ್ವತದ ಉತ್ತರದಿ
ಮೈನಾಕ ಅದ್ರಿಯಲಿ ದಾನವರು ಯಜ್ಞವನು
ಗೈದಿರುವ ಸಮಯದಲಿ ಸ್ವರ್ಣದಾ ಪಾತ್ರೆಯನು ॥೩೧॥

ಮಾಡುತಲಿ ಅದರೊಳಗೆ ನವರತ್ನ ವಜ್ರಗಳ
ವೈಡೂರ್ಯ ಮಾಣಿಕ್ಯ ಗೋಮೇದಿಕಾದಿಗಳ
ಇರಿಸುತಲಿ ಆ ಬಿಂದು ಸರಸಿಯಾ ಸನಿಹದಲಿ
ವೃಷಪರ್ವನಾಸ್ಥಾನ ಮಂದಿರದಿ ಇಟ್ಟಿಹನು ॥೩೨॥

ಅದು ಈಗ ಇರ್ದೊಡೆಯು ನವರತ್ನ ವಜ್ರವನು
ಕೊಳ್ಳುತಲಿ ಈಗಿಲ್ಲಿ ನಿರ್ಮಿಸುವ ಭವನದಲಿ
ಯೋಜಿಸುತ ಜಗದೊಳಗೆ ಅಪ್ರತಿಮ ಎನಿಸುತಿಹ
ಅದ್ಭುತದ ಭವ್ಯದಾ ಮಂದಿರವ ಕಟ್ಟುವೆನು ॥೩೩॥

ದನುಜೇಂದ್ರ ಶತ್ರುಗಳ ದಮನವನು ಮಾಡಿರುವ
ಲಕ್ಷಗದೆ ಶಕ್ತಿಯುತ ಬಹುಭಾರ ಗದೆಯೊಂದ
ಆ ಬಿಂದು ಸರಸಿಯಲಿ ಇರಿಸಿಹನು ಎನ್ನುತಲಿ
ಕೇಳಿಹೆನು ಅದತಂದು ಭೀಮನಿಗೆ ಈಯುವೆನು ॥೩೪॥

ಈ ಪರಿಯ ನುಡಿಯುತಲಿ ಅಪ್ಪಣೆಯ ಕೊಳ್ಳುತಲಿ
ಓಮಗಿರಿಯ ತಪ್ಪಲದ ಆ ಬಿಂದು ಸರಸಿಯೆಡೆ
ತೆರಳುತಲಿ ನವರತ್ನ ವಜ್ರಗಳ ಪಾತ್ರೆಯನು
ಭಾರಿಗದೆ ಶಂಖವನು ವರದೇವದತ್ತವನು ॥೩೫॥

ಕೊಳ್ಳುತಲಿ ಐತಂದು ಲಕ್ಷಗದೆ ಸವಿಯಿರುವ
ಶತ್ರುಗಳ ನಿರ್ನಾಮ ಗೈಯ್ಯುವಾ ಗದೆಯನ್ನು
ಭೀಮನಿಗೆ ಈಯುತಲಿ ಜಗವನ್ನು ನಡುಗಿಸುವಾ
ವರದೇವದತ್ತವನು ಪಾರ್ಥಂಗೆ ಇತ್ತಿಹನು ॥೩೬॥

ಥಳಥಳಿಪ ಮುತ್ತುಗಳ ರತ್ನಗಳ ವಜ್ರಗಳ
ಸೊಗಸಿನಲಿ ಕೆತ್ತಿರುವ ಸ್ತಂಭಗಳ ಭಿತ್ತಿಗಳ
ಹೊಳೆಹೊಳೆವ ಮಾಣಿಕ್ಯ ಮರಕತದ ತೋರಣದ
ಗಜತುರಗ ಚಿತ್ರಗಳ ಭವನವದು ಮೆರೆದಿಹುದು ॥೩೭॥

ಮಧ್ಯದಲಿ ನಿರ್ಮಲದ ಜಲದೊಳಗೆ ಶೋಭಿಸುವ
ನೀಲದಾ ದೇಟುಗಳ ಪಚ್ಚೆಯಾ ಪತ್ರಗಳ
ರತ್ನಗಳ ಕೆಂಪಿನಾ ಧೀಧಿತಿಯ ಕಮಲಗಳ
ಸೊಗಯಿಸುವ ಸುಂದರದ ಸರಸಿಯನು ನಿರ್ಮಿಸಿದ ॥೩೮॥

ಹಂಸ ಕಾರಂಡಗಳು ವರಚಕ್ರವಾಕಗಳು
ವಿಧವಿಧದ ನೀರ್ವಕ್ಕಿ ನಿಕರಗಳು ಕ್ರೀಡಿಸುವ
ಮೊಸಳೆ ಮೀನಾಗದಿರು ಜಲಚರವು ಚರಿಸುತಿಹ
ಸುಂದರ ಸರೋವರವು ಮಂದಿರದಿ ಮೆರೆದಿಹುದು ॥೩೯॥

ಜಲವಿದ್ದು ಜಲವಿರದ ಪರಿಯಲ್ಲಿ ತೋರುತಿಹ
ಜಲವಿರದೆ ಜಲವಿದ್ದ ಪರಿಯಲ್ಲಿ ಕಾಣುತಿಹ
ನೆಲವಿರದೆ ನೆಲವಿದ್ದ ಪರಿಯಲ್ಲಿ ಕಾಣುತಿಹ
ನೆಲವಿದ್ದು ನೆಲವಿರದ ಪರಿಯಲ್ಲಿ ಕಾಣುತಿಹ ॥೪೦॥

ಭಿತ್ತಿಯದು ಇಲ್ಲದೆಯೆ ಭಿತ್ತಿ ಇಹ ಪರಿಯಲ್ಲಿ
ಭಿತ್ತಿಯದು ಇರುತಿರ್ದು ಇಲ್ಲದೆಯೆ ತೋರುತಿಹ
ದ್ವಾರವದು ಇಲ್ಲದೆಯೆ ಇರುತಿರುವ ಪರಿಯಲ್ಲಿ
ದ್ವಾರವದು ಇರುತಿರ್ದು ಇಲ್ಲದಿಹ ಪರಿಯಲ್ಲಿ ॥೪೧॥

ಈ ಪರಿಯ ಹಳ್ಳಗಳ ಕೊಳ್ಳಗಳ ದಿನ್ನೆಗಳ
ಇರುತಿರ್ದು ಇಲ್ಲದಾ ಪರಿಯಲ್ಲಿ ತೋರುವಾ
ಇಲ್ಲದೆಯೆ ಇರುತಿರುವ ಪರಿಯಲ್ಲಿ ತೋರುವಾ
ಅಚ್ಚರಿಯ ಅದ್ಭುತದ ಭವನವನು ರಚಿಸಿದನು ॥೪೨॥

ಮುತ್ತುಗಳ ರತ್ನಗಳ ವಜ್ರಗಳ ಕಾಂತಿಯಲಿ
ಹೊಳೆಹೊಳೆವ ಮಂದಿರದ ಉಜ್ವಲದ ದೀಪ್ತಿಯದು
ಆ ಸೂರ್ಯ ಚಂದ್ರರಾ ತೇಜವನು ಅಡಗಿಸುತ
ಮೆರೆದಿಹುದು ಪ್ರಭೆಯನ್ನು ಬೀರುತಲಿ ಜಗದೊಳಗೆ ॥೪೩॥

ಮಂದದಲಿ ಮಾರುತನು ಕುಸುಮಗಳ ಗಂಧವನು
ಕೊಳ್ಳುತಲಿ ಬೀಸಿಹನು ಭವನದಲಿ ಪಸರುತಲಿ
ಕಸ್ತೂರಿ ಜವಾಜಿಗಳ ಚಂದನದ ಸೌರಭವು
ನಾಸಿಕವನರಳಿಸುತ ಪಸರಿಹುದು ಮಂದಿರದಿ ॥೪೪॥

ಅರಮನೆಯ ಸುತ್ತಲೂ ವಿಧವಿಧದ ಪುಷ್ಪಗಳ
ದ್ರುಮಗಳನು ಲತೆಗಳನು ಗುಲ್ಮಗಳ ರಚಿಸಿಹನು
ಭವನವನು ರಕ್ಷಿಸಲು ಅದ್ಭುತ ಪರಾಕ್ರಮದ
ಕಿಂಕರಂ ರಾಕ್ಷಸರ ಅಗಣಿತದಿ ನಿಲ್ಲಿಸಿದ ॥೪೫॥

ಈರೇಳು ಮಾಸಗಳ ಸಮಯದಲಿ ಅಪ್ರತಿಮ
ವರಸಭಾ ಭವನವನು ಮಯದನುಜ ನಿರ್ಮಿಸುತ
ಧರ್ಮಜನ ಕರೆಯುತಲಿ ಅರ್ಪಿಸುತ ಸಾವಿರದ
ಗಜದಳತೆ ವಿಸ್ತರದ ಮಂದಿರವ ತೋರಿಸಿದ ॥೪೬॥

ಇಂದ್ರನಾ ಅರಮನೆಯು ಪರಿಯಲ್ಲಿ ಶೋಭಿಸುವ
ಸುಂದರದ ಮಂದಿರವ ನೋಡುತಲಿ ಧರ್ಮಜನು
ಆನಂದ ಉಕ್ಕುತಲಿ ಮಂದಿರ ಪ್ರವೇಶದಾ
ಉತ್ಸವದ ಸಿದ್ಧತೆಯ ಮಾಡಿಹನು ವೈಭವದಿ ॥೪೭॥

**ಅಗಣಿತದ ನೃಪರುಗಳು ಋಷಿಪುಂಗವರು ಪಂಡಿತರು ।**
**ರಾಜಸೂಯಾಧ್ವರಕೆ ಬಂದಿಹರು ಸಡಗರದಲಿ ॥**

ವರವ್ಯಾಸ ಮೈತ್ರೇಯ ಆಂಗಿರಸ ತಿತ್ತಿರಿಯು
ಗುರುಧೌಮ್ಯ ಗೌತಮನು ಕೌಶಿಕನು ಶಾಂಡಿಲ್ಯ
ಕಠಪೈಲ ನಚಿಕೇತ ಆ ಯಾಜ್ಞವಲ್ಕ್ಯರು
ಜಾಬಾಲಿ ಜಮದಗ್ನಿ ಋಷಿವರರು ಬಂದಿಹರು ॥೪೮॥

ಶುಕ ಶುನಕ ಜೈಮಿನಿಯು ಬಲಿ ಲೋಮಹರ್ಷಣರು
ಮಾಂಡವ್ಯ ಕೌಂಡಿನ್ಯ ಮೌದ್ಗಲ್ಯ ತೈತ್ಯಬಲಿಯು
ದೇವಲನು ಗಾಲವನು ಭೃಗು ಗಾರ್ಗಿ ಮೊದಲಾದ
ಅಗಣಿತದ ಮುನಿವರರ ತಂಡಗಳು ಬಂದಿಹವು ॥೪೯॥

ಅಂಗವಂಗಾದಿಗಳು ಕಾಂಭೋಜ ಕೋಸಲನು
ಸೌರಾಷ್ಟ್ರ ಕುಂತಳನು ಆಂಧ್ರ ಪಾಂಡ್ಯಾದಿಗಳು
ವೈದರ್ಭ ಪಾಟಲನು ವಿಂಧ್ಯದಾ ನೃಪರುಗಳು
ಯಾದವರು ಪರಿವಾರ ಸಹಿತದಲಿ ಬಂದಿಹರು ॥೫೦॥

ಅರ್ಜುನನ ಮಿತ್ರನಾ ವರಚಿತ್ರಸೇನನು
ಗಂಧರ್ವ ಕಿನ್ನರರು ಕಿಂಪುರುಷ ಯಕ್ಷರರು
ಸುರಸ್ತ್ರೀಯರಪ್ಸರೆಯ ವೃಂದಗಳು ಸೊಗಸಿನಲಿ
ಗಾಯಕರ ನರ್ತಕರ ತಂಡಗಳು ಬಂದಿಹವು ॥೫೧॥

ಮಂಗಳದ ಸ್ನಾನವನು ಗೈಯ್ಯುತಲಿ ಧರ್ಮಜನು
ವೇದೋಕ್ತಕರ್ಮಗಳ ಯಜ್ಞಗಳ ಮಾಡುತಲಿ
ಧನಕನಕ ದಾನಗಳ ವಿಪ್ರರಿಗೆ ಈಯುತಿರೆ
ಧರ್ಮಜನ ಹರಸಿದರು ವಿಪ್ರಗಳು ಸಂತಸದಿ ॥೫೨॥

ದೇವತೆಯ ಪೂಜಿಸುತ ದಿಗುಬಲಿಯನೀಯುತಲಿ
ನಭ ಬಿರಿವ ತೆರದಲ್ಲಿ ವಾದ್ಯಗಳು ಮೊಳಗುತಿರೆ
ಲಲ್ಲನೆಯರು ಹೊನ್ನಿನಾ ಆರತಿಯನೆತ್ತುತಿರೆ
ಮಂಗಳದ ಗೀತವನು ಸುಸ್ವರದಿ ಹಾಡುತಿರೆ ॥೫೩॥

ಧರ್ಮಜನು ಸಂತಸದಿ ಸೋದರರ ಸಹಿತದಲಿ
ಬಂಧುಗಳ ಬಾಂಧವರ ಯಾದವರ ಜೊತೆಗೂಡಿ
ಋತ್ವಿಜರು ಭೂಸುರರು ವೇದವನು ಪಠಿಸುತಿರೆ
ಮಂದಿರವ ಹೊಕ್ಕಿಹನು ವಾದ್ಯಗಳ ಮೊಳಗಿನಲಿ ॥೫೪॥

ಎಡದಲ್ಲಿ ಅರ್ಜುನನು ಬಲದಲ್ಲಿ ಭೀಮಸೇನನು
ಪಾರ್ಶ್ವದಲಿ ಮಾದ್ರೇಯರು ಸುತ್ತಲೂ ಋಷಿವರರ
ಮಧ್ಯದಲಿ ಧರ್ಮಜನು ಸ್ವರ್ಗದಾ ಸಭೆಯಲ್ಲಿ
ದೇವೇಂದ್ರ ಮೆರೆವಂತೆ ತೇಜದಲಿ ಹೊಳೆದಿಹನು ॥೫೫॥

**ನೃಪರುಗಳು ರಾಜ್ಯವನು ಆಳುವಾ ರೀತಿಯನು ।**
**ಧರ್ಮಜಗೆ ಉಪದೇಶಗೈದಿಹರು ನಾರದರು ॥**

ಈ ಪರಿಯ ಧರ್ಮಜನು ಸಭೆಯೊಳಗೆ ವೈಭವದಿ
ಸಿಂಹಾಸನಾರೂಢನಾಗುತಲಿ ಕುಳಿತಿರಲು
ಮುಗಿಲಿಂದ ಬೆಳಮುಗಿಲು ಧರೆಗಿಳಿವ ಪರಿಯಲ್ಲಿ
ಹೊಳೆಹೊಳೆವ ಸ್ಪಟಿಕದಾ ತೇಜದಲಿ ಬೆಳಗುತಲಿ ॥೫೬॥

ಹರಿಹರಿ ಶ್ರೀಕಾಂತ ನಾರಾಯಣೆನ್ನುತಲಿ
ವೇದಾಂಗ ಪರಿಣತರು ದೇವಮುನಿ ನಾರದರು
ರಾಜೇಂದ್ರ ಧರ್ಮಜಗೆ ಜಯವಾಗಲೆನ್ನುತಲಿ
ಆ ಸಭೆಯ ಮಧ್ಯದಲಿ ಇಳಿದಿಹರು ಪ್ರಭೆಯಲ್ಲಿ ॥೫೭॥

ನೋಡುತಲಿ ಧರ್ಮಜನು ಮುನಿವರನ ಸ್ವಾಗತಿಸಿ
ಆಸನವನೀಯುತಲಿ ಅರ್ಘ್ಯಪಾದ್ಯಾದಿಗಳ
ಮಧುಪರ್ಕವೀಯುತಲಿ ಸತ್ಕರಿಸಿ ನಮಿಸುತಲಿ
ಸಿಂಹದಾ ವಿಷ್ಟರದಿ ಕುಳಿತಿಹನು ಧರ್ಮಜನು ॥೫೮॥

ವೇದೋಪನಿಷದುಗಳ ಪೌರಾಣ ತರ್ಕಗಳ
ಇಹಪರದ ಜ್ಞಾನಗಳ ನಯನೀತಿ ಪರಿಣತರು
ದೇವಮುನಿ ನಾರದರು ಸಂತುಷ್ಟರಾಗುತಲಿ
ಧರ್ಮಖನಿ ಧರ್ಮಜನ ಹರಸುತಲಿ ನುಡಿದಿಹರು ॥೫೯॥

ಭರತಕುಲ ಸಂಭೂತ ಶ್ರೇಷ್ಠ ನೃಪ ಧರ್ಮಜನೆ
ನಿನ್ನಯಾ ಪೂರ್ವಜರ ನಳನಹುಷ ಮಾಂಧಾತ
ಕಲಿ ಹರಿಶ್ಚಂದ್ರಾದಿರಾಯರಾ ಪರಿಯಲ್ಲಿ
ರಾಜ್ಯವನು ಧರ್ಮದಲಿ ಸತ್ಯದಲಿ ಆಳುವೆಯಾ ॥೬೦॥

ಧರ್ಮಾರ್ಥ ಕಾಮಗಳ ಮೂರು ವಿಧ ಪುರುಷಾರ್ಥ
ಇವುಗಳನು ಉಚಿತದಲಿ ಆಚರಿಸುತಿಹೆಯಷ್ಟೆ
ಧರ್ಮದಲಿ ಆಸಕ್ತಿ ತಳೆಯುತಲಿ ಅತುಳದಲಿ
ಅರ್ಥವನುಪೇಕ್ಷಿಸದೆ ಧರ್ಮವನು ಗೈಯ್ಯುವೆಯಾ ॥೬೧॥

ಅತಿ ಕಾಮಭೋಗದಲಿ ಆಸಕ್ತನಾಗುತಲಿ
ಧರ್ಮಾರ್ಥವೆರಡನ್ನು ತ್ಯಜಿಸದಲೆ ಇರುತಿಹೆಯಾ
ಧರ್ಮಾರ್ಥ ಕಾಮಗಳ ಸರಿಯಾಗಿ ಭೋಗಿಪುದು
ಅವುದನು ಮಿತಿಮೀರಿ ಸುಖಿಸುವದು ಸಲ್ಲದುದು ॥೬೨॥

ಕಾಲವನು ಅರಿತವರು ಬ್ರಾಹ್ಮೀ ಮುಹೂರ್ತದಲಿ
ಏಳುತಲಿ ಧರ್ಮದಾ ಸಾಧನೆಯ ಗೈಯ್ಯುವರು
ಮಧ್ಯಾಹ್ನ ಅರ್ಥದಾ ಸಾಧನೆಯ ಮಾಡುತಲಿ
ರಾತ್ರಿಯಲಿ ಸುಖದೊಳಗೆ ಕಾಮವನು ಭೋಗಿಪರು ॥೬೩॥

ಆರು ವಿಧ ರಾಜಗುಣ ಏಳು ವಿಧ ಯುಕುತಿಗಳ
ಮೂರು ವಿಧ ದೌರ್ಬಲ್ಯ ಬಲಗಳನು ಅರಿಯುತಲಿ
ಶತ್ರುವಿನ ಹದಿನಾಲ್ಕು ಉಪಕರಣ ಶಕ್ತಿಗಳ
ದೋಷಗಳನೆಲ್ಲವನು ಸತತವೂ ಅರಿತಿಹೆಯಾ ॥೬೪॥

ಮಂತ್ರಿಗಳ ಜೊತೆಯಲ್ಲಿ ಅಷ ಹರಿ ನುಡಿಯುವುದು
ಗೂಢಚರ ಸೇವಕರನಾವರಿ ತಿಳುಹುವುದು
ಶತ್ರುವಿಗೆ ಉತ್ಕರ್ಷ ಬಲವನ್ನು ತೋರಿಸುವ
ಸ್ಮೃತಿವಂತ ಕುಶಲಮತಿ ಪಾಂಡಿತ್ಯ ನಯನೀತಿ ॥೬೫॥

ಈ ಆರು ಗುಣಗಳಲಿ ಪರಿಣತನು ನೀನಿರುತ
ಅರಿನೃಪರ ಸತ್ವವನು ಬಲವನ್ನು ಅರಿಯುತಲಿ
ವರಸಾಮದಾನದಲಿ ದಂಡದಲಿ ಭೇದದಲಿ
ಮಂತ್ರದಲಿ ಔಷಧದಿ ಆ ಇಂದ್ರ ಜಾಲದಲಿ ॥೬೬॥

ಶತ್ರುಗಳ ಜಯಿಸಲಿಕೆ ಅನುಸರಿಸಲುಚಿತಮಿಹ
ಈ ಏಳುಪಾಯಗಳ ಸರಿಯಾಗಿ ಅರಿಯುತಲಿ
ಗುಪ್ತದಲಿ ಚರರನ್ನು ಕಳಿಸುತಲಿ ವೈರಿಗಳ
ಬಲವನ್ನು ಸತತವೂ ಪರಿಕಿಸುತಲಿರುತಿಹೆಯಾ ॥೬೭॥

ದೇಶವನು ಆಳಲಿಕೆ ದೇಶದಾ ಪಾಲಕರ
ದುರ್ಗವನು ರಕ್ಷಿಸಲು ದುರ್ಗದಾ ರಕ್ಷಕರ
ಗಜತುರಗ ನಿಗ್ರಹಕೆ ಮಾವುತರ ರಾವುತರ
ಸೈನ್ಯಕ್ಕೆ ಪರಿಣತರ ನಾಯಕರ ನಿಯಮಿಪುದು ॥೬೮॥

ಆಹಾರ ಸಾಮಗ್ರಿ ಕೊಠಡಿಯನು ರಕ್ಷಿಸಲು
ಶಸ್ತ್ರಾಸ್ತ್ರ ಸಂಗ್ರಹದ ಸ್ಥಳವನ್ನು ರಕ್ಷಿಸಲು
ಅರಮನೆಯ ಮೊದಲಾದ ಪ್ರಮುಖಮಿಹ ಸ್ಥಾನಗಳ
ರಕ್ಷಿಸಲು ವಿಶ್ವಸ್ತ ವೀರರನು ಇರಿಸಿಹೆಯಾ ॥೬೯॥

ವೈರಿಗಳ ಅಶ್ವಗಳ ರಥ ವಾಹನಾದಿಗಳ
ಸಂಖ್ಯೆಯನು ಗುಹಿತದಲಿ ಚರರಿಂದ ಅರಿಯುವುದು
ರಾಜ್ಯದಾ ಆದಾಯ ವ್ಯಯಗಳನು ನೋಡುತಲಿ
ತೂಗಿಸುವ ಪರಿಣತ ಲೆಕ್ಕಿಗನ ನೇಮಿಪುದು ॥೭೦॥

ರಾಜ್ಯದಾ ಭಂಡಾರ ಸಂಪತ್ತು ನೋಡಲಿಕೆ
ದಕ್ಷಮಿಹ ಪ್ರಾಮಾಣಿಕಧಿಕಾರಿ ನೇಮಿಪುದು
ಈ ಪರಿಯ ಹದಿನಾಲ್ಕು ಆಡಳಿತ ವರ್ಗವನು
ನೇಮಿಸುತ ಸತತವೂ ಎಚ್ಚರದೊಳಿರುತಿಹೆಯಾ ॥೭೧॥

ಶತ್ರುಗಳ ದಳಪತಿಯ ದುರ್ಗಪತಿ ಅಶ್ವಪತಿ
ಗಜಪತಿಯ ರಥಿಕಪತಿ ನಗರಪತಿ ಧನಪತಿಯ
ಶಸ್ತ್ರಾಸ್ತ್ರ ಕೊಠಡಿಪತಿ – ಸೈನ್ಯ ಬಲ ಸೈನ್ಯಪತಿ
ಸಕಲವನು ಅರಿಯುತಲಿ ಸಂಗರವ ಜಯಿಸುವುದು ॥೭೨॥

ವ್ಯಾಪಾರ ವಾಣಿಜ್ಯ ವ್ಯವಹಾರ ಕೃಷಿಯನ್ನು
ವರ್ಧಿಸುತ ಮಾರ್ಗಗಳ ಸೇತುವೆಯ ನಿರ್ಮಿಸುತ
ಕೋಟೆಗಳ ಕಟ್ಟುತಲಿ ಗಿಳಿಗಳನು ಬಂಧಿಸುತ
ಎಂಟು ವಿಧ ಕಾರ್ಯಗಳ ನೃಪರುಗಳು ಗೈಯ್ಯುವುದು ॥೭೩॥

ಈ ಪರಿಯ ಎಂಟು ವಿಧ ಜಯಮೂಲವಾಗಿರುವ
ಕಾರ್ಯಗಳ ಗೈಯ್ಯುತಲಿ ಧನವನ್ನು ಸಂಗ್ರಹಿಸಿ
ದೇಶದಾ ಸಂಪದವ ಅಭಿವೃದ್ಧಿಗೊಳಿಸುತಲಿ
ಪ್ರಜೆಗಳನು ಸಂತೋಷಗೊಳಿಸುತಲಿ ಇರುತಿಹೆಯಾ ॥೭೪॥

ನುಡಿಗಳಲಿ ನಡೆಗಳಲಿ ಬುದ್ಧಿಯಲಿ ಶುದ್ಧಮಿಹ
ಸುವಿವೇಕ ಜ್ಞಾನಿಗಳ ಆತ್ಮಬಲವಿರುತಿರುವ
ವಯಸಿನಲಿ ಹಿರಿಯರಿಹ ಯೋಗ್ಯಮಿಹ ಸಲಹೆಗಳ
ನೀಡುತಿಹ ಮಂತ್ರಿಗಳ ಪರಿಕಿಸುತ ಇರಿಸಿಹೆಯಾ ॥೭೫॥

ಗುಪ್ತದಾ ಯೋಚನೆಯ ನೀನೊಬ್ಬ ಇಲ್ಲವೇ
ಬಹುಜನರ ಸಹಿತದಲಿ ಚರ್ಚೆಯನು ಮಾಡದಿರು
ನಿನ್ನಾಪ್ತ ಸಚಿವರೊರ್ವ ಸಹಿತದಲಿ ಗುಹಿತದಲಿ
ಶತ್ರುಗಳು ಅರಿಯದಾ ಪರಿಯಲ್ಲಿ ಮಾಡುವುದು ॥೭೬॥

ಪ್ರಜೆಗಳಿಗೆ ಯೋಗ್ಯಮಿಹ ಕಾರ್ಯಗಳ ಯೋಜಿಸುತ
ಪ್ರಾರಂಭಗೈಯ್ಯುತಲಿ ನಿರ್ವಿಘ್ನವಾಗುತಲಿ
ತೀವ್ರದಲಿ ಕೌಶಲದಿ ಕಾರ್ಯಗತಗೊಳಿಸುತಲಿ
ಫಲಿಸುತಲಿ ಪ್ರಜೆಗಳನು ಸಂತಸವಗೊಳಿಸಿಹೆಯಾ ॥೭೭॥

ವ್ಯವಸಾಯ ಗೈಯ್ಯುತಿಹ ಶ್ರಮಜೀವಿ ಕಾರ್ಮಿಕರು
ನಿನ್ನೊಡನೆ ಅಪರೋಕ್ಷವಾಗಿರದೆ ನಿನ್ನಲ್ಲಿ
ನಿಕಟದಾ ಸಂಬಂಧವಿರಿಸುತಲಿ ಪ್ರೀತಿಯಲಿ
ಕರ್ತವ್ಯ ಗೈಯುತ್ತಿರೆ ದೇಶವದು ವೃದ್ಧಿಪುದು ॥೭೮॥

ನೀಗೈದ ಕಾರ್ಯಗಳ ಮಾಡದಿಹ ಕಾರ್ಯಗಳ
ಮಾಡಲಿಹ ಕಾರ್ಯಗಳ ಸಕಲಪ್ರಜೆ ಅರಿತಿಹರೆ
ಪ್ರಾರಂಭಗೈದಿರುವ ಕಾರ್ಯಗಳನರಿತಿಹರೆ
ಜನರಿಂಗೆ ಮಾಡಲಿಹ ಕಾರ್ಯಗಳನುಸುರದಿರು ॥೭೯॥

ಕೋಟೆಯಲಿ ಶಸ್ತ್ರಾಸ್ತ್ರ ಧನಧಾನ್ಯ ನೀರಿನಾ
ಸಂಗ್ರಹವ ವಿಪುಲದಲಿ ಇರಿಸುತಲಿ ರಕ್ಷಿಸಲು
ಶಸ್ತ್ರಾಸ್ತ್ರ ಸಜ್ಜಿತರ ನಂಬಿಕೆಯ ಸೈನಿಕರ
ಸತತವೂ ಸನ್ನದ್ಧರಾಗುತಲಿ ಇರಿಸಿಹೆಯಾ ॥೮೦॥

ಕುಶಲಮಿಹ ಧೈರ್ಯಮಿಹ ಯೋಗ್ಯಮಿಹ ಸಚಿವೋರ್ವ
ಅರಸನಿಗೆ ಜಯಲಕ್ಷ್ಮಿ ದೊರೆವಂತೆ ಮಾಡುವನು
ಕಾರ್ಯದಲಿ ಉಚಿತಮಿಹ ಸಲಹೆಗಳನು ನೀಡುತಿಹ
ಪರಿಣತನ ಒಬ್ಬನೇ ಮಂತ್ರಿಯನು ಇರಿಸಿಹೆಯಾ ॥೮೧॥

ಗುಪಿತದಲಿ ಜನರನ್ನು ಕಳಿಸುತಲಿ ಗೂಢದಲಿ
ಶತ್ರುಗಳ ಹದಿನೆಂಟು ಅಧಿಕಾರಿ ವರ್ಗವನು
ಸೈನ್ಯದಾ ಬಲವನ್ನು ಶಸ್ತ್ರಾಸ್ತ್ರ ಸಂಗ್ರಹವ
ಅರಿಯುತಲಿ ಎಚ್ಚರದ ಕ್ರಮಗಳನು ಕೊಂಡಿಹೆಯಾ ॥೮೨॥

ಉತ್ತಮರು ಮಧ್ಯಮರು ಕನಿಷ್ಠಮಿಹ ಜನರಿಂಗೆ
ಯೋಗ್ಯಮಿಹ ಕಾರ್ಯಗಳ ಅಧಿಕಾರ ಕೊಟ್ಟಿಹೆಯಾ
ವಂಶಾನುವಂಶದಲಿ ಬಂದಿರುವ ಶ್ರೇಷ್ಠರನು
ಮಂತ್ರಿಗಳ ನಿಯಮಿಸುತ ರಾಜ್ಯವನು ಆಳುವೆಯಾ ॥೮೩॥

ದುರ್ಗಪತಿ ಸೈನ್ಯಪತಿ ದಳಪತಿಯು ಧರ್ಮಪತಿ
ವೈದ್ಯನು ಪುರೋಹಿತನು ಜ್ಯೋತಿಷ್ಯರಿವರುಗಳು
ನಿನ್ನಯಾ ಆ ಏಳು ಪ್ರಕೃತಿಗಳು ಶತ್ರುಗಳ
ಆಮಿಷಕೆ ಸಿಲುಕದಲೆ ನಿನ್ನೊಳಗೆ ಇರುತಿಹರೆ ॥೮೪॥

ವೈರಿಗಳು ಸಖರುಗಳು ನಿನ್ನಲ್ಲಿ ಆವಪರಿ
ಆಚರಿಸುತಿರುವದನು ಸರಿಯಾಗಿ ಅರಿತಿಹೆಯಾ
ಆರೊಡನೆ ಯುದ್ಧವನು ಮಾಡುವುದು ಇಲ್ಲವೇ
ಆರೊಡನೆ ಸಂಧಾನಗೈಯ್ಯುವದನರಿತಿಹೆಯಾ ॥೮೫॥

ಸರಿಯಾಗಿ ಪರಿಕಿಸುತ ಮಂತ್ರಿಗಳನಾರಿಪುದು
ನಿರ್ಮಲದ ಮನಸಿನಲಿ ಆತ್ಮದಾ ಬಲವುಳ್ಳ
ಸುಜ್ಞಾನ ವೃದ್ಧರಿಹ ನೃಪನೀತಿ ಬೋಧಿಸಲು
ಶಕ್ತರಿಹ ನೃಪನಲ್ಲಿ ಅನುರಕ್ತರಾಗಿರುವ ॥೮೬॥

ಕುಶಲಮತಿ ಚಾಣಾಕ್ಷ ಧೂರ್ತರುಗಳಿವರುಗಳು
ಮಂತ್ರಿಗಳು ಆಗಲಿಕೆ ಯೋಗ್ಯರೆಂದೆನಿಸುವರು
ನೃಪರುಗಳ ಜಯಗಳಿಗೆ ಮಂತ್ರಿಗಳೆ ಕಾರಣರು
ಈ ಪರಿಯ ಮಂತ್ರಿಗಳ ನೇಮಕವ ಮಾಡಿಹೆಯಾ ॥೮೭॥

ಗೂಢದಲಿ ಯೋಚನೆಯು ಒಬ್ಬನೇ ಮಾಡದಿರು
ಹಲವು ಜನ ಸಹಿತದಲಿ ಮತ್ತೆ ನೀ ಮಾಡದಿರು
ನಿನ್ನಾಪ್ತ ಮಂತ್ರಿಜೊತೆಯೋರ್ವನಾ ಸಹಿತದಲಿ
ಚರ್ಚಿಸುತ ನಿಶ್ಚಯವ ಮಾಡುವುದು ನೀತಿಯದು ॥೮೮॥

ದೇಶದಾ ಗೂಢಗಳ ವಿಷಯಗಳು ಬಯಲಾಗಿ
ಶತ್ರುಗಳ ರಾಷ್ಟ್ರದಲಿ ಪಸರದೆ ಇರುತಿಹವೆ
ವೈರಿಗಳ ಗೂಢಚರ ನಿಕರಗಳು ಗುಪಿತದಲಿ
ನಿನ್ನಯಾ ರಾಜ್ಯದಲಿ ಬರದಂತೆ ತಡೆದಿಹೆಯಾ ॥೮೯॥

ವ್ಯವಸಾಯ ಕೃಷಿಕರರು ಕಾರ್ಮಿಕರು ಸೇವಕರು
ನಿನ್ನಲ್ಲಿ ನಿಜವಾಗಿ ವಿಶ್ವಾಸವಿರಿಸಿಹರೆ
ಮೇಲ್ನೋಟ ನಗುನಗುತ ಒಳಗೊಳಗೆ ಹೊಗೆಯಾಡಿ
ಹಗೆತನವ ಸಾಧಿಸದೆ ಇರುತಿಹುದನರಿತಿಹೆಯಾ ॥೯೦॥

ಕಾರ್ಮಿಕರ ಪ್ರೀತಿಯನು ಗಳಿಸಿದೊಡೆ ನಿನ್ನಯಾ
ದೇಶದಾ ಸಂಪದವು ಧನಧಾನ್ಯ ವೃದ್ಧಿಪುದು
ಕುಶಲಮತಿ ಕಾರ್ಮಿಕರು ಬೇರೆಡೆಗೆ ಹೋಗದಾ
ಪರಿಯಲ್ಲಿ ಧನವನ್ನು ಈಯುತಲಿ ಇರಿಸಿಹೆಯಾ ॥೯೧॥

ಪ್ರಾರಂಭಗೈದಿರುವ ಕಾರ್ಯಗಳ ನಿಲ್ಲಿಸದೆ
ದಕ್ಷರನು ನಿಯಮಿಸುತ ಪೂರ್ಣವನು ಗೊಳಿಸುವುದು
ಮಾಡಿರುವ ರಾಜ್ಯದಾ ಅಭಿವೃದ್ಧಿ ಕಾರ್ಯಗಳ
ಪ್ರಜೆಗಳಿಗೆ ಅರುಹುತಲಿ ಸಂತಸವ ಗೊಳಿಸುವುದು ॥೯೨॥

ಒಬ್ಬನೇ ಚತುರಮತಿ ಮಂತ್ರಿವರನಿದ್ದೊಡೆಯು
ಕಷ್ಟದಲಿ ಸೂಕ್ತಮಿಹ ಸಲಹೆಗಳ ನೀಡುತಲಿ
ಜಯಲಕ್ಷ್ಮಿ ರಾಜನಿಗೆ ದೊರೆವಂತೆ ಮಾಡುವನು
ಈ ತೆರನ ಮಂತ್ರಿಯನು ನೀನಿರಿಸಿಕೊಂಡಿಹೆಯಾ ॥೯೩॥

ವೈರಿಗಳ ಚಲನವನು ಗೂಢಚರ ಮೂಲಕವಿ
ಪ್ರತಿಕ್ಷಣವು ಅರಿಯುತಲಿ ಎಚ್ಚರದಿ ಇರುತಿಹುದು
ನೀನಿವರ ಗೂಢವನು ತಿಳಿಯುತಿಹ ವಿಷಯವನು
ಶತ್ರುಗಳು ಅರಿಯದಾ ಪರಿಯಲ್ಲಿ ಪಡೆಯುವುದು ॥೯೪॥

ವೇದಗಳ ಶಾಸ್ತ್ರಗಳ ಸಾರವನು ಅರಿತಿರುವ
ಸತ್ಕುಲ ಪ್ರಸೂತನಿಹ ಪರರನ್ನು ದ್ವೇಷಿಸದ
ನಿಗಮಾದಿ ತತ್ವಗಳ ಚರ್ಚೆಯಲಿ ನಿಪುಣನಿಹ
ವರಪುರೋಹಿತನವನು ನಿನಗಿಹನೆ ಹೇಳೆಂದ ॥೯೫॥

ಹಸ್ತವನು ನೋಡುತಲಿ ಮುಂದಿನದು ಪೇಳುತಿಹ
ಸಾಮುದ್ರಿಕದ ಶಾಸ್ತ್ರದಲಿ ಪರಿಣತನು ಎನಿಸಿರುವ
ಭೂಕಂಪ ಮಹಪೂರ ಬಿರುಗಾಳಿಯರಿಯುತಿಹ
ಜ್ಯೋತಿಷ್ಯ ನಿನ್ನಯಾ ಸಭೆಯೊಳಗೆ ಇರುತಿಹನೆ ॥೯೬॥

ಉತ್ತಮರು ಮಧ್ಯಮರು ಕನಿಷ್ಠ ಮತಿಗಳನು
ಅವರವರ ಯೋಗ್ಯತೆಗೆ ಯೋಗ್ಯವಿಹ ಪರಿಯಲ್ಲಿ
ಉತ್ತಮದ ಮಧ್ಯಮದ ಕನಿಷ್ಠದಾ ಕಾರ್ಯಗಳ
ನೇಮಕವ ಮಾಡಿಹೆಯಾ ನೃಪವರನೆ ಹೇಳೆಂದ ॥೯೭॥

ಕ್ರೂರತರ ಶಿಕ್ಷೆಯನು ಪ್ರಜೆಗಳಿಗೆ ಈಯುತಲಿ
ಪ್ರಜೆಗಳನು ಉದ್ವಿಗ್ನಗೊಳಿಸದೆಯ ಇರಿಸಿಹೆಯಾ
ಕುಲಸ್ತ್ರೀಯು ಕಾಮಿಯನು ತ್ಯಜಿಸುವಾ ಪರಿಯಲ್ಲಿ
ಹಿಂಸಿಸುವ ಅರಸನನು ಸಕಲ ಪ್ರಜೆ ತ್ಯಜಿಸುವರು ॥೯೮॥

ಧನವಾನ ತುಷ್ಟನಿಹ ಶೂರನಿಹ ಧೂರ್ತನಿಹ
ಕಷ್ಟವನು ಸಹಿಸುವಾ ತಾಳ್ಮೆಯಿಹ ಸಾಹಸಿಯು
ದಕ್ಷನಿಹ ಶಕ್ತನಿಹ ವಿಶ್ವಾಸಪಾತ್ರನಿಹ
ಅಧಿಪತಿಯು ನಿನ್ನಯಾ ಸೈನ್ಯಕ್ಕೆ ಇರುತಿಹನೆ ॥೯೯॥

ಯುದ್ಧದಲಿ ಶತ್ರುಗಳ ಸಂಹರಿಸಿ ಶೌರ್ಯದಲಿ
ಜಯಶಾಲಿಯಾಗುತಲಿ ಬಂದಿರುವ ವೀರರಾ
ನಾಯಕರ್ಗೆ ಯೋಧರಿಗೆ ರಥಿಕರಿಗೆ ರಾವುತರ್ಗೆ
ಬಹುಮಾನವೀಯುತಲಿ ಸತ್ಕಾರ ಗೈದಿಹೆಯಾ ॥೧೦೦॥

ಭೃತ್ಯರಿಗೆ ಶ್ರಮಜೀವಿ ಕಾರ್ಮಿಕರ ವರ್ಗಕ್ಕೆ
ಮಾಸಾಶನಾದಿಗಳ ಭತ್ಯಗಳ ಯೋಗ್ಯದಲಿ
ಕಾಲಕ್ಕೆ ಸರಿಯಾಗಿ ತಪ್ಪದೆಯೆ ಕೊಡುತಿಹೆಯಾ
ಇಲ್ಲದಿರೆ ಸಕಲರೂ ಬಂಡಾಯವೇಳುವರು ॥೧೦೧॥

ಗಜದಳವು ಅಶ್ವದಳ ರಥದಳವು ಕಾಲ್ದಳವು
ಈ ನಾಲ್ಕು ದಳಗಳಿಗೆ ಪ್ರತ್ಯೇಕ ಅಧಿಪತಿಯ
ನಿಯಮಿಪುದು ಇಲ್ಲದಿರೆ ದಳನಾಲ್ಕು ಸೇರಿಕೊಟ್ಟು
ದಳಪತಿಯು ಇರ್ದೊಡೆಯು ಅಪಾಯವೆಂದೆನಿಸುವುದು ॥೧೦೨॥

ಘೋರತರ ಕಷ್ಟದಾ ಸಮಯದಲಿ ಅಪ್ರತಿಮ
ಸಾಹಸವ ಶೌರ್ಯವನು ತೋರಿರುವನಾಯಕಗೆ
ವೈಶಿಷ್ಟ್ಯಪೂರ್ಣವಿಹ ಬಹುಮಾನವೀಯುತಲಿ
ಸನ್ಮಾನ ಗೈಯ್ಯುತಲಿ ಸಂತಸವ ಗೊಳಿಸಿಹೆಯಾ ॥೧೦೩॥

ವೇದದಲಿ ಶಾಸ್ತ್ರದಲಿ ಪೌರಾಣ ಸಾಹಿತ್ಯ
ನೃತ್ಯದಲಿ ಗಾಯನದಿ ಕೀರ್ತನದಿ ಕಾವ್ಯದಲಿ
ನಾಟಕದ ಕಲೆಗಳಲಿ ನಿಷ್ಣಾತರಾಗಿರುವ
ಪರಿಣತರ್ಗೆ ಪುರಸ್ಕಾರ ವಿಪುಳದಲಿ ಇತ್ತಿಹೆಯಾ ॥೧೦೪॥

ನಿನಗಾಗಿ ಪ್ರಾಣಗಳ ತೆತ್ತವರ ವೀರರಾ
ಸತಿಸುತರ ಪೋಷಣೆಯ ಸರಿಯಾಗಿ ಮಾಡುವೆಯಾ
ಯುದ್ಧದಲಿ ಶರಣಾದ ಶತ್ರುವನು ಕರುಣೆಯಲಿ
ನಿನ್ನಯಾ ಮಗನಂತೆ ರಕ್ಷಣೆಯ ಮಾಡುವೆಯಾ ॥೧೦೫॥

ಸಕಲರಾ ಪ್ರಜೆಗಳನು ನಿಷ್ಪಕ್ಷಪಾತದಲಿ
ಸಮಭಾವ ವಾತ್ಸಲ್ಯ ಪ್ರೀತಿಯಲಿ ನೋಡುವೆಯಾ
ತಾಯ್ತಂದೆ ಸನಿಹದಲಿ ನಿರ್ಭಯದಿ ಹೋಗುವಾ
ಪರಿಯಲ್ಲಿ ನಿನ್ನಲ್ಲಿ ಕಷ್ಟಗಳ ತಿಳುಹುವರೆ ॥೧೦೬॥

ಶತ್ರುಗಳು ಸ್ತ್ರೀ ದ್ಯೂತ ಮದ್ಯದಲಿ ನೃತ್ಯದಲಿ
ಭೋಗಿಸುತ ದುರ್ವ್ಯಸನ ಮಬ್ಬಿನಲಿ ಮುಳುಗಿರಲು
ಪ್ರಭು ಮಂತ್ರ ಉತ್ಸಾಹ ಮೂರುವಿಧ ಶಕ್ತಿಯಲಿ
ವೈರಿಯನು ಮುತ್ತುತಲಿ ಜಯವನ್ನು ಪಡೆಯುವುದು ॥೧೦೭॥

ಶತ್ರುವನು ಮಿತ್ರನನು ಶತ್ರುವಿನ ಮಿತ್ರನನು
ನಿಜಮಿತ್ರ ಮಿತ್ರನನು ಶತ್ರುವಿನ ಶತ್ರುವನು
ಶತ್ರುವಿನ ಶತ್ರುವಿನ ಮಿತ್ರನನು ಮತ್ತೆಯು
ಸತ್ಕುಲ ಪ್ರಸೂತನನ ವಿಶ್ವಾಸವುಳ್ಳವನ ॥೧೦೮॥

ಕುಲಗೋತ್ರ ಆಚಾರವೆಲ್ಲವನು ಅರಿಯುತಲಿ
ತನ್ನಯಾ ಓಂಬದಿಯ ರಕ್ಷಕನ ನೇಮಿಸುತ
ಯೋಧರಿಗೆ ನಾಯಕರ್ಗೆ ವೇತನವನೀಯುತಲಿ
ಶತ್ರುವನು ಗೆಲ್ಲಲಿಕೆ ಯತ್ನವನು ಮಾಡುವುದು ॥೧೦೯॥

ಶತ್ರುಗಳ ಸೈನ್ಯಗಳ ಅಧಿಕಾರಿ ವರ್ಗಕ್ಕೆ
ಗುಪ್ತದಲಿ ಧನಕನಕ ರತ್ನಗಳ ವಜ್ರಗಳ
ಅಗಣಿತದಿ ಕಳುಹಿಸುತ ಮನವನ್ನು ಒಲಿಸುತಲಿ
ನಿನ್ನೆಡೆಗೆ ಕೊಳ್ಳುತಲಿ ಶತ್ರುವನು ಮುತ್ತುವುದು ॥೧೧೦॥

ಧರ್ಮಜನೆ ನೀ ಮೊದಲು ಇಂದ್ರಿಯಗಳೆಲ್ಲವನು
ನಿನ್ನಯಾ ವಶದೊಳಗೆ ಹಿಡಿತದಲಿ ಇರಿಸುವುದು
ಆ ಬಳಿಕ ವಿಷಯದಲಿ ಭೋಗದಲಿ ಮುಳುಗಿರುವ
ಮತ್ತರನು ಜಯಿಸಲಿಕೆ ಸಮರ್ಥ ನೀನಾಗುವುದು ॥೧೧೧॥

ಶತ್ರುವಿನ ಮುಖ್ಯವಿಹ ಜೀವಾಳ ಸ್ಥಳಗಳನು
ಗೂಢಚರರಟ್ಟುತಲಿ ಗೂಢವನು ಅರಿಯುವುದು
ನಿನ್ನಾಪ್ತ ಮಂತ್ರಿಯನು ಯುವರಾಜ ಪುರೋಹಿತನ
ಇವರುಳಿದ ಜನರುಗಳ ಗೂಢಗಳನರಿಯುವುದು ॥೧೧೨॥

ಸತ್ಕುಲದಿ ಜನಿಸಿರುವ ವಿದ್ಯೆಯಲಿ ನಿಪುಣನಿಹ
ಮತ್ಸರವು ಇಲ್ಲದಿಹ ಶಸ್ತ್ರಾಸ್ತ್ರವರಿತಿರುವ
ನಿನ್ನಯಾ ಹಿತವನ್ನು ಬಯಸುತಿಹ ಪುರೋಹಿತನು
ನಿನ್ನಲ್ಲಿ ಸತ್ಕಾರಗೊಳ್ಳುತಲಿ ಇರುತಿಹನೆ ॥೧೧೩॥

ಮುಂದಣದ ಕಷ್ಟಗಳ ಮೊದಲಿಂಗೆ ಅರಿಯುತಲಿ
ಪರಿಹಾರಕೋಸುಗವೆ ಧರ್ಮದಾ ಕಾರ್ಯಗಳ
ಶಾಂತಿಯಾ ಹೋಮಗಳ ಮಾಡಲಿಕೆ ತಿಳಿಸುತಿಹ
ಅಕುಟಿಲ ಪುರೋಹಿತನ ನೀ ಮಾಡಿಕೊಂಡಿಹೆಯಾ ॥೧೧೪॥

ಶತ್ರುವಿನ ಜೊತೆಯಲ್ಲಿ ಯುದ್ಧವನು ಗೈಯ್ಯಲಿಕೆ
ದಂಡೆತ್ತಿ ಹೊರಡುವಾ ಮುನ್ನನಲಿ ಸಾಮದಲಿ
ದಾನದಲಿ ಭೇದದಲಿ ಈ ಮೂರು ಮಾರ್ಗದಲಿ
ಯತ್ನವನು ಗೈಯ್ಯುವುದು ಜಾಣತನ ಕೇಳೆಂದ ॥೧೧೫॥

ಇವು ಫಲಿಸದಿದ್ದೊಡೆಯು ನಿರುಪಾಯನಾಗುತಲಿ
ದಂಡದ ಉಪಾಯದಲಿ ವೈರಿಯನು ಜಯಿಸುವುದು
ಮೊದಲಿಂಗೆ ನಿನ್ನಯಾ ರಾಜ್ಯವನು ಭದ್ರದಲಿ
ನೆಲೆಗೊಳಿಸಿ ಬಳಿಕಸಲಿ ಶತ್ರುವನು ಮುತ್ತುವುದು ॥೧೧೬॥

ರಥ ಹಸ್ತಿ ಅಶ್ವಗಳ ಯೋಧರ ಪದಾತಿಗಳ
ಗೂಢಚರ ಸೇವಕರು ದೈಹಿಕದ ಶಿಕ್ಷಕರು
ಸೈನ್ಯದೀ ಅಷ್ಟಾಂಗ ವರ್ಗಗಳ ನಾಯಕರು
ಅತಿಚತುರರಿರುತಿಹುದು ಯೋಗ್ಯವದು ಎನಿಸುವುದು ॥೧೧೭॥

ಶತ್ರುವಿನ ರಾಜ್ಯದಲಿ ಕ್ಷಾಮವದು ತೋರಿರಲು
ಹೊಲಗಳಲಿ ಬೆಳೆ ಎಲ್ಲ ಹುಲುಸಾಗಿ ಬೆಳೆದಿರಲು
ಕಷ್ಟದಲಿ ಶತ್ರುದೊರೆ ಸಿಲುಕುತಲಿ ನರಳುತಿರೆ
ಯುದ್ಧವನು ಗೈಯ್ಯುತಲಿ ಶತ್ರುವನು ಕೊಲ್ಲುವದು ॥೧೧೮॥

ಪರರಾಜ್ಯ ಜಯಿಸುತಲಿ ದಕ್ಷವಿಹ ನಾಯಕರ
ನಿಯಮಿಸುತ ಅವರುಗಳು ಆದಾಯ ಸರಿಯಾಗಿ
ಕೊಳ್ಳುತಲಿ ಆಡಳಿತ ಶಾಂತಿಯಲಿ ನಡೆಸುತಲಿ
ವಿಧೇಯರಿರ್ಪುದನು ಪರಿಕಿಸುತಲಿರುತಿಹೆಯಾ ॥೧೧೯॥

ನಿನಗಾಗಿ ಬರುತಿರುವ ಧನಧಾನ್ಯ ಆದಾಯ
ಎಲ್ಲವನು ನಿನಗಾಗಿ ರಕ್ಷಿಸುತ ಇರಿಸಿಹರೆ
ಇಲ್ಲವೇ ಸ್ವಾರ್ಥದಲಿ ಎಲ್ಲವನು ತಮಗಾಗಿ
ಉಪಯೋಗ ಮಾಡುವುದ ಪರಿಕಿಸುತಲಿರುತಿಹೆಯಾ ॥೧೨೦॥

ನೃಪರಿಂಗೆ ತಮ್ಮಯಾ ರಕ್ಷಣೆಯು ಮುಖ್ಯವಿದೆ
ಅರಮನೆಯ ಅಡಿಗೆಯನು ಮಾಡುವರ ವಿಷಯದಲಿ
ಸತಿಸುತರ ಮಂತ್ರಿಗಳ ವಿಷಯದಲಿ ಎಚ್ಚರವ
ವಹಿಸುತಲಿ ರಕ್ಷಣೆಯ ನೀ ಮಾಡಿಕೊಳ್ಳುವುದು ॥೧೨೧॥

ಸಾಮಾನ್ಯ ಕಾಲದಲಿ ಆದಾಯ ಧನವನ್ನು
ನಾಲ್ಕರಲಿ ಒಂದಷ್ಟು ವ್ಯಯಮಾಡಿ ಉಳಿಸುವುದು
ರೋಗದಲಿ ಪ್ರಜೆ ಎಲ್ಲ ಪೀಡಿತರು ಆಗಿರಲು
ಅರ್ಧದಾ ಭಾಗವನು ವ್ಯಯವನ್ನು ಮಾಡುವುದು ॥೧೨೨॥

ಕಷ್ಟದಲಿ ಸಿಲುಕಿರುವ ಆಪ್ತರಿಗೆ ಬಾಂಧವರ್ಗೆ
ಗುರುಗಳಿಗೆ ವೃದ್ಧರಿಗೆ ಶಾಸ್ತ್ರಗಳ ಪಂಡಿತರ್ಗೆ
ಸಾಹಿತ್ಯ ಕೋವಿದರ್ಗೆ ಕಲೆಗಳಲಿ ನಿಪುಣರ್ಗೆ
ಧನಧಾನ್ಯವೀಯುತಲಿ ನೆರವನ್ನು ನೀಡುವೆಯಾ ॥೧೨೩॥

ದೇಶದಾ ಆದಾಯ ವ್ಯಯಗಳಾ ಲೆಕ್ಕವನು
ನೋಡಲಿಕೆ ಇರಿಸಿರುವ ಲೆಕ್ಕಿಗರು ಜಾಣ್ಮೆಯಲಿ
ಅಂದಿನಾ ಆದಾಯ ವ್ಯಯಗಳಾ ಸ್ಥಿತಿಯನ್ನು
ಪೂರ್ವಾಹ್ನ ತಪ್ಪದೆಯೆ ನಿನ್ನಲ್ಲಿ ತಿಳಿಸುವರೆ ॥೧೨೪॥

ನಿನ್ನಹಿತ ಚಿಂತನೆಯೊಳರಿತಿರುವ ನಂಬುಗೆಯ
ಅರ್ಥದಾ ಶಾಸ್ತ್ರದಲಿ ಪರಿಣತರು ಇರುತಿರುವ
ಅಧಿಕಾರ ವರ್ಗವನು ಅಪವಾದ ಇಲ್ಲದೆಯೆ
ಕ್ಷುಲ್ಲಕದ ಕಾರಣದಿ ತೆಗೆಯುವುದು ಸಲ್ಲದದು ॥೧೨೫॥

ಧನದಾಸೆಯುಳ್ಳವರ ಕಳ್ಳರನು ವೈರಿಯನು
ವ್ಯವಹಾರ ಜ್ಞಾನವದು ಇಲ್ಲದಾ ಮೂರ್ಖರನು
ಉನ್ನತದ ಅಧಿಕಾರ ಸ್ಥಾನದಲಿ ಇರಿಸುವುದು
ರಾಜ್ಯಕ್ಕೆ ಕೇಡಹುದು ನಾಶಕರವೆನಿಸುವುದು ॥೧೨೬॥

ಕೃಷಿಗಾಗಿ ಮಳೆಯನ್ನು ನಂಬುತಲಿ ನೆಚ್ಚುತಲಿ
ದೇವನನು ನೆನೆಯುತಲಿ ಕೈಕಟ್ಟಿ ಕೊಳ್ಳುತಲಿ
ಸುಮ್ಮನೇ ಕೊಡ್ರದಲೆ ಪ್ರತಿಗ್ರಾಮ ಜನಪದದಿ
ಕೊಳಗಳನು ಕೆರೆಗಳನು ಕಟ್ಟಿಸುತಲಿರುತಿಹೆಯಾ ॥೧೨೭॥

ವ್ಯವಸಾಯ ವಾಣಿಜ್ಯ ದನಕರುವು ಹಣಕಾಸು
ಇವುಗಳನು ನೋಡಲಿಕೆ ದಕ್ಷರುಗಳಿರುತಿಹರೆ
ಈ ನಾಲ್ಕು ವ್ಯವಹಾರ ಅಡೆತಡೆಯು ಇಲ್ಲದೆಯೆ
ನಡೆಯುತಿರೆ ದೇಶವದು ಉತ್ಕರ್ಷಗೊಳ್ಳುವುದು ॥೧೨೮॥

ಕೃಷಿ ಬೀಜ ಆಹಾರ ಧಾನ್ಯಗಳು ಕೆಡದಂತೆ
ಕ್ರಿಮಿಕೀಟಕಾದಿಗಳ ನಾಶವನು ಮಾಡುವರೆ
ರೈತರಾ ಅಭ್ಯುದಯ ಕೋಸುಗವೆ ಯೋಗ್ಯವಿಹ
ಬಡ್ಡಿಯಾ ದರದಲ್ಲಿ ಸಾಲವನು ನೀಡುವೆಯಾ ? ॥೧೨೯॥

ಪ್ರತಿಯೊಂದು ಗ್ರಾಮದಲಿ ಗ್ರಾಮದಾ ರಕ್ಷಣೆಯು
ವ್ಯವಸಾಯ ವಾಣಿಜ್ಯ ದುಷ್ಟರನು ಶಿಕ್ಷಿಸುವ
ಶಿಷ್ಟರನು ರಕ್ಷಿಸುವ ಈ ಐಯ್ದು ಕಾರ್ಯಗಳ
ನೋಡಲಿಕೆ ದಕ್ಷರನು ನೇಮಕವ ಮಾಡಿಹೆಯಾ ॥೧೩೦॥

ನಗರದಲಿ ಗ್ರಾಮದಾ ಪರಿಯಲ್ಲಿ ಸೌಲಭ್ಯ
ಎಲ್ಲವನು ಕಟ್ಟಿಸಲು ಕುಶಲರನು ನಿಯಮಿಪುದು
ದೇಶದಲಿ ನಗರಗಳು ಪ್ರಾಂತಗಳು ದಿನದಿನದಿ
ಅಭಿವೃದ್ಧಿ ಹೊಂದುವುದ ಪರಿಕಿಸುತಲಿರುತಿಹೆಯಾ ॥೧೩೧॥

ಪಳ್ಳಿಗಳು ಗ್ರಾಮಾಗಿ ಗ್ರಾಮಗಳು ಪುರವಾಗಿ
ಪುರವೆಲ್ಲ ನಗರಾಗಿ ನಗರಗಳು ಪ್ರಾಂತಾಗಿ
ಧನಧಾನ್ಯ ಉದ್ಯೋಗ ಕುಶಲದಾ ಕರ್ಮದಲಿ
ಉತ್ಕರ್ಷ ಹೊಂದುವುದ ನೋಡುತಲಿ ಇರುತಿಹೆಯಾ ॥೧೩೨॥

ಸೈನಿಕರು ರಕ್ಷಕರು ನಗರದಲಿ ಸಂಚರಿಸಿ
ದುಷ್ಟನನು ಶಿಕ್ಷಿಸುತ ಅಟ್ಟಿಸುತಲಿರುತಿಹರೆ
ಗಡಿಯಲ್ಲಿ ಇರುತಿರುವ ಗ್ರಾಮಗಳ ನಗರಗಳ
ಅಧಿಕಾರಿ ಸಕಲರೂ ನಿನ್ನಯಾ ವಶವಿಹರೆ ॥೧೩೩॥

ಸ್ತ್ರೀಯರನು ಸಂತೈಸಿ ರಕ್ಷಣೆಯ ಮಾಡುವುದು
ಇಲ್ಲದಿರೆ ನಿನ್ನಯಾ ನಾಶವನು ಮಾಡುವರು
ಗೂಢವಿಹ ವಿಷಯವನು ಸ್ತ್ರೀಯರಿಗೆ ತಿಳಿಸದಿರು
ಅರುಹಿದರೆ ಡಂಗುರವ ಹೊಯ್ದಂತೆ ಪಸರುವುದು ॥೧೩೪॥

ಮುಂಬರುವ ಗಂಡಾಂತರರಿಯುತಲಿ ತಕ್ಷಣದಿ
ಪರಿಹಾರ ಉಪಾಯವ ಯೋಚಿಸದೆ ಮೈಮರೆತು
ಅರಮನೆಯ ವಿಷಯದಾ ಭೋಗದಲಿ ಮುಳುಗುತಲಿ
ಕರ್ತವ್ಯ ಗೈಯ್ಯದಲೆ ಸುಮ್ಮನಿರೆ ಕೇಡಹುದು ॥೧೩೫॥

ರಾತ್ರಿಯ ಎರಡನೆಯ ಮೂರನೆಯ ಯಾಮದಲಿ
ನಿದ್ರಿಸುತ ನಾಲ್ಕರಾ ಯಾಮದಲಿ ಏಳುತಲಿ
ವೇದಗಳ ಶಾಸ್ತ್ರಗಳ ಅಧ್ಯಯನ ಗೈಯ್ಯುತಲಿ
ಧರ್ಮಾರ್ಥ ವಿಷಯಗಳ ಚಿಂತನೆಯ ಮಾಡುವೆಯಾ ॥೧೩೬॥

ಬ್ರಾಹ್ಮೀ ಮುಹೂರ್ತದಲಿ ಪ್ರತಿದಿನವು ಏಳುತಲಿ
ಸ್ನಾನವನು ಸಂಧ್ಯಾದಿ ಕರ್ಮಗಳ ಗೈಯ್ಯುತಲಿ
ಹೊಳೆಹೊಳೆವ ವಸ್ತ್ರಗಳ ಆಭರಣ ಧರಿಸುತಲಿ
ಸಚಿವರನು ಪ್ರಜೆಗಳನು ಸಂಧಿಸುತಲಿರುತಿಹೆಯಾ ॥೧೩೭॥

ಕೆಂಪಾದ ಉಡುಗೆಗಳ ಧರಿಸುತಲಿ ಮೆರೆಯುತಲಿ
ಕರದೊಳಗೆ ಹೊಳೆಹೊಳೆವ ಖಡ್ಗಗಳ ಹಿಡಿದಿರುವ
ಅಂಗದಾ ರಕ್ಷಕರು ಸತತವೂ ಸುತ್ತಲೂ
ನಿನ್ನನ್ನು ಬಿಡದಲೆ ರಕ್ಷಿಸುತಲಿರುತಿಹರೆ ॥೧೩೮॥

ಸರ್ವರೊಳು ಸಮತೆಯಲಿ ವರ್ತಿಸುವ ಯಮನಂತೆ
ದುಷ್ಟರಲಿ ಶಿಷ್ಟರಲಿ ಒಂದೆ ತೆರ ನಡೆಯುವುದು
ವಾದಿಗಳು ಪ್ರತಿವಾದಿ ಇವರುಗಳ ನುಡಿಗಳನು
ಸಮವಾಗಿ ಯೋಚಿಸುತ ತೀರ್ಪನ್ನು ಈಯುವೆಯಾ ॥೧೩೯॥

ದೈಹಿಕದ ವ್ಯಾಧಿಗಳ ಔಷಧವ ಸೇವಿಸುತ
ಪಥ್ಯದಲಿ ನೀಗುತಲಿ ಆರೋಗ್ಯದಿಂದಿಹುದು
ಮಾನಸಿಕ ವ್ಯಾಧಿಯನು ಗುರುಗಳನು ಪೂಜಿಸುತ
ಚಿಂತೆಯನು ತೊರೆಯುತಲಿ ಶಾಂತಿಯನು ಪಡೆಯುವುದು ॥೧೪೦॥

ನಿನ್ನಯಾ ರಾಜ್ಯದಲಿ ವಾಸಿಸುವ ನರರುಗಳು
ಶತ್ರುಗಳ ಆಮಿಷಕೆ ಮನಸೋತು ಶತ್ರುಗಳ
ಪರವಾಗಿ ನಿನ್ನಯ ವಿರುದ್ಧದಲಿ ಗುಪ್ತದಲಿ
ಸಂಚನ್ನು ಮಾಡುವುದ ನೀನರಿತುಕೊಂಡಿಹೆಯಾ ॥೧೪೧॥

ಬಲಹೀನ ಶತ್ರುಗಳ ಬಲದಿಂದ ಜಯಿಸುವುದು
ಬಲವುಳ್ಳ ಶತ್ರುಗಳ ಯುಕುತಿಯಲಿ ಗೆಲ್ಲುವುದು
ಈ ಎರಡು ಮಾರ್ಗದಲಿ ವೈರಿಯನು ಜಯಿಸುವುದು
ಇಲ್ಲದಿರೆ ಆ ವೈರಿ ನಿನ್ನನ್ನು ಕೊಲ್ಲುವನು ॥೧೪೨॥

ನಿನ ವೈರಿ ನಿರ್ಬಲನು ಇರ್ದೊಡೆಯು ಸತತವೂ
ಬಲದಿಂದ ವೈರಿಯನು ನಿಗ್ರಹವ ಗೈಯ್ಯುವುದು
ರಿಪುಗಳನು ವಶದೊಳಗೆ ಇರಿಸದೆಯೆ ಇರ್ದೊಡೆಯು
ಅವರೊಡನೆ ಎಚ್ಚರದಿ ಇರುತಿಹುದು ಕೇಳೆಂದ ॥೧೪೩॥

ನಿನ್ನಯಾ ವಶದೊಳಗೆ ಆಶ್ರಯವ ಪಡೆಯುತಲಿ
ಇರುತಿರುವ ಅರಸುಗಳು ನಿನ್ನನ್ನು ಪ್ರೀತಿಪರೆ
ನಿನ್ನಯಾ ಹಿತವನ್ನು ಬಯಸುತಲಿ ನಿನಗಾಗಿ
ಪ್ರಾಣಗಳ ಕೊಡಲಿಕ್ಕೆ ಸಿದ್ಧರೇ ಹೇಳೆಂದ ॥೧೪೪॥

ವಿದುಷರಿಗೆ ವಿಪ್ರರಿಗೆ ಅವರವರಿಗುಚಿತದಲಿ
ಸತ್ಕಾರಗೈಯ್ಯುತಿರೆ ಶ್ರೇಯವದು ಲಭಿಸುವುದು
ಭೂಸುರರ್ಗೆ ಭೋಜನವ ದಾನಗಳನೀಯುತಲಿ
ಸಂತುಷ್ಟಗೊಳಿಸಿದೊಡೆ ಸ್ವರ್ಗವದು ದೊರೆಯುವುದು ॥೧೪೫॥

ವೇದಗಳ ಮೂರರಾ ಆಧಾರಭೂತವಿಹ
ಪಿತೃಪಿತಾಮಹರುಗಳು ಗೈದಿರುವ ವೇದೋಕ್ತ
ಧರ್ಮದಾ ಕಾರ್ಯದಲಿ ವಿಶ್ವಾಸವಿರಿಸುತಲಿ
ಕರ್ಮಗಳನೆಲ್ಲವನು ಮಾಡುತಲಿ ಇರುತಿಹೆಯಾ ॥೧೪೬॥

ಧರ್ಮಜನೆ ಧರ್ಮದಲಿ ಒಮ್ಮನಸಿನಿಂದಿನಲಿ
ವಾಜಪೇಯ ಪುಂಡರೀಕ ಮೊದಲಾದ ಯಜ್ಞಗಳ
ಆವ ವಿಧ ಲೋಪಗಳು ದೋಷಗಳು ಇಲ್ಲದೆಯೆ
ಪರಿಪೂರ್ಣವಾಗುತಲಿ ಮಾಡುತಲಿ ಇರುತಿಹೆಯಾ ॥೧೪೭॥

ಗುರುಗಳನು ಹಿರಿಯರನು ಜ್ಞಾನಿಗಳ ವಿಪ್ರರನು
ದೇವರನು ಋಷಿಗಳನು ವೇದಾಂತ ವಿದುಷರನು
ಮಂಗಳವನೀಯುತಿಹ ಅಶ್ವತ್ಥಮರಗಳನು
ನಿರ್ಮಲದ ಚಿತ್ತದಲಿ ಭಾವದಲಿ ನಮಿಸುವೆಯಾ ॥೧೪೮॥

ಕಾರಣವು ಇಲ್ಲದೆಯೆ ಸುಮ್ಮನೇ ಕೋಪದಲಿ
ಅನ್ಯರನು ಹಿಂಸೆಯನು ಮಾಡದೇ ಇರುತಿಹೆಯಾ
ಸ್ವಸ್ತಿಯನು ಹೇಳುತಲಿ ವರಪೂರ್ಣ ಕುಂಭದಲಿ
ಹರಸುತಿಹ ಪುರೋಹಿತರು ನಿನ್ನ ಬಳಿ ಇರುತಿಹರೆ ॥೧೪೯॥

ನಿನ್ನಯಾ ರಾಜ್ಯದಲಿ ಮಂತ್ರಿಗಳು ಸ್ವಾರ್ಥದಲಿ
ಶುದ್ಧಾತ್ಮ ಚರಿತರನು ಮಾನ್ಯರನು ಸಭ್ಯರನು
ಮೋಸದಲಿ ಕಳ್ಳತನ ಆರೋಪ ಹೊರಿಸುತಲಿ
ಹಿಂಸೆಯನು ಮಾಡದಾ ಪರಿಯಲ್ಲಿ ನೋಡುವೆಯಾ ॥೧೫೦॥

ಕಳ್ಳತನ ಮಾಡಿರುವ ಕಳ್ಳರನು ದುಷ್ಟರನು
ಕಳುವಾದ ವಸ್ತುಗಳ ಸಹಿತದಲಿ ಹಿಡಿಯುತಲಿ
ದ್ರವ್ಯದಾ ಆಸೆಯಲಿ ಲಂಚವನು ಕೊಳ್ಳುತಲಿ
ಕಳ್ಳರನು ಬಿಡದಂತೆ ನೀನೋಡಿಕೊಳ್ಳುವೆಯಾ ॥೧೫೧॥

ಧನವುಳ್ಳ ಧನವಿರದ ವಾದಿಗಳು ಪ್ರತಿವಾದಿ
ನ್ಯಾಯಕ್ಕೆ ನ್ಯಾಯದಾ ನಿಲಯಕ್ಕೆ ಬಂದಿರಲು
ನ್ಯಾಯಾಧಿಕಾರಿಗಳು ಲಂಚವನು ಕೊಳ್ಳದೆಯೆ
ನಿಷ್ಪಕ್ಷಪಾತದಲಿ ತೀರ್ಪನ್ನು ಈಯುವರೆ ॥೧೫೨॥

ಪರದಲ್ಲಿ ನಂಬಿಕೆಯು ಇಲ್ಲದೆ ಇರುತಿಹುದು
ಸುಳ್ಳನ್ನು ನುಡಿಯುವುದು ಕೋಪವನು ತಾಳುವುದು
ಆಸಕ್ತಿ ಇಲ್ಲದೆಯೆ ಆವುದೇ ಕಾರ್ಯವನು
ಬೇಸರದ ಮನದಿಂದ ಮಂದದಲಿ ಮಾಡುವುದು ॥೧೫೩॥

ಜ್ಞಾನಿಗಳ ದರ್ಶನವ ಮಾಡದಲೆ ಇರುತಿಹುದು
ಆಲಸಿಯು ಆಗುವುದು ಇಂದ್ರಿಯದಿ ಸಿಲುಕುವುದು
ಒಬ್ಬನೇ ವಿಷಯಗಳ ಯೋಚಿಸುತ ಚಿಂತಿಪುದು
ಇಚ್ಛಿಸಿದ ಕಾರ್ಯಗಳ ಗೈಯ್ಯದೇ ಇರುತಿಹುದು ॥೧೫೪॥

ವಿಷಯಗಳ ಅರಿಯದಿಹ ನರರೊಡನೆ ಚರ್ಚಿಪುದು
ಗೌಪ್ಯದಲಿ ಗೂಢವನು ಇರಿಸದೇ ಇರುತಿಹುದು
ಮಂಗಲದ ಕಾರ್ಯಗಳ ಗೈಯ್ಯದೇ ಇರುತಿಹುದು
ಒಂದೆ ಕ್ಷಣನಾಲ್ದೆಸೆಗೆ ಶತ್ರುಗಳ ಜಯಿಸಲಿಕೆ ॥೧೫೫॥

ಸೈನ್ಯವನು ಕಳುಹುವುದು ರಾಜನಲಿ ಇರುತಿರುವ
ಹದಿನಾಲ್ಕು ದೋಷಗಳು ನಾಶವನು ಗೈಯ್ಯುವವು
ಈ ದೋಷದಿಂದಲೇ ಖ್ಯಾತರೂ ನಶಿಸುವರು
ಈ ದೋಷಗಳನೆಲ್ಲ ತ್ಯಜಿಸುತಲಿ ಇರುತಿಹೆಯಾ ॥೧೫೬॥

ವೇದಗಳು ಉಸುರುತಿಹ ಅಗ್ನಿಹೋತ್ರಾದಿಗಳ
ಕರ್ಮಗಳ ಗೈಯ್ಯುತಲಿ ವೇದಫಲ ಪಡೆಯುವುದು
ಆರ್ಜಿಸಿದ ಧನವನ್ನು ದಾನವನು ಮಾಡುತಲಿ
ತಾನು ಸಹ ಭೋಗಿಸುತ ಧನಫಲವ ಪಡೆಯುವುದು ॥೧೫೭॥

ಸತಿಯೊಡನೆ ಭೋಗಿಸುತ ವಂಶವನು ವೃದ್ಧಿಸುವ
ಮಕ್ಕಳನು ಪಡೆಯುತಲಿ ಸತಿಫಲವ ಪಡೆಯುವುದು
ಶಾಸ್ತ್ರಗಳನರಿಯುತಲಿ ನಯವಿನಯ ಸದ್ಗುಣದಿ
ಶೀಲದಲಿ ನಡೆಯುತಲಿ ಶಾಸ್ತ್ರಫಲ ಪಡೆಯುವುದು ॥೧೫೮॥

ನಿನ ದೇಶ ವರ್ತಕರು ನಿನ್ನಿಂದ ಸತ್ಕರಿಸಿ
ಗುಪ್ತದಲಿ ಪರದೇಶ ವಸ್ತುಗಳ ತರಿಸುತಲಿ
ಅಧಿಕಾರಿ ವರ್ಗವನು ಮೋಸವನು ಗೊಳಿಸುತಲಿ
ಕರವನ್ನು ತಪ್ಪಿಸುತ ಮಾರಾಟ ಮಾಡುವರೆ ? ॥೧೫೯॥

ಲಾಭವನು ಗಳಿಸಲಿಕೆ ಬರುತಲಿಹ ಪರದೇಶ
ವರ್ತಕರ ಕಡೆಯಿಂದ ತೆರಿಗೆಯನು ಕೊಳ್ಳುವರೆ
ಅಧಿಕಾರಿ ವರ್ಗಗಳು ಲಂಚವನು ಕೊಳ್ಳದೆಯೆ
ಧನಧಾನ್ಯ ವಸ್ತುಗಳ ಸರಿಯಾಗಿ ಹಂಚುವರೆ ॥೧೬೦॥

ಧರ್ಮವನು ಬೋಧಿಸುವ ಜ್ಞಾನಿಗಳ ಗುರುಗಳಾ
ಅನುಭವದಿ ವೃದ್ಧರಿಹ ಹಿರಿಯರಾ ಮುಖದಿಂದ
ಧರ್ಮಗಳ ತತ್ವಗಳ ಶಾಸ್ತ್ರಾರ್ಥ ಗೂಢಗಳ
ಪ್ರತಿನಿತ್ಯ ಕೇಳುತಲಿ ಆಚರಣೆ ಗೈಯ್ಯುವೆಯಾ ॥೧೬೧॥

ಹಸಿಯಾದ ಒಣಗಿರುವ ಧನಧಾನ್ಯ ವಸ್ತುಗಳು
ಸಂಗ್ರಹದ ನಿಲಯಕ್ಕೆ ಬರುತಿರುವ ಸಮಯದಲಿ
ಗೋವುಗಳು ಕರುಗಳನು ಪ್ರಸವಿಸುವ ಸಮಯದಲಿ
ವಿಪ್ರರಿಗೆ ಮಧುಪರ್ಕ ಪೂಜೆಯನು ಗೈಯ್ಯುವೆಯಾ ॥೧೬೨॥

ಬೇರೆ ಜನ ಗೈದಿರುವ ಮಹಾಕಾರ್ಯ ಔದಾರ್ಯ
ಧರ್ಮವನು ಸತ್ಪುರುಷರವರಲ್ಲಿ ವರ್ಣಿಪೆಯಾ
ಶೌರ್ಯದಾ ಕಾರ್ಯವನು ಗೈದಿರುವ ವೀರರಿಗೆ
ಬಹುಮಾನವೀಯುತಲಿ ಸತ್ಕಾರ ಗೈದಿಹೆಯಾ ॥೧೬೩॥

ಮಹಋಷಿಗಳುಸುರಿರುವ ಗಜ ಅಶ್ವ ರಥಗಳಾ
ವಿಧವಿಧದ ಲಕ್ಷಣದ ಶಾಸ್ತ್ರಗಳಸರಿತಿಹೆಯಾ
ಬಿಲ್ಲಿನಾ ವಿದ್ಯೆಯನು ಯಂತ್ರದಾ ಸೂತ್ರವನು
ನಾಗರಿಕ ನೀತಿಯನು ಸರಿಯಾಗಿ ಅರಿತಿಹೆಯಾ ॥೧೬೪॥

ವಿಧ ವಿಧದ ಅಸ್ತ್ರ ಪ್ರಯೋಗಗಳ ವಿದ್ಯೆಯನು
ಘೋರತರ ಬ್ರಹ್ಮಾಸ್ತ್ರ ವಿದ್ಯೆಗಳ ಸರಿತಿಹೆಯಾ
ವೈರಿಯನು ವಿಷವಿಕ್ಕಿ ಕೊಲ್ಲುವ ಪ್ರಯೋಗವನು
ಶತ್ರುವಿನ ನಾಶಕ್ಕೆ ಜಪ್ಪಾಗಿ ಅರಿತಿಹೆಯಾ ॥೧೬೫॥

ದೇಶವನು ರಕ್ಷಿಸಲು ಅಗ್ನಿಯನು ನಂದಿಸಲು
ಶಾಮಕದ ಯಂತ್ರಗಳ ಸಿದ್ಧತೆಯೊಳಿರಿಸುವುದು
ಹಾವುಗಳ ಕಡಿತದಲಿ ಸಾಯುತಿಹ ಜನರನ್ನು
ರಕ್ಷಿಸಲು ಔಷಧಿಯ ಸಂಗ್ರಹದೊಳಿರಿಸುವುದು ॥೧೬೬॥

ಹರಡುತಿಹ ವಿಧ ವಿಧದ ರೋಗಗಳ ತಡೆಯಲಿಕೆ
ದೇಶದಲಿ ಅಗಣಿತದ ವೈದ್ಯರನು ನಿಯಮಿಪುದು
ಭೂತಗಳ ಬಾಧೆಗಳ ಪರಿಹಾರ ಗೈಯ್ಯಲಿಕೆ
ಅಥರ್ವದಾ ಪ್ರಕ್ರಿಯೆಯ ಮಾತ್ರಜ್ಞರಿರಿಸುವುದು ॥೧೬೭॥

ನಿನ್ನಯಾ ಇನ್ನೊಂದು ಇದುಮುಖ್ಯ ಕರ್ತವ್ಯ
ಕುರುಡರನು ಕುಂಟರನು ಕಿವುಡರನು ಮೂಕರನು
ಈ ಅಂಗವಿಕಲರನು ಸನ್ಯಾಸಿ ಅನಾಥರನು
ತಂದೆಯಾ ಪರಿಯಲ್ಲಿ ನೀನೊಲಿದು ರಕ್ಷಿಪುದು ॥೧೬೮॥

ಅತಿನಿದ್ರೆ ಅಲಸ್ಯ ಭಯಕೋಪ ಕಾಠಿಣ್ಯ
ಮಂದದಲಿ ತಡವಾಗಿ ಕಾರ್ಯಗಳಗೈಯ್ಯುವದು
ಈ ಆರು ದೋಷಗಳು ಅರಸನನು ಕೊಲ್ಲುವವು
ನೃಪರುಗಳು ಖಂಡಿತದಿ ಇವುಗಳನು ತೊರೆಯುವುದು ॥೧೬೯॥

ಕುರುಕುಲದ ಶ್ರೇಷ್ಠನೃಪ ಧರ್ಮಜನು ಸುರಮುನಿಯು
ನಾರದರ ನುಡಿಗಳನು ಕೇಳುತಲಿ ಸಂತಸದಿ
ಸಿಂಹಾಸನಿಳಿಯುತಲಿ ಮುನಿವರಗೆ ಎರಗುತಲಿ
ನಿಮ್ಮಯಾ ನುಡಿಯಂತೆ ನಡೆಯುವೆನು ಎಂದಿಹನು ॥೧೭೦॥

ಬಳಿಕಲಾ ದೇವಮುನಿ ತಾ ಪೇಳ್ದ ಪರಿಯಲ್ಲಿ
ಆವದೊರೆ ರಾಜ್ಯವನು ಆಳುವನೊ ಆ ನೃಪನು
ಇಹದಲ್ಲಿ ಸೌಖ್ಯವನು ಪರದಲ್ಲಿ ಸ್ವರ್ಗವನು
ಪಡೆಯುವನು ಸಂಶಯವು ಇದಕಿಲ್ಲ ಎಂದಿಹನು ॥೧೭೧॥

ಶ್ರೇಷ್ಠನೃಪ ಧರ್ಮಜನು ದೇವಮುನಿ ನಾರದರ
ಪೂಜಿಸುತ ಸಾಷ್ಟಾಂಗ ನಮಿಸುತಲಿ ನುಡಿದಿಹನು
ಧರ್ಮಾರ್ಥ ಕಾಮಗಳ ಮೋಕ್ಷದಾ ಸಾಧನೆಗೆ
ನಿಮ್ಮಯಾ ನುಡಿಗಳನು ತಪ್ಪದೆ ಪಾಲಿಪೆನು ॥೧೭೨॥

ನಮ್ಮಯಾ ಪೂರ್ವಜರು ತ್ಯಾಗದಲಿ ಶೌರ್ಯದಲಿ
ಧರ್ಮದಾ ಮಾರ್ಗದಲಿ ನಡೆದಿರುವ ಪರಿಯಲ್ಲಿ
ಧರ್ಮದಲಿ ಸತ್ಯದಲಿ ನಡೆಯಲಿಕೆ ಯತ್ನಿಪೆನು
ಅವರಷ್ಟು ಯೋಗ್ಯತೆಯು ನಮಗಿಲ್ಲ ಎಂದಿಹನು ॥೧೭೩॥

ಮುನಿವರರೆ ನಾರದರೆ ವಾಯುವಿನ ವೇಗದಲಿ
ಮನಸಿನಾ ವೇಗವನು ಮೀರುತಲಿ ಸತತವೂ
ಸಂಚರಿಸಿ ಬ್ರಹ್ಮಾಂಡವೆಲ್ಲವನು ನೋಡಿದಿರಿ
ಸುಂದರದ ಸ್ಥಳಗಳನು ಸಭೆಗಳನು ಕಂಡಿಹಿರಿ ॥೧೭೪॥

ಮಯಶಿಲ್ಪಿ ನಿರ್ಮಿಸಿದ ಸೊಬಗಿನಲಿ ಶೋಭಿಸುವ
ಈ ಸಭೆಗೆ ಮಿಗಿಲಾದ ಸುಂದರದ ವೈಭವದ
ಬೇರೊಂದು ಸಭೆಯನ್ನು ಜಗದೊಳಗೆ ನೋಡಿದಿರಾ
ಕಂಡಿರ್ದೊಡಾ ಸಭೆಯ ವರ್ಣಿಪುದು ಎಂದಿಹನು ॥೧೭೫॥

**ಸಕಲಸುಖ ಸಂಪದದ ಆನಂದದಾಗರದ ।**
**ಸುರಪತಿಯ ಸಭೆಯನ್ನು ಸುರಮುನಿಯು ವರ್ಣಿಸಿದ ॥**

ಕೇಳುವುದು ಧರ್ಮಜನೆ ಸಕಲಮೀ ಭೂತಳದಿ
ನವರತ್ನ ಭೂಷಿತದ ಹೇಮಮಯ ಕಾಂತಿಯಲಿ
ಹೊಳೆಹೊಳೆವ ನಿನ್ನ ಈ ಸುಂದರದ ಸಭೆಗಿಂತ
ಸೊಗಯಿಸುವ ಬೇರೊಂದು ಸಭೆಯನ್ನು ಕಂಡಿಲ್ಲ ॥೧೭೬॥

ದಿವಿಜರಾ ಲೋಕದಲಿ ಇಂದ್ರಸಭೆ ಯಮಸಭೆಯು
ವರವರುಣ ಕುಬೇರರ ಬ್ರಹ್ಮನಾ ಶ್ರೇಷ್ಠಮಿಹ
ಸುರಶಿಲ್ಪ ಸೌಂದರ್ಯ ಕೌಶಲ್ಯದಿಂದೆಸೆವ
ವರಸಭಾಮಂದಿರಗಳಿರುತಿಹವು ಎಂದಿಹನು ॥೧೭೭॥

ಧರ್ಮಸುತ ಕೌತುಕದಿ ಇಂದ್ರ ಸಭೆ ಯಮ ಸಭೆಯ
ವರುಣ ಸಭೆ ಕುಬೇರನ ಸಭೆಯನ್ನು ಬ್ರಹ್ಮಸಭೆ
ಮೊದಲಾದ ಸಭೆಗಳಾ ಸೊಬಗನ್ನು ತಿಳುಹುವುದು
ಎನ್ನುತಲಿ ನುಡಿಯುತಿರೆ ಸುರಮುನಿಯು ನುಡಿದಿಹನು ॥೧೭೮॥

ಆಲಿಪುದು ಧರ್ಮಜನೆ ಮೊದಲಿಂಗೆ ಶ್ರೇಷ್ಠಮಿಹ
ವೈಭವದ ಐಶ್ವರ್ಯ ಸಂಪದದ ಸುಂದರದ
ಸೌಖ್ಯದಾ ಸಾಗರದ ಸ್ವರ್ಗದಲಿ ಶೋಭಿಸುವ
ಇಂದ್ರನಾ ಸಭೆಯನ್ನು ವರ್ಣಿಪೆನು ಕೇಳುವುದು ॥೧೭೯॥

ಈ ಪರಿಯ ನಾರದರು ನುಡಿಯುತಿರೆ ಧರ್ಮಜನು
ಸಭೆಯೊಳಗೆ ನೆರೆದಿರ್ದ ಸಕಲರೂ ತವಕದಲಿ
ಕಿವಿಗಳನು ತೆರೆಯುತಲಿ ಸುರಮುನಿಯನೀಕ್ಷಿಸುತ
ಏಕಾಗ್ರ ಚಿತ್ತದಲಿ ಶಾಂತದಲಿ ಕುಳಿತಿಹರು ॥೧೮೦॥

ಸಕಲಸುಖ ಸಂಪದದ ಐಶ್ವರ್ಯದಾಗರದ
ಉಜ್ವಲದ ಕಾಂತಿಯಲಿ ಹೊಳೆಯುತಲಿ ಶೋಭಿಸುವ
ವರವಿಶ್ವಕರ್ಮನೇ ನಿರ್ಮಿಸಿದ ಸ್ವರ್ಗವನು
ಶತಕ್ರತುವ ಗೈಯ್ಯುತಲಿ ದೇವೇಂದ್ರ ಪಡೆದಿಹನು ॥೧೮೧॥

ದಿವ್ಯವಿಹ ಸುಂದರದ ಅಪ್ರತಿಮ ಆ ಸಭೆಗೆ
ಇಚ್ಛಿಸಿದ ಸ್ಥಾನಕ್ಕೆ ತೆರಳುವಾ ಬಲವುಂಟು
ಅಲ್ಲಿರುವ ಸರ್ವರಿಗೆ ದೌರ್ಬಲ್ಯ ವಾರ್ಧಿಕ್ಯ
ಆವ ವಿಧ ಕ್ಲೇಶಗಳು ದುಃಖಗಳು ಒಂದಿಲ್ಲ ॥೧೮೨॥

ವರಇಂದ್ರ ಸಭೆಯೊಳಗೆ ರತ್ನಗಳ ಪಾತ್ರಗಳ
ಹೊಳೆಯುತಿಹ ಅಗಣಿತದ ಆಸನಗಳಿರುತಿಹವು
ಮಧ್ಯದಲಿ ಎತ್ತರದ ದಿವ್ಯ ಪ್ರಕಾಶದಲಿ
ಥಳಥಳಿಪ ಹೇಮಮಯ ಸಿಂಹಾಸನವಿಹುದು ॥೧೮೩॥

ರತ್ನದ ಕಿರೀಟವನು ಶಿರದೊಳಗೆ ಧರಿಸುತಲಿ
ಕೇಯೂರ ಕುಂಡಲದಿ ವಜ್ರಗಳ ಹಾರದಲಿ
ನಂದನದ ಪುಷ್ಪಗಳ ಗಂಧದಾ ಮಾಲೆಗಳ
ಶುಭ್ರದಲಿ ಹೊಳೆಯುತಿಹ ವಸ್ತ್ರಗಳ ಧರಿಸುತಲಿ ॥೧೮೪॥

ವರಲಕ್ಷ್ಮಿ ವರಕೀರ್ತಿ ಆ ದ್ಯುತಿಯರೊಡಗೂಡಿ
ಅಪ್ರತಿಮ ಸೌಂದರ್ಯ ತೇಜದಲಿ ಶೋಭಿಸುವ
ಶಚಿದೇವಿ ಸತಿಯೊಡನೆ ಸಿಂಹಾಸನೇರುತಲಿ
ಸುರಪ್ರಭೆಯೊಳೆಸೆಯುತಲಿ ದೇವೇಂದ್ರ ಮಂಡಿಪನು ॥೧೮೫॥

ವರಯಾಜ್ಞವಲ್ಕ್ಯ ಋಷಿ ಗಾಲವನು ಭಾಲುಕಿಯು
ವಾಲ್ಮೀಕಿ ಸಹದೇವ ಸುನೀತ ಪುಲಸ್ತ್ಯನು
ವರಹೃದ್ಯ ಉದ್ದಾಲಕ ಹರಿಶ್ಚಂದ್ರ ನೃಪವರನು
ಇಂದ್ರನಾ ಸನಿಹದಲಿ ಶೋಭಿಸುತಲಿರುತಿಹರು ॥೧೮೬॥

ಪರ್ವತ ಪರಾಶರನು ಸಾವರ್ಣಿ ಮರೀಚಿಯು
ತುಂಬುರರು ನಾರದರು ಯೋನಿಜ ಅಯೋನಿಜರು
ದೂರ್ವಾಸ ಗೌತಮರು ಶಾಂಡಿಲ್ಯ ಮೊದಲಾದ
ಅಗಣಿತದ ಋಷಿಗಣವು ಇಂದ್ರನನು ಪೂಜಿಪರು ॥೧೮೭॥

ಆ ಸಪ್ತ ಮರುತ್ತುಗಳು ಗೃಹಮೇಧಿ ದೇವತೆಯು
ಸುರರುಗಳು ಸುರಪತಿಯ ಸನ್ಮಾನಗೈಯ್ಯುವರು
ದೇವಗುಣ ದೇವಋಷಿ ಯಜ್ಞದಾ ದೇವತೆಯು
ಅಗ್ನಿಗಳು ಸಿದ್ಧಿಗಳು ಇಂದ್ರನನು ಪೂಜಿಪರು ॥೧೮೮॥

ಧರ್ಮಾರ್ಥ ಕಾಮಗಳ ಔಷಧಿಯ ಶ್ರದ್ಧೆಯಾ
ಆ ಮೇಧೆ ಸರಸತಿಯು ವರಜಲದ ಮೇಘಗಳ
ಗಾಳಿಗಳ ಮಿಂಚುಗಳ ಸಿಡಿಲುಗಳ ಗುಡುಗುಗಳ
ದೇವತೆಗಳೆಲ್ಲರೂ ಇಂದ್ರನನು ಪೂಜಿಪರು ॥೧೮೯॥

ಸುರರಿಂಗೆ ಹವಿಸುಗಳ ತಲುಪಿಸುವ ಅಗ್ನಿಗಳು
ಯಜ್ಞಗಳ ದೇವತೆಯು ದಕ್ಷಿಣೆಯ ದೇವತೆಯು
ಮಂತ್ರಗಳ ದೇವತೆಯು ಗುರು ಶುಕ್ರ ಸಕಲಗ್ರಹ
ಸುರಪತಿಯ ಸತತವೂ ಸೇವಿಸುತಲಿರುತಿಹವು ॥೧೯೦॥

ಸೌಂದರ್ಯ ಸಾಗರದ ಪುತ್ಥಳಿಗಳಂತಿಸುವ
ವರರಂಭೆ ಊರ್ವಶಿ ತಿಲೋತ್ತಮೆಯು ಮೇನಕೆಯು
ಅಪ್ಸರೆಯರಗಣಿತರು ನರ್ತಕಿಯ ವೃಂದಗಳು
ಇಂದ್ರನನು ಸ್ತುತಿಸುತಲಿ ನರ್ತನವ ಗೈಯ್ಯುವರು ॥೧೯೧॥

ಗಂಧರ್ವ ಕಿನ್ನರರು ಕಿಂಪುರುಷ ಯಕ್ಷರೂ
ಸುರಪತಿಯ ಶೌರ್ಯವದು ಕೀರ್ತಿಯನು ಹೊಗಳುವರು
ದೇವಗಣ ಋಷಿಗಣವು ರಾಜರ್ಷಿ ನಿಕರಗಳು
ಐತಂದು ಶಿರಬಾಗಿ ಇಂದ್ರನನು ನಮಿಸುವರು ॥೧೯೨॥

ಬ್ರಹ್ಮಸಮ ಶ್ರೇಷ್ಠರಿಹಸಪ್ತರ್ಷಿ ಮಂಡಲವು
ಸಕಲ ಗ್ರಹ ತಾರೆಗಳು ಇಂದ್ರನನು ಸ್ತುತಿಸುವರು
ಪುಷ್ಕರ ಮಾಲಿನಿಯು ಎಂಬುವಾ ಹೆಸರಿನಲಿ
ಅಪ್ರತಿಮ ಇಂದ್ರನಾ ಸಭೆಯದುವೆ ಮೆರೆಯುವದು ॥೧೯೩॥

ಈ ಪರಿಯ ಸುಂದರದ ಸಭೆಯನ್ನು ಹೋಲುತಿಹ
ಬೇರೊಂದು ಸಭೆಯನ್ನು ಜಗದೊಳಗೆ ಕಂಡಿಲ್ಲ
ಇಂದ್ರನಾ ಸಭೆಯನ್ನು ಪ್ರತ್ಯಕ್ಷ ಕಂಡಿಹೆನು
ಮುಂದಕ್ಕೆ ಯಮ ಸಭೆಯ ವರ್ಣಿಪೆನು ಕೇಳೆಂದ ॥೧೯೪॥

**ಯಮ ಸಭೆಯ ವರ್ಣನೆಯ ಗೈಯ್ಯುತಲಿ ಸುರಮುನಿಯು ।**
**ಪಾಂಡುನೃಪನಿರ್ದುದನು ಅರುಹಿದನು ಧರ್ಮಜಗೆ ॥**

ಸುರಶಿಲ್ಪಿ ವರವಿಶ್ವಕರ್ಮನೇ ನಿರ್ಮಿಸಿದ
ಯಮಸಭೆಯು ಪುಟವಿಟ್ಟ ಸ್ವರ್ಣದಾ ತೇಜದಲಿ
ಸೂರ್ಯನಾ ಪರಿಯಲ್ಲಿ ದಿವ್ಯ ಪ್ರಕಾಶದಲಿ
ಥಳಥಳಿಸಿ ಹೊಳೆಯುತಿದೆ ಕಣ್ಮನವ ತಣಿಸುತಲಿ ॥೧೯೫॥

ಶತಯೋಜನಳತೆಯಲಿ ಆ ಸಭೆಯು ಪಸರಿಹುದು
ಸಕಲರಿಗೆ ಇಚ್ಛಿಸಿದ ವಸ್ತುಗಳನೀಯುವದು
ಮನಸಿನಲಿ ಇಚ್ಛಿಸಿದ ರೂಪವನು ಪಡೆಯುವದು
ಚಳಿಯಿಲ್ಲ ಸೆಕೆಯಿಲ್ಲ ಸಮಹವೆಯು ಇರುತಿಹುದು ॥೧೯೬॥

ದುಃಖಗಳು ಒಂದಿಲ್ಲ ಮುಪ್ಪಿನಾ ಭಯವಿಲ್ಲ
ನೀರಡಿಕೆ ಹಸಿವುಗಳು ದಣಿವುಗಳು ಸೋಂಕದಿವೆ
ದುಷ್ಟಮಿಹ ಯೋಚನೆಯು ಕನಸಿನಲಿ ಬಾರದಿದೆ
ಪಾಪದಾ ಕಾರ್ಯಗಳು ಎಂದೆಂದು ನಡೆಯದಿವೆ ॥೧೯೭॥

ಸುರನರರು ಬಯಸುತಿಹ ಸುಖಕರದ ವಸ್ತುಗಳು
ಸಕಲವೂ ಸತತವೂ ಸಿದ್ಧತೆಯೊಳಿರುತಿಹವು
ವಿಧವಿಧದ ಮಧುರತರ ಭಕ್ಷ್ಯ ಭೋಜ್ಯಾದಿಗಳು
ಪಾನೀಯವೆಲ್ಲವೂ ಸಿದ್ಧಯೊಳಿರುತಿಹವು ॥೧೯೮॥

ಆ ಸಭೆಯ ಸುತ್ತಲೂ ಪುಷ್ಪಗಳ ವೃಕ್ಷಗಳು
ಗಂಧವನು ಸೂಸುತಲಿ ಶೋಭಿಸುತಲಿರುತಿಹವು
ಬೇಡಿದಾ ವಸ್ತುಗಳ ಬೇಡಿದವರ್ಗೀಯುತಲಿ
ಸಕಲರಾ ಕಣ್ಮನವ ತಣಿಸುತಿವೆ ಸೊಗಸಿನಲಿ ॥೧೯೯॥

ದಿವ್ಯಮಿಹ ಪುಣ್ಯಮಿಹ ಆ ಯಮನ ಸಭೆಯೊಳಗೆ
ನೂರಾರು ಸಾವಿರದ ಶುದ್ಧಾತ್ಮ ನಿರ್ಮಲದ
ಬ್ರಹ್ಮರ್ಷಿ ರಾಜರ್ಷಿ ವೃಂದಗಳು ಸತತವೂ
ವೈವಸ್ವತನ ಸ್ತುತಿಸುತಲಿ ಸೇವಿಸುತಲಿರುತಿಹರು ॥೨೦೦॥

ಅವರೊಳಗೆ ಖ್ಯಾತಮಿಹ ಪಾಪಗಳ ಪರಿಹರಿಪ
ಪಾವನರ ಹೆಸರುಗಳ ಹೇಳುವೆನು ಕೇಳುವುದು
ನೃಗನಹುಷ ಮಾಂಧಾತ ಪುರು ಶಿಬಿಯು ವರನೇಮಿ
ಧ್ರುವ ಕುಶಿಕ ಕೃತವೀರ್ಯ ಕೃತವೇಗರೆಸೆಯುವರು ॥೨೦೧॥

ಬೃಹದ್ರಥ ಭಗೀರಥ ಅಂಬರೀಷ ದಿಲೀಪರು
ಆ ಭರತ ಶರ್ಯಾತಿ ದುಷ್ಯಂತ ದಶರಥನು
ಸಗರನೃಪ ಕಕುತ್ಸನು ವರಜನಕ ಪ್ರದ್ಯುಮ್ನ
ಮುಚಕುಂದ ಬಾಹ್ಲಿಕನು ಭೂಪತಿಗಳಿರುತಿಹರು ॥೨೦೨॥

ಧೃತರಾಷ್ಟ್ರ ಜನಮೇಜಯ ಭೀಷ್ಮರೆಂಬುವಾ
ನಾಮಗಳ ನೃಪರುಗಳು ಯಮನನ್ನು ಸೇವಿಪರು
ಕುರುಕುಲದ ಶ್ರೇಷ್ಠನೃಪ ಶಾಂತನುವು ಮತ್ತೆಯು
ನಿನ್ನ ಪಿತ ಪಾಂಡುನೃಪ ಯಮಸಭೆಯೊಳೆಸೆಯುವನು ॥೨೦೩॥

ಅಗಣಿತದ ಸಾವಿರದ ಅರಸುಗಳ ಹೆಸರುಗಳ
ಕಾರ್ಯಗಳ ಹೇಳುವದು ಅಸದಳವು ಎನಿಸುವುದು
ಕೋಟ್ಯಾನುಕೋಟಿಗಳು ರಾಜರ್ಷಿ ಮಹಿಮರು
ವರಯಮನ ಸತತವೂ ಸ್ತುತಿಸುತಲಿ ಇರುತಿಹರು ॥೨೦೪॥

ವರಅಶ್ವಮೇಧದಾ ಯಾಗಗಳ ಗೈದಿರುವ
ಧನಕನಕ ವಸ್ತ್ರಗಳ ದಾನಗಳನಿತ್ತಿರುವ
ಅಗಣಿತದ ನೃಪರುಗಳು ಉಪವಿಷ್ಟರಾಗುತಲಿ
ಯಮದೊರೆಯ ನಮಿಸುತಲಿ ಪೂಜಿಸುತಲಿರುತಿಹರು ॥೨೦೫॥

ಘನಪುಣ್ಯ ಕಾರ್ಯಗಳ ಗೈದಿರುವ ಮಹಿಮರು
ಘೋರತರ ತಪಸುಗಳ ಗೈದಿರುವ ತಪಸಿಗಳು
ಸತ್ಯವ್ರತ ಸುವ್ರತರು ಶಾಂತಮನ ಮುನಿವರರು
ವರಯಮನ ಸೇವೆಯನು ಮಾಡುವರು ಸಭೆಯೊಳಗೆ ॥೨೦೬॥

ಗಂಧರ್ವ ಕಿನ್ನರರು ಅಪ್ಸರೆಯ ವೃಂದವದು
ವೀಣಾದಿ ವಾದ್ಯದಲಿ ಗಾಯನವ ಗೈಯ್ಯುವರು
ನರ್ತಕಿಯರಗಣಿತದಿ ನೃತ್ಯವನು ಗೈಯ್ಯುತಲಿ
ಸಭೆಯೊಳಗೆ ಯಮದೊರೆಯ ಸೇವಿಸುತಲಿರುತಿಹರು ॥೨೦೭॥

ಶುದ್ಧಾತ್ಮ ಪಾವನರು ನಿರ್ಮಲದ ಹೃದಯಿಗಳು
ಪಂಚೇಂದ್ರಿಯಂಗಳನು ವಶದೊಳಗೆ ಇರಿಸಿರುವ
ಮುನಿವರರು ದಿವ್ಯದಾ ರೂಪಗಳ ಧರಿಸುತಲಿ
ಯಮನನ್ನು ಪೊಗಳುತಲಿ ಪೂಜಿಸುತಲಿರುತಿಹರು ॥೨೦೮॥

ಸೂರ್ಯ ಪ್ರಕಾಶದಲಿ ದಿವ್ಯದಲಿ ಹೊಳೆಯುತಿಹ
ರಾಜರ್ಷಿ ಬ್ರಹ್ಮರ್ಷಿ ನಿಕರದಲಿ ಶೋಭಿಸುವ
ಸುಂದರದ ಯಮಸಭೆಯ ವರ್ಣಿಸಲು ಅಸದಳವು
ವರುಣನಾ ಸಭೆಯನ್ನು ವರ್ಣಿಸುವೆ ಕೇಳೆಂದ ॥೨೦೯॥

**ನಾರದರು ವರುಣಸಭೆ ವರ್ಣನೆಯಗೈದಿಹರು ।**
ಧರ್ಮಜನೆ ಸೊಗಸಿನಾ ವರುಣನಾ ಸಭೆಯನ್ನು
ಸುರಶಿಲ್ಪಿ ಆ ವಿಶ್ವಕರ್ಮನೇ ರಚಿಸಿಹನು
ಕೈಲಾಸಗಿರಿಯಂತೆ ಶುಭ್ರದಾ ಕಾಂತಿಯಲಿ
ಹೊಳೆಯುತಿಹ ಸಭೆಯನ್ನು ನೀರೊಳಗೆ ರಚಿಸಿಹನು ॥೨೧೦॥

ಕೆಂಪು ಬಿಳಿ ಹಳದಿಯಾ ವಿಧವಿಧದ ವರ್ಣಗಳ
ಪುಷ್ಪಗಳ ವೃಕ್ಷಗಳು ಸುತ್ತಲೂ ಶೋಭಿಪವು
ಶುಕಪಿಕದ ಪಕ್ಷಿಗಳ ಸಂಕುಲವು ಕಿಲಕಿಲನೆ
ಮಧುರತರ ಸ್ವರದಲ್ಲಿ ಗೀತವನು ಉಲಿಯುವವು ॥೨೧೧॥

ಮಂದದಲಿ ಮಾರುತನು ಕುಸುಮಗಳ ಗಂಧವನು
ಕೊಳ್ಳುತಲಿ ಸಭೆಯೊಳಗೆ ಪಸರಿಸುತಲಿರುತಿಹನು
ಚಳಿಯಿಲ್ಲ ಸೆಕೆಯಿಲ್ಲ ಸರ್ವದಾ ಕಾಲದಲಿ
ಹೃನ್ಮನ ತಣಿಸುತಿಹ ತಂಪಾದ ಹವೆಯಿಹುದು ॥೨೧೨॥

ಆ ಭವ್ಯ ಭವನದಲಿ ಸಾವಿರದ ಕೊಠಡಿಗಳು
ರತ್ನಮಣಿ ಮರಕತದ ಆಸನಗಳೆಸೆಯುವವು
ಮಧ್ಯದಲಿ ರತ್ನಗಳ ವಜ್ರಗಳ ಹೇಮಮಯ
ದೀಪ್ತಿಮಯ ಸುಂದರದ ಸಿಂಹಾಸನೆಸೆಯುವದು ॥೨೧೩॥

ಆದರೊಳಗೆ ದಿವ್ಯಾಂಬರಾಭರಣ ಭೂಷಿತಳ
ವಾರುಣಿಯ ಸತಿಸಹಿತ ವರವರುಣ ಶೋಭಿಪನು
ವಾಸುಕಿಯು ತಕ್ಷಕನು ಕರ್ಕೋಟಕಾದಿಗಳು
ಫಣಿರಾಜರಗಣಿತರು ವರುಣನನು ಸ್ತುತಿಸುವರು ॥೨೧೪॥

ಮೀನಗಳು ಮೊಸಳೆಗಳು ತಿಮಿಂಗಲಾದಿಗಳು
ಜಲಚರದ ಪ್ರಾಣಿಗಳು ಸಕಲವೂ ಸೇವಿಪವು
ಗಂಧರ್ವರಪ್ಸರೆಯ ನರ್ತಕರ ವೃಂದಗಳು
ಗಾಯನದಿ ನೃತ್ಯದಲಿ ವರುಣನನು ಸೇವಿಪರು ॥೨೧೫॥

ಬಲಿನರಕ ಪ್ರಲ್ಹಾದ ದಶಕಂಠ ಮಹಶಿರನು
ವರಪಾಲಿ ದುರ್ಮುಖಿರು ಮಹಪಾರ್ಶ್ವ ಟಿಟ್ಟಿಭನು
ಅಗಣಿತದ ದಾನವರು ಕನಕಮಯ ಆಭರಣ
ವಸ್ತ್ರಗಳ ಧರಿಸುತಲಿ ಸಭೆಯೊಳಗೆ ಶೋಭಿಪರು ॥೨೧೬॥

ಕಡಲುಗಳು ನಾಲ್ಕುಗಳು ವರಗಂಗೆಯಮುನೆಯರು
ಸರಯೂ ಸರಸ್ವತಿಯು ಆ ಸಿಂಧು ಶತುದ್ರುತುವು
ಗೋಮತಿಯು ಗಂಡಕಿಯು ವೈತರಣಿ ಮಹನದಿಯು
ನರ್ಮದೆಯು ತಾಪಿಯರು ಗೋದೆಯರು ಕೃಷ್ಣೆಯರು ॥೨೧೭॥

ಕಾವೇರಿ ತುಂಗೆಯರು ಸಕಲವೂ ಸ್ರೋತಗಳು
ದಶದಿಕ್ಕು ಭೂಮಿಗಳು ಗಿರಿಪರ್ವತಾದಿಗಳು
ಶುಭ್ರದಾ ತೇಜದಲಿ ಹೊಳೆಯುತಿಹ ದಿವ್ಯದಾ
ದೇಹಗಳ ಧರಿಸುತಲಿ ವರುಣನನು ಪೂಜಿಪರು ॥೨೧೮॥

ವರಮಂತ್ರಿ ಸುನಾಭನು ಪುತ್ರ ಪೌತ್ರಾದಿಗಳ
ಸಹಿತದಲಿ ಮತ್ತೆ ವರ 'ಗೋ' ಎಂಬ ಪುಷ್ಕರದ
ತೀರ್ಥದ ಸಮೇತದಲಿ ಸಶರೀರ ರೂಪದಲಿ
ವರುಣನನು ಸತತವೂ ಸೇವಿಸುತಲಿರುತಿಹರು ॥೨೧೯॥

ಲೋಕಗಳ ಸಂಚಾರ ಗೈಯ್ಯುತಿಹ ಸಮಯದಲಿ
ವರುಣನಾ ಭವ್ಯಮಿಹ ಭವನವನು ನೋಡುತಲಿ
ಸಂತಸವಗೊಂಡಿಹೆನು ಮುಂದಕ್ಕೆ ಕುಬೇರನ
ಸಭೆಯನ್ನು ವರ್ಣಿಪೆನು ಧರ್ಮಜನೆ ಕೇಳುವುದು ॥೨೨೦॥

**ಧನಕನಕ ವಿಲಸಿತದ ಸುರಸುಂದರಾಂಗಿಯರ ।**
**ಧನಪತಿಯ ಸಭೆಯನ್ನು ಸುರಮುನಿಯು ವರ್ಣಿಸಿದ ॥**
ಧರ್ಮಜನೆ ಭವ್ಯಮಿಹ ಕುಬೇರನ ಭವನವದು
ಅತ್ಯಂತ ಉಜ್ವಲ ಪ್ರಕಾಶದಲಿ ಹೊಳೆಯುತಲಿ
ಉದ್ದ ಶತಯೋಜನದಿ ಅಗಲದಲಿ ಎಪ್ಪತ್ತು
ಯೋಜನದಿ ವ್ಯಾಪಿಸುತ ದಶದಿಶೆಯ ಬೆಳಗುವುದು ॥೨೨೧॥

ಕೈಲಾಸ ಗಿರಿಯಂತೆ ಶುಭ್ರದಲಿ ಹೊಳೆಯುತಲಿ
ಚಂದ್ರಮನ ಬೆಳಕನ್ನು ನಿಸ್ತೇಜಗೊಳಿಸಿಹುದು
ಥಳಥಳಿಪ ಆ ಸಭೆಯ ಮಂದಿರವ ಗುಹ್ಯಕರು
ಹೆಗಲಲ್ಲಿ ಧರಿಸುತಲಿ ಗಗನದಲಿ ನಿಂತಿಹರು ॥೨೨೨॥

ನವರತ್ನ ಮಾಣಿಕ್ಯ ವಜ್ರಗಳ ಭಿತ್ತಿಗಳ
ಚಿತ್ರಿತರ ಸ್ತಂಭಗಳ ವರಸಭೆಯು ಹೊಳೆಯುವುದು
ಪುಷ್ಪಗಳ ಪರಿಮಳದ ಗಂಧಸದ ಚಂದನದ
ಸೌರಭವು ಎಲ್ಲೆಡೆಗೆ ಸತತವೂ ಸೂಸುತಿದೆ ॥೨೨೩॥

ಶುಭ್ರದಾ ಮೇಘಗಳ ಕಾಂತಿಯಲಿ ಹೊಳೆಯುತಿಹ
ನಿರ್ಮಲದ ಸ್ಫಟಿಕದಾ ತೇಜದಲಿ ತೊಳಗುತಿಹ
ಕುಬೇರನ ಭವನವದು ಗಗನದಲಿ ಚಲಿಸುತಿಹ
ಸುಂದರದ ಸಭೆಯಂತೆ ಕಂಗೊಳಿಸುತಿಹುದು ॥೨೨೪॥

ಮುತ್ತುಗಳ ಮಾಣಿಕದ ವೈಡೂರ್ಯ ವಜ್ರಗಳ
ನೀಲಗಳ ಪಚ್ಚೆಗಳ ಕೆತ್ತಿರುವ ಕೌಶಲದಿ
ಸ್ವರ್ಣಮಯ ದೀಪ್ತಿಯಲಿ ಸೂರ್ಯಪ್ರಕಾಶದಲಿ
ಹೊಳೆಯುತಿಹ ದಿವ್ಯದಾ ಸಿಂಹದಾ ವಿಷ್ಟರದಿ ॥೨೨೫॥

ಮಿರುಗುತಿಹ ಥಳಥಳಿಪ ಕಾಂಚನದ ಆಭರಣ
ರತ್ನಗಳ ಹಾರಗಳ ವಸ್ತ್ರಗಳ ಧರಿಸುತಲಿ
ಧನಪತಿಯು ಸಾವಿರದ ಪತ್ನಿಯರ ಸಹಿತದಲಿ
ಮಂಡಿಸುತ ಇಂದ್ರನಾ ಪರಿಯಲ್ಲಿ ಶೋಭಿಪನು ॥೨೨೬॥

ಅರಳಿರುವ ಮಂದಾರ ಪುಷ್ಪಗಳ ಗಂಧವನು
ಸುಂದರದ ಸೌಗಂಧ ಕುಸುಮಗಳ ಪರಿಮಳವ
ಚಂದನದ ಅಲರುಗಳ ಸೌರಭವನೆಲ್ಲವನು
ಕೊಳ್ಳುತಲಿ ಮಾರುತನು ಮಂದದಲಿ ಸೂಸುವನು ॥೨೨೭॥

ವರರಂಭೆ ಊರ್ವಶಿಯು ಮೇನಕೆ ತಿಲೋತ್ತಮೆಯು
ವಿಶ್ವಾಚಿ ಘೃತಾಚಿ ಲತೆ ಇರೆಯು ಮೊದಲಾದ
ಅಪ್ಸರೆಯರಗಣಿತರು ಗಾಯನವ ಗೈಯ್ಯುತಲಿ
ನರ್ತಿಸುತ ಸತತವೂ ಸೇವಿಸುತಲಿರುತಿಹರು ॥೨೨೮॥

ಗಂಧರ್ವ ಕಿನ್ನರರು ಕಿಂಪುರುಷ ನಿಕರುಗಳು
ಗುಹ್ಯದ ಕಶೇರಕರು ತಾಮ್ರೋಷ್ಠ ಗಜಕರ್ಣ
ಫಲಕಪ ಫಲೋದಕ ಮೊದಲಾದ ಅಗಣಿತರು
ಯಕ್ಷರುಗಳನವರತ ಧನಪತಿಯ ಸೇವಿಪರು ॥೨೨೯॥

ಮಹಲಕುಮಿ ಐಶ್ವರ್ಯ ರೂಪದಲಿ ಅಲ್ಲಿಹಳು
ಪುತ್ರ ನಲಕೂಬರನು ಅಲ್ಲಿಯೇ ಇರುತಿಹನು
ಬ್ರಹ್ಮರ್ಷಿ ದೇವರ್ಷಿ ಗಂಧರ್ವ ರಾಕ್ಷಸರು
ಸಕಲರೂ ಧನಪತಿಯ ಸೇವಿಸುತಲಿರುತಿಹರು ॥೨೩೦॥

ಕೈಲಾಸದಧಿಪತಿಯು ಶಂಕರ ತ್ರಿಶೂಲಿಯು
ಕುಬೇರನ ಪರಮಸಖ ಪರಮೇಶ ವರ ಈಶನು
ಪಾರ್ವತಿಯ ಸಹಿತದಲಿ ಐತಂದು ಸಭೆಯೊಳಗೆ
ಧನಪತಿಯ ಸನಿಹದಲಿ ಆಸೀನನಾಗುವನು ॥೨೩೧॥

ಚಿತ್ರರಥ ವಿಶ್ವವಸು ಗಂಧರ್ವ ವೃಂದಗಳು
ಭಗದತ್ತ ಮಹೇಂದ್ರ ಕಿಂಪುರುಷ ನಿಕರಗಳು
ರಕ್ಕಸರ ನಾಯಕರು ವರಗಂಧಮಾದನನು
ಪರಿವಾರ ಸಹಿತದಲಿ ಧನಪತಿಯ ಸೇವಿಪರು ॥೨೩೨॥

ಘನಮಹಿಮ ಧರ್ಮಾತ್ಮ ವರ ವಿಭೀಷಣ ಸತತವೂ
ತನ್ನಣ್ಣ ಕುಬೇರನ ಸೇವಿಸುತಲಿರುತಿಹನು
ವೈಭವದ ಮಂದಿರದ ಸುತ್ತಲೂ ಸತತವು
ಬಿಳಿಬಣ್ಣ ವೃಷಭವದು ಗರ್ಜನೆಯ ಗೈಯ್ಯುವದು ॥೨೩೩॥

ವಿಂಧ್ಯಗಿರಿ ಮಲಯಗಿರಿ ಮಂದರ ಮಹೇಂದ್ರವು
ಕೈಲಾಸ ಹಿಮವಂತ ಗಂಧಮಾದನಗಿರಿಯು
ಪರ್ವತಗಳೆಲ್ಲವೂ ಮೇರುವನು ಮುಂದಿರಿಸಿ
ಧನಪತಿಯು ಕುಬೇರನ ಸೇವಿಸುತಲಿರುತಿಹರು ॥೨೩೪॥

ಭಸ್ಮಾಂಗ ಭೂಷಿತನ ಭೂತಗಣ ಪರಿವೃತನ
ತ್ರೈಲೋಕ್ಯವಂದಿತನ ಪಾರ್ವತಿಯ ನುತಪತಿಯ
ಶಂಕರನ ಚರಣಕ್ಕೆ ಎರಗುತಲಿ ಕುಬೇರನು
ಸಿಂಹಾಸನಾರೂಢನಾಗುತಲಿ ಶೋಭಿಪನು ॥೨೩೫॥

ಈ ಪರಿಯೆ ಶೋಭಿಸುವ ಗಗನದಲಿ ಸಂಚರಿಪ
ಕುಬೇರನಾ ವೈಭವದ ಸಭೆಯನ್ನು ನೋಡಿಹೆನು
ಮುಂದಕ್ಕೆ ಶ್ರೇಷ್ಠಮಿಹ ಬ್ರಹ್ಮನಾ ಸಭೆಯನ್ನು
ವರ್ಣಿಸುವೆ ಏಕಾಗ್ರ ಚಿತ್ತದಲಿ ಕೇಳುವುದು ॥೨೩೬॥

**ಸೃಷ್ಟಿಯನು ಸೃಷ್ಟಿಸುವ ಬ್ರಹ್ಮನಾ ಅಪ್ರತಿಮ ।**
**ಸಭೆಯನ್ನು ನಾರದರು ವರ್ಣನೆಯ ಗೈದಿಹರು ॥**

ಧರ್ಮಜನೆ ಕೇಳುವುದು ಬ್ರಹ್ಮಸಭೆ ಇಂತಿಹುದು
ಎನ್ನುತಲಿ ಅದರ ಸ್ವರೂಪವನು ತಿಳಿಸಲಿಕೆ
ಆರಿಗೂ ಅಸದಳವು ಸರ್ವರನು ಮೋಹಿಸುವ
ಅಪ್ರತಿಮ ಬ್ರಹ್ಮನಾ ಸಭೆಯನ್ನು ತಿಳುಹುವೆನು ॥೨೩೭॥

ಮುನ್ನಿನಲಿ ಕೃತಯುಗದಿ ಆ ಸೂರ್ಯ ಒಂದು ಸಲ
ಬ್ರಹ್ಮಸಭೆ ನೋಡುತಲಿ ಸಂತಸವಗೊಳ್ಳುತಲಿ
ಭೂಲೋಕವೆಂತಿಹುದು ಎನ್ನುತಲಿ ನೋಡಲಿಕೆ
ಮನುಜನಾ ರೂಪವನು ಧರಿಸುತಲಿ ಇಳಿಯುತಲಿ ॥೨೩೮॥

ಧರೆಯೊಳಗೆ ಚರಿಸುತಿರೆ ಕಾಣುತಲಿ ಕರಮುಗಿಯೆ
ಪರಬ್ರಹ್ಮ ಮನಸಿನಲಿ ಸಂಕಲ್ಪ ಮಾತ್ರದಲಿ
ನಿರ್ಮಿಸಿದ ಮಹಾಸಭೆಯ ವಿಷಯವನು ವಿಸ್ತರದಿ
ಪೇಳುತಿರೆ ಹರ್ಷದಲಿ ಭಾನುವಿಗೆ ನುಡಿದಿಹನು ॥೨೩೯॥

ಬ್ರಹ್ಮಸಭೆ ನೋಡುವಾ ಇಚ್ಛೆಯದು ಎನಗಹುದು
ಆವ ತಪ ಯಜ್ಞಗಳ ವ್ರತಗಳನು ಗೈದೊಡೆಯು
ಬ್ರಹ್ಮಸಭೆ ನೋಡಲಿಕೆ ಸಾಧ್ಯವಿದೆ ಎನ್ನುತಲಿ
ನುಡಿಯುತಿರೆ ವರಭಾನು ಸಂತಸದಿ ನುಡಿದಿಹನು ॥೨೪೦॥

ಸಾವಿರದ ವರ್ಷಗಳ ಕಾಲದಾ ಪರ್ಯಂತ
ಏಕಾಗ್ರ ಚಿತ್ತದಲಿ ಬ್ರಹ್ಮನ ಉಪಾಸನೆಯ
ಮಾಡಿದೊಡೆ ನೀ ಬ್ರಹ್ಮಸಭೆಯನ್ನು ಹೊಗಬಲ್ಲೆ
ಎನ್ನುತಲಿ ಆದಿತ್ಯ ನುಡಿಯುತಿರೆ ಆ ಕ್ಷಣದಿ ॥೨೪೧॥

ಹಿಮಗಿರಿಗೆ ತೆರಳುತಲಿ ಸಾವಿರದ ವರ್ಷಗಳ
ಪರ್ಯಂತ ಏಕಾಗ್ರ ಚಿತ್ತದಲಿ ಕಠಿಣದಲಿ
ಬ್ರಹ್ಮನ ಉಪಾಸನೆಯಗೈಯ್ಯುತಿರೆ ಆ ಸೂರ್ಯ
ಸಂತಸದಿ ಬ್ರಹ್ಮಸಭೆಗೆನ್ನನ್ನು ಕೊಂಡೊಯ್ದ ॥೨೪೨॥

ಧರ್ಮಜನೆ ಬ್ರಹ್ಮಸಭೆ ಈ ತೆರದಿ ಇಂತಿಹುದು
ಎನ್ನುತಲಿ ನಿರ್ದಿಷ್ಟ ಹೇಳಲಿಕೆ ಆಗದದು
ಆ ಸಭೆಯು ಪ್ರತಿಕ್ಷಣವು ಒಂದೊಂದು ರೂಪವನು
ತಳೆಯುತಲಿ ವಿಧವಿಧ ಸ್ವರೂಪದಲಿ ತೋರುವುದು ॥೨೪೩॥

ಉದ್ದಗಲ ಅಳತೆಗಳ ಹೇಳಲು ಅಸಾಧ್ಯವಿದೆ
ಆ ತೆರನ ಸಭೆಯನ್ನು ಹಿಂದೆಂದು ನೋಡಿಲ್ಲ
ಚಳಿ ಸೆಕೆಯು ನೀರಡಿಕೆ ಹಸಿವೆಗಳು ಒಂದಿಲ್ಲ
ಸರ್ವರೂ ಸಂತಸದಿ ಸತತವೂ ಇರುತಿಹರು ॥೨೪೪॥

ರತ್ನಗಳ ವಜ್ರಗಳ ದಿವ್ಯ ಪ್ರಕಾಶದಲಿ
ನಿರ್ಮಿಸಿದ ಪ್ರಭೆಯಿಂದ ಹೊಳೆಯುವುದು
ಭಿತ್ತಿಗಳು ಸ್ತಂಭಗಳು ಒಂದಿಲ್ಲ ಸಭೆಯೊಳಗೆ
ನಾಶವದು ಎಂದಿಲ್ಲ ಶಾಶ್ವತವು ಆಗಿಹುದು ॥೨೪೫॥

ತನ್ನಯಾ ತೇಜದಲಿ ತೊಳಗುತಿಹ ಆ ಸಭೆಯು
ಸೂರ್ಯ ಚಂದ್ರಾಗ್ನಿಗಳ ಕಾಂತಿಯನು ಅಳಿಸುವುದು
ಕೋಟಿಗಳ ಸೂರ್ಯರನು ಅಣಕಿಸುವ ಪರಿಯಲ್ಲಿ
ದಿವ್ಯ ಪ್ರಕಾಶದಲಿ ಬ್ರಹ್ಮಸಭೆ ಹೊಳೆಯುವುದು ॥೨೪೬॥

ಆ ಸಭೆಯ ಮಧ್ಯದಲಿ ಪರಬ್ರಹ್ಮನೋರ್ವನೇ
ತನ್ನಯಾ ಮನಸಿನಲಿ ಸಂಕಲ್ಪ ಮಾತ್ರದಲಿ
ಲೋಕವನು ಸೃಷ್ಟಿಸುತ ಶಾಂತಿಯಲಿ ಕುಳಿತಿಹನು
ಮಿಕ್ಕಿರುವ ಪ್ರಜಾಪತಿಗಳುಪವಿಷ್ಟರಾಗಿಹರು ॥೨೪೭॥

ದಕ್ಷ ಪ್ರಚೇತಸರು ಕಶ್ಯಪ ಮರೀಚಿಯು
ಅತ್ರಿ ಭೃಗು ಅಂಗಿರಸ ಪುಲಸ್ತ್ಯ ಕ್ರತು ಪ್ರಲ್ಹಾದ
ಗೌತಮ ವಸಿಷ್ಠಾದಿ ಘನಮಹಿಮ ಋಷಿವರರು
ಪರಬ್ರಹ್ಮ ಸೇವೆಯನು ಅನವರತ ಗೈಯ್ಯುವರು ॥೨೪೮॥

ಮನ ಅಂತರಿಕ್ಷಗಳ ವಿದ್ಯೆಗಳು ಸರ್ವವು
ನೆಲ ಜಲವು ಮಾರುತನು ಶಬ್ದ ಸ್ಪರ್ಶಾದಿಗಳು
ರಸ ಗಂಧ ಪ್ರಕೃತಿಗಳು ಜಗಕೆಲ್ಲ ಕಾರಣದ
ದೇವತೆಗಳೆಲ್ಲರೂ ಪರಬ್ರಹ್ಮ ಸೇವಿಪರು ॥೨೪೯॥

ಇಪ್ಪತ್ತು ಮೇಲೇಳು ತಾರೆಗಳ ಸಹಿತವಲಿ
ಚಂದ್ರಮನು ಆದಿತ್ಯ ಮರುತ್ತುಗಳು ಕ್ರತುಗಳು
ಸಂಕಲ್ಪ ಪ್ರಾಣಗಳು ಸಶರೀರ ರೂಪದಲಿ
ಬ್ರಹ್ಮಸಭೆಗೈತಂದು ಬ್ರಹ್ಮನನು ಸೇವಿಪರು ॥೨೫೦॥

ಧರ್ಮಾರ್ಥ ಕಾಮಗಳು ಹರ್ಷಗಳು ದ್ವೇಷಗಳು
ತಪ ದಮವು ಸಶರೀರರಾಗುತಲಿ ಸೇವಿಪರು
ವಿಶ್ವವಸು ವರರುಚಿಯು ಗಂಧರ್ವ ತುಂಬುರರು
ಸುರರುಗಳು ಅಪ್ಸರೆಯರೆಲ್ಲರೂ ಸೇವಿಪರು ॥೨೫೧॥

ಮಂಗಳನು ಬುಧ ಗುರುವು ಶುಕ್ರ ಶನಿ ಗ್ರಹಗಳು
ಆ ರಾಹು ಕೇತುಗಳು ದ್ವಾದಶಾದಿತ್ಯರು
ವೇದಗಳು ಶಾಸ್ತ್ರಗಳು ಯಜ್ಞಗಳು ಹವಿಸ್ಸುಗಳು
ದೇವತೆಗಳೆಲ್ಲರೂ ಬ್ರಹ್ಮನನು ಸೇವಿಪರು ॥೨೫೨॥

ಸಂಸ್ಕೃತವು ಪ್ರಾಕೃತವು ಏಳು ವಿಧವಾಣಿಗಳು
ಧೃತಿ ಶೃತಿಯು ಬುದ್ಧಿ ಯಶ ಕ್ಷಮೆ ಸಾಮ ಸ್ತುತಿಗೀತ
ಕಾರಿಕೆಯು ಭಾಷೆಗಳು ಸಾಹಿತ್ಯ ಕಾವ್ಯಗಳು
ದೇಹವನು ಧರಿಸುತಲಿ ಬ್ರಹ್ಮನನು ಸೇವಿಪರು ॥೨೫೩॥

ಕ್ಷಣ ಲವವು ದಿವರಾತ್ರಿ ಮಾಸಗಳು ವರ್ಷಗಳು
ಋತು ಆರು ಅರವತ್ತು ಸಂವತ್ಸರಾದಿಗಳು
ಆ ಕಾಲ ಚಕ್ರವದು ವರ ಧರ್ಮ ಚಕ್ರವದು
ಬ್ರಹ್ಮನನು ಸತತವೂ ಸೇವಿಸುತಲಿರುತಿಹವು ॥೨೫೪॥

ದಿತಿ ಅದಿತಿ ವರ ಸುರಸೆ ವಿನತೆಯಳು ಭೂದೇವಿ
ಆ ಸುರಮೆ ಗೌತಮಿಯು ರುದ್ರಾಣಿ ಶ್ರೀ ಲಕ್ಷ್ಮಿ
ಅರುಂಧತಿಯು ಶಚಿ ಇರೆಯು ಜಾಹ್ನವಿಯು ಮೊದಲಾದ
ದೇವಿಯರು ಅಗಣಿತರು ಬ್ರಹ್ಮನನು ಸೇವಿಪರು ॥೨೫೫॥

ಅಣಿಮಾದಿ ಅಷ್ಟವಸು ರುದ್ರರು ಮರುತ್ತರು
ಅಶ್ವಿನೀ ದೇವತೆಯು ವರ ವಿಶ್ವದೇವತೆಯು
ಆ ಸಪ್ತ ಪಿತೃಗಳು ಗಾರ್ಹಪತ್ಯಾದಿಗಳು
ಸೃಷ್ಟಿಯನು ಸೃಷ್ಟಿಸಿದ ಬ್ರಹ್ಮನನು ಸೇವಿಪರು ॥೨೫೬॥

ರಕ್ಕಸರು ಭೂತಗಳು ನಾಗಗಳು ಗರುಡಗಳು
ಪಕ್ಷಿಗಳು ಪ್ರಾಣಿಗಳು ನದಿ ಪರ್ವತಾದಿಗಳು
ಸಕಲ ಸಚರಾಚರದ ವಸ್ತುಗಳು ಪ್ರಾಣಿಗಳು
ಸಶರೀರ ರೂಪದಲಿ ಬ್ರಹ್ಮನನು ಪೂಜಿಪರು ॥೨೫೭॥

ದೇವೇಂದ್ರ ಯಮವರುಣ ಕುಬೇರ ನಾರಾಯಣ
ಉಮೆಸಹಿತ ಶಂಕರನು ವಾಲಖಿಲ್ಯಾದಿಗಳು
ಯೋನಿಜ ಅಯೋನಿಜರು ಸುರಲೋಕ ಸುರರೆಲ್ಲ
ಐತಂದು ಬ್ರಹ್ಮನನು ಸೇವಿಸುತಲಿರುತಿಹರು ॥೨೫೮॥

ಬಂದಿರುವ ಗಂಧರ್ವ ಅಪ್ಸರೆಯ ವೃಂದವನು
ಯಕ್ಷರನು ದಿವಿಜರನು ಮುನಿಗಳನು ದೈತ್ಯರನು
ಕರುಣಾಳು ಪರಬ್ರಹ್ಮ ಸವಿನುಡಿಯ ನುಡಿಯುತಲಿ
ಇಷ್ಟಾರ್ಥ ಕಾಮನೆಗಳೆಲ್ಲವನು ಕರುಣಿಪನು ॥೨೫೯॥

ಪರಬ್ರಹ್ಮ ಸಾನ್ನಿಧ್ಯ ಹೊಂದಿರುವ ಸಕಲರೂ
ದಿವ್ಯದಾ ಆನಂದ ಸಾಗರದಿ ಮುಳುಗುವರು
ಸಕಲಸುಖ ಪೀಯುತಲಿ ಕೋಟಿ ರವಿ ತೇಜದಲಿ
ದಿವ್ಯ ಪ್ರಕಾಶದಲಿ ಬ್ರಹ್ಮಸಭೆ ಬೆಳಗುವುದು ॥೨೬೦॥

ಧರ್ಮಜನೆ ಜಗದೊಳಗೆ ನಿನ್ನ ಈ ಸಭೆಗಿಂತ
ಮಿಗಿಲಾದ ಸುಂದರದ ಬೇರೊಂದು ಸಭೆಯಿಲ್ಲ
ಬ್ರಹ್ಮಸಭೆಗಿಂತ ಸೊಗಸಾದ ಸಭೆಯೊಂದು
ಹದಿನಾಲ್ಕು ಲೋಕದೊಳು ಬೇರೊಂದು ನಾಕಾಣೆ ॥೨೬೧॥

ಈ ಪರಿಯ ನಾರದರು ನುಡಿಯುತಿರೆ ಧರ್ಮಜನು
ಮನದೊಳಗೆ ಯೋಚಿಸುತ ಸುರಮುನಿಗೆ ನುಡಿದಿಹನು
ಮಹಋಷಿಯೆ ಇಂದ್ರಾದಿ ಸುರರುಗಳ ಸಭೆಗಳಾ
ವಿಷಯವನು ಸೊಗಸಾಗಿ ವರ್ಣನೆಯ ಗೈದಿಹಿರಿ ॥೨೬೨॥

ವರಯಮನ ಸಭೆಯಲ್ಲಿ ಸಾಮಾನ್ಯ ರೀತಿಯಲಿ
ಅತಿಶ್ರೇಷ್ಠ ನೃಪರುಗಳು ಇಹರೆಂದು ತಿಳಿಸಿದಿರಿ
ಇಂದ್ರನಾ ಸಭೆಯಯಲ್ಲಿ ಹರಿಶ್ಚಂದ್ರನೋರ್ವನೆ
ರಾಜರ್ಷಿ ಇಹನೆಂದು ತಿಳಿಸಿದಿರಿ ಕೌತುಕವು ॥೨೬೩॥

ಇಂದ್ರನಾ ಸಭೆಯೊಳಗೆ ಹರಿಶ್ಚಂದ್ರನೋರ್ವನೇ
ರಾಜರ್ಷಿ ಕೂಡ್ರಲಿಕೆ ಆವ ತಪ ಗೈದಿಹನು
ಸುರಪತಿಯ ಸರಿಸಮನು ಎನಿಸುವಾ ಶಕ್ತಿಯನು
ಆವನೆಂತು ಪಡೆದಿಹನು ಎಂಬುದನು ತಿಳಿಸುವುದು ॥೨೬೪॥

ಯಮಸಭೆಯೊಳಿರುತಿರುವ ಎನ್ನ ಪಿತ ಪಾಂಡವನು
ಆವಾಗ ಕಂಡಿಹಿರಿ ಅವನೇನ ನುಡಿದಿಹನು
ಎಮ್ಮಯಾ ವಿಷಯವನು ನಿಮ್ಮಲ್ಲಿ ಹೇಳಿಹನೆ
ಎಲ್ಲವನು ವಿಶದದಲಿ ಪೇಳುವುದು ಎಂದಿಹನು ॥೨೬೫॥

ಮೊದಲಿಂಗೆ ಕಲಿ ಹರಿಶ್ಚಂದ್ರನಾ ನೃಪವರನು
ಇಂದ್ರನಾ ಸಭೆಯಲ್ಲಿ ಕೂಡ್ರುವಾ ಸಾಮರ್ಥ್ಯ
ಪುಣ್ಯವನು ಪಡೆದಿರುವ ಬಗೆಯನ್ನು ವಿವರಿಸುವೆ
ಏಕಾಗ್ರ ಚಿತ್ತದಲಿ ಕೇಳುವುದು ಎಂದಿಹನು ॥೨೬೬॥

ಜಗದೊಳಗೆ ವಿಕ್ರಮನು ಅತಿಶೂರನೆನಿಸಿರುವ
ಹರಿಶ್ಚಂದ್ರ ನೃಪವರನು ಜಂಬೂಕುಶಾದಿಗಳ
ದ್ವೀಪಗಳ ಏಳನ್ನು ಶೌರ್ಯದಲಿ ಜಯಿಸುತಲಿ
ದೇಶದಾ ರಾಜ್ಯಗಳನೆಲ್ಲವನು ಗೆಲ್ಲುತಲಿ ॥೨೬೭॥

ಅತಿಶ್ರೇಷ್ಠವೆನಿಸಿರುವ ರಾಜಸೂಯಾಧ್ವರವ
ಅತ್ಯಂತ ವೈಭವದಿ ಅದ್ಭುತದಿ ಗೈದಿಹನು
ಶರಣಾದ ಅಗಣಿತದ ನೃಪರುಗಳು ಐತಂದು
ಧನಕನಕ ರತ್ನಗಳ ಕಾಣಿಕೆಗಳಿತ್ತಿಹರು ॥೨೬೮॥

ಬಂದಿರುವ ಅರಸುಗಳು ಯಜ್ಞದಾ ಕಾರ್ಯದಲಿ
ಭೋಜನದ ದಾನಗಳ ಸೇವೆಯನು ಗೈದಿಹರು
ಸಿಂಹಾಸನಾರೂಢನಾಗುತಲಿ ಹರಿಶ್ಚಂದ್ರ ನೃಪವರನು
ಚಕ್ರಾಧಿಪತಿಯಾಗಿ ಶೋಭಿಸುತಲಿರುತಿಹನು ॥೨೬೯॥

ವರಗಂಗೆ ಯಮುನೆಯರ ಆ ಸಿಂಧು ಸರಸತಿಯ
ನರ್ಮದೆಯ ತಾಪಿಯರ ಕಾವೇರಿ ತುಂಗೆಯರ
ಪಾವನದ ಜಲದಿಂದ ಧನಕನಕ ಸಹಿತದಲಿ
ಹರಿಶ್ಚಂದ್ರ ಭೂಪತಿಗೆ ಅಭಿಷೇಕ ಗೈದಿಹರು ॥೨೭೦॥

ಭೂಸುರರರ್ಗೆ ಋತ್ವಿಜರ್ಗೆ ವರಹರಿಶ್ಚಂದ್ರ ನೃಪ
ಪಂಚಪಕ್ವಾನ್ನಗಳ ಭೋಜನವ ನೀಯುತಲಿ
ಸಂತುಷ್ಟಗೊಳಿಸುತಲಿ ಹೇರಳದ ಧನಕನಕ
ರತ್ನಗಳ ವಜ್ರಗಳ ದಾನನಗಳನಿತ್ತಿಹನು ॥೨೭೨॥

ದ್ವಿಜರೆಲ್ಲ ಸಂತಸವಗೊಳ್ಳುತಲಿ ಹರ್ಷದಲಿ
ಅಪ್ರತಿಮ ವೀರನೀ ಹರಿಶ್ಚಂದ್ರ ಭೂಪತಿಯು
ಜಗವೆಲ್ಲ ಜಯಿಸುತಲಿ ರಾಜಸೂಯಾಧ್ವರವ
ಗೈಯ್ಯುತಲಿ ಮೆರೆಯುತಿಹ ಚಂದ್ರಾರ್ಕ ಪರ್ಯಂತ ॥೨೭೩॥

ಈ ಪರಿಯು ಸುಂದರದ ಅದ್ಭುತದ ಯಜ್ಞವದು
ಹಿಂದಕ್ಕೆ ಆಗಿಲ್ಲ ಮುಂದಕ್ಕೆ ಆಗದಿದೆ
ಎನ್ನುತಲಿ ನೃಪರುಗಳು ದ್ವಿಜರುಗಳು ಹರಸುತಲಿ
ಸಂತಸದಿ ತಮ್ಮಯಾ ಸ್ಥಳಗಳಿಗೆ ತೆರಳಿದರು ॥೨೭೪॥

ಭರತಕುಲ ಸಂಭೂತ ಭೂಪತಿಯೆ ಶ್ರೇಷ್ಠನೆ
ರಾಜಸೂಯಾಧ್ವರವ ಗೈದಿರುವ ನೃಪರುಗಳು.
ಈ ಲೋಕದೊಳಗೆಲ್ಲ ಚಕ್ರವರ್ತಿಯೆಂದೆನಿಸಿ
ಸ್ವರ್ಗದಲಿ ಇಂದ್ರನಾ ಜೊತೆಯಲ್ಲಿ ಶೋಭಿಪನು ॥೨೭೫॥

ಯುದ್ಧದಲಿ ಅಂಜುತಲಿ ಹಿಂದಕ್ಕೆ ಓಡದಲೆ
ಧೈರ್ಯದಲಿ ಮುನ್ನುಗ್ಗಿ ಕಾದುತಲಿ ಮಡಿಯುವಾ
ವೀರಂಗೆ ವರವೀರಸ್ವರ್ಗವದು ದೊರೆಯುತಲಿ
ಇಂದ್ರನಾ ಜೊತೆಯಲ್ಲಿ ಸುಖದೊಳಗೆ ರಮಿಸುವನು ॥೨೭೬॥

ಕಠಿಣ ತಪಗೈಯ್ಯುತಲಿ ದೇಹವನು ತ್ಯಜಿಸುತಿಹ
ಮುನಿವರರು ಹೊಳೆಯುತಿಹ ದಿವ್ಯದಾ ರೂಪವನು
ಧರಿಸುತಲಿ ಸುರಪತಿಯ ಸಭೆಗೈದು ಇಂದ್ರನಾ
ಜೊತೆಯಲ್ಲಿ ಕೂಡುತಲಿ ಶೋಭಿಸುತಲಿರುತಿಹರು ॥೨೭೭॥

**ರಾಜಸೂಯಾಧ್ವರವ ಗೈಯ್ಯುತಲಿ ಪಾಂಡವರು ।**
**ಸ್ವರ್ಗಕ್ಕೆ ಕಳುಹುವುದು ಎನ್ನುತಲಿ ಅರುಹಿದನು ॥**

ನಿನ ಪಿತನು ಪಾಂಡುನೃಪ ಸುರಪತಿಯ ಸಭೆಯಲ್ಲಿ
ಇಂದ್ರನಾ ಜೊತೆಯಲ್ಲಿ ಹರಿಶ್ಚಂದ್ರ ಭೂಪತಿಯು
ಶೋಭಿಸುತಲಿದ್ದುದದು ಕಾಣುತಲಿ ಚಕಿತದಲಿ
ನಿನಗರುಹಲೋಸುಗವೆ ನನಗಿಂತು ನುಡಿದಿಹನು ॥೨೭೮॥

ಭೂಲೋಕ ಸಂಚಾರಗೈಯ್ಯುತಿಹ ಸಮಯದಲಿ
ಎನ್ನ ಸುತ ಧರ್ಮಜಗೆ ರಾಜಸೂಯಾಧ್ವರವ
ಗೈಯ್ಯಲಿಕೆ ತಿಳುಹುವುದು ಸುತಗೈವ ಯಜ್ಞದಾ
ಪುಣ್ಯವದು ಲಭಿಸುತಲಿ ಸ್ವರ್ಗಕ್ಕೆ ತೆರಳುತಲಿ ॥೨೭೯॥

ಸುರಪತಿಯ ಜೊತೆಯಲ್ಲಿ ವೈಭವದಿ ಸೌಖ್ಯದಲಿ
ಅಗಣಿತದ ವರ್ಷಗಳ ಕಾಲದಲಿ ರಮಿಸುವೆನು
ಎನ್ನುತಲಿ ನುಡಿದಿಹನು ನಿನಪಿತನ ಇಚ್ಛೆಯನು
ಪೂರ್ಣವನು ಮಾಡುವದು ಧರ್ಮಜನೆ ಎಂದಿಹರು ॥೨೮೦॥

ನೀ ರಾಜಸೂಯವನು ಗೈದೊಡೆಯು ಅತುಳದಲಿ
ಪುಣ್ಯವನು ಶಕ್ತಿಯನು ಪಡೆಯುತಲಿ ನಿನ್ನಯಾ
ಪೂರ್ವಜರ ಪಿತೃಪಿತಾಮಹಾದಿಗಳ ಸಮೇತದಲಿ
ನೀ ಸಹಿತ ಸ್ವರ್ಗವನು ಪಡೆಯುವದು ಖಚಿತವಿದು ॥೨೮೧॥

ಈ ಯಜ್ಞ ಗೈಯ್ಯುವುದು ಅತಿಕಷ್ಟವಿರುತಿಹುದು
ನೃಪರುಗಳು ದ್ವೇಷದಲಿ ಸಂಗ್ರಾಮ ಸಾರುವರು
ಶೌರ್ಯದಲಿ ಸಾಹಸದಿ ಯುದ್ಧವನು ಗೈಯ್ಯುತಲಿ
ಸಕಲರಾ ರಾಜರನು ಜಯಿಸುವದು ಕಷ್ಟವಿದೆ ॥೨೮೨॥

ಅಪರಿಮಿತ ಭುಜಬಲದ ಸತ್ವಯುತ ಕಲಿಭೀಮ
ಜಗದೇಕ ವಿಕ್ರಮನು ಮೂಲೋಕ ಮಹವೀರ
ಅರ್ಜುನನು ಬಹುವೀರ ವರನಕುಲ ಸಹದೇವ
ನಿನ್ನಯಾ ಸೋದರರು ಸಕಲರನು ಜಯಿಸುವರು ॥೨೮೩॥

ಮೇಲಾಗಿ ಯಾದವನ ಶ್ರೀಕೃಷ್ಣರಾಯನಾ
ಕರುಣೆಯು ಅನುಗ್ರಹವು ನಿಮ್ಮಯಾ ಮೇಲಿಹುದು
ಈ ರಾಜಸೂಯವನು ಗೈಯ್ಯುತಲಿ ನಿನ್ನಯಾ
ಪಿತನನ್ನು ಸ್ವರ್ಗಕ್ಕೆ ಕಳುಹುವುದು ಎನ್ನುತಲಿ ॥೨೮೪॥

ಹೋಗಿಬಹ ನಾನೀಗ ಅಪ್ಪಣೆಯ ನೀಯುವುದು
ಕೃಷ್ಣನಾ ದರ್ಶನಕೆ ದ್ವಾರಕೆಗೆ ತೆರಳುವೆನು
ಎನ್ನುತಲಿ ನಾರದರು ಧರ್ಮಜನ ಹರಸುತಲಿ
ನಾರಾಯಣೆನ್ನುತಲಿ ನಡೆದಿಹನು ನಭದಲ್ಲಿ ॥೨೮೫॥

**ಅಧ್ವರದ ವಿಷಯವನು ಸೋದರರಿಗರುಹುತಲಿ ।**
**ಧರ್ಮಜನು ಮುರಹರಗೆ ದೂತನನು ಕಳುಹಿದನು ॥**

ಕುರುಕುಲ ಪ್ರದೀಪನೆ ಜನಮೇಜಯ ಮಹಿಪನೆ
ನಾರದರು ನುಡಿದಿರುವ ನುಡಿಗಳನು ನೆನೆಯುತಲಿ
ಶೀಘ್ರದಲಿ ಭೀಮಾರ್ಜುನಾದಿಗಳ ಸೋದರರ
ಮಂತ್ರಿಗಳ ಕರೆಸುತಲಿ ಸಭೆಯನು ಕರೆದಿಹನು ॥೨೮೬॥

ಸುರಮುನಿಯು ಅರುಹಿರುವ ರಾಜಸೂಯಾಧ್ವರವ
ಗೈಯ್ಯುವಾ ವಿಷಯವನು ವಿಸ್ತರದಿ ಪೇಳಿದನು
ಈ ಕ್ರತುವ ಗೈದೊಡೆಯು ಎಮ್ಮಪಿತ ಪಾಂಡುನೃಪ
ಯಮಲೋಕ ತೊರೆಯುತಲಿ ಸ್ವರ್ಗವನು ಪಡೆಯುವನು ॥೨೮೭॥

ಭೂಲೋಕ ಕಂಪಿಸುವ ಭುಜಬಲದ ವಾಯುಜನು
ಮೂಲೋಕ ವೀರನಿಹ ಫಲುಗುಣನು ಇರುತಿರಲು
ಅಗಣಿತದ ಧನಕನಕ ಸಂಪದವು ಇರುತಿರಲು
ಈಯಾಗ ಮಾಡುವದು ಗಹನವೇ ನಮಗೆಂದ ॥೨೮೮॥

ಕುರುಕುಲದ ನುತಚರಿತ ಪಾವನನು ಪಾಂಡುನೃಪ
ಯಮಲೋಕದೊಳಗಿಹಂದು ಎಮ್ಮಯಾ ಶೌರ್ಯಕ್ಕೆ
ಐಶ್ವರ್ಯ ವೈಭವಕೆ ಕುಂದೆನಿಸಿ ಶೋಭಿಸದು
ಮೂಲೋಕ ಜಯಿಸುವಾ ಶಕ್ತಿಯಿದು ನುಡಲೆಂದ ॥೨೮೯॥

ರಾಜಸೂಯಾಧ್ವರವ ವೈಭವದಿ ಗೈಯ್ಯುತಲಿ
ಕಲಿಹರಿಶ್ಚಂದ್ರ ರಾಯನಾ ಪರಿಯಲ್ಲಿ
ಪಾಂಡುನೃಪ ಸ್ವರ್ಗದಲಿ ಇಂದ್ರನಾ ಜೊತೆಯಲ್ಲಿ
ಸುಖಿಸುವಾ ತೆರದಲ್ಲಿ ಮಾಡುವುದು ಎಂದಿಹನು ॥೨೯೦॥

ನಿಮ್ಮಗಳ ಮತವನ್ನು ಅರಹುವುದು ಎನ್ನುತಿರೆ
ಸೋದರರು ಮಂತ್ರಿಗಳು ಸಕಲಪ್ರಜೆ ಸಂತಸದಿ
ಧರ್ಮಜನೆ ಜಗದೊಳಗೆ ನಿನ್ನಸಮ ಸದ್ಗುಣಿಯು
ನುತಚರಿತ ಪಾವನನು ದೊರೆಯಿಲ್ಲ ಎಂದಿಹರು ॥೨೯೧॥

ಜಗದಖಿಲ ರಾಜರನು ಶೌರ್ಯದಲಿ ಜಯಿಸುತಲಿ
ರಾಜಸೂಯಧ್ವರವ ಗೈಯ್ಯುತಲಿ ವೈಭವದಿ
ವರಚಕ್ರವರ್ತಿಯೆಂದೆನಿಸುತಲಿ ಲೋಕದಲಿ
ಮೆರೆಯುವುದು ನಿನಗದುವೆ ಶೋಭಿಪುದು ಎಂದಿಹರು ॥೨೯೨॥

ದೇಶದಾ ಪ್ರಜೆಗಳನು ಮಕ್ಕಳೋಪಾದಿಯಲಿ
ಕರುಣೆಯಲಿ ರಕ್ಷಿಸುವ ನೀ ಧನ್ಯ ಧನ್ಯನಿಹೆ
ನಿನ್ನನ್ನು ದ್ವೇಷಿಸುವ ಶತ್ರುಗಳು ಆರಿಲ್ಲ
ಅಜಾತ ಶತ್ರುವೆಂದೆನಿಸಿ ಮೆರೆಯುತಿಹೆ ಜಗದೊಳಗೆ ॥೨೯೩॥

ನೀ ಚಕ್ರವರ್ತಿಯೆಂದೆನಿಸುತಲಿ ಕೀರ್ತಿಯಲಿ
ಭೂತಳದಿ ಹೊಳೆಯಲಿಕೆ ಕಾಲವಿದು ಬಂದಿಹುದು
ರಾಜಸೂಯಾಧ್ವರವ ನೀಬಿಡದೆ ಗೈಯ್ಯುವುದು
ಎಮ್ಮಯಾ ಅಭಿಮತವು ಎನ್ನುತಲಿ ನುಡಿದಿಹರು ॥೨೯೪॥

ನೀ ಯಾಗಗೈಯ್ಯಲಿಕೆ ಶಕ್ತನಿಹೆ ಸಮರ್ಥನಿಹೆ
ನಾವೆಲ್ಲ ಸರ್ವವಿಧ ನೆರವನ್ನು ಈಯುವೆವು
ನಿಶ್ಚಿಂತನಾಗುತಲಿ ಯಾಗವನು ಗೈಯ್ಯುವುದು
ಎನ್ನುತಲಿ ಮಂತ್ರಿಗಳು ಸಕಲ ಪ್ರಜೆ ನುಡಿದಿಹರು ॥೨೯೫॥

ಬಳಿಕಲಾ ಧರ್ಮಜನು ಮನದೊಳಗೆ ಯೋಚಿಸುತ
ಕೆಲರುಗಳು ಎನ್ನಲ್ಲಿ ಪ್ರೀತಿಯಲಿ ನುಡಿಯುವರು
ಕೆಲರುಗಳು ಸ್ವಾರ್ಥದಲಿ ಲಾಭದಲಿ ನುಡಿಯುವರು
ಯಾಗದಾ ಕಷ್ಟಗಳ ಅರಿಯದಲೆ ಪೇಳುವರು ॥೨೯೬॥

ಈ ಯಾಗ ಗೈಯ್ಯಲಿಕೆ ನಾ ಶಕ್ತನಿರುತಿಹೆನೆ
ಜಗದಖಿಲ ನೃಪರುಗಳ ಜಯಿಸುವದು ಸಾಧ್ಯವೇ
ಹೇರಳದ ಧನಕನಕ ಸಂಗ್ರಹವು ಶಕ್ಯವೇ
ಎನ್ನುತಲಿ ಧರ್ಮಸುತ ಚಿಂತೆಯೊಳು ಮುಳುಗಿದನು ॥೨೯೭॥

ಅಖಿಲ ಸಚರಾಚರದ ಆಗುಗಳ ಹೋಗುಗಳ
ಅರಿತಿರುವ ಸರ್ವವನು ಸಾಧಿಸಲು ಶಕ್ತನಿಹ
ನಂಬಿರುವ ಭಕುತರನು ಕೈಬಿಡದೆ ಸಲಹುತಿಹ
ಶ್ರೀಕೃಷ್ಣ ಮಾರ್ಗವನು ತೋರಲು ಸಮರ್ಥನಿಹ ॥೨೯೮॥

ಸಕಲಮೀ ಶಂಕೆಗಳ ಪರಿಹಾರ ಗೈಯ್ಯಲಿಕೆ
ಮುರಹರನ ಕರೆಸುತಲಿ ವಿಷಯಗಳ ಮಥಿಸುತಲಿ
ನಿಶ್ಚಯವ ಮಾಡುವುದು ಎನ್ನುತಲಿ ಧರ್ಮಜನು
ಓಲೆಯನು ಬರೆಯುತಲಿ ದೂತನನು ಅಟ್ಟಿದನು ॥೨೯೯॥

ಶೀಘ್ರದಲಿ ಪಯಣದಲಿ ಸಾಗುತಲಿ ಆ ದೂತ
ದ್ವಾರಕೆಯ ತಲುಪುತಲಿ ಶ್ರೀಕೃಷ್ಣರಾಯನಿಗೆ
ನಮಿಸುತಲಿ ಸಂದೇಶವೀಯುತಿರೆ ಯಾದವನು
ಓದುತಲಿ ಮನದೊಳಗೆ ಹರ್ಷದಲಿ ನಲಿದಿಹನು ॥೩೦೦॥

ಈ ಯಾಗ ನೆಪದಲ್ಲಿ ಎನ್ನಯಾ ವೈರಿಗಳ
ಶಿಶುಪಾಲ ಜರೆಸಂಧ ಮೊದಲಾದ ದುಷ್ಟರನು
ಸಂಹಾರ ಮಾಡಿಸುವೆ ಎನ್ನುತಲಿ ಸಂತಸದಿ
ಪಾಂಡವರ ಪ್ರಾಣನಿಹ ಶ್ರೀಕೃಷ್ಣ ಯಾದವನು ॥೩೦೧॥

ತ್ವರಿತದಲಿ ರಥವೇರಿ ಕೋಟೆಗಳ ನದಿಗಳನು
ದಾಂಟುತಲಿ ಆ ಇಂದ್ರಪ್ರಸ್ಥಕ್ಕೆ ಐತಂದು
ಅರಮನೆಯ ದ್ವಾರದಲಿ ಬರುತಿರಲು ಧರ್ಮಜನು
ಚರಣಕ್ಕೆ ಎರಗುತಲಿ ಸತ್ಕಾರ ಗೈದಿಹನು ॥೩೦೨॥

ಧರ್ಮಜನ ವಾಯುಜನ ಫಲುಗುಣನ ಮಾದ್ರಿಜನ
ಹರುಷದಲಿ ತೆಗೆದಪ್ಪಿ ಕುಂತಿಯಾ ಚರಣಕ್ಕೆ
ಎರಗುತಲಿ ಜೀವಸಖ ಅರ್ಜುನನ ಸಹಿತದಲಿ
ವಿಶ್ರಾಂತಿ ಧಾಮಕ್ಕೆ ಶ್ರೀಕೃಷ್ಣ ತೆರಳಿದನು ॥೩೦೩॥

ದಿನವೆರಡು ಕಳೆಯುತಿರೆ ದಾರಿದ್ರ್ಯಮವಳಿಯುತಿರೆ
ಧರ್ಮಜನು ಗುಪ್ತದಾ ಮಂದಿರಕೆ ಮಾಧವನ
ಕರೆದೊಯ್ದು ರತ್ನದಾ ಪೀಠದಲಿ ಕುಳ್ಳಿರಿಸಿ
ಯಾಗದಾ ವಿಷಯವನು ವಿಸ್ತರದಿ ವಿವರಿಸಿದ ॥೩೦೪॥

ರಾಜಸೂಯಾಧ್ವರವ ಗೈದೊಡೆಯು ಸ್ವರ್ಗವದು
ದೊರೆಯುವುದು ಎನ್ನುತಲಿ ನಾರದರು ಪೇಳಿದರು
ಪಾಂಡುವಿಗೆ ಸ್ವರ್ಗವದು ದೊರೆವಂತೆ ಮಾಡಲಿಕೆ
ಈ ಯಾಗ ಗೈಯಲಿಕೆ ಇಚ್ಛೆಯನು ಮಾಡಿಹೆನು ॥೩೦೫॥

ಈ ಯಜ್ಞ ಗೈಯ್ಯಲಿಕೆ ನಾಶಕ್ತನಾಗಿಹೆನೆ
ದೇಶದಾ ರಾಜರನು ಸಕಲರನು ಜಯಿಸುವಾ
ಶಕ್ತಿಯದು ಎನಗಿಹುದೆ ಅರ್ಹತೆಯು ಎನಗುಂಟೆ
ಎಂಬುವದ ಪೇಳುವುದು ಸರ್ವಜ್ಞ ನೀನಿರುವೆ ॥೩೦೬॥

ಮಂತ್ರಿಗಳು ಬಂಧುಗಳು ಸೇವಕರು ಪ್ರಜೆಗಳು
ಸರ್ವರೂ ಯಾಗವನು ಮಾಡಲಿಕೆ ಹೇಳಿಹರು
ಜಗದೊಳಿಹ ಕಾರ್ಯಗಳನೆಲ್ಲವನು ನಡೆಸುತಿಹ
ನೀನೋರ್ವ ಪೇಳಲಿಕೆ ಸಮರ್ಥನಿಹೆ ಖಂಡಿತದಿ ॥೩೦೭॥

ನಾನೀಗ ಯಾಗವನು ಗೈಯ್ಯದೆಯೆ ಇರ್ದೊಡೆಯು
ಜಗವೆಲ್ಲ ಎನ್ನನ್ನು ನಿರ್ಬಲನು ಹೇಡಿಯಿಹ
ಎನ್ನುತಲಿ ಅಪಹಾಸ್ಯಗೈಯ್ಯುವರು ನಿಂದಿಪರು
ನಾನೇನ ಮಾಡುವುದು ಪೇಳುವುದು ಎಂದಿಹನು ॥೩೦೮॥

ಪಾಂಡುವಿಗೆ ಸ್ವರ್ಗವದು ಲಭಿಸುವಾ ಪರಿಯಲ್ಲಿ
ಘನತರದ ಪುಣ್ಯಮಿಹ ರಾಜಸೂಯಾಧ್ವರವ
ನಾನೆಂತು ಗೈಯ್ಯುವುದು ಮಾರ್ಗವನು ತೋರುವುದು
ನಿನ್ನನ್ನೇ ನಂಬಿಹೆನು ಎನ್ನುತಲಿ ನುಡಿದಿಹನು ॥೩೦೯॥

ಧರ್ಮಜನ ನುಡಿಗಳನು ಕೇಳುತಲಿ ಮುರಹರನು
ಸುರಮುನಿಯು ಯಾಗವನು ಮಾಡಲಿಕೆ ತಿಳಿಸುತಲಿ
ಕಷ್ಟದಾ ಬಲೆಯಲ್ಲಿ ನಿನ್ನನ್ನು ಸಿಲುಕಿಸಿದ
ಪಾರಾಗಲೋಸುಗವೇ ದಾರಿಯನು ನಾ ಕಾಣೆ ॥೩೧೦॥
ಜರೆಸಂಧ ವೀರನನು ಗೆಲ್ಲುತಲಿ ಅಧ್ವರವ
ಗೈಯ್ಯುವುದು ಅತಿಕಷ್ಟವೆಂದಿಹನು ಮುರಹರನು

ಧರ್ಮಜನೆ ಈ ರಾಜಸೂಯವನು ಗೈಯಲಿಕೆ
ಸರ್ವಗುಣ ನಿನ್ನಲ್ಲಿ ಇರುವುದನು ನಾ ಬಲ್ಲೆ
ಇಂದಿನೀ ಕಾಲದಲಿ ಸುತ್ತಲೂ ಇರುತಿರುವ
ಕ್ಷತ್ರಿಯರ ನೃಪರನ್ನು ಜಯಿಸುವದು ಕಷ್ಟವಿದೆ ॥೩೧೧॥

ಅವರೊಳಗೆ ಅತಿಬಲನು ಜರೆಸಂಧ ಮಾಗಧನು
ಅಗಣಿತದ ದೇಶಗಳ ರಾಜರನು ಜಯಿಸುತಲಿ
ಸೆರೆಯೊಳಗೆ ಇರಿಸುತಲಿ ಗಿರಿವ್ರಜದ ಪುರದೊಳಗೆ
ಮೆರೆಯುತಿಹ ಗರ್ವದಲಿ ಸಕಲರನು ಹಿಂಸಿಸುತ ॥೩೧೨॥

ದ್ವೇಷದಲಿ ಮಾಗಧನು ನಮ್ಮೊಡನೆ ಘನಘೋರ
ಯುದ್ಧವನು ಗೈಯ್ಯುತಲಿ ಮಥುರೆಯನು ಗೆಲ್ಲುತಿರೆ
ಸಾಗರದ ಮಧ್ಯದಲಿ ದ್ವಾರಕೆಯ ಕಟ್ಟುತಲಿ
ನಾವೆಲ್ಲ ಯಾದವರು ವಾಸಿಸುತಲಿರುತಿಹೆವು ॥೩೧೩॥

ಮಾಯೆಯಾ ಯುದ್ಧದಲಿ ಪರಿಣತನು ಶಿಶುಪಾಲ
ಮಾಗಧನ ಸೈನ್ಯಕ್ಕೆ ಅಧಿಪತಿಯು ಆಗಿಹದು
ಅದ್ಭುತ ಪರಾಕ್ರಮಿಯು ಎನಿಸಿರುವ ಕರುಷನೃಪ
ದಂತವಕ್ತ್ರಾದಿಗಳು ಆಶ್ರಯವ ಪಡೆದಿಹರು ॥೩೧೪॥

ನಿನ್ನ ಪಿತ ಪಾಂಡುವಿನ ಜೀವದಾ ಸಖನಾದ
ಜಗವೀರ ವಿಕ್ರಮನು ಭಗದತ್ತ ಮಹಶೂರ
ಮಾಗಧಗೆ ಸೋಲುತಲಿ ಶರಣಾಗಿ ಇರುತಿಹನು
ನಿನ್ನನ್ನು ಮನದೊಳಗೆ ಮಗನಂತೆ ಪ್ರೀತಿಪನು ॥೩೧೫॥

ಪಶ್ಚಿಮದ ದಕ್ಷಿಣದ ರಾಷ್ಟ್ರಗಳ ಜಯಿಸಿರುವ
ವರಕುಂತಿ ಭೋಜಕುಲ ತೇಜ ಪ್ರತಾಪನಿಹ
ನಿನ್ನಯಾ ಮಾವನಿಹ ಪುರುಜಿತನು ನೃಪವರನು
ನಿನ್ನನ್ನು ಅಭಿಮಾನ ಪ್ರೀತಿಯಲಿ ನೋಡುವನು ॥೩೧೬॥

ಎನ್ನನ್ನು ಹೋಲುವಾ ಪ್ರತಿಕೃತಿಯ ಪೌಂಡ್ರಕನು
ಎನ್ನಪರಿ ಶಂಖವನು ಚಕ್ರವನು ಧರಿಸುತಲಿ
ಜಗದೊಳಗೆ ತಾನೆಯೇ ಪುರುಷೋತ್ತಮನ್ನುತಲಿ
ಗರ್ವದಲಿ ಮೆರೆಯುತಲಿ ಮಾಗಧನ ಸೇರಿಹನು ॥೩೧೭॥

ಭೋಜರುಗಳಧಿಪತಿಯು ಭೀಷ್ಮಕನು ಭೂಪತಿಯು
ಇಂದ್ರನಾ ಮಿತ್ರನಿಹ ಚಾಣಾಕ್ಷತನದಿಂದ
ಪಾಂಡ್ಯರನು ಕ್ರಥರನ್ನು ಕೈಶಿಕರ ಜಯಿಸಿಹನು
ಅಖಿಲಜಗ ನಾಲ್ಕನೆಯ ಭಾಗೊಂದನಾಳುವನು ॥೩೧೮॥

ಭೀಷ್ಮಕನು ಹೆಣ್ಣನ್ನು ಕೊಟ್ಟಿರುವ ಮಾವನಿಹ
ಸೋದರನು ಆಕೃತಿಯು ಭಾರ್ಗವಗೆ ಸಮ ವೀರ
ಈರ್ವರಿಗೆ ಹಿತಕರದ ಕಾರ್ಯಗಳ ಮಾಡಿಹೆವು
ಆದರೂ ದ್ವೇಷದಲಿ ಮಾಗಧನ ಕೂಡಿಹರು ॥೩೧೯॥

ಈ ಪರಿಯ ಜರಸಂಧ ಭೀಕರ ಭಯಂಕರನು
ಸಕಲರಸು ಜಯಿಸುತಲಿ ವಶದೊಳಗೆ ಇರಿಸಿಹನು
ಭೋಜಕುಲ ನೃಪರುಗಳು ಕುಂತಿ ಕುಲದರಸುಗಳು
ಮಾಗಧನ ಭಯದಿಂದ ಪಶ್ಚಿಮಕೆ ಓಡಿಹರು ॥೩೨೦॥

ಆ ಚೀನ ಭೋಟಕರು ಅಂಗವಂಗಾದಿಗಳು
ಸೌರಾಷ್ಟ್ರ ಕೋಸಲರು ಪಾಟಲರು ನಾಗಗಳು
ಚೇರಳರು ಕೇರಳರು ಚೋಳ ಪಾಂಡ್ಯಾದಿಗಳು
ಅತಿಬಲರು ಗೆಲ್ಲುವುದು ಕಷ್ಟತರವಿರುತಿಹುದು ॥೩೨೧॥

ಶಾಲ್ವರು ಪಟಚ್ಚರರು ಸುಸ್ಥಲರು ಸುಕುಟ್ಟರು
ವೈಧರ್ಭ ಪಾಂಚಾಲ ಕುಲಿಂದರು ಕುಂತಿಯರು
ಸೋದರರ ಸೇವಕರ ಸಹಿತದಲಿ ಭಯದಿಂದ
ಉತ್ತರವ ತೊರೆಯುತಲಿ ದಕ್ಷಿಣಕೆ ಓಡಿಹರು ॥೩೨೨॥

ಧರ್ಮಜನೆ ಜರಸಂಧ ದುರುಳನಾ ಭಯದಿಂದ
ಮಾಥುರೆಯನು ತೊರೆಯುತಲಿ ಕುಶಸ್ಥಲಿಗೆ ತೆರಳಿದೆವು
ಕೋಟೆಗಳ ಕಟ್ಟುತಲಿ ಸೇನೆಯನು ನಿಲ್ಲಿಸುತ
ಯಾದವರು ನಾವೆಲ್ಲ ಹಾಯಾಗಿ ವಾಸಿಪೆವು ॥೩೨೩॥

ನಮ್ಮಣ್ಣ ಬಲರಾಮ ಸಾತ್ಯಕಿಯು ಪ್ರದ್ಯುಮ್ನ
ಆ ಸಾಂಬ ಆಹುಕನು ಚಂದ್ರನಾ ಚಾರುಕನು
ಅತಿರಥರು ಮಹರಥರು ವೀರಾಧಿವೀರರು
ಹದಿನೆಂಟು ಸಾವಿರದ ಬಂಧುಗಳು ಬಾಂಧವರು ॥೩೨೪॥

ನಾವೆಲ್ಲ ಮಾಗಧನ ಭಯದಿಂದ ಓಡುತಲಿ
ಕುಶಸ್ಥಲಿಯ ಮಧ್ಯದಲಿ ವಾಸಿಸುತಲಿರುತಿಹೆವು
ಇದರಿಂದ ಮಾಗಧನ ಶೌರ್ಯವದು ಎಷ್ಟಿಹುದು
ಎಂಬುದನು ನೀನೆಯೇ ತರ್ಕಿಪುದು ಎಂದಿಹನು ॥೩೨೫॥

ಧರ್ಮಜನೆ ನೀ ಜಗಕೆ ಚಕ್ರವರ್ತಿಯಾಗಲಿಕೆ
ಜಗಸಾರ್ವಭೌಮನೆಂದೆನಿಸಲಿಕೆ ಯೋಗ್ಯನಿಹೆ
ಜರಸಂಧ ಜೀವಿಸುವ ಪರ್ಯಂತ ನಿನ್ನಿಚ್ಛೆ
ರಾಜಸೂಯಾಧ್ವರವ ಗೈಯ್ಯುವದ ಸಾಧ್ಯವಿದೆ ॥೩೨೬॥

ಆನೆಗಳ ಸಂಹರಿಸಿ ಗುಹೆಯೊಳಗೆ ವಾಸಿಸುವ
ಕೇಸರಿಯು ಪರಿಯಲ್ಲಿ ಶಂಕರನ ವರ ಪಡೆದು
ಅಗಣಿತದ ರಾಜರನು ಜಯಿಸುತಲಿ ಎಳೆತಂದು
ತನ್ನಯಾ ದೇಶದಲಿ ಸೆರೆಮನೆಯೊಳಿಟ್ಟಿಹನು ॥೩೨೭॥

ನೃಪರನ್ನು ಯಜ್ಞಗಳ ಪಶುವಾಗಿ ಮಾಡುತಲಿ
ಯಜ್ಞವನು ಮಾಡುವುದು ಅವನಿಚ್ಛೆಯಾಗಿಹುದು
ಮಾಗಧನ ಭಯದಿಂದ ನಾವುಗಳು ಸಕಲರೂ
ಮಥುರೆಯನು ತೊರೆಯುತಲಿ ದ್ವಾರಕೆಗೆ ತೆರಳಿದೆವು ॥೩೨೮॥

ಕೊನೆಯುಸಲ ಹೇಳುವೆನು ಧರ್ಮಜನೆ ಕೇಳುವುದು
ರಾಜಸೂಯಾಧ್ವರವ ಗೈಯ್ಯುವಾ ಇಚ್ಛೆಯದು
ನಿನಗಿರುವ ಇರ್ದೊಡೆಯು ಮಾಗಧನು ಸೆರೆಹಿಡಿದ
ನೃಪರುಗಳ ಬಂಧನವ ಮೊದಲಿಂಗೆ ಬಿಡಿಸುವುದು ॥೩೨೯॥

ಮಾಗಧನ ಸಂಹರಿಸಿ ಯಮಲೋಕಕಟ್ಟುವುದು
ಇಲ್ಲದಿರೆ ನಿನ್ನಯಾ ಇಚ್ಛೆಯದು ಫಲಿಸದದು
ಮಾಗಧನ ಮೊದಲಿಂಗೆ ಕೊಲ್ಲುವುದು ಎಂಬುವುದು
ಎಮ್ಮಯಾ ಖಚಿತಮಿಹ ಅಭಿಮತವು ಎಂದಿಹನು ॥೩೩೦॥

ಧರ್ಮಜನೆ ನೀ ರಾಜನೀತಿಯಲಿ ನಿಪುಣನಿಹೆ
ಧರ್ಮಜ್ಞ ನೀತಿಜ್ಞ ನೃಪವರನು ನೀನಿರುವೆ
ಯೋಚಿಸುತ ಅಧ್ವರದ ನಿರ್ಧಾರ ಗೈಯ್ಯುವುದು
ಎನ್ನುತಲಿ ಶ್ರೀಕೃಷ್ಣ ಯಮಸುತಗೆ ನುಡಿದಿಹನು ॥೩೩೧॥

ಮುರಹರನ ನುಡಿಗೇಳ್ದು ಯಮಸುತನು ಚಿಂತಿಸುತ
ಮಾಧವನೆ ಇಂದಿನಾ ಪರ್ಯಂತ ನಾವುಗಳು
ಜಗದೊಳಗೆ ವೀರಾಧಿವೀರರೆಂದೆನ್ನುತಲಿ
ನಮ್ಮನ್ನು ಜಯಿಸುವವರಾರಿಲ್ಲ ಎನ್ನುತಲಿ ॥೩೩೨॥

ಭಾವನೆಯೊಳಿರ್ದಿಹೆವು ನಮಗಿಂತ ಅತಿಬಲರು
ಲೋಕದೊಳು ಇಹರೆಂದು ಈಗರಿವು ಎಮಗಾಯ್ತು
ಮಾಗಧನ ಕೊಲ್ಲಲಿಕೆ ನಿನಗಾಗದಿರುತಿರಲು
ನಮಗೆಂತು ವಧಿಸಲಿಕೆ ಸಾಧ್ಯವಿದೆ ಹೇಳೆಂದ ॥೩೩೩॥

ಜರಸಂಧಗಂಜುತಲಿ ಸಾಗರದ ಮಧ್ಯದಲಿ
ಮನೆಯನ್ನು ಕಟ್ಟುತಲಿ ನೀ ವಾಸ ಮಾಡುತಿಹೆ
ಬಲರಾಮ ಬಲಭೀಮ ಫಲುಗುಣನು ವೀರರು
ಮಾಗಧನ ಕೊಲ್ಲಲಿಕೆ ಅಸಮರ್ಥರಿರುತಿಹರು ॥೩೩೪॥

ಜರಸಂಧ ದುರುಳನನು ಇರಿಯುವದಸಾಧ್ಯವಿದೆ
ಎನ್ನುತಲಿ ಮನದೊಳಗೆ ನಿಶ್ಚಯವ ಮಾಡಿಹೆನು
ದುಸ್ಸಾಧ್ಯವಾಗಿರುವ ಅಧ್ವರವ ತೊರೆಯುತಲಿ
ಶಾಂತಿಯೊಳು ಇರುತಿಹುದು ಲೇಸಹುದು ನಮಗೆಂದ ॥೩೩೫॥

**ಮಾಗಧನ ಆವ ಪರಿ ಜಯಿಸುವುದು ಎನ್ನುತಲಿ।**
**ಧರ್ಮಜನು ಚಿಂತೆಯಾ ಕಡಲೊಳಗೆ ಮುಳುಗಿದನು॥**

ನೀ ಎಮ್ಮ ಪ್ರಾಣವಿಹೆ ನಿನ್ನನ್ನೆ ನಂಬಿಹೆವು
ನಿನಗಾಗದಿರುತಿರುವ ಕಷ್ಟತರ ಕಾರ್ಯವದು
ನಾವೆಂತು ಗೈಯ್ಯುವೆವು ದುರ್ಬಲರು ನಾವಿಹೆವು
ನೀನಿದಿಕುಪಾಯವನು ಪೇಳುವುದು ಎಂದಿಹನು ॥೩೩೬॥

ಅಣ್ಣನಾ ಮಾತುಗಳ ಕೇಳುತಲಿ ವರಭೀಮ
ಯತ್ನವನು ಮಾಡದಲೆ ಹೇಡಿಯಾ ಪರಿಯಲ್ಲಿ
ಕೈಕಟ್ಟಿ ಯೋಚಿಸುತ ಕೂಡ್ರುವದು ಫಲವೇನು
ಯುದ್ಧದಲಿ ಜಾಣ್ಮೆಯಲಿ ವೈರಿಯನು ಜಯಿಸುವುದು ॥೩೩೭॥

ಎನ್ನಯಾ ಅದ್ಭುತದ ಶಕ್ತಿಯನು ಅರಿತಿರುವೆ
ಮಾಗಧನ ವಧಿಸಲಿಕೆ ಭುಜಬಲವು ಎನಗಿಹುದು
ನಿಮಿಷದಲಿ ದುಷ್ಟನನು ಮೆಟ್ಟುತಲಿ ಸೀಳುತಲಿ
ಯಮಸದನಕಟ್ಟುವೆನು ನಂಬುವುದು ನೀನೆಂದ ॥೩೩೮॥

ಅರ್ಜುನನು ಎಲ್ಲಿಹನೊ ಜಯವಲ್ಲಿ ಖಚಿತಮಿದು
ಶ್ರೀಕೃಷ್ಣ ಫಲುಗುಣನು ನಾವುಗಳು ಮೂವರೂ
ಮಾಗಧನ ಜಯಿಸುವೆವು ಸಂಶಯವು ಇದಕಿಲ್ಲ
ಎನ್ನುತ್ತ ಗದೆಯೆತ್ತಿ ಮರುತಜನು ನುಡಿದಿಹನು ॥೩೩೯॥

ಭೀಮನಾ ನುಡಿಗೇಳ್ದು ಮಾಧವನು ನುಡಿದಿಹನು
ಅಹುದಹುದು ಭೀಮನಲಿ ಬಲವಿಹುದು ನಾಬಲ್ಲೆ
ಮುಂದಣದ ಆಗುಗಳ ಹೋಗುಗಳ ಯೋಚಿಸದೆ
ಕಾರ್ಯಗಳ ಗೈಯ್ಯುವುದು ಹಿತಕರವು ನಮಗಲ್ಲ ॥೩೪೦॥

ಮಾಗಧನ ಸರಿಸಮರು ವೀರರುಗಳಾರಿಲ್ಲ
ಎಂಭತ್ತು ಮೇಲಾರು ನೃಪರುಗಳ ಜಯಿಸುತಲಿ
ಸೆರೆಮನೆಯೊಳಿಟ್ಟಿರುವ ಮಿಕ್ಕಿರುವ ಹದಿನಾಲ್ಕು
ಭೂಮಿಪರ ಜಯಿಸುತಲಿ ನೂರರಾ ರಾಜರನು ॥೩೪೧॥

ಬಡಮೂಕ ಪ್ರಾಣಿಗಳ ಬಲಿಕೊಡುವ ಪರಿಯಲ್ಲಿ
ಒಬ್ಬೊಬ್ಬ ರಾಜನನು ಯಜ್ಞದಾ ಪಶುವಾಗಿ
ಬಲಿಕೊಡುತ ಯಜ್ಞವನು ಮಾಡಲಿಕೆ ಆಶಿಸಿಹ
ಮಾಗಧನ ಕೊಂದವನು ಚಕ್ರವರ್ತಿಯೆಂದೆನಿಪನು ॥೩೪೨॥

ಯುದ್ಧವನು ಗೈಯ್ಯುವುದು ಕ್ಷತ್ರಿಯರ ಧರ್ಮವದು
ರಣದೊಳಗೆ ಜಯಿಸುತರೆ ಕೀರ್ತಿಯದು ಲಭಿಸುವುದು
ಇಲ್ಲದಿರೆ ಮಡಿಯುತಿರೆ ಸ್ವರ್ಗವದು ದೊರೆಯುವುದು
ಎರಡುಗಳು ಶ್ರೇಯವಿಹೆ ನಮಗೆಂದು ನುಡಿದಿಹನು ॥೩೪೩

ಕೊಡು ಎಮಗೆ ಭೀಮನನು ಅರ್ಜುನನ ಈರ್ವರನು
ನಾವುಗಳು ಮೂವರೂ ಗಿರಿವ್ರಜಕೆ ತೆರಳುತಲಿ
ದುರುಳನಾ ಮಾಗಧನ ಸಂಹಾರ ಗೆಯ್ಯುವೆವು
ಖಚಿತಮಿದು ಎನ್ನುತಲಿ ಮುರಹರನು ನುಡಿದಿಹನು ॥೩೪೪॥

ಮಾಗಧಗೆ ನಿಮ್ಮನ್ನು ಮೂವರನು ಬಲಿಕೊಟ್ಟು
ಯಾಗವನು ಮಾಡಲಿಕೆ ಯೋಗ್ಯವದು ಎನಿಸದದು
ಯಜ್ಞದಾ ಆಸೆಯನು ತೊರೆಯುತಲಿ ನಿಶ್ಚಿಂತ
ಶಾಂತಿಯೊಳು ಇರುವುದೇ ಲೇಸೆಂದು ತೋರುವುದು ॥೩೪೫॥

ಭೀಮಾರ್ಜುನೀರ್ವರೂ ಎನ್ನಯಾ ಕಣ್ಣುಗಳು
ನೀ ಎನಗೆ ಬುದ್ಧಿ ಸ್ವರೂಪದಲಿ ಇರುತಿರುವೆ
ಬುದ್ಧಿಯನು ಕಣ್ಣುಗಳ ಎರಡನ್ನು ಕಳಕೊಂಡು
ಜಗದೊಳಗೆ ನಾನೆಂತು ಜೀವಿಸುವೆ ಹೇಳೆಂದ ॥೩೪೬॥

ಯಮಸದೃಶ ಕ್ರೂರನಿಹ ಮಾಗಧನ ಕೈಯ್ಯಲ್ಲಿ
ಎನ್ನಯಾ ಆಸೆಯಲಿ ನಿಮ್ಮನ್ನು ಬಲಿಕೊಟ್ಟು
ಗೈಯ್ಯುವಾ ಯಾಗದಾ ಆಸೆಯನು ತೊರೆಯುವುದು
ಲೇಸಹುದು ಎನ್ನುತಲಿ ಧರ್ಮಜನು ನುಡಿದಿಹನು ॥೩೪೭॥

ಯಮಸುತನ ಮಾತುಗಳ ಕೇಳುತಲಿ ಫಲುಗುಣನು
ಕರೆಸು ನೀ ವಿಪ್ರರನು ಋತ್ವಿಜರ ನೀ ಕ್ಷಣದಿ
ಮಂಡಪವ ರಚಿಸುತಲಿ ವೇದಿಕೆಯ ನಿರ್ಮಿಸುತ
ಯಾಗದಾ ಸಿದ್ಧತೆಯನೆಲ್ಲವನು ಮಾಡುವುದು ॥೩೪೮॥

ಸಂಗ್ರಾಮ ಗೈಯ್ಯದಿರೆ ಮರಣವದು ತಪ್ಪದದು
ಎಂದಾದರೊಂದು ದಿನ ಆವುದೋ ಕಾರಣದಿ
ಮರಣವದು ನಿಶ್ಚಯವು ಇರುತಿರಲು ನೊರಜಿನಾ
ಪರಿಯಲ್ಲಿ ಸಾಯುವುದು ಲೇಸಲ್ಲವೆಂದಿಹನು ॥೩೪೯॥

ಬಾಣಗಳು ಬತ್ತದಾ ಅಕ್ಷಯದ ಬತ್ತಳಿಕೆ
ಜಗವನ್ನು ನಡುಗಿಸುವ ಗಾಂಡಿವದ ಧನುವನ್ನು
ವರಕಪಿಯು ಮಾರುತಿಯು ಶೋಭಿಸುವ ಬಾವುಟದ
ದಿವ್ಯದಾ ರಥವನ್ನು ಪಾವಕನು ಇತ್ತಿಹನು ॥೩೫೦॥

ಮಾಗಧನ ಸಂಹರಿಸಿ ಸೆರೆಯೊಳಗೆ ಇಟ್ಟಿರುವ
ನೃಪರುಗಳ ಬಂಧನವ ಬಿಡಿಸುವದು ಪುಣ್ಯವದು
ಜರೆಸಂಧನಿರಿಯಲಿಕೆ ನಾವುಗಳು ಶಕ್ತಿಯನು
ಖಚಿತದಲಿ ಪಡೆದಿಹವು ಸಂಶಯವು ಇದಕಿಲ್ಲ ॥೩೫೦॥

ಗಾಂಡಿವವ ಜಡಿಯುತಲಿ ಝೇಂಕಾರ ಗೈಯ್ಯುತಲಿ
ದಿವ್ಯಾಸ್ತ್ರ ಹೂಡುತಲಿ ಎಸೆಯುತಲಿ ಮಾಗಧನ
ಕರುಳನ್ನು ತೆಗೆಯುತಲಿ ರುಂಡವನು ನೆಗೆಸುತಲಿ
ಆಗಸಕೆ ದಂಡಿಗೆಯ ಮಾಲೆಯನು ಕಟ್ಟುವೆನು ॥೩೫೨॥

ಮಾಗಧನ ಕೊಲ್ಲದಾ ಗಾಂಡಿವವು ತನಗೇಕೆ
ಮೂಲೋಕ ಗಂಡನೆಂದೆಂಬುವಾ ಬಿರುದೇಕೆ
ಯುದ್ಧವನು ಗೈಯ್ಯದಿರೆ ಅಪಕೀರ್ತಿ ತನಗಹುದು
ಕಾದುತಲಿ ಸತ್ತೊಡೆಯು ಸ್ವರ್ಗವದು ಲಭಿಸುವುದು ॥೩೫೩॥

ಸಂಗ್ರಾಮ ಗೈಯ್ಯದಿರೆ ಮರಣವದು ತಪ್ಪದದು
ಆವುದೋ ಕಾರಣದಿ ಎಂದಾದರೊಂದು ದಿನ
ಸಾಯುವುದು ನಿಶ್ಚಯವು ಇರುತಿರಲಿ ನೊರಜಿನಾ
ಪರಿಯಲ್ಲಿ ಸಾಯುವುದು ಲೇಸಲ್ಲವೆಂದಿಹನು ॥೩೫೪॥

ಯುದ್ಧವನು ಗೈಯ್ಯುವುದು ಕ್ಷತ್ರಿಯರ ಧರ್ಮವಿದೆ
ರಣದೊಳಗೆ ಸೋಲುವುದು ಗೆಲುವದು ಸಹಜವಿದೆ
ಮಾಗಧಗೆ ಅಂಜುತಲಿ ಯಾಗವನು ತೊರೆಯುವುದು
ಕ್ಷಾತ್ರಬಲ ವೀರರಿಗೆ ಶೋಭಿಸದು ಎಂದಿಹನು ॥೩೫೫॥

ಶಾಂತಿಯನು ಬಯಸುತಲಿ ಕಾಷಾಯ ವಸ್ತ್ರವನು
ಧರಿಸುತಲಿ ಜಪಿಸುತಲಿ ಸಮ್ಮನೇ ಕೂಡ್ರುವುದು
ನಳನಹುಷ ಮಾಂಧಾತ ಭರತಾದಿ ವೀರರಾ
ಕುರುಕುಲದಿ ಹುಟ್ಟಿರುವ ನಮಗದುವೆ ಶೋಭಿಸದು ॥೩೫೬॥

ಶತ್ರುಗಳ ಮರ್ದಿಸುತ ಸಾಮ್ರಾಜ್ಯ ಕಟ್ಟುವಾ
ಅಪ್ರತಿಮ ವಿಕ್ರಮವು ಸಾಮರ್ಥ್ಯ ನಮಗಿಹುದು
ಮಾಗಧನ ಖಚಿತದಲಿ ವಧಿಸುವೆವು ಎನ್ನುತಲಿ
ಗಾಂಡಿವವ ಜಡಿಯುತಲಿ ಅರ್ಜುನನು ನುಡಿದಿಹನು ॥೩೫೭॥

ಧರ್ಮಜನೆ ಫಲುಗುಣನ ಮಾತುಗಳು ನಿಜವಿಹವು
ಸಂಗ್ರಾಮ ಗೈಯ್ಯದಿರೆ ಅಮರತ್ವ ದೊರೆಯದದು
ಜನಿಸಿರುವ ಮನುಜನಿಗೆ ಮರಣವದು ತಪ್ಪದದು
ಇಂತಿರಲು ಯುದ್ಧಕ್ಕೆ ಅಂಜವದು ಸರಿಯಲ್ಲ ॥೩೫೮॥

ದುಷ್ಟನನು ಶಿಕ್ಷಿಸುವ ಶಿಷ್ಟರನು ರಕ್ಷಿಸುವ
ಯುದ್ಧವನುಗೈಯ್ಯುವುದು ಕ್ಷತ್ರಿಯರ ದರ್ಮವಿದೆ
ಶತ್ರುಗಳು ಶೂರರಾಗಿರ್ದೊಡೆಯು ಕೌಶಲದಿ
ಯುಕುತಿಯಲಿ ಜಯಿಸುವುದು ರಾಜರಾ ನೀತಿಯಿದು ॥೩೫೯॥

ಗುಪಿತದಲಿ ಶತ್ರುವಿನ ಅರಮನೆಯ ಒಳಹೊಕ್ಕು
ದ್ವಂದ್ವದಾ ಯುದ್ಧಕ್ಕೆ ವೈರಿಯನು ಕರೆಯುತಲಿ
ಸಂಹಾರ ಮಾಡಿದೊಡೆ ದೋಷವದು ಸೋಂಕದದು
ಎನ್ನುತಲಿ ಧರ್ಮಜಗೆ ಶ್ರೀಕೃಷ್ಣ ನುಡಿದಿಹನು ॥೩೬೦॥

ಕ್ಷತ್ರಿಯರಿಗುಚಿತವಿಹ ವೀರರಿಗೆ ಶೋಭಿಸುವ
ಭರತಕುಲ ಸಂಭೂತ ವೀರರಿಗೆ ಭೂಷಣದ
ಸಕಲರಿಗೆ ಹಿತಕರದ ಕೀರ್ತಿಕರ ನುಡಿಗಳನು
ಫಲಗುಣನು ನುಡಿದಿಹನು ಎಂದಿಹನು ಮುರರಿಪುವು ॥೩೬೧॥

ಧರ್ಮವನು ಗೈಯುತಲಿ ಮೃತ್ಯುವನು ಅಪ್ಪಿದೊಡೆ
ಪುಣ್ಯವದು ಲಭಿಸುತಲಿ ಸುರಲೋಕ ದೊರೆಯುವುದು
ಇಲ್ಲದಿರೆ ಜಯಿಸುತಲಿ ಭೂಮಂಡಲೆಲ್ಲವನು
ಆಳುತಲಿ ನೀವ್ಮೆರೆವೆ ಎಂದಿಹನು ಯಾದವನು ॥೩೬೨॥

**ಜರೆಸಂಧವೀರನಾ ಅದ್ಭುತದ ಶಕ್ತಿಯನು ।**
**ಯಾದವನು ಧರ್ಮಜಗೆ ಅರುಹಿದನು ವಿಶದದಲಿ ॥**

ಮುರಹರನ ನುಡಿಗೇಳ್ದು ಧರ್ಮಜನು ಧೈರ್ಯದಲಿ
ಅತಿಬಲನ ಜರೆಸಂಧ ವೀರನಾ ವಿಷಯವನು
ಅರಿಯಲಿಕೆ ಕೌತುಕದಿ ನಿನ್ನನ್ನು ಮೀರಿಸುವ
ಶಕ್ತಿಯಿಹ ಮಾಗಧನ ವಿಷಯವನು ಅರುಹುವದು ॥೩೫೩॥

ನೀ ವಧಿಸಲಸಮರ್ಥನಾಗಿರುವ ಮಹವೀರ
ಜರೆಸಂಧನಾರಿಹಾನು ಈ ಪರಿಯ ಶಕ್ತಿಯನು
ಅವನೆಂತು ಪಡೆದಿಹನು ಎಂಬುದನು ವಿಸ್ತರದಿ
ಪೇಳುವುದು ಎನ್ನುತಿರೆ ಶ್ರೀಕೃಷ್ಣ ನುಡಿದಿಹನು ॥೩೬೪॥

ಕೇಳುವುದು ಧರ್ಮಜನೆ ಮಗಧದಾ ನರಪತಿಯು
ಬೃಹದ್ರಥನು ಅತಿವೀರ ಸಕಲರಾ ರಾಜರನು
ಜಯಿಸುತಲಿ ಇಂದ್ರನಾ ಪರಿಯಲ್ಲಿ ಜಗದೊಳಗೆ
ವೈಭವದಿ ವಿಕ್ರಮದಿ ಬೆಳಗುತಲಿ ಇರ್ದಿಹನು ॥೩೬೫॥

ಕಾಶಿಯಾ ಅಧಿಪತಿಯ ಪುತ್ರಿಯರನೀರ್ವರನು
ವರಿಸುತಲಿ ನಿಮ್ಮನ್ನು ಒಂದೆತೆರ ಪ್ರೀತಿಪೆನು
ಎನ್ನುತಲಿ ಈರ್ವರಾ ಪತ್ನಿಯರ ಸಹಿತದಲಿ
ರಮಿಸುತಲಿ ಬಹುವರ್ಷ ಕಾಲವನು ಕಳೆದಿಹನು ॥೩೬೬॥

ಮುಪ್ಪಡರಿ ಬರುತಿರಲು ವಂಶವನು ವೃದ್ಧಿಸುವ
ಸಂತಾನವಿಲ್ಲೆಂದು ಚಿಂತೆಯೊಳು ಮುಳಗಿರಲು
ಒಂದು ದಿನ ನೃಪವರನು ಸಭೆಯೊಳಗೆ ಕುಳಿತಿರಲು
ಸೇವಕರು ಐತಂದು ಶಿರಬಾಗಿ ನುಡಿದಿಹರು ॥೩೬೭॥

ಚಂಡಮುನಿ ಕೌಶಿಕನು ತಪವನ್ನು ತೊರೆಯುತಲಿ
ಕ್ಷೇತ್ರಗಳ ದರ್ಶನವ ಪಡೆಯುತಲಿ ಚರಿಸುತಲಿ
ಊರ ಹೊರವಳಯದಲಿ ಮರವೊಂದರಡಿಯಲ್ಲಿ
ಧ್ಯಾನದಲಿ ಕುಳತಿಹನು ಎನ್ನುತಲಿ ನುಡಿದಿಹರು ॥೩೬೮॥

ಬೃಹದ್ರಥನು ಕೇಳುತಲಿ ಆ ಕ್ಷಣದಿ ಹರುಷದಲಿ
ಈರ್ವರಾ ಪತ್ನಿಯರ ಸಹಿತದಲಿ ನಡೆತಂದು
ಕೌಶಿಕನ ಚರಣಕ್ಕೆ ಎರಗುತಲಿ ಭಕುತಿಯಲಿ
ಪೂಜಿಸುತ ಆದರದಿ ಸತ್ಕಾರ ಗೈದಿಹನು ॥೩೬೯॥

ಚಂಡಮುನಿ ಕೌಶಿಕನು ಸುಪ್ರೀತನಾಗುತಲಿ
ಭೂಮಿಪನೆ ಮುಖಕಮಲ ಬಾಡಿಹುದು ಬತ್ತಿಹುದು
ನಿನ್ನನ್ನು ಕಾಡುತಿಹ ಚಿಂತೆಯದು ಆವುದಿದೆ
ಬೇಕಾದ ವರಬೇಡು ನಾ ಕೊಡುವೆನೆಂದಿಹನು ॥೩೭೦॥

ಮುನಿವರನೆ ವೃದ್ಧಾಪ್ಯವಪ್ಪುತಲಿ ಬಂದಿಹುದು
ವಂಶವನು ಬೆಳಗಲಿಕೆ ಸಂತಾನವೊಂದಿಲ್ಲ
ರಾಜ್ಯವನು ತೊರೆಯುತಲಿ ವಾನಪ್ರಸ್ಥಾಶ್ರಮಕೆ
ಕಾನನಕೆ ತೆರಳುವಾ ಯೋಚನೆಯೊಳಿರುತಿಹೆನು ॥೩೭೧॥

ನಿಮ್ಮಯಾ ವರದಿಂದ ಎನಗಾವ ಲಾಭವಿದೆ
ಎಲ್ಲವನು ತ್ಯಜಿಸುತಲಿ ಕಾನನಕೆ ಹೊರಟಿಹೆನು
ಎನ್ನುತಲಿ ನೃಪವರನು ನುಡಿಯುತಿರೆ ಮುನಿವರನು
ಚಿಂತಿಸಲು ಬೇಡೆಂದು ಕಂಗಳನು ಮುಚ್ಚುತಲಿ ॥೩೭೨॥

ಮೌನದಲಿ ಧ್ಯಾನಿಸುತಲಿರುತಿರಲು ಆ ಕ್ಷಣದಿ
ಮಾವಿನಾ ಫಲವೊಂದು ಕಳಚುತಲಿ ಬೀಳುತಿರೆ
ಕೌಶಿಕನು ಫಲವನ್ನು ಮಂತ್ರವನು ಪಠಿಸುತಲಿ
ನೃಪವರನ ಕರದೊಳಗೆ ಈಯುತಲಿ ನುಡಿದಿಹನು ॥೩೭೩॥

ನಿನ್ನಯಾ ಸತಿಯಳಿಗೆ ಈ ಫಲವನೀಯುವುದು
ಸೇವಿಸುತ ಗರ್ಭವನು ಧರಿಸುತಲಿ ಜಗದೊಳಗೆ
ಆರಿಗೂ ಜಯಿಸಲಿಕೆ ಆಗದಿಹ ಅಪ್ರತಿಮ
ವೀರನಿಹ ಪುತ್ರನನು ಪಡೆಯುವಳು ಎಂದಿಹನು ॥೩೭೪॥

ಇನ್ನು ನೀ ಕಾಡಿಂಗೆ ತೆರಳುವಾ ಚಿಂತೆಯನು
ತೊರೆಯುತಲಿ ಸುಖದಿಂದ ರಾಜ್ಯವನು ಆಳುವುದು
ಎನ್ನುತಲಿ ಕೌಶಿಕನು ಹರುಸುತಲಿ ತೆರಳುತಿರೆ
ನೃಪವರನು ಸಂತಸದಿ ಅರಮನೆಗೆ ಬಂದಿಹನು ॥೩೭೫॥

ಫಲವೊಂದು ಪತ್ನಿಯರು ಈರ್ವರೂ ಇರುತಿರಲು
ಫಲವನ್ನು ಆವ ಸತಿಗೀಯುವುದು ಎನ್ನುತಲಿ
ಒಬ್ಬಳಿಗೆ ಇತ್ತೊಡೆಯು ಮತ್ತೊಬ್ಬಳಿನ್ನಲ್ಲಿ
ಕೋಪವನು ತಾಳುವಳು ಎನ್ನುತಲಿ ಯೋಚಿಸುತ ॥೩೭೬॥

ಫಲವನ್ನು ಹೋಳೆರಡು ಸಮವಾಗಿ ಕತ್ತರಿಸಿ
ಈರ್ವರಿಗೆ ಸಮಪಾಲು ಹೋಳುಗಳನೀಯುತಿರೆ
ಈರ್ವರೂ ಸೇವಿಸುತ ಗರ್ಭವನು ಧರಿಸುತಲಿ
ಅಪ್ರತಿಮ ತೇಜದಲಿ ಹೊಳೆಯುತಲಿ ಬೆಳಗಿಹರು ॥೩೭೭॥

ನವಮಾಸ ತುಂಬುತಿರೆ ರಾಣಿಯರು ಈರ್ವರೂ
ಕಣ್ಣೊಂದು ಕಿವಿಯೊಂದು ಕರವೊಂದು ಕಾಲೊಂದು
ಇರುತಿರುವ ಶಿಶುವಿನಾ ಸಮಅರ್ಧ ಭಾಗಗಳ
ಒಂದೊಂದ ಹೆತ್ತಿಹರು ಸಕಲರೂ ಬೆರಗಾಗೆ ॥೩೭೮॥

ಇದು ಪೂರ್ವ ಜನ್ಮದಾ ಪಾಪದಾ ಫಲವೆಂದು
ಈ ಎರಡು ಭಾಗಗಳ ತ್ಯಜಿಸುವುದೆ ಲೇಸೆಂದು
ಅರಸಿಯರು ಯೋಚಿಸುತ ದಾಸಿಯರ ಕರೆಯುತಲಿ
ಇವುಗಳನು ತಿಪ್ಪೆಯಲಿ ಎಸೆಯುವುದು ಎಂದಿಹರು ॥೩೭೯॥

ವಸ್ತ್ರದಲಿ ಶಿಶುವಿನಾ ಭಾಗಗಳ ಸುತ್ತುತಲಿ
ಅರಮನೆಯ ಸನಿಹದಲಿ ಶಿವಮಂದಿರೆಡೆಯಲ್ಲಿ
ಇರುಳಲ್ಲಿ ಆರಿಗೂ ತಿಳಿಯದಾ ಪರಿಯಲ್ಲಿ
ಗುಪಿತದಲಿ ದಾಸಿಯರು ತಿಪ್ಪೆಯಲಿ ಎಸೆದಿಹರು ॥೩೮೦॥

ಜರೆ ಎಂಬ ರಕ್ಕಸಿಯು ಹಸಿವೆಯಾ ಬಾಧೆಯಲಿ
ರಾತ್ರಿಯಲಿ ಆಹಾರವರಸುತಲಿ ಬರುತಲಿರೆ
ತಿಪ್ಪೆಯಲಿ ಬಿದ್ದಿರುವ ವಸ್ತ್ರದಲಿ ಹೊದೆದಿರುವ
ಶಿಶುವೆರಡು ಭಾಗಗಳ ನೋಡಿದಳು ಚಕಿತದಲಿ ॥೩೮೧॥

ಶಿಶುವಿನಾ ಭಾಗಗಳ ಎರಡನ್ನು ನೋಡುತಲಿ
ಕೂಸನ್ನು ತಿನ್ನಲಿಕೆ ಸೀಳೆರಡು ಮಾಡುತಲಿ
ತಿನ್ನದಲೆ ಹಾಗೆಯೇ ಹೋಗಿಹರು ಎನ್ನುತಲಿ
ಜರೆದನುಜೆ ಶಿಶುವಿನಾ ಭಾಗಗಳ ಒಯ್ಯಲಿಕೆ ॥೩೮೨॥

ವಸ್ತ್ರವನು ತೆಗೆಯುತಲಿ ಎರಡನ್ನು ಸಂಧಿಸಲು
ಆ ಕ್ಷಣದಿ ಶಿಶುವಿನಾ ರೂಪವನು ತಾಳುತಲಿ
ನೆಲಮುಗಿಲು ಕಂಪಿಸುತ ಬಿರಿಯುವಾ ಪರಿಯಲ್ಲಿ
ಆಕ್ರೋಶ ಗೈಯ್ಯುತಲಿ ರೋದನವ ಗೈದಿಹುದು ॥೩೮೩॥

ಮೃತ್ಯುವಿನ ಅಬ್ಬರವೊ ಕಡಲಿನಾ ಆರ್ಭಟೆಯೊ
ಆಕಾಶ ಹರಿಯುತಲಿ ಕಳಚುತಲಿ ಬಿದ್ದಿಹುದೊ
ಪ್ರಳಯವದು ಸನ್ನಿಹಿತ ವಾಗಿಹುದೊ ಎನ್ನುತಲಿ
ಪುರಜನರು ಸಕಲ ಪ್ರಜೆ ಭಯಗ್ರಸ್ತರಾಗಿಹರು ॥೩೮೪॥

ಈ ರಾಜ್ಯದಧಿಪತಿಯು ರಾಣಿಯರು ಅತುಳದಲಿ
ಸಂತಾನವಿಲ್ಲದೆಯೆ ಚಿಂತೆಯಲಿ ಮುಳಗಿಹರು
ಈ ನೃಪನ ಆಶ್ರಯವ ನಾನಿಲ್ಲಿ ಪಡೆಯುತಲಿ
ಅನ್ನವನು ತಿನ್ನುತಲಿ ಜೀವಿಸುತಲಿರುತಿಹೆನು ॥೩೮೫॥

ಈತನಾ ಮಗುವನ್ನು ಕೊಲ್ಲುವುದು ಸರಿಯಲ್ಲ
ಎನ್ನುತಲಿ ಮಾನುಷಳ ರೂಪವನು ತಳೆಯುತಲಿ
ಮುದ್ದಾದ ಶಿಶುವನ್ನು ಕರದೊಳಗೆ ಕೊಳ್ಳುತಲಿ
ಧರಣಿಪನ ಬಳಿಬಂದು ಜರೆದನುಜೆ ನುಡಿದಿಹಳು ॥೩೮೬॥

ಈ ಶಿಶುವು ನಿನ್ನದಿದೆ ನಿನ್ನಯಾ ರಾಣಿಯರು
ಹೆತ್ತಿರುವ ಸಮಅರ್ಧ ಶಿಶುವಿನಾ ಭಾಗಗಳ
ದಾಸಿಯರು ಇರುಳಿನಲಿ ತಿಪ್ಪೆಯಲಿ ಎಸೆದಿರಲು
ಆಹಾರಕೋಸುಗವೆ ಚರಿಸುತಲಿ ಬರುತಿರಲು ॥೩೮೭॥

ಮಗುವೆರಡ ಭಾಗಗಳ ಕಾಣುತಲಿ ಬೆರಗಿನಲಿ
ಸಂಧಿಸಲು ಜೀವಂತ ಶಿಶುರೂಪ ತಳೆದಿಹುದು
ಇದು ನಿನ್ನ ಶಿಶುವಿಹುದು ಸ್ವೀಕರಿಸಿ ರಕ್ಷಿಪುದು
ಎನ್ನುತಲಿ ಜರೆದನುಜೆ ನೃಪವರಗೆ ನುಡಿದಿಹಳು ॥೩೮೮॥

ಸನಿಹದಲಿ ನಿಂತಿರ್ದ ರಾಣಿಯರು ಈರ್ವರು
ಹರುಷದಲಿ ಶಿಶುವನ್ನು ಕೈಗೆತ್ತಿಕೊಳ್ಳುತಲಿ
ಘಳಿಲೆಂದು ಸ್ತನದಿಂದ ಹಾಲ್ಚಿಮ್ಮುತಿರುತಿರಲು
ಶಿಶುವಿಂಗೆ ಕ್ಷೀರಾಭಿಸೇಚನವ ಗೈದಿಹರು ॥೩೮೯॥

ನೃಪವರನು ಸಂತಸದ ಸಾಗರದಿ ಮುಳಗುತಲಿ
ಸಂತಾನವಿಲ್ಲದೆಯೆ ಚಿಂತಿಸುವ ನಮಗಿಂದು
ಸಂತಾನವಿತ್ತಿರುವ ದೇವತೆಯು ನೀನಾರು
ಎನ್ನುತಲಿ ನುಡಿಯುತಿರೆ ಜರೆದನುಜೆ ನುಡಿದಿಹಳು ॥೩೯೦॥

ಇಚ್ಛಿಸಿದ ರೂಪವನು ತಾಳಲಿಕೆ ಶಕ್ತಳಿಹ
ಜರೆಯೆಂಬ ರಕ್ಕಸಿಯು ನಾನಿಹೆನು ಕೇಳುವುದು
ನಿನ್ನಿಂದ ಪೂಜಿಸುತ ನಿನ್ನಯಾ ಗೃಹದಲ್ಲಿ
ಗೃಹದೇವಿ ಎನಿಸುತಲಿ ವಾಸಿಸುತಲಿರುತಿಹೆನು ॥೩೯೧॥

ನೀಗೈವ ಪೂಜೆಯಲಿ ಭಕ್ಷ್ಯ ಭೋಜ್ಯಾದಿಗಳ
ಸವಿಯುತಲಿ ನಿನ್ನಿಂದ ಸತ್ಕೃತಳು ಆಗಿಹೆನು
ಕಾರಣದಿ ನಿನ್ನಯಾ ಉಪಕಾರ ನೆನೆಯುತಲಿ
ನಿನ್ನಯಾ ಶಿಶುವನ್ನು ಭಕ್ಷಿಸದೆ ಇತ್ತಿಹೆನು ॥೩೯೨॥

ಸುಕೃತದಲಿ ನಿನ್ನಯಾ ಶಿಶು ನಿನಗೆ ದೊರೆತಿಹುದು
ನಿನ್ನಂಥ ಸೌಭಾಗ್ಯರಾರಿಲ್ಲ ಜಗದೊಳಗೆ
ಸುಮ್ಮನೇ ಕಾರಣಳು ನಾನಿಹೆನು ಎನ್ನುತಲಿ
ಜರೆದನುಜೆ ಮಾಯೆಯಲಿ ಸರಿದಿಹಳು ಆ ಕ್ಷಣದಿ ॥೩೯೩॥

ಸಂತಸದಿ ಸತಿಯರಾ ಸಹಿತದಲಿ ಬೃಹದ್ರಥನು
ಒಳಗಡೆಗೆ ತೆರಳುತಲಿ ಋತ್ವಿಜರ ಕರೆಸುತಲಿ
ಜಾತಕರ್ಮಾಧಿಗಳ ನಾಮಕರಣಾದಿಗಳ
ಶಿಶುವಿಂಗೆ ಮಾಡುತಲಿ ಹರ್ಷದಲಿ ನುಡಿಹನು ॥೩೯೪॥

ಜರೆದನುಜೆ ಮಾಡಿರುವ ಉಪಕಾರ ನೆನೆಯುತಲಿ
ಜರೆಯಿಂದ ಸಂಧಿಸುತ ಸಶರೀರವಾಗಿರುವ
ಶಿಶುವಿಂಗೆ ಜರೆಸಂಧ ಎಂಬುವಾ ಹೆಸರನ್ನು
ಇಡುತಲಿರೆ ದಿನದಿನವು ವರ್ಧಿಸುತಲಿರುತಿಹನು ॥೩೯೫॥

ಶುಕ್ಲದಾ ಚಂದಿರನ ಪರಿಯಲ್ಲಿ ಕಾಂತಿಯಲಿ
ಹೊಳೆಯುತಲಿ ಬೆಳೆಯುತಲಿ ಸತ್ವದಲಿ ತೊಳಗುತಲಿ
ರಾಣಿಯರನೀರ್ವರನು ನೃಪವರ ಬೃಹದ್ರಥನ
ಮುದ್ದಾದಲೀಲೆಯಲಿ ಆಹ್ಲಾದ ಗೊಳಿಸಿದನು ॥೩೯೬॥

ಕೆಲ ದಿನಗಳುರುಳುತಿರೆ ಕೌಶಿಕನು ಬರುತಿರಲು
ಅರ್ಘ್ಯಪಾದ್ಯಾದಿಗಳ ನೀಯುತಲಿ ಸತ್ಕರಿಸಿ
ಬೃಹದ್ರಥನು ಮಗುವಿನಾ ಭವಿಷ್ಯವ ಪೇಳುವುದು
ಎನ್ನುತಲಿ ಕೇಳುತಿರೆ ಕೌಶಿಕನು ನುಡಿದಿಹನು ॥೩೯೭॥

ನಿನ್ನ ಮಗ ವಿಕ್ರಮ ಪರಾಕ್ರಮಿಯು ಆಗುವನು
ಇವನಿಂಗೆ ಸರಿಸಮರು ಆರಿಲ್ಲ ಎನಿಸುತಲಿ
ಜಗದೊಳಗೆ ಸಕಲರನು ರಾಜರನು ಜಯಿಸುತಲಿ
ಸೂರ್ಯನಂತೆಸೆಯುತಲಿ ತೇಜದಲಿ ಮೆರೆಯುವನು ॥೩೯೮॥

ಇವನನ್ನು ಎದುರಿಸುವ ನೃಪರುಗಳು ಎಲ್ಲರೂ
ದೀಪವನು ಮುತ್ತುವಾ ಪತಂಗಗಳ ಪರಿಯಲ್ಲಿ
ನಾಶವನು ಹೊಂದುತಲಿ ಉರುಳುತಲಿ ಬೀಳುವರು
ದಳ್ಳುರಿಯ ಪರಿಯಲ್ಲಿ ಸಕಲರನು ದಹಿಸುವನು ॥೩೯೯॥

ಸಾಗರದ ಮಧ್ಯದಾ ಪರ್ವತದ ಪರಿಯಲ್ಲಿ
ಸೇನೆಯಾ ಸಾಗರದಿ ಸ್ಥಿರವಾಗಿ ನಿಲ್ಲುತಲಿ
ಯಕ್ಷ ಸುರ ಗಂಧರ್ವ ಖೇಚರರು ಎಸೆಯುತಿಹ
ಅಸ್ತ್ರಗಳ ಶಸ್ತ್ರಗಳ ಪುಡಿಪುಡಿಯು ಗೈಯ್ಯುವನು ||೪೦೦||

ಮಾನವರು ವಾಯುವಿನ ಆಶ್ರಯವ ಪಡೆವಂತೆ
ಅರಸುಗಳು ಈತನಾ ಆಶ್ರಯವ ಪಡೆಯುವರು
ಭೇದವನು ಮಾಡದಲೆ ಪ್ರಜೆಗಳನು ಸಕಲರನು
ಪ್ರೀತಿಯನು ಮಾಡುತಲಿ ರಾಜ್ಯವನು ಆಳುವನು ||೪೦೧||

ನಿನ್ನಸುತ ತ್ರಿಪುರಾರಿ ತ್ರೈಲೋಕ್ಯ ವಂದಿತನು
ಹರನನ್ನು ಒಲಿಸುತಲಿ ವರವನ್ನು ಪಡೆಯುತಲಿ
ಜಗದೊಳಗೆ ಶೌರ್ಯಪ್ರತಾಪದಲಿ ಮೆರೆಯುವನು
ಈ ತೆರನ ಮಗನನ್ನು ಪಡೆದಿರುವ ನೀಧನ್ಯ ||೪೦೨||

ನಿಮಗೆಲ್ಲ ಮಂಗಳವು ಶುಭವಾಗಲೆನ್ನುತಲಿ
ಚಂಡಮುನಿ ಕೌಶಿಕನು ಹರಸುತಲಿ ತೆರಳಿದನು
ಬೃಹದ್ರಥನು ಕೇಳುತಲಿ ಮನದೊಳಗೆ ಯೋಚಿಸುತ
ಬಂಧುಗಳ ಭಾಂದವರ ಮಿತ್ರರನು ಕರೆಸುತಲಿ ||೪೦೩||

ವಿಷಯವನು ಅರುಹುತಲಿ ಸುಮುಹೂರ್ತ ಸಮಯದಲಿ
ಮಗನಿಂಗೆ ಪಟ್ಟವನು ಕಟ್ಟಿದನು ವೈಭವದಿ
ಬಳಿಕಲಾ ಬೃಹದ್ರಥನು ಪತ್ನಿಯರ ಸಹಿತಲಿ
ತಪಗೈಯ್ಯಲೋಸುಗವೆ ಕಾನನಕೆ -ತೆರಳಿದನು ||೪೦೪||

ಜರೆಸಂಧ ತನ್ನಯಾ ಭುಜಬಲ ಪರಾಕ್ರಮದಿ
ಯುದ್ಧದಲಿ ದೇಶದಾ ರಾಜರನು ಜಯಿಸುತಲಿ
ಸಕಲರನು ಆಶ್ರಿತರಾಗುತಲಿ ಮಾಡುತಲಿ
ರಾಜ್ಯವನು ಪ್ರಿತಿಯಲಿ ಆಳುತಲಿ ಇರ್ದಿಹನು ||೪೦೫||

ಧರ್ಮಜನೆ ಕೇಳುವುದು ಜರೆಸಂಧನಳಿಯನಿಹ
ದುರುಳನಾ ಕಂಸನನು ನಾ ವಧೆಯು ಗೈಯ್ಯುತಿರೆ
ಕೋಪದಲಿ ಭಾರಿಯುಹ ಅದ್ಭುತದ ಗದೆಯನ್ನು
ತೊಂಭತ್ತೊಂಭತ್ತು ಬಾರಿಯಲಿ ಗರಗರನೆ ||೪೦೬||

ತಿರುಗಿಸುತ ತೊಂಭತ್ತೊಂಭತ್ತುಯೋಜನದ
ದೂರಮಿಹ ನಮ್ಮಯಾ ಪುರದೆಡೆಗೆ ಮಥುರೆಯೆಡೆ
ಬೀಸುತಲಿ ಎಸೆಯುತಿರೆ ಭರದಿಂದ ಸುತ್ತುತಲಿ
ಮಥುರೆಯಾ ಹೊರವಳಯಕಪ್ಪಳಿಸಿ ಬಿದ್ದಿಹುದು ||೪೦೭||

ಮಂದರದ ಗಿರಿಶಿಖರ ಕಳಚುತಲಿ ಬಿದ್ದಿಹುದೊ
ಎಂಬುವಾ ಘೋರತರ ಭೀಕರದ ನಾದದಲಿ
ಭೂಮಿಯನು ಹೊಯ್ಯುತಲಿ ಕಂಪಿಸುತ ಬೀಳುತಿರೆ
ಮಥುರೆಯಾ ಪ್ರಜೆ ಎಲ್ಲ ಭಯಗ್ರಸ್ತರಾಗುತಲಿ ||೪೦೮||

ಎನ್ನಯಾ ಬಳಿಬಂದು ಪ್ರಾರ್ಥಿಸುತಲಿರುತಿರಲು
ಜರೆಸಂಧನು ಪಟಳವ ಸಹಿಸದಲೆ ನಾವೆಲ್ಲ
ಸಾಗರದ ಮಧ್ಯದಲಿ ದ್ವಾರಕೆಯು ಕಟ್ಟುತಲಿ
ನಾವೆಲ್ಲ ಹಾಯಾಗಿ ವಾಸಿಸುತಲಿರುತಿಹೆವು ||೪೦೯||

ಹರನ ವರ ಪಡೆದಿರುವ ಜರೆಸಂಧ ವೀರನನು
ಯುದ್ಧದಲಿ ಜಯಿಸುವುದು ಸಾಧ್ಯವೇ ಇಲ್ಲವದು
ಕೈಯೊಳಗೆ ಆಯುಧವು ಇಲ್ಲದಾ ಸಮಯದಲಿ
ದ್ವಂದ್ವದಾ ಯುದ್ಧದಲಿ ಜಯಿಸುವುದು ಸಾಧ್ಯವಿದೆ ||೪೧೦||

ಜರೆಸಂಧ ವಿಕ್ರಮಗೆ ವರಭೀಮನೋರ್ವನೇ
ಸತ್ವದಲಿ ಬಲದಲ್ಲಿ ಸರಿಸಮನು ಇರುತಿಹನು
ದ್ವಂದ್ವದಾ ಯುದ್ಧದಲಿ ಮಾರುತಜನು ಮಾಗಧನ
ಖಂಡಿತದಿ ವಧಿಸುವನು ಸಂಶಯವು ಇದಕಿಲ್ಲ ||೪೧೧||

ನಾವುಗಳು ಮೂವರೂ ಅರಮನೆಯ ಒಳಗಡೆಗೆ
ಗುಪಿತದಲಿ ತೆರಳುತಲಿ ದ್ವಂದ್ವದಾ ಯುದ್ಧಕ್ಕೆ
ದುರುಳನನು ಕರೆಯುತಲಿ ಕಲಿಭೀಮನೋರ್ವನೇ
ಸಂಹಾರ ಗೈಯ್ಯುವನು ಖಚಿತದಲಿ ಎಂದಿಹನು ||೪೧೨||

ಕೊಡು ಎನಗೆ ಭೀಮಾರ್ಜುನೀರ್ವರನು ಈ ಕ್ಷಣದಿ
ಗಿರಿವ್ರಜಕೆ ತೆರಳುತಲಿ ಜರೆಸಂಧ ನಿರಿಯುತಲಿ
ಬಂಧನದೊಳಿರಿಸಿರುವ ಅರಸರನು ಬಿಡಿಸುವೆನು
ಎನ್ನುತಲಿ ಶ್ರೀ ಕೃಷ್ಣ ಧರ್ಮಜಗೆ ನುಡಿದಿಹನು ||೪೧೩||

ಜಗದಖಿಲ ಕಾರ್ಯಗಳ ಜರುಗಿಸುವ ದೇವನು
ಕಾರಣನು ಕರ್ತೃವೂ ನೀನೆಯೇ ಇರುತಿರುವೆ
ನೀ ಸೂತ್ರಧಾರನಿಹೆ ನಾವುಗಳು ಗೊಂಬೆಗಳು
ನೀನೆಳೆದ ಪರಿಯಲ್ಲಿ ನಾವುಗಳು ಕುಣಿಯುವೆವು ||೪೧೪||

ಮಾಗಧನ ವಧಿಸಲಿಕೆ ನೀನಿಚ್ಛೆ ಗೈದಿರುವೆ
ಜಯಲಕ್ಷ್ಮಿ ನಮ್ಮನ್ನು ಖಂಡಿತದಿ ವರಿಸುವಳು
ಎನ್ನಯಾ ಯಾಗವಿದು ಸಫಲತೆಯಗೊಳ್ಳುವುದು
ಎನ್ನುತಲಿ ಭೀಮಾರ್ಜುನೀರ್ವರಾ ಕರಗಳನು ||೪೧೫||

ಮುರಹರನ ಕೈಯ್ಯಲ್ಲಿ ಇರಿಸುತಲಿ ಧರ್ಮಜನು
ನಿನ್ನನ್ನು ನಂಬಿಹೆವು ನೆಚ್ಚಿಹೆವು ಅನವರತ
ಸಲಹುವಾ ಭಾರವದು ನಿನ್ನದಿದೆ ಎನ್ನುತಲಿ
ಯಾದವನ ಪಾದಕ್ಕೆ ಸಾಷ್ಟಾಂಗ ವೆರಗಿದನು ॥೪೧೬॥

ನಯವಿದನು ನೀತಿಜ್ಞ ಚತುರಮತಿ ನೀನಿರುವೆ
ನೀನೆಮ್ಮ ನಾಯಕನು ಎಮ್ಮಯಾ ಕಾರ್ಯವನು
ಜರುಗಿಸುವ ಭಾರವದು ನಿನ್ನದಿದೆ ಎನ್ನುತಲಿ
ಭೀಮಾರ್ಜುನೀರ್ವರನು ಕೊಟ್ಟಿಹೆನು ನಿನಗೆಂದ ॥೪೧೭॥

**ಮುರಹರನು ಮರುತಜನು ಅರ್ಜುನನು ಮೂವರೂ ।**
**ಮಾಗಧನ ಪಟ್ಟಣಕೆ ಪಯಣವನು ಬೆಳೆಸಿದರು ॥**

ಧರ್ಮಜನು ಹೊರಡಲಿಕೆ ಅನುಮತಿಯು ನೀಯುತಿರೆ
ಶ್ರೀಕೃಷ್ಣ ಮಾರುತಜನು ಅರ್ಜುನನು ಮೂವರು
ಸ್ನಾತಕದ ವಿಪ್ರರಾ ವೇಷಗಳ ಧರಿಸುತಲಿ
ರವಿ ಚಂದ್ರ ಪಾವಕನ ಪರಿಯಲ್ಲಿ ತೇಜದಲಿ ॥೪೧೮॥

ದಿವ್ಯ ಪ್ರಕಾಶದಲಿ ಹೊಳೆಯುತಲಿ ಬೆಳಗುತಲಿ
ಅತಿಸತ್ವ ಬಲಯುತರು ಮಹವೀರ ಮೂವರೂ
ಅಜಹರಿಯ ರುದ್ರರಾ ಪರಿಯಲ್ಲಿ ಶೋಭಿಸುತ
ಮಾಗಧನ ದೇಶಕ್ಕೆ ಪಯಣವನು ಬೆಳೆಸಿದರು ॥೪೧೯॥

ಕುರುದೇಶ ಕ್ರಮಿಸುತಲಿ ಪದ್ಮಗಳು ರಾಜಿಸುವ
ಸುಂದರದ ಪದ್ಮದ ಸರೋವರವ ದಾಂಟುತಲಿ
ವರಕಾಲ ಕೂಟದಾ ಪರ್ವತವ ನೇರುತಲಿ
ಇಳಿಯುತಲಿ ಗಂಡಕಿಯು ಮಹಶೋಣ ನದಿಗಳನು ॥೪೨೦॥

ದಾಂಟುತಲಿ ಸರಯೂಳ ತೀರದಲಿ ಮೆರೆಯುತಿಹ
ಪಾವನದ ಪುಣ್ಯತರ ಶ್ರೀರಾಮ ಚಂದ್ರನಾ
ಕೋಸಲದ ರಾಜ್ಯವನು ನೋಡುತಲಿ ಸಾಗುತಲಿ
ಮಿಥಿಲೆಯನು ದಾಂಟುತಲಿ ಮೂಲೋಕ ಉದ್ಧರಿಪ ॥೪೨೧॥

ಅಘಹರಳ ಗಂಗೆಯಲಿ ಮೀಯುತಲಿ ನಡೆಯುತಲಿ
ಪೂರ್ವಕ್ಕೆ ತೆರಳುತಲಿ ಮಾಗಧದ ದೇಶದಾ
ಗಡಿಯನ್ನು ಕ್ರಮಿಸುತಲಿ ಗೋರಥದ ಪರ್ವತವ
ಏರುತಲಿ ಮೂವರೂ ಸುತ್ತಲೂ ನೋಡಿದರು ॥೪೨೨॥

ಮಗಧನೃಪ ಸಕಲಪ್ರಜೆ ಭಕುತಿಯಲಿ ಪೂಜಿಸುವ
ಗಿರಿವ್ರಜಕೆ ಮಸ್ತಕದ ಪರಿಯಲ್ಲಿ ಸೊಗಯಿಸುವ
ಚೈತ್ಯಕದ ಪರ್ವತವನೇರುತಲಿ ತ್ರಯರುಗಳು
ಭೇರಿಗಳ ಮೂರನ್ನು ಇರಿಸಿಹುದು ಕಂಡಿಹರು ॥೪೨೩॥

ನೃಪವರ ಬೃಹದ್ರಥನು ವೃಷಭನಾ ರಕ್ಕಸನ
ಸಂಹಾರ ಗೈಯುತಲಿ ರಾಕ್ಷಸನ ಚರ್ಮದಲಿ
ನಿರ್ಮಿಸಿದ ಭಾರಿಯಾ ಭೇರಿಗಳ ಮೂರನ್ನು
ಮೂವರೂ ಬಾರಿಸಲು ಘೋರರವ ಮೊಳಗಿದಂದು ॥೪೨೪॥

ಗಗನವದು ಹರಿಯುತಲಿ ಧರೆಗಳಿದು ಬಿದ್ದಿಹುದೊ
ಭೂಕಂಪವಾಗಿಹುದೊ ಕಡಲುಕ್ಕಿ ಮೊರೆದಿಹುದೊ
ಪ್ರಳಯದಾ ಕಾಲವದು ಸನ್ನಿಹಿತವಾಗಿಹುದೊ
ಎನ್ನುತಲಿ ಸಕಲ ಪ್ರಜೆ ಭಯಭೀತರಾಗಿಹರು ॥೪೨೫॥

ಭೂತಗಳ ಕಾಟವೋ ಬೇತಾಳದಾಟವೋ
ಆ ಐಂದ್ರಜಾಲಿಕರ ಮಾಟಕರ ಮಾಟವೋ
ಶತ್ರುಗಳು ಎನ್ನೊಡನೆ ಯುದ್ಧಕ್ಕೆ ಬಂದಿಹರೊ
ಎನ್ನುತಲಿ ಜರಸಂಧ ಚಿಂತೆಯಲಿ ಮುಳುಗಿದನು ॥೪೨೬॥

ಎನ್ನನ್ನು ಎದುರಿಸುತ ಕದನವನು ಗೈಯ್ಯುವಾ
ಅತಿಶೂರ ಬಲಶಾಲಿ ಕಡುಗಲಿಯು ಆರಿಲ್ಲ
ಸಕಲರಾ ರಾಜರನು ಸೆರೆಯೊಳಗೆ ಇಟ್ಟಿಹೆನು
ಇನ್ನುಳಿದ ಆ ಗೊಲ್ಲಕೃಷ್ಣನಾ ಮಾತೇನು ॥೪೨೭॥

ಬಡಹೋರಿ ಹೆಂಗುಸನು ಹಾವನ್ನು ಕುದುರೆಯನು
ಬಂಡಿಯನು ಗೂಳಿಯನು ನಾಶವನು ಮಾಡಿರುವ
ಗೋಪಿಯರ ಬೆಣ್ಣೆಯನು ಕದ್ದಿರುವ ಕಳ್ಳನಾ
ಮಾಧವನು ಕೆಣಕುವದಸಾಧ್ಯವಿದೆ ಎಂದಿಹನು ॥೪೨೮॥

ಪ್ರಾಣಿಗಳು ಪಕ್ಷಿಗಳು ಆರ್ತದಲಿ ಕೂಗುತಿರೆ
ಅಗ್ನಿ ಪ್ರಕೋಪಗಳು ಭೂಕಂಪ ಉಲ್ಕೆಗಳು
ಮೊದಲಾದ ವಿಧವಿಧದ ಅಪಶಕುನವಾಗುತಿರೆ
ಘೋರತರ ಆಪತ್ತು ಬರುತಲಿದೆ ಎನ್ನುತಲಿ ॥೪೨೯॥

ಮಾಗಧನು ಯೋಚಿಸುತ ಋತ್ವಿಜರ ಕರೆಯುತಲಿ
ಪರಿಹಾರಕೋಸುಗವೆ ಶಾಂತಿಯಾ ಹೋಮಗಳ
ಹವನಗಳ ಮಾಡುತಲಿ ದಿಗುಬಲಿಯ ನೀಯುತಲಿ
ಹೇರಳದ ಧನಕನಕ ದಾನಗಳ ನಿತ್ತಿಹನು ॥೪೩೦॥

ಮಾಗಧನು ಸಕಲಪ್ರಜೆ ಭಕುತಿಯಲಿ ಪೂಜಿಸುವ
ಚೈತ್ಯಕದ ಪರ್ವತದ ಕಠಿಣತರ ಶಿಖರವನು
ಭುಜಬಲದ ಸತ್ವಾತಿಯ ಶ್ರೇಷ್ಠ ಮೂವರೂ
ಮುಷ್ಟಿಪ್ರಹಾರವನು ಗೈಯ್ಯುತಲಿ ಕೆಡುಹಿದರು ॥೪೩೧॥

ನೇರವಿಹ ಮಾರ್ಗವನು ತ್ಯಜಿಸುತಲಿ ಮೂವರೂ
ಬೇರೆಯಾ ಮಾರ್ಗವನು ಹಿಡಿಯುತಲಿ ಸಾಗುತಲಿ
ಸುಂದರದ ಸೌಧಗಳ ವಿಸ್ತರದ ಬೀದಿಗಳ
ಮಾಗಧನ ನಗರವನು ಗಿರಿವ್ರಜವ ಹೊಕ್ಕಿಹರು ॥೪೩೨॥

ರಾಜಪಥ ಮಧ್ಯದಲಿ ಬರುತಲಿರೆ ಮೂವರೂ
ಕೆಲಬಲವ ನೀಕ್ಷಿಸುತ ಅಂಗಡಿಯೊಳಿರುತಿರುವ
ಪುಷ್ಪಗಳ ಮಾಲೆಗಳ ಬಲದಿಂದ ಕೊಳ್ಳುತಲಿ
ಕೊರಳೊಳಗೆ ಧರಿಸುತಲಿ ಸಾಗುತಿರೆ ಬೆಡಗಿನಲಿ ॥೪೩೩॥

ನೆರೆದಿರುವ ಜನರೆಲ್ಲ ಬೆರಗಾಗಿ ನೋಡುತಿರೆ
ಭರದಿಂದ ಸಾಗುತಲಿ ಹಸಿದಿರುವ ಸಿಂಹಗಳು
ಹಸುಗಳಾ ಕೊಟ್ಟಿಗೆಯ ಹೊಗುವಂತೆ ತ್ರಯರುಗಳು
ಮಾಗಧನ ಅರಮನೆಯ ಹೊಕ್ಕಿಹರು ವೇಗದಲಿ ॥೪೩೪॥

ಜರೆಸಂಧ ಕುಳಿತಿರ್ದ ಸಭೆಯೊಳಗೆ ಬರುತಿರಲು
ಭೂಸುರರು ಬಂದಿಹರು ಎನ್ನುತಲಿ ಏಳುತಲಿ
ಮಾಗಧನು ಆದರದಿ ಮೂವರನು ಸತ್ಕರಿಸಿ
ತಮಗೆಲ್ಲ ಸ್ವಾಗತವು ಇತ್ತಕಡೆ ಬಹುದೆಂದು ॥೪೩೫॥

ನುಡಿಯುತಿರೆ ಭೀಮಾರ್ಜುನೀರ್ವರೂ ಮೌನವಿರೆ
ರಾತ್ರಿಯಾಪರ್ಯಂತ ಮೌನದಲಿ ಇವರಿಹರು
ನಂತರದಿ ನಿನ್ನೊಡನೆ ನುಡಿಯುವರು ಎನ್ನುತಲಿ
ಶ್ರೀಕೃಷ್ಣ ನುಡಿಯುತಿರೆ ಮಾಗಧನು ಮೂವರಿಗೆ ॥೪೩೬॥

ಯಾಗದಾ ಶಾಲೆಯಲಿ ಇರಿಸುತಲಿ ತೆರಳುತಲಿ
ಸರಿಅರ್ಧ ರಾತ್ರಿಯಲಿ ಮಾಗಧನು ಐತಂದು
ನಮಿಸುತಿರೆ ಮರುತಜನು ಅರ್ಜುನನು ಈರ್ವರೂ
ಮಂಗಳವು ನಿನಗಾಗಲೆನ್ನುತಲಿ ಹರಸಿದರು ॥೪೩೭॥

ಮೂವರೂ ಪೀಠದಲಿ ಆಸೀನರಾಗಿಹರು
ಸ್ನಾತಕವ ವ್ರತಗೈವ ಭೂಸುರರು ತಮ್ಮಯಾ
ದೇಹದಲಿ ಭೂಷಣ ಅಲಂಕಾರ ವಸ್ತ್ರಗಳ
ತೊಡದಿರುವ ವಿಷಯವದು ನಿಮಗೆಲ್ಲ ತಿಳಿದಿಹುದು ॥೪೩೮॥

ನೀವುಗಳು ದೇಹಕ್ಕೆ ಚಂದನವ ಲೇಪಿಸುತ
ಪೀತಾಂಬರಾಭರಣ ಮಾಲೆಗಳ ಧರಿಸಿಹಿರಿ
ದರ್ಭೆಗಳ ಸಮಿಧೆಗಳ ಕೊಳವೆಗಳ ಹಿಡಿಯುವಾ
ಕರಗಳಲಿ ಬಿಲ್ಲುಗಳ ಬಾಣಗಳ ಹಿಡಿದಿಹಿರಿ ॥೪೩೯॥

ನೀವುಗಳು ದ್ವಿಜರೆಂದು ನುಡಿದಿಹಿರಿ ಆದೊಡೆಯು
ನಿಮ್ಮಯಾ ನುಡಿಗಳಲಿ ಕ್ಷತ್ರಿಯರ ಶೌರ್ಯವಿದೆ
ಚೈತ್ಯಕದ ಪರ್ವತದ ಶಿಖರವನು ಕೆಡುಹುವಾ
ಅದ್ಭುತದ ಶಕ್ತಿಯದು ವಿಪ್ರರಿಗೆ ಎಲ್ಲಿಹುದು ॥೪೪೦॥

ಸರಳವಿಹ ಮಾರ್ಗವನು ತೊರೆಯುತಲಿ ಕಷ್ಟವಿಹ
ಕುಮಾರ್ಗವನು ಹಿಡಿಯುತಲಿ ನಗರದೊಳು ಬಂದಿಹಿರಿ
ವಿಪ್ರರಿಗೆ ಯೋಗ್ಯವಿಹ ಕಾರ್ಯಗಳ ಗೈಯ್ಯದೆಯೆ
ರಾಜಾಪರಾಧಗಳ ದುಷ್ಕೃತ್ಯ ಗೈದಿಹಿರಿ ॥೪೪೧॥

ಈ ಪರಿಯ ಸಾಮರ್ಥ್ಯ ಕ್ಷತ್ರಿಯರಿಗಲ್ಲದೆಯೆ
ಅನ್ಯರಿಗೆ ವಿಪ್ರರಿಗೆ ಎಂದಿಗೂ ಬಾರದಿದೆ
ಭೂಸುರರ ವೇಷವನು ಧರಿಸುತಲಿ ಬಂದಿರುವ
ನಿಮ್ಮಾರು ನಿಜವಾಗಿ ಇರುತಿಹಿರಿ ಪೇಳುವುದು ॥೪೪೨॥

ಎನ್ನನ್ನು ಅರಸುತಲಿ ಎನ್ನಯಾ ಅರಮನೆಗೆ
ನೀವಿಂದು ವೇಷದಲಿ ಬಂದಿರುವ ಕಾರಣವ
ಖಚಿತದಲಿ ವಿಶದದಲಿ ಪೇಳುವುದು ಎನ್ನುತಲಿ
ಮಾಗಧನು ನುಡಿಯುತಿರೆ ಮುರಹರನು ನುಡಿದಿಹನು ॥೪೪೩॥

ಸ್ನಾತಕದ ವ್ರತವನ್ನು ಎಲ್ಲರೂ ಗೈಯ್ಯುವುದು
ತಪ್ಪಲ್ಲ ಎಲ್ಲರಿಗೆ ಅವರಿಚ್ಛೆ ಫಲಿಸುವುದು
ಕ್ಷತ್ರಿಯರು ಭುಜಬಲದಿ ಶೌರ್ಯವನು ತೋರುವರು
ಬರಿಬಾಯ ಮಾತಿನಲಿ ಎಂದಿಗೂ ತೋರಿಸರು ॥೪೪೪॥

ಎಮ್ಮಯಾ ಕ್ಷಾತ್ರಬಲ ಶೌರ್ಯಗಳ ನೋಡಲಿಕೆ
ಇಚ್ಛೆಯದು ಇರ್ದೊಡೆಯೆ ಇಂದಿನಲಿ ನೀ ಕಾಂಬೆ
ಶತ್ರುಗಳ ಮನೆಯನ್ನು ಮಹದ್ವಾರ ಮೂಲಕದಿ
ಹೊಗುವದದು ಧರ್ಮಕ್ಕೆ ಬಾಹಿರವು ಆಗಿಹುದು ॥೪೪೫॥

ಕಾರಣದಿ ಬೇರೆಯಾ ಮಾರ್ಗದಲಿ ಹೊಕ್ಕಿಹೆವು
ನಾವೆಂದು ವೈರಿಗಳ ಸತ್ಕಾರ ಕೊಳ್ಳೆವು
ಆವುದೋ ಕಾರ್ಯದಲಿ ನಾವಿಲ್ಲಿ ಬಂದಿಹೆವು
ಎನ್ನುತಲಿ ಮುರಹರನು ನಸುನಗುತ ನುಡಿದಿಹದು ॥೪೪೬॥

ಜನಮೇಜಯಾವನಿಪನೆ ಮಾಗಧನು ನುಡಿದಿಹನು
ನೀವುಗಳು ದ್ವಿಜರುಗಳು ನಾನೆಂದು ವಿಪ್ರರಿಗೆ
ಕನಸಿನಲಿ ಮನಸಿನಲಿ ಅಹಿತವನು ಮಾಡಿಲ್ಲ
ಭೂಸುರರ ಹಿಂಸಿಸಲು ಪಾಪವದು ಲಭಿಸುವದು ॥೪೪೭॥

ಎಂಬುದನು ನಾಬಲ್ಲೆ ಕ್ಷತ್ರಿಯರ ಧರ್ಮವನು
ಮೀರುತಲಿ ಅನುಚಿತದ ಕಾರ್ಯಗಳ ಮಾಡಿಲ್ಲ
ಎನ್ನಯಾ ಸಕಲಪ್ರಜೆ ಸುಖವಾಗಿ ಇರುತಿಹರು
ನೀವುಗಳು ವಿಪರೀತ ನುಡಿಯುವಿರಿ ಎಂದಿಹನು ॥೪೪೮॥

ನಿಮಗಾವ ದ್ವೇಷದಾ ಕಾರ್ಯವನು ಮಾಡಿಹೆನು
ನಾನೆಂದು ನಿಮ್ಮಯಾ ಶತ್ರುವಿಹೆ ಎಂಬುದನು
ವಿಶದವಲಿ ಪೇಳುವುದು ಎನ್ನುತಿರೆ ಜರೆಸಂಧ
ಮುರವೈರಿ ನುಡಿದಿಹನು ನಸುನಗೆಯ ಸೂಸುತಲಿ ॥೪೪೯॥

ನಿನ್ನಯಾ ಪ್ರಜೆಗಳನು ಸುಖದೊಳಗೆ ಇರಿಸಿಹೆನು
ಎನ್ನುತಲಿ ನುಡಿಯುತಿಹ ನೀ ಸಕಲ ರಾಜರನು
ಸದೆ ಬಡೆದು ಹಿಂಸಿಸುತ ಸೆರೆಯೊಳಗೆ ಇಟ್ಟಿರುವೆ
ಇದು ಪಾಪಕೃತ್ಯವೆಂದೆನಿಸದೇ ಇರುತಿಹುದೆ ॥೪೫೦॥

ಮೇಲಾಗಿ ಮಹರುದ್ರಯಾಗವನು ಮಾಡುತಲಿ
ರಾಜರನು ಯಾಗದಾ ಪಶುವಾಗಿ ಮಾಡುತಲಿ
ಬಲಿಕೊಡಲು ನಿಶ್ಚಯವ ಮಾಡಿರುವೆ ಇದಕಿಂತ
ಕ್ರೂರತರ ಪಾಪವದು ಜಗದೊಳಗೆ ಬೇರಿಲ್ಲ ॥೪೫೧॥

ಧರ್ಮವನು ರಕ್ಷಿಪುದು ಎಮ್ಮಯಾ ಕರ್ತವ್ಯ
ನೀಗೈವ ದುಷ್ಕೃತ್ಯ ನೋಡುತಲಿ ಸುಮ್ಮನೆ
ಕೈಕಟ್ಟಿಕುಳಿತೊಡೆಯು ದೋಷವದು ಸೋಂಕುವುದು
ನಾವುಗಳು ಪಾಪದಲಿ ಭಾಗಿಗಳು ಆಗುವೆವು ॥೪೫೨॥

ಸೆರೆಯೊಳಗೆ ಇರಿಸಿರುವ ರಾಜರನು ಬಿಡಿಸಲಿಕೆ
ನಾವೀಗ ನಿನ್ನೊಡನೆ ಯುದ್ಧಕ್ಕೆ ಬಂದಿಹೆವು
ದ್ವಿಜರುಗಳು ನಾವಲ್ಲ ವೈರಿಗಳ ರುಂಡಗಳ
ಚೆಂಡುಗಳನಾಡುವಾ ಕ್ಷತ್ರಿಯರು ನಾವಿಹೆವು ॥೪೫೩॥

ಜಗದೊಳಗೆ ವಿಕ್ರಮರು ಅತಿಶೂರರೆನಿಸಿರುವ
ಭೀಮಾರ್ಜುನೀವರ್ರರೂ ಇವರಿಹರು ತಿಳಿಯುವುದು
ನಿನ್ನಯಾ ಕಡುವೈರಿ ಶ್ರೀಕೃಷ್ಣ ನಾನಿಹೆನು
ನಿನ್ನೊಡನೆ ಯುದ್ಧಕ್ಕೆ ನಾವೀಗ ಬಂದಿಹೆವು ॥೪೫೪॥

**ಘನಘೋರ ಯುದ್ಧವನು ಗೈಯ್ಯುತಲಿ ಕಲಿಭೀಮ ।**
**ಜರೆಸಂಧ ದುರುಳನನು ಸಂಹಾರ ಗೈದಿಹನು ॥**

ಕುರುಕುಲದ ಶ್ರೇಷ್ಠನೃಪ ಧರ್ಮಜನು ಕೈಕೊಂಡ
ಮಹಕಾರ್ಯಕೋಸುಗವೆ ನಾವಿಲ್ಲಿ ಬಂದಿಹೆವು
ಕದನವನು ಗೈಯ್ಯುತಲಿ ನಿನ್ನನ್ನು ವಧಿಸುತಲಿ
ಬಂಧನದೊಳಿರುತಿರುವ ರಾಜರನು ಬಿಡಿಸುವೆವು ॥೪೫೫॥

ಎಮ್ಮೊಡನೆ ಯುದ್ಧವನು ಮಾಡುತಲಿ ಮಡಿಯುವುದು
ಇಲ್ಲದಿರೆ ಶರಣಾಗಿ ಸೆರೆಹಿಡಿದ ರಾಜರನು
ಬಿಡುಗಡೆಯ ಮಾಡುವುದು ಇವು ಎರಡು ಮಾರ್ಗಗಳು
ಇವಸುಳಿದು ನಿನಗಾವ ದಾರಿಯದು ಇಲ್ಲೆಂದ ॥೪೫೬॥

ಹೇ ಕೃಷ್ಣ ಕೇಳುವುದು ಕ್ಷತ್ರಿಯನು ನಾನಿಹೆನು
ಕ್ಷತ್ರಿಯರಿಗು ಚಿತವಿಹ ಯುದ್ಧವನು ಗೈಯ್ಯುತಲಿ
ರಾಜರನು ಜಯಿಸುತಲಿ ಬಂಧನದೊಳಿಟ್ಟಿಹೆನು
ಇದರೊಳಗೆ ಆವುದೂ ದೋಷವನು ನಾಕಾಣೆ ॥೪೫೭॥

ನಿನ್ನಯಾ ಬೆದರಿಕೆಯ ಮಾತುಗಳ ಕೇಳುತಲಿ
ಪ್ರಾಣದಾ ಭಯದಿಂದ ಸೆರೆಹಿಡಿದ ರಾಜರನು
ಬಿಡುಗಡೆಯ ಮಾಡುವುದು ನನ್ನಂಥ ವೀರನಿಗೆ
ಜಗದೇಕ ವಿಕ್ರಮಗೆ ಕ್ಷತ್ರಿಯಗೆ ಶೋಭಿಸದು ॥೪೫೮॥

ನೀವುಗಳು ಮೂವರೂ ಸೇರುತಲಿ ಎನ್ನೊಡನೆ
ಯುದ್ಧಕ್ಕೆ ಬಂದೊಡೆಯು ಏಕಾಂಗಿಯಾಗುತಲಿ
ಕಾದುತಲಿ ಜಯಿಸುವೆನು ಖಚಿತದಲಿ ಇಲ್ಲದಿರೆ
ಒಬ್ಬೊಬ್ಬರಾಗುತಲಿ ಬಂದೊಡೆಯು ಸಿದ್ಧನಿಹೆ ॥೪೫೯॥

ಭೀಮಾರ್ಜುನೀವರ್ರರೇ ನೀವುಗಳು ಬಾಲಕರು
ತಂದೆಯನು ಕಳಕೊಂಡ ತಬ್ಬಲಿಗಳಾಗಿಹಿರಿ
ಬುದ್ಧಿಯನು ಹೇಳುವಾ ಹಿರಿಯರುಗಳಾರಿಲ್ಲ
ಕೃಷ್ಣನನು ನಂಬುತಲಿ ಕೆಟ್ಟಿಹಿರಿ ನೀವೆಂದ ॥೪೬೦॥

ಬಾಲಕರು ನಾವಲ್ಲ ಕಾಲಯಮ ಸರಿಸಮರು
ಸಮರದಲಿ ನಿನ್ನನ್ನು ಯಮಸದನಕಟ್ಟುವೆವು
ನಾವುಗಳು ಕೆಟ್ಟಿಹೆವೊ ನೀವುಗಳು ಕೆಟ್ಟಿಹಿರೊ
ಎಂಬುದನು ಯುದ್ಧದಲಿ ನೋಡುವುದು ನಮ್ಮನ್ನು ॥೪೬೧॥

ಲೋಕವನು ಸೃಷ್ಟಿಸುತ ಪೋಷಿಸುತ ಲಯಗೊಳಿಪ
ಸಕಲ ಸಚರಾಚರದ ವಿಶ್ವಕ್ಕೆ ಕಾರಣನು
ಆಗಿರುವ ಕೃಷ್ಣನನು ನೀನೆಂತು ಅರಿತಿರುವೆ
ಎನ್ನುತಲಿ ಭೀಮಾರ್ಜುನೀವರ್ರರೂ ನುಡಿದಿಹರು ॥೪೬೨॥

ಎಲವೆಲವೊ ಜಂಭದಲಿ ಗರ್ವದಲಿ ಕೊಚ್ಚದಿರು
ಕ್ಷತ್ರಿಯರು ಮಾತಿನಲಿ ಶೌರ್ಯವನು ತೋರಿಸರು
ಶಕ್ತಿಯದು ಇರ್ದೊಡೆಯ ಎಮ್ಮೊಡನೆ ರಣದಲ್ಲಿ
ಯುದ್ಧವನು ಮಾಡುತಲಿ ತೋರುವುದು ಎಂದಿಹರು ॥೪೬೩॥

ಬಳಿಕಲಾ ಜರೆಸಂಧ ಮಂತ್ರಿಗಳ ಕರೆಸುತಲಿ
ಸಹದೇವ ಸುತನಿಂಗೆ ರಾಜ್ಯಾಭಿಷೇಕವನು
ಮಾಡಲಿಕೆ ತಿಳಿಸುತಲಿ ಯುದ್ಧವನು ಮಾಡಲಿಕೆ
ಸನ್ನದ್ಧನಾಗುತಲಿ ನಿಂತಿಹನು ಕ್ರೋಧವಲಿ ॥೪೬೪॥

ತನುವಿಂಗೆ ಗಂಧವನು ಚಂದನವ ಲೇಪಿಸುತ
ನೊಸಲಿನಲಿ ಕುಂಕುಮದ ತಿಲಕವನು ಇರಿಸುತಲಿ
ಚಡ್ಡಿಯನು ಧರಿಸುತಲಿ ಯುದ್ಧಕ್ಕೆ ಬಹುದೆಂದು
ಗರ್ಜಿಸುತ ನುಡಿಯುತಿರೆ ಶ್ರೀಕೃಷ್ಣ ನುಡಿದಿಹನು ॥೪೬೫॥

ಎಮ್ಮೊಳಗೆ ಮೂವರಲಿ ನೀನಾರ ಜೊತೆಯಲ್ಲಿ
ಯುದ್ಧವನು ಮಾಡಲಿಕೆ ಇಚ್ಛಿಸುವೆ ಪೇಳುವುದು
ನಿನಗಿಚ್ಛೆಯುಳ್ಳವರ ಜೊತೆಯಲ್ಲಿ ಕಾದುವುದು
ಎನ್ನುತಿರೆ ಶ್ರೀಕೃಷ್ಣ ಮಾಗಧನು ನುಡಿದಿಹನು ॥೪೬೬॥

ಎನ್ನೊಡನೆ ಕಾದಲಿಕೆ ಸರಿಸಮನು ನೀನಲ್ಲ
ಎಂಥತ್ತು ಬಾರಿಯಲಿ ಯುದ್ಧವನು ಮಾಡುತಲಿ
ರಣದೊಳಗೆ ಓಡುತಲಿ ಕೋಟೆಯಲಿ ಅಡಗುತಲಿ
ಕುಳಿತಿರುವ ನೀನಾರು ವೀರನಿಹೆ ಎಂದಿಹನು ॥೪೬೭॥

ಸಿಂಹವದು ಗಜದೊಡನೆ ಸೆಣಸುವದೊಡಲ್ಲದೆ
ನಿರ್ಬಲದ ಮೊಲದೊಡನೆ ಎಂದಿಗೂ ಸೆಣಸದದು
ಹಸುವನ್ನು ಹೆಂಗುಸನು ಬಂಡಿಯನು ಹಾವನ್ನು
ಕೊಂದಿರುವ ನೀನಾವ ಧೀರನಿಹೆ ಹೇಳೆಂದ ॥೪೬೮॥

ಬಾಲ್ಯದಲಿ ಗೋಪಿಯರ ಮನೆಯೊಳಗೆ ನುಗ್ಗುತಲಿ
ಬೆಣ್ಣೆಯನು ಕದ್ದಿರುವ ನೀನಾವ ಶಕ್ತನಿಹೆ
ಅರ್ಜುನನು ಬಾಲಕನು ಅವನೊಡನೆ ಯುದ್ಧವನು
ಮಾಡುವುದು ನನ್ನಂಥ ವೀರನಿಗೆ ಶೋಭಿಸವು ॥೪೬೯॥

ಕಲಿಭೀಮನೋರ್ವನೆ ಸಮಬಲನು ನನಗಿಹನು
ಅವನೊಡನೆ ಯುದ್ಧವನು ಗೈಯ್ಯುವದು ಯೋಗ್ಯವಿದೆ
ಅತಿಬಲರ ಜೊತೆಯಲ್ಲಿ ಯುದ್ಧವನು ಮಾಡುತಲಿ
ಸೋತರೂ ಮಡಿದರೂ ಕೀರ್ತಿಕರ ಎಂದಿಹನು ॥೪೭೦॥

ರಾಜನಾ ಮಂದಿರದ ಮಧ್ಯದಾ ಭಾಗದಲಿ
ಅದ್ಭುತದ ಯುದ್ಧವನು ನೋಡಲಿಕೆ ಕೌತುಕದಿ
ಬಂಧುಗಳು ಬಾಂಧವರು ಸಕಲಪ್ರಜೆ ಮಂತ್ರಿಗಳು
ನೆರೆದಿಹರು ಲಕ್ಷೋಪಲಕ್ಷದಾ ಸಂಖ್ಯೆಯಲಿ ॥೪೭೦॥

ಕಾರ್ತಿಕದ ಶುಕ್ಲದಾ ಪ್ರತಿಪದೆಯ ದಿವಸದಲಿ
ಮೂಡಣದ ಪರ್ವತದ ಉತ್ತುಂಗ ಶಿಖರದಲಿ
ಹೊಂಬಣ್ಣ ತೇಜದಲಿ ಹೊಳೆಯುತಲಿ ಉದಯರವಿ
ಯುದ್ಧವನು ನೋಡಲಿಕೆ ಭರದಿಂದ ಮೂಡಿಹನು ॥೪೭೨॥

ಮುನ್ನಿನಲಿ ಬಲದೈತ್ಯ ಇಂದ್ರನಾ ಮೈಮೇಲೆ
ಮುನ್ನುಗ್ಗಿ ನಡೆದಂತೆ ಮಾಗಧನು ನುಗ್ಗುತಿರೆ
ಕಲಿಭೀಮ ಕೃಷ್ಣನಾ ಪಾದಗಳ ನಮಿಸುತಲಿ
ಧಾವಿಸುತ ಬರುತಲಿಹ ಮಾಗಧನ ತಡೆದಿಹನು ॥೪೭೩॥

ಮಾಗಧನ ತೋಳ್ಗಳನು ಬಲವಾಗಿ ಹಿಡಿಯುತಲಿ
ಕಾಲನ್ನು ಕಾಲೊಳಗೆ ಹಾಕುತಲಿ ತಿರುಗಿಸುತ
ಭೂಮಿಯಲಿ ಕೆಡಹುತಿರೆ ಮಾಗಧನು ಮೇಲೆದ್ದು
ಭೀಮನಾ ಮೇಲಕ್ಕೆ ಎರಗಿದನು ರಭಸದಲಿ ॥೪೭೪॥

ಮಾಗಧನ ಕತ್ತನ್ನು ಹಿಡಿಯುತಲಿ ಹಿಂದಕ್ಕೆ
ನೂಕುತಿರೆ ನೂರುಗಜ ಹಾರುತಲಿ ಬಿದ್ದಿಹನು
ಓಡೋಡಿ ಭರದಿಂದ ಐತಂದು ಮರುತಜನ
ನಾಗದಾ ಬಂಧದಲಿ ಅಪ್ಪುತಲಿ ಬಿಗಿಯುತಲಿ ॥೪೭೫॥

ಹಿಸುಕುತಿರೆ ಕಲಿಭೀಮ ಮೈಯನ್ನೂ ಹಿಗ್ಗಿಸುತ
ಬಂಧನವ ಕೊಸರಿಸುತ ವಿಧವಿಧದ ಮಲ್ಲದಲಿ
ಮದವೇರ್ದ ಗಜವೆರಡು ಸೆಣಸುವಾ ಪರಿಯಲ್ಲಿ
ಒಬ್ಬರರನೊಬ್ಬರನು ಮುತ್ತುತಲಿ ಹೆಣಗಿದರು ॥೪೭೬॥

ಘುಡುಘುಡಿಪ ಗುಡುಗಿನಾ ದನಿಯಲ್ಲಿ ಈರ್ವರೂ
ಬಾಹುಗಳ ನೆತ್ತುತಲಿ ಯುದ್ಧವನು ಮಾಡುತಿರೆ
ಸೊಂಡಿಲುಗಳೆತ್ತುತಲಿ ಮತ್ತ ಗಜವೆರಡುಗಳು
ಹೋರಾಟ ಗೈಯ್ಯುವಾ ಪರಿಯಲ್ಲಿ ತೋರಿದರು ॥೪೭೭॥

ಎಳೆದಾಟ ಸೆಳೆದಾಟ ಮುಷ್ಟಿಪ್ರಹಾರದಲಿ
ವಿಧವಿಧದ ಪರಿಯಲ್ಲಿ ಹೆಣಗುತಲಿ ಈರ್ವರೂ
ಸಿಂಹಗಳು ಎರಡುಗಳು ದುರುದುರುನೆ ನೋಡುವಾ
ಪರಿಯಲ್ಲಿ ಕ್ಷಣಕಾಲ ನೋಡುತಲಿ ನಿಲ್ಲುತಲಿ ॥೪೭೮॥

ಭರದಿಂದ ಓಡುತಲಿ ಸೆಳೆಯುತಲಿ ಕೆಡಹುತಲಿ
ಬೆನ್ನಿನಲಿ ಕೂಡ್ರುತಲಿ ಮುಖಮೇಲಕೆತ್ತುತಲಿ
ಕುತ್ತಿಗೆಯ ಮುರಿಯಲಿಕೆ ಯತ್ನಿಸಲು ಕೋಪದಲಿ
ಸಿಡಿದೆದ್ದು ಸೆಣಸುತಲಿ ಇರ್ದಿಹರು ಈರ್ವರು ॥೪೭೯॥

ಹಾಗಲವ ಸೌತೆಯನು ಬೆಂಡೆಯನು ಛಾಗಿಸುವ
ಪರಿಯಲ್ಲಿ ದೇಹಗಳ ಮುರಿಯಲಿಕೆ ಯತ್ನಿಪರು
ಗುರಿಯನ್ನು ತಪ್ಪಿಸಲು ವಿಧವಿಧದ ಅಂಗಗಳ
ಮುಷ್ಟಿಪ್ರಹಾರದಲಿ ಕೊಸರುತಲಿ ಹೆಣಗಿದರು ॥೪೮೦॥

ಜಗಜಟ್ಟಿ ಈರ್ವರೂ ಅಪ್ಪಳಿಸಿ ಕೆಡುಹುವಾ
ಗುಡುಗಿನಾ ನಾದಕ್ಕೆ ಭೂಮಿಯದು ಕಂಪಿಸಿತು
ಪಾದದಾ ಘಟ್ಟಣೆಗೆ ಪರ್ವತದ ಶಿಖರಗಳು
ಬಿರಿಯುತಲಿ ನೆಲಕುರುಳಿ ಬಿದ್ದಿಹವು ಪುಡಿಯಾಗಿ ॥೪೮೧॥

ಸತ್ವದಾ ಕಾಯಗಳ ವೀರರುಗಳೀರ್ವರೂ
ಒಬ್ಬರರನೊಬ್ಬರನು ಅಪ್ಪುತಲಿ ಬಿಗಿಯುತಲಿ
ಯುದ್ಧವನು ಮಾಡುತಿರೆ ಅದ್ರಿಗಳು ಎರಡುಗಳು
ಮೇಲೆದ್ದು ಸೆಣಸುವಾ ಪರಿಯಲ್ಲಿ ಕಂಡಿಹರು ॥೪೮೨॥

ಒಬ್ಬರರನೊಬ್ಬರನು ಸೋಲಿಸುವ ತವಕದಲಿ
ಉಕ್ಕುತಿಹ ಉತ್ಸಾಹ ಶೌರ್ಯದಲಿ ಸತ್ವದಲಿ
ಸೆಳೆಯುತಲಿ ತಳ್ಳುತಲಿ ಅಪ್ಪುತಲಿ ಕೆಡುಹುತಲಿ
ಮುಷ್ಟಿಯಲಿ ಕುಟ್ಟುತಲಿ ಅದ್ಭುತದಿ ಹೆಣಗಿದರು ॥೪೮೩॥

ಮುನ್ನಿನಲಿ ಸುರಪತಿಯು ವೃತ್ರನಾ ರಕ್ಕಸನ
ಯುದ್ಧದಾ ಪರಿಯಲ್ಲಿ ಭೀಕರದಿ ಕಂಡಿಹುದು
ಈ ಪರಿಯ ಸಮರವನು ನಾವೆಂದು ನೋಡಿಲ್ಲ
ಎನ್ನುತಲಿ ನೆರೆದಿರುವ ಜನರೆಲ್ಲ ನುಡಿದಿಹರು ॥೪೮೪॥

ಈ ಪರಿಯೆ ಈರ್ವರೂ ಘನಘೋರ ಕದನವನು
ಕಾರ್ತಿಕ ತ್ರಯೋದಶಿಯು ಪರ್ಯಂತ ಸತತವೂ
ಅನ್ನಪಾನಾದಿಗಳ ಪರಿವೆಯದು ಇಲ್ಲದೆಯೆ
ಹದಿಮೂರು ದಿನಕಾಲ ಪರ್ಯಂತ ಗೈದಿಹರು ॥೪೮೫॥

ಚತುರ್ದಶಿಯ ರಾತ್ರಿಯಲಿ ಮಾಗಧನು ಅತಿಯಾಗಿ
ಜರ್ಝರಿತನಾಗುತಲಿ ತ್ರಾಣವದು ಕುಂದುತಲಿ
ನರಳುತಲಿ ನೋವಿನಲಿ ಝೋಲಿಯನು ಹೊಡೆಯುತಿರೆ
ಪವನಜನು ನೋಡುತಲಿ ಮಾಗಧನು ಬಳಲಿಹನು ॥೪೮೬॥

ಇವನನ್ನು ನಾಳೆಯಲಿ ಕೊಲ್ಲುವೆನು ಎನ್ನುತಲಿ
ಮನದೊಳಗೆ ಯೋಚಿಸಲು ಮಾಧವನು ಅರಿಯುತಲಿ
ಸಂಕಟದ ಸಮಯದಲಿ ನಿನವೈರಿ ಸಿಲುಕಿರಲು
ಸಂಹಾರ ಗೈಯ್ಯುವುದು ನೃಪನೀತಿ ಇರುತಿಹುದು ॥೪೮೭॥

ಮಾಗಧನ ಬಲವೆಲ್ಲ ಕುಗ್ಗಿಹುದು ನಂದಿಹುದು
ಈ ಸಮಯ ವಧಿಸುವುದು ಯೋಗ್ಯವದು ಎನಿಸುವುದು
ಇಲ್ಲದಿರೆ ವಿಶ್ರಾಂತಿಕೊಳ್ಳುತಲಿ ನಾಳೆಯಲಿ
ನಿನ್ನನ್ನು ಖಚಿತದಲಿ ಕೊಲ್ಲುವನು ಎಂದಿಹನು ॥೪೮೮॥

ಮಾರುತಜನು ಕೇಳುತಲಿ ಮಾಗಧನ ಸೆಳೆಯುತಲಿ
ತಲೆಕೆಳಗೆ ಮಾಡುತಲಿ ಕಾಲ್ಗಳನು ಓಗ್ಗಿಸುತ
ಕಬ್ಬಿನಾ ಗಣೆಯನ್ನು ಸೀಳುವಾ ಪರಿಯಲ್ಲಿ
ದೇಹವನು ಸಮಅರ್ಧ ಭಾಗದಲಿ ಸೀಳುತಲಿ ॥೪೮೯॥

ಅತ್ತೊಂದು ಇತ್ತೊಂದು ಭಾಗಗಳನೆಸೆಯುತಿರೆ
ಆ ಕ್ಷಣದಿ ದೇಹದಾ ದ್ವಯ ಭಾಗ ಸಂಧಿಸುತ
ಮಾಗಧನು ಜೀವಂತನಾಗುತಲಿ ಮೇಲೆದ್ದು
ಮಾರುತಜನ ಜೊತೆಯಲ್ಲಿ ಯುದ್ಧಕ್ಕೆ ಬಂದಿಹನು ॥೪೯೦॥

ಈ ತೆರದಿ ನೂರುಸಲ ಮಾಗಧನ ಸೀಳುತಿರೆ
ಪುನರಪಿಯು ಕಾಯದಾ ಭಾಗೆರಡು ಸಂಧಿಸುತ
ಜರೆಸಂಧ ಸಂಗ್ರಾಮಕ್ಕೆತರಲು ಮರುತಜನು
ಚಿಂತಿಸುತಲಿರುತಿರಲು ಮಾಧವನು ಸನ್ನೆಯಲಿ ॥೪೯೧॥

ತನ್ನಯಾ ಕರಗಳನು ಪಲ್ಲಟಿಸಿ ಹಿಂಬದಿಗೆ
ಸಂಧಿಸುತ ತೋರಿಸಲು ಪವನಜನು ಅರಿಯುತಲಿ
ಮಾಗಧನ ಸೀಳುತಲಿ ಭಾಗಗಳ ಪಲ್ಲಟಿಸಿ
ವಿಪರೀತ ದೆಸೆಯಲ್ಲಿ ಎಸೆಯುತಿರೆ ಭರದಲ್ಲಿ ॥೪೯೨॥

ಜರೆಸಂಧ ಪ್ರಾಣವನು ಕ್ಷಣದಲ್ಲಿ ತೊರೆದಿಹನು
ನೆರೆದಿರುವ ಸಕಲ ಪ್ರಜೆ ಹಾಹಾರಿ ಭಯದಿಂದ
ಇನ್ನಾರು ಗತಿಯೆಮಗೆ ಎಮ್ಮನ್ನು ವಧಿಸುವರು
ಎನ್ನುತಲಿ ದೆಸೆದೆಸೆಗೆ ಕಂಗೆಟ್ಟು ಓಡಿದರು ॥೪೯೩॥

ಶ್ರೀಕೃಷ್ಣ ನೋಡುತಲಿ ಕೈನೆಗಹಿ ಮೇಲಕ್ಕೆ
ಅಂಜದಿರಿ ಓಡದಿರಿ ನಿಮ್ಮನ್ನು ಓಂಸಿಸೆವು
ನೀವೆಮ್ಮ ಸಖರಿಹಿರಿ ಎನ್ನುತಲಿ ನುಡಿಯುತಲಿ
ಅಭಯವನು ಈಯುತಿರೆ ಸಕಲರೂ ನಮಿಸಿದರು ॥೪೯೪॥

ಮಾಗಧನು ಅನ್ಯನೇ ನಮಗಿವನು ಬಾಂಧವನು
ಈತನಾ ಅಳಿಯನಿಹ ಕಂಸನಾ ಸೋದರಿಯ
ದೇವಕಿಯ ಕಂದನೇ ಶ್ರೀಕೃಷ್ಣ ನಾನಿಹೆನು
ನಿಮ್ಮೊಡನೆ ದ್ವೇಷವದು ಲವಲೇಶವಿಲ್ಲೆಂದ ॥೪೯೫॥

ತನ್ನಯಾ ಕರ್ಮದಲಿ ಮಾಗಧನು ನಶಿಸಿಹನು
ಆತನಾ ಚಿಂತೆಯನು ನೀವೆಲ್ಲ ತೊರೆಯುವದು
ಸಹದೇವ ಸುತನಿಂಗೆ ರಾಜ್ಯಾಭಿಷೇಕವನು
ಮಾಡುತಲಿ ಸಂತಸದಿ ನಲಿಯಬಹುದು ಎಂದಿಹನು ॥೪೯೬॥

ಬಳಿಕಿನಲಿ ಮಾಧವನು ಭೀಮಾರ್ಜುನೀರ್ವರೂ
ಮಾಗಧನ ಮಾದಿರವ ತೊರೆಯುತಲಿ ಸಾಗುತಲಿ
ಸನಿಹದಲಿ ನಿಂತಿರ್ದ ದಿವ್ಯದಾ ರಥವನ್ನು
ಏರುತಲಿ ಸೆರೆಮನೆಯ ಸನಿಹದಲಿ ಬಂದಿಹರು ॥೪೯೭॥

ಬಂಧನದೊಳಿರಿಸಿರುವ ಅಗಣಿತದ ರಾಜರನು
ಸೆರೆಯನ್ನು ಬಿಡಿಸುತಲಿ ಮುಕ್ತರನು ಮಾಡಿಹನು
ಶ್ರೀಕೃಷ್ಣ ಗೈದಿರುವ ಉಪಕಾರ ನೆನೆಯುತಲಿ
ನೃಪರುಗಳು ಸರ್ವರೂ ಸಾಷ್ಟಾಂಗವೆರಗಿದರು ॥೪೯೮॥

ದೇಹದಲಿ ಧರಿಸಿರ್ದ ರತ್ನಗಳ ವಜ್ರಗಳ
ಹೊಳೆಹೊಳೆವ ಹಾರಗಳ ಕನಕದಾಭರಣಗಳ
ತೆಗೆಯುತಲಿ ಕೃಷ್ಣಂಗೆ ಕಾಣಿಕೆಯನೀಯುತಲಿ
ಕೃಷ್ಣ ಭೀಮಾರ್ಜುನರ ಸ್ತುತಿಸುತಲಿ ನಮಿಸಿದರು ॥೪೯೯॥

ದಾನವರ ಧ್ವಂಸಿಯೆ ಮುರರಿಪುವು ಕೃಪ ನೇ
ಧರ್ಮದಾ ರಕ್ಷಣೆಗೆ ಮರುತಜನ ಅರ್ಜುನನ
ಸಹಿತದಲಿ ಅದ್ಭುತದ ಕಾರ್ಯವನು ಗೈಯ್ಯುತಲಿ
ದಿಕ್ಕೆಟ್ಟು ಗತಿಯನ್ನು ಕಾಣದಲೆ ಬಂಧನದಿ ॥೫೦೦॥

ಯಾತನೆಯ ಪಡುತಿರ್ದ ನಮ್ಮನ್ನು ಬಿಡಿಸುತಲಿ
ಶಾಶ್ವತದ ಕೀರ್ತಿಯನು ನೀವುಗಳು ಪಡೆದಿಹಿರಿ
ನಿಮ್ಮಯಾ ಉಪಕಾರ ನಾವುಗಳು ಸತತವೂ
ನೆನೆಯುತಲಿ ಚಿರಋಣಿಗಳಾಗಿಹೆವು ಎಂದಿಹರು ॥೫೦೧॥

ನಿಮ್ಮಿಂದ ಉಪಕೃತರು ಆಗಿರುವ ನಾವುಗಳು
ನಿಮಗಾಗಿ ಏನನ್ನು ಮಾಡುವುದು ತಿಳಿಸುವುದು
ನಿಮ್ಮಯಾ ಆಜ್ಞೆಯನು ಶಿರಬಾಗಿ ವಹಿಸುವೆವು
ಎನ್ನುತಲಿ ನೃಪರುಗಳು ಕೃಷ್ಣಂಗೆ ನುಡಿದಿಹರು ॥೫೦೨॥

ನಿಮ್ಮಯಾ ನುಡಿಗಳಿವು ಸಂತಸವನೀಯುವವು
ಧರ್ಮಜನು ಮಾಡಲಿಹ ರಾಜಸೂಯಧ್ವರಕೆ
ನೀವುಗಳು ಪರಿವಾರ ಸಹಿತದಲಿ ಐತಂದು
ನೆರವನ್ನು ಈಯುವದು ಎನ್ನುತಲಿ ನುಡಿದಿಹನು ॥೫೦೩॥

ಹರುಷದಲಿ ಧರಣಿಪರು ಹೇರಳದ ಧನಕನಕ
ವಜ್ರಗಳ ರತ್ನಗಳ ಕಾಣಿಕೆಗಳಿತ್ತಿಹರು
ಬಂಧುಗಳ ಬಾಂಧವರ ಸಹಿತದಲಿ ಸಹದೇವ
ಐತಂದು ಮಾಧವನ ಪಾದಕ್ಕೆ ಎರಗುತಲಿ ॥೫೦೪॥

ಅಗಣಿತದ ರತ್ನಗಳ ವಜ್ರಗಳ ಮುತ್ತುಗಳ
ಸ್ವರ್ಣದಾಭರಣಗಳ ಕಾಣಿಕೆಗಳಿತ್ತಿಹನು
ತನಗಾವ ಗತಿ ಬಹುದೊ ಎಂಬುವಾ ಚಿಂತೆಯಲಿ
ಭಯಭೀತನಾಗಿರ್ದ ಸಹದೇವ ನಯವಿದಗೆ ॥೫೦೫॥

ಯಾದವನು ಅಭಯವನು ಈಯುತಲಿ ಕರುಣೆಯಲಿ
ಪಟ್ಟಾಭಿಷೇಕವನು ಮಾಡಿಸಿದ ವೈಭವದಿ
ಭೀಮಾರ್ಜುನೀರ್ವರೂ ಹರುಷದಲಿ ಪ್ರೀತಿಯಲಿ
ಸಹದೇವ ಕುವರನನು ಸಂತೈಸಿ ಹರಸಿದರು ॥೫೦೬॥

ಬಳಿಕಲಾ ಮುರಹರನು ಮರುತಜನ ಫಲಗುಣನ
ಸಹಿತದಲಿ ದಿವ್ಯದಾ ರಥವನ್ನು ಏರುತಲಿ
ಪಯಣದಲಿ ಹೊರಡಲಿಕೆ ಸನ್ನದ್ಧರಾಗಿರಲು
ಸಹದೇವ ಮೊದಲಾಗಿ ಸಕಲ ಪ್ರಜೆ ಸಂತಸದಿ ॥೫೦೭॥

ಮೂವರಾ ಮೇಲಕ್ಕೆ ಪುಷ್ಪಗಳ ಸುರಿಸುತಲಿ
ಜಯಕಾರ ಗೈಯ್ಯುತಲಿ ಬೀಳ್ಕೊಡುತಲಿರುತಿರಲು
ಪುರದ ಹೊರಗೋಂಟೆಯನು ಕೊಳವನ್ನು ದಾಂಟುತಲಿ
ಭರದಲ್ಲಿ ಬಂದಿಹರು ವರ ಇಂದ್ರ ಪ್ರಸ್ಥಕ್ಕೆ ॥೫೦೮॥

ಭೀಮಾರ್ಜುನೀರ್ವರಾ ಸಹಿತದಲಿ ಶ್ರೀಕೃಷ್ಣ
ಧರ್ಮಜನ ಚರಣಕ್ಕೆ ಎರಗುತಲಿ ಹರುಷದಲಿ
ದೈವದಲಿ ನಿನ್ನಯಾ ತಮ್ಮನೀ ಬಲಭೀಮ
ಅದ್ಭುತದ ಶೌರ್ಯದಲಿ ಮಾಗಧನ ಕೊಂದಿಹನು ॥೫೦೯॥

ಬಂಧನದೊಳಿರಿಸಿರ್ದ ಸಕಲರಾ ನೃಪರುಗಳು
ಬಿಡುಗಡೆಯ ಹೊಂದುತಲಿ ಧನಕನಕ ವಿತ್ತಿಹರು
ವಾಯುಜನು ಇಂದ್ರಜನು ಗಾಯವದು ಇಲ್ಲದೆಯೆ
ಕೂದಲೆಳೆ ಕೊಂಕದೆಯೆ ಬಂದಿಹರು ಎಂದಿಹನು ॥೫೧೦॥

ಮುರಹರನ ಮಾತುಗಳ ಕೇಳುತಲಿ ಯಮಸುತನು
ಅತ್ಯಂತ ಹರುಷದಲಿ ಭೀಮಾರ್ಜುನೀರ್ವರನು
ದೃಢವಾಗಿ ಅಪ್ಪುತಲಿ ಆನಂದ ಬಾಷ್ಪವನು
ಸುರಿಸುತಲಿ ಮಾಧವಗೆ ನುಡಿದಿಹನು ನಯದಲ್ಲಿ ॥೫೧೧॥

ನಂಬಿರುವ ಭಕುತರನು ಕೈಬಿಡದೆ ರಕ್ಷಿಸುವ
ಬಿರುದನ್ನು ಹೊತ್ತಿರುವ ನಿನ್ನಯಾ ಮಹಿಮೆಯನು
ನಾವೆಂತು ಅರಿಯುವೆವು ನಿನ್ನನ್ನೆ ನಂಬಿಹೆವು
ಅನವರತ ರಕ್ಷಿಪುದು ಎನ್ನುತಲಿ ನುಡಿದಿಹನು ॥೫೧೨

ಜನಮೇಜಯ ಕ್ಷಿತಿಪ ಈ ಪರಿಯೆ ಶ್ರೀಕೃಷ್ಣ
ನೆಪವಾಗಿ ಭೀಮಾರ್ಜುನೀರ್ವರನು ಮುಂದಿಟ್ಟು
ದುರುಳನಾ ಮಾಗಧನ ಸಂಹಾರ ಗೈಯ್ಯುತಲಿ
ಜಗದೊಳಗೆ ಧರ್ಮದಾ ರಕ್ಷಣೆಯು ಮಾಡಿದನು ॥೫೧೩॥

ಕುಂತಿಯಾ ಚರಣಕ್ಕೆ ಸಾಷ್ಟಾಂಗ ವೆರಗುತಲಿ
ಧರ್ಮಜನ ಮೊದಲಾದ ಪಾಂಡವರ ದ್ರೌಪದಿಯ
ಸೋದರಿ ಸುಭದ್ರೆಯಾ ಅಪ್ಪಣೆಯ ಪಡೆಯುತಲಿ
ದ್ವಾರಕೆಗೆ ತೆರಳಿದನು ಶ್ರೀ ವೀರ ನರಯಣನು ॥೫೧೪॥

**ಉತ್ತರದ ದೆಸೆಯೊಳಿಹ ನೃಪರುಗಳ ಜಯಿಸುತಲಿ**
**ಅರ್ಜುನನು ಧರ್ಮಜಗೆ ಧನಕನಕ ವಿತ್ತಿಹನು**

ಜನಮೇಜಯ ಕ್ಷಿತಿಪ ಕೇಳುವುದು ಮುಂದಣದ
ಅರ್ಜುನನ ಸಾಹಸದ ದಿಗ್ವಿಜಯ ವಿಷಯವನು
ಅದ್ಭುತದ ಗಾಂಡಿವವ ದಿವ್ಯದಾ ರಥವನ್ನು
ಪಡೆದಿರುವ ಅರ್ಜುನನು ಧರ್ಮಜಗೆ ನುಡಿದಿಹನು ॥೫೧೫॥

ಜಗದೊಳಗೆ ದುಸ್ಸಾಧ್ಯ ವಿರುತಿರುವ ಧನುವನ್ನು
ಅಕ್ಷಯದ ಬಾಣಗಳ ಜಗ ಶ್ರೇಷ್ಠ ರಥವನ್ನು
ಅಗ್ನಿಯಾ ಕೃಪೆಯಿಂದ ಪಡೆದಿರುವ ನಾವುಗಳು
ಮಾಡುವಾ ಕರ್ತವ್ಯ ಬಹಳಪ್ಪ ಇರುತಿಹುದು ॥೫೧೬॥

ಲೋಕದಲಿ ಸಕಲರಾ ರಾಜರನು ಜಯಿಸುತಲಿ
ಆಶ್ರಿತರ ಮಾಡುತಲಿ ಧನಕನಕ ರತ್ನಗಳ
ಹೇರಳದ ಕಪ್ಪುಗಳ ಕಾಣಿಕೆಯು ಕೊಳ್ಳುತಲಿ
ಬೊಕ್ಕಸವ ತುಂಬುವುದು ಆದ್ಯದಾ ಕರ್ತವ್ಯ ॥೫೧೭॥

ಐಶ್ವರ್ಯ ಸಂಪದಕೆ ಒಡೆಯನಿಹ ಕುಬೇರನಾ
ಉತ್ತರದ ದಿಕ್ಕಿನೆಡೆ ದಿಗ್ವಿಜಯ ಕೋಸುಗವೆ
ಶುಭದಿನದಿ ಪಯಣವನು ಬೆಳೆಸಲಿಕೆ ಇಚ್ಛಿಸುವೆ
ಎನ್ನುತಲಿ ನುಡಿಯುತಿರೆ ಧರ್ಮಜನು ನುಡಿದಿಹನು ॥೫೧೮॥

ಮೂಲೋಕ ವೀರನಿಹ ನಿನ್ನತೆರ ಸೋದರನು
ಎನಗಿರಲು ಆವುದೂ ದುಸ್ಸಾಧ್ಯ ಒಂದಿಲ್ಲ
ಗುರು ಹಿರಿಯ ದ್ವಿಜರುಗಳ ಆಶೀರ್ವಾದಗಳ
ಕೊಳ್ಳುತಲಿ ಜೈತ್ರದಾ ಯಾತ್ರೆಯಲಿ ತೆರಳುವುದು ॥೫೧೯॥

ಉತ್ತರದ ರಾಜರನು ಶೌರ್ಯದಲಿ ಜಯಿಸುತಲಿ
ಕಪ್ಪಗಳ ಕಾಣಿಕೆಯು ವಿಪುಳದಲಿ ಕೊಳ್ಳುತಲಿ
ಜಯಶಾಲಿಯಾಗುತಲಿ ವೈಭವದಿ ನೀಬಹುದು
ಕೀರ್ತಿಯಲಿ ಬೆಳಗುವುದು ಎನ್ನುತಲಿ ನುಡಿದಿಹನು ॥೫೨೦॥

ಧರ್ಮಜನ ಅಪ್ಪಣೆಯ ಕೊಳ್ಳುತಲಿ ಫಲಗುಣನು
ಬಂಧುಗಳ ಬಾಂಧವರ ಶುಭಹರಕೆ ಕೊಳ್ಳುತಲಿ
ವಿಪ್ರರಿಗೆ ವಂದಿಸುತ ಚತುರಂಗ ಬಲಸಹಿತ
ರಥದಲ್ಲಿ ಮಂಡಿಸುತ ಉತ್ತರಕೆ ನಡೆದಿಹನು ॥೫೨೧॥

ಧರ್ಮಜನ ಅನುಮಂತಿಯ ಪಡೆಯುತಲಿ ಕಲಿಭೀಮ
ಪೂರ್ವದಾ ದೆಸೆಯಲ್ಲಿ ಸಹದೇವ ದಕ್ಷಿಣಕೆ
ಆ ನಕುಲ ಪಶ್ಚಿಮಕೆ ಸೈನ್ಯದಾ ಸಹಿತದಲಿ
ಸಕಲರಾ ನೃಪರುಗಳ ಜಯಿಸಲಿಕೆ ತೆರಳಿದರು ॥೫೨೨॥

ಜನಮೇಜಯ ಕ್ಷಿತಿಪ ಈ ಭರತ ಖಂಡವನು
ಪಾಂಡವರು ಜಯಿಸಿರುವ ವೃತ್ತಾಂತವರುಹುವೆನು
ಫಲುಗುಣನು ಮೊದಲಿಂಗೆ ಕುಲಿಂದದ ದೇಶವನು
ಜಯಿಸುತಲಿ ಆನರ್ತ ಕಾಲರನು ಜಯಿಸಿದನು ॥೫೨೩॥

ಯುದ್ಧಕ್ಕೆ ಬಂದಿರುವ ಸುಮಂಡಲನ ಸೋಲಿಸುತ
ಶಾಕಲದ ದ್ವೀಪವನು ವಶಪಡಿಸಿಕೊಳ್ಳುತಲಿ
ಪ್ರತಿವಿಂಧ್ಯ ನೃಪನನ್ನು ಕದನದಲಿ ಗೆಲ್ಲುತಲಿ
ಪ್ರಾಗ್ಜ್ಯೋತಿಷೆಂಬುವಾ ರಾಜ್ಯವನು ಮುತ್ತಿದನು ॥೫೨೪॥

ಅದೇಶದಧಿಪತಿಯು ಅದ್ಭುತ ಪರಾಕ್ರಮಿಯು
ಭಗದತ್ತ ನರಪತಿಯು ಫಲಗುಣನ ಎದುರಿಸುತ
ಘನಘೋರ ಯುದ್ಧವನು ಎಂಟುದಿನ ಪರ್ಯಂತ
ಗೈಯ್ಯುತಲಿ ನಸುನಗುತ ಇಂತೆಂದು ನುಡಿದಿಹನು ॥೫೨೫॥

ಭಲಿಭಾಪು ಫಲುಗುಣನೆ ಇಂದ್ರನಾ ಸುತನಿರುವ
ನಿನಗಿಂತು ತ್ರೈಲೋಕ್ಯ ವಿಕ್ರಮವು ಸಹಜವಿದು
ನಾನು ಸಹ ಶಕ್ರಂಗೆ ಪ್ರೀತಿಯಾ ಮಿತ್ರನಿಹೆ
ಅವನಂತೆ ಯುದ್ಧದಲಿ ಪರಿಣತನು ಇರುತಿಹೆನು ॥೫೨೬॥

ಇಂದ್ರಂಗೆ ಸರಿಸಮ ಪರಾಕ್ರಮಿಗಳಿರುತಿಹೆವು
ನಿನ್ನೊಡನೆ ಕಾದಲಿಕೆ ಅಸಮರ್ಥನಿರುತಿಹೆನು
ನಿನ್ನಯಾ ಇಚ್ಛೆಯದು ಏನಿಹುದು ತಿಳುಹುವುದು
ಸಂತಸದಿ ಸಲಿಸುವೆನು ಎನ್ನುತಲಿ ನುಡಿದಿಹನು ॥೫೨೭॥

ಭಗದತ್ತ ಶ್ರೇಷ್ಠನೇ ಕುರುಕುಲ ಲಲಾಮಣಿಯು
ಎನ್ನಯಾ ಸೋದರನು ಖ್ಯಾತಮಿಹ ಧರ್ಮಜನ
ಚಕ್ರಾಧಿಪತಿಯಾಗಿ ಮಾಡುವಾ ಇಚ್ಛೆಯಿದೆ
ನೀ ಕಪ್ಪನೀಯುವುದು ಎನ್ನುತಲಿ ನುಡಿದಿಹನು ॥೫೨೮॥

ಧರ್ಮದಾ ಮೂರ್ತಿಯಿಹ ಧರ್ಮಜನ ವಿಷಯದಲಿ
ಅಂತ್ಯಂತ ಗೌರವವು ವಿಶ್ವಾಸ ಎನಗಿಹುದು
ನೀ ಪೇಳ್ವುದೆಲ್ಲವನು ಈಯುವೆನು ಮತ್ತೆಯೂ
ಏನಾದೊಡಿರ್ದೊಡೆಯು ಪೇಳುವುದು ಎನ್ನುತಲಿ ॥೫೨೯॥

ಅಗಣಿತದ ಧನಕನಕ ಕಾಣಿಕೆಯು ನೀಯುತಿರೆ
ಫಲುಗುಣನು ಹರ್ಷದಲಿ ನಿನ್ನಯಾ ನುಡಿಗಳನು
ಆಲಿಸುತ ಎನ್ನಯಾ ಆಶೆಗಳು ಫಲಿಸಿದವು
ಎನ್ನುತಲಿ ನುಡಿಯುತಲಿ ಉತ್ತರಕೆ ನಡೆದಿಹನು ॥೫೩೦॥

ಮುಂದಕ್ಕೆ ಸಾಗುತಲಿ ಪರ್ವತದ ರಾಜ್ಯಗಳ
ಜಯಿಸುತಲಿ ಉಲೂಕವನು ಮುತ್ತುತಿರೆ ಭರದಲ್ಲಿ
ಗಜತುರಗ ರಥನಿಕರ ಚತುರಂಗ ಸೈನ್ಯದಾ
ಘಟ್ಟಣೆಗೆ ಘೋರರವ ನಗರವನು ಕಂಪಿಸಲು ॥೫೩೧॥

ಪರ್ವತದ ಅಧಿಪತಿಯು ಬೃಹಂತ ಮಹವೀರ
ಅಪರಿಮಿತ ಬಲಸಹಿತ ಕೋಪದಲಿ ಐತಂದು
ಸಂಗ್ರಾಮಗೈಯ್ಯುತಿರೆ ಫಲಗುಣನು ತೀಕ್ಷ್ಣಮಿಹ
ಬಾಣಗಳ ಮಳೆಗರೆಯೆ ಜರ್ಝರಿತನಾಗುತಲಿ ॥೫೩೨॥

ತನ್ನಿಂದ ಅರ್ಜುನನ ಸೋಲಿಸಲು ಆಗದದು
ಎನ್ನುತಲಿ ವಿಪುಳದಲಿ ಧನಕನಕ ಕಾಣಿಕೆಯ
ಈಯುತಿರೆ ಫಲಗುಣನು ಸಂತಸದಿ ಬೃಹಂತಗೆ
ರಾಜ್ಯವನು ಈಯುತಲಿ ಮೈತ್ರಿಯನು ಬೆಳೆಸಿದನು ॥೫೩೩॥

ವಿಧವಿಧದ ಗಿರಿರಾಜ್ಯವಗಣಿತವ ಗೆಲ್ಲುತಲಿ
ಪುರುವಂಶದಶಸನಂ ವಿಷ್ವಗ್ನನನ ಜಯಿಸುತಲಿ
ಉತ್ಸವದ ಸಂಕೇತರೆಂಬುವಾ ನಾಯಕರ
ಸೋಲಿಸುತ ತನ್ನಯಾ ಆಶ್ರಿತರ ಮಾಡಿದನು ॥೫೩೪॥

ಕ್ಷಾತ್ರಕುಲ ದಿವ್ಯ ಪ್ರದೀಪನಾ ಫಲುಗುಣನು
ಕಾಶ್ಮೀರ ದೇಶದಾ ಕ್ಷತ್ರಿಯರ ನೃಪರನ್ನು
ಜಯಿಸುತಲಿ ಸುತ್ತಣದ ನಾಯಕರ ಲೋಹಿತರ
ಸೋಲಿಸುತ ತನ್ನಯಾ ಆಶ್ರಿತರ ಮಾಡಿದನು ॥೫೩೫॥

ಬಳಿಕಲಾ ಅರ್ಜುನನು ಕುಪಿತರಾ ತ್ರಿಗರ್ತರನು
ಕೋಕನರ ದಾರ್ವರನು ಉರಗೊಡೆಯ ರೋಚನನ
ಜಯಿಸುತಲಿ ಚಿತ್ರಾಯುಧಾ ನೃಪನ ಸೋಲಿಸುತ
ಸಿಂಹಪುರ ವಶಪಡಿಸಿಕೊಳ್ಳುತಲಿ ಸಾಗುತಲಿ ॥೫೩೬॥

ಅತುಳಬಲ ಸಂಪನ್ನ ಬಾಹ್ಲಿಕರ ಗೆಲ್ಲುತಲಿ
ಕಾಂಭೋಜ ನೃಪರನ್ನು ಸದೆಬಡಿದು ನಡೆಯುತಲಿ
ಉತ್ತರದ ಋಷಿಕರನು ಧರಣಿಪರ ಜಯಿಸುತಲಿ
ಈಶಾನ್ಯದೆಡೆಯಲ್ಲಿ ವನಜನರ ಜಯಿಸಿದನು ॥೫೩೭॥

ಈ ಪರಿಯೆ ಫಲುಗುಣನು ಹಿಮಗಿರಿಯ ತಪ್ಪಲಿನ
ಸಕಲರಾ ನೃಪರನ್ನು ಜಯಿಸುತಲಿ ಸಾಗುತಲಿ
ಸುಂದರದ ವರಶ್ವೇತ ಪರ್ವತವ ತಲುಪುತಲಿ
ಹೂಡುತ ಬಿಡಾರವನು ವಿಶ್ರಾಂತಿಗೊಂಡಿಹನು ॥೫೩೮॥

ಬಳಿಕಲಾ ಕಲಿಪಾರ್ಥ ಕಿಂಪುರುಷ ದೇಶವನು
ಮುತ್ತುತಲಿ ದ್ರುಮಪುತ್ರನೆಂಬುವಾ ನೃಪನನ್ನು
ಜಯಿಸುತಲಿ ಗುಹ್ಯಕರ ಹಾಟಕವ ಗೆಲ್ಲುತಲಿ
ಆ ಸ್ಥಳದೊಳೆಸೆಯುತಿಹ ಪಾವನದ ಸುಂದರದ ॥೫೩೯॥

ಮಾನಸ ಸರೋವರದಿ ಮೀಯುತಲಿ ಸಾಗುತಲಿ
ಸುತ್ತಣದ ಗಂಧರ್ವ ರಕ್ಷಿತದ ದೇಶವನು
ವಶಪಡಿಸಿಕೊಳ್ಳುತಲಿ ತಿತ್ತಿರಿಯ ಮಂಡೂಕ
ಕಲ್ಮಾಷದುತ್ತಮದ ಕುದುರೆಗಳ ಕೊಳ್ಳುತಲಿ ॥೫೪೦॥

ಮಾನವರಿಗತಿಕಷ್ಟ ದುಸ್ಸಾಧ್ಯವೆನಿಸುತಿಹ
ಉತ್ತರದ ಕುರುವರ್ಷ ದೇಶಕ್ಕೆ ಬರುತಿರಲು
ರಕ್ಷಕರು ಈ ಸ್ಥಳಕೆ ಮಾನವರು ಬಂದೊಡನೆ
ನಾಶವನು ಹೊಂದುವರು ಎನ್ನುತಲಿ ನುಡಿಯುತಿರೆ ॥೫೪೧॥

ಜಾಣ್ಮೆಯಲಿ ಕಲಿಪಾರ್ಥ ನಸುನಗುತ ನುಡಿದಿಹನು
ಧರ್ಮಿಷ್ಠ ಧರ್ಮಜನು ಚಕ್ರಾಧಿಪತಿಯಾಗಿ
ಜಗದೊಳಗೆ ಮೆರೆಯುವುದು ಎಮ್ಮಯಾ ಅಭಿಲಾಷೆ
ನಿಮ್ಮನ್ನು ಹಿಂಸಿಸುವ ಆಶೆಯದು ಎಮಗಿಲ್ಲ ॥೫೪೨॥

ಸಂತಸದಿ ಧರ್ಮಜನ ರಾಜಸೂಯಾಧ್ವರಕೆ
ಕಾಣಿಕೆಯನೀಯುವುದು ಎನ್ನುತಲಿ ನುಡಿಯುತಿರೆ
ಗಡಿಕಾಯ್ವ ರಕ್ಷಕರು ರೇಶ್ಮೆಯಾ ವಸ್ತ್ರಗಳ
ಹೇಮದಾಭರಣಗಳ ಅಗಣಿತವನಿತ್ತಿಹರು ॥೫೪೩॥

ಈ ತೆರದಿ ಅರ್ಜುನನು ಉತ್ತರದ ರಾಜರನು
ಎಲ್ಲರನು ಜಯಿಸುತಲಿ ಅಪರಿಮಿತ ಧನಕನಕ
ರತ್ನಗಳ ವಜ್ರಗಳ ಪೀತಾಂಬರಾದಿಗಳ
ಸಹಿತದಲಿ ವರಇಂದ್ರಪ್ರಸ್ಥಕ್ಕೆ ಮರಳುತಲಿ ॥೫೪೪॥

ಸಿಂಹಾಸನಾರೂಢನಾಗುತಲಿ ಕುಳಿತಿರ್ದ
ಧರ್ಮಜನ ಚರಣಕ್ಕೆ ಎರಗುತಲಿ ಅರ್ಪಿಸಲು
ಧರ್ಮಸುತ ಸಂತಸದಿ ಅರ್ಜುನನನಪ್ಪುತಲಿ
ಸವಿನುಡಿಯ ನುಡಿಯುತಲಿ ಅರಮನೆಗೆ ಕಳುಹಿದನು ॥೫೪೫॥

**ಮೂಡಣದ ಮಹಿಪರನು ಗೆಲ್ಲುತಲಿ ಮರುತಜನು ।**
**ಹೇರಳದ ಸಂಪದವ ಧರ್ಮಜಗೆ ಇತ್ತಿಹನು ॥**

ಅಣ್ಣನಾ ಧರ್ಮಜನ ಆಜ್ಞೆಯನು ಕೊಳ್ಳುತಲಿ
ಭರತಕುಲ ದೀಪಕನು ಅದ್ಭುತ ಪರಾಕ್ರಮಿಯು
ಕಲಿಭೀಮ ಚತುರಂಗ ಬಲಸಹಿತ ಭರದಿಂದ
ದಿಗ್ವಿಜಯಕೋಸುಗವೆ ಮೂಡಣದಿ ತೆರಳಿದನು ॥೫೪೬॥

ಮೊದಲಿಂಗೆ ಪಾಂಚಾಲ ದೇಶಕ್ಕೆ ನಡೆಯುತಲಿ
ಸಾಮದಲಿ ಪ್ರೇಮದಲಿ ಪಾಂಚಾಲರೊಲಿಸುತಲಿ
ಆಶ್ರಿತರ ಗೈಯ್ಯುತಲಿ ಗರ್ವದಲಿ ಎದುರಿಸಿದ
ಗಂಡಕ ವಿದೇಹರನು ಬಲದಿಂದ ಗೆಲ್ಲುತಲಿ ॥೫೪೭॥

ಮುಂದಕ್ಕೆ ಸಾಗುತಿರೆ ದಶಾರ್ಣದಧಿಪತಿಯ
ಸುಶರ್ಮನನು ದ್ವಂದ್ವದಾ ಯುದ್ಧದಲಿ ಸೋಲಿಸುತ
ಆತನ ಪರಾಕ್ರಮವ ಕೌಶಲವ ಹೊಗಳುತಲಿ
ತನ್ನಯಾ ಸೈನ್ಯಕ್ಕೆ ಅಧಿಪತಿಯ ಮಾಡುತಲಿ ॥೫೪೮॥

ಪೂರ್ವಕ್ಕೆ ಸಾಗುತಲಿ ವರರೋಚಮಾನನ
ಜಯಿಸುತಲಿ ತೆಂಕಣದಿ ತೆರಳುತಲಿ ಪುಲಿಂದವ
ಸುಕುಮಾರ ಸುಮಿತ್ರರನು ನೃಪರನ್ನೂ ಗೆಲ್ಲುತಲಿ
ಅಗಣಿತದ ಧನಕನಕ ವಿತ್ತವನು ಕೊಂಡಿಹನು ॥೫೪೯॥

ಪಯಣವನು ಬೆಳೆಸುತಲಿ ಚೇದಿಯಾ ರಾಜ್ಯಕ್ಕೆ
ಬರುತಿರಲು ಚೇದಿನೃಪ ಶಿಶುಪಾಲ ಅರಿಯುತಲಿ
ಸಂತಸದಿ ಭೀಮನನು ಆದರಿಸಿ ಸತ್ಕರಿಸಿ
ಚೇದಿಯಾ ರಾಜ್ಯವನು ಭೀಮಂಗೆ ಅರ್ಪಿಸಲು ॥೫೫೦॥

ಮರುತಜನು ಹರುಷದಲಿ ಧರ್ಮಜನು ಗೈಯ್ಯುವಾ
ರಾಜಸೂಯಾಧ್ವರದ ವಿಷಯವನು ವಿಸ್ತರದಿ
ಶಿಶುಪಾಲಗರುಹುತಲಿ ಮೂವತ್ತು ರಾತ್ರಿಗಳ
ಮುದದಿಂದ ಕಳೆಯುತಲಿ ಮುಂದಕ್ಕೆ ಹೊರಟಿಹನು ॥೫೫೧॥

ಬಿರುಗಾಳಿ ಬೀಸುತಿರೆ ಧರೆಗುರುಳಿ ಬೀಳುತಿಹ
ಮರಗಳಾ ಪರಿಯಲ್ಲಿ ಭೀಮನಾ ದಾಳಿಯಲಿ
ಮೂಡಣದ ಅರಸುಗಳು ನೊರಜುಗಳ ಪರಿಯಲ್ಲಿ
ಭಯಭೀತರಾಗುತಲಿ ಚರಣದಲಿ ಬಿದ್ದಿಹರು ॥೫೫೨॥

ಕೋಸಲ ಬೃಹದ್ಬಲಿನ ನೃಪನನ್ನು ಸೋಲಿಸುತ
ಅಯೋಧ್ಯೆಯಾ ಅರಸನನು ಆ ದೀರ್ಘಯಜ್ಞಕನ
ಉತ್ತರದ ಕೋಸಲದ ಮಲ್ಲರಾ ನಾಯಕನ
ಗೆಲ್ಲುತಲಿ ತನ್ನಯಾ ಆಶ್ರಿತರ ಮಾಡಿದನು ॥೫೫೩॥

ಹಿಮಗಿರಿಯ ತಪ್ಪಲಿನ ಜಯೋದ್ಭವದ ಠಾವನ್ನು
ಭಲ್ಲಾಟ ನೃಪನನ್ನು ಮುತ್ತುತಲಿ ಗೆಲ್ಲುತಲಿ
ಸನಿಹದಲಿ ಇರುತಿರುವ ಶಕ್ತಿಮಂತೆಂಬುವಾ
ಪರ್ವತ ಪ್ರದೇಶವನು ವಶಪಡಿಸಿಕೊಳ್ಳುತಲಿ ॥೫೫೪॥

ಕಾಶಿಯಾ ಧರಣಿಪರ ಸುಬಾಹುವನು ಜಯಿಸುತಲಿ
ಸುಪಾರ್ಶ್ವ ಪರ್ವತದ ಕ್ರಥನೃಪನ ಹಣಿಯುತಲಿ
ಮತ್ಸ್ಯನನು ಮಹಬಲರ ಮಲದರರ ಸೋಲಿಸುತ
ಅಭಯದಾ ದೇಶಗಳ ವಶಪಡಿಸಿಕೊಳ್ಳುತಲಿ ॥೫೫೫॥

ಪಶುಪತಿಯ ಭೂಮಿಯಾ ನೇಪಾಳ ದಾಟುತಲಿ
ಮದಧಾರ ಪರ್ವತ ಪ್ರದೇಶವನು ಗೆಲ್ಲುತಲಿ
ಆ ಸೋಮಧೇಯರನು ಸೋಲಿಸುತ ಕಲಿಭೀಮ
ಉತ್ತರದ ದೆಸೆಯಲ್ಲಿ ಭರದಿಂದ ಸಾಗಿದನು ॥೫೫೬॥

ವತ್ಸರನು ಭರ್ಗರನು ನಿಷಧಾಧಿಪತಿಯನ್ನು
ಮಣಿಮಂತ ಮೊದಲಾದ ಮಹಿಪರನು ಮಣಿಸುತಲಿ
ಭೋಗವಂತೆಂಬುವಾ ಪರ್ವತದ ಮಲ್ಲರನು
ಗೆಲ್ಲುತಲಿ ಶರ್ಮಕರ ವರ್ಮಕರ ಒಲಿಸಿಹನು ॥೫೫೭॥

ವಿದೇಹನೃಪ ಜನಕನನು ಜಯಿಸುತಲಿ ಸಾಗುತಲಿ
ಶಕಬರ್ಬರಾದಿಗಳ ಕೌಶಲದಿ ಜಯಿಸುತಲಿ
ವರಇಂದ್ರ ಪರ್ವತದ ಆ ಏಳ ಬೇಡರಾ
ಅರಸರನು ಗೆಲ್ಲುತಲಿ ಆಶ್ರಿತರ ಮಾಡಿಹನು ॥೫೫೮॥

ಪರ್ವತದ ಸನಿಹದಲಿ ಸೈನ್ಯದಾ ಸಹಿತದಲಿ
ಗರ್ವದಲಿ ಮೆರೆಯುತಿಹ ಸುಹ್ಮ ಪ್ರಸುಹ್ಮರನು
ನೃಪರನ್ನು ಸೋಲಿಸುತ ದಂಡಧರ ದಂಡನರ
ಧರಣಿಪರ ಗೆಲ್ಲುತಲಿ ಮಗಧವನು ಹೊಕ್ಕಿಹನು ॥೫೫೯॥

ಗಿರಿವ್ರಜದ ಪಟ್ಟಣದಿ ಮರುತಜನು ತೆರಳುತಲಿ
ಜರೆಸಂಧ ಸುತನಾದ ಸಹದೇವ ನೃಪನನ್ನು
ಸಾಮದಲಿ ಆಶ್ರಿತನ ಮಾಡುತಲಿ
ಅಪರಿಮಿತ ಕಪ್ಪಗಳ ಕಾಣಿಕೆಯ ಕೊಳ್ಳುತಲಿ ॥೫೬೦॥

ಸಾಗುತಲಿ ಅತಿಬಲನ ಕರ್ಣನನು ಜಯಿಸುತಲಿ
ಬಹುವೀರ ಮೋದಗಿರಿಯರಸನನು ಮಣಿಸುತಲಿ
ಅದ್ಭುತ ಪರಾಕ್ರಮಿಯ ಪೌಂಡ್ರದಾ ಅಧಿಪತಿಯ
ವರವಾಸುದೇವನನು ಕಾದುತಲಿ ಗೆಲಿದಿಹನು ॥೫೬೧॥

ಕೌಶಿಕಿಯ ನದಿತೀರದರಸನನು ವೀರನನು
ಮಹೌಜಸನ ಜಯಿಸುತಲಿ ವಂಗದಾ ಅರಸನನು
ಆಶ್ರಿತನ ಮಾಡುತಲಿ ಸೇನಕನ ತಾಮ್ರರನು
ಕರ್ಮಾಟನ ಸುಹ್ಮಾನ ಮಹಿಪರನು ಗೆಲಿದಿಹನು ॥೫೬೨॥

ಸಾಗರದ ತೀರದಾ ಅರಸುಗಳ ಸೋಲಿಸುತ
ಮೂಡಣದ ಸಕಲರಾ ರಾಜರನು ಜಯಿಸುತಲಿ
ಹೇರಳದ ಧನಕನಕ ಕಾಣಿಕೆಯ ಕೊಳ್ಳುತಲಿ
ಲೋಹಿತದ ಮ್ಲೇಚ್ಛರಾ ನೃಪರನ್ನು ಜಯಿಸುತಿರೆ ॥೫೬೩॥

ರತ್ನಗಳ ವಜ್ರಗಳ ವೈಡೂರ್ಯ ಮಾಣಿಕ್ಯ
ಪೀತಾಂಬರಾದಿಗಳ ಕಾಣಿಕೆಯನಿತ್ತಿಹರು
ಮ್ಲೇಚ್ಛರಾ ನೃಪರುಗಳು ಭೀಮನನು ಕುಳ್ಳಿರಿಸಿ
ಹೇಮಗಳ ರತ್ನಗಳ ಅಭಿಷೇಕಗೈದಿಹರು ॥೫೬೪॥

ಈ ಪರಿಯೆ ಮರುತಜನು ಪೂರ್ವದಾ ದಿಕ್ಕಿನಲಿ
ಸರ್ವರನು ರಾಜರನು ಜಯಿಸುತಲಿ ಮಣಿಸುತಲಿ
ವರಇಂದ್ರ ಪ್ರಸ್ಥಕ್ಕೆ ಮರುಳುತಲಿ ಹೇರಳದ
ಧನಕನಕ ಕಾಣಿಕೆಯ ಧರ್ಮಜಗೆ ಇತ್ತಿಹನು ॥೫೬೫॥

**ಕೊಂಕಣದ ರಾಜನನು ಜಯಿಸುತಲಿ ಸಹದೇವ ।**
**ಅಪರಿಮಿತ ರತ್ನಗಳ ಸಂಪದವ ತಂದಿಹನು ॥**

ಜನಮೇಜಯ ಕ್ಷಿತಿಪ ಕೇಳುವುದು ಬಳಿಕಿನಲಿ
ಸಹದೇವ ಧರ್ಮಜನ ಆಣತಿಯ ಕೊಳ್ಳುತಲಿ
ದಕ್ಷಿಣಕೆ ಸಾಗುತಲಿ ಆ ಶೂರಸೇನನನು
ಪ್ರಥಮದಲಿ ಜಯಿಸುತಲಿ ಮತ್ಸ್ಯನನು ಗೆಲಿದಿಹನು ॥೫೬೬॥

ಮುಂದಕ್ಕೆ ಸಾಗುತಲಿ ಸುಕುಮಾರ ಸುಮಿತ್ರರನು
ಆ ಅಪರ ಮತ್ಸ್ಯನನು ಪಟಚ್ಚರನು ನಿಷದರನು
ಜಯಿಸುತಲಿ ಗೋಶೃಂಗ ಪರ್ವತ ಪ್ರದೇಶವನು
ಗೆಲ್ಲುತಲಿ ಆ ಶ್ರೇಣಿ ಮಂತ್ರನನ ಮಣಿಸುತಲಿ ॥೫೬೭॥

ನರರಾಷ್ಟ್ರ ಪ್ರಾಂತವನು ಮುತ್ತುತಲಿ ಜಯಿಸುತಲಿ
ವರಕುಂತಿ ಭೋಜನನ ಆಶ್ರಿತನ ಮಾಡುತಲಿ
ಚರ್ಮಣ್ವತೀನದಿಯ ತೀರದಾ ಜಂಭಕನ
ಪುತ್ರನಾ ಜೊತೆಯಲ್ಲಿ ಘನಘೋರ ಯುದ್ಧವನು ॥೫೬೮॥

ಗೈಯ್ಯುತಲಿ ಜಯಿಸುತಲಿ ಮುಂದಕ್ಕೆ ಸಾಗುತಲಿ
ಸೇಕರನು ಸೋಲಿಸುತ ಕಾಣಿಕೆಯ ಕೊಳ್ಳುತಲಿ
ಅವಂತಿಯಾ ನೃಪರನ್ನು ವಿಂದಾನು ವಿಂದರನು
ಸೋಲಿಸುತ ಹೇರಳದ ಧನಕನಕ ಸ್ವೀಕರಿಸಿ ॥೫೬೯॥

ಸಾಗುತಲಿ ಭೋಜಕಟ ಭೀಷ್ಮಕನ ಜೊತೆಯಲ್ಲಿ
ದಿನವೆರಡು ಕಾದುತಲಿ ಜಯಿಸುತಲಿ ನಡೆಯುತಲಿ
ವೇಣಾಧಿಪತಿಯನ್ನು ಕಾಂತಾರಕೆಂಬವನ
ಪೂರ್ವದಾ ಕೋಸಲರ ಸಕಲರನು ಗೆಲಿದಿಹನು ॥೫೭೦॥

ನಾಟಕರ ಹೇರಂಬಕಾದಿಗಳ ಜಯಿಸುತಲಿ
ಮಾರುಧವ ವಶಪಡಿಸಿ ನಾಚೀನ ಅರ್ಬುಕರ
ವಾತಾಧಿಪತಿಯನ್ನು ಪುಲಿಂದರನು ಮತ್ಸ್ಯರನು
ಸೋಲಿಸುತ ಖ್ಯಾತವಿಹ ಕಿಷ್ಕಿಂಧೆಗೈತಂದು ॥೫೭೧॥

ವರಮೈಂದ ದ್ವಿವಿದೆಂಬ ಈರ್ವರಾ ಕಪಿನೃಪರ
ಸಂಗಡದಿ ದಿವವೆರಡು ಭೀಕರದ ಯುದ್ಧವನು
ಗೈಯ್ಯುತಿರೆ ಸೋಲದೇ ಇರುತಿರಲು ಕಪಿನೃಪರು
ಸಹದೇವನಾತನಾ ಶೌರ್ಯವನು ಮೆಚ್ಚುತಲಿ ॥೫೭೨॥

ಸಂಗ್ರಾಮ ನಿಲ್ಲಿಸುತ ಸ್ನೇಹದಲಿ ಸಂತಸದಿ
ಧರ್ಮಜನ ಯಾಗವದು ನಿರ್ವಿಘ್ನವಾಗುತಲಿ
ನೆರವೇರಲೆನ್ನುತಲಿ ಅಗಣಿತದ ರತ್ನಗಳ
ವಜ್ರಗಳ ಕಾಣಿಕೆಯನೀಯುತಲಿ ಕಳುಹಿದರು ॥೫೭೩॥

ಕಪಿನೃಪರ ಕಾಣಿಕೆಯ ಕೊಳ್ಳುತಲಿ ಸಹದೇವ
ಮಾಹಿಷ್ಮತೀನಗರಕೈತಂದು ಆಳುತಿಹ
ನೀಲಕ್ಷ್ಮಪನೆದುರಿಸುತ ಭೀಕರ ಭಯಂಕರದ
ಘೋರತರ ಯುದ್ಧವನು ಗೈಯುತಲಿ ಬಳಲಿದನು ॥೫೭೪॥

ವರಯಜ್ಞದಧಿಪತಿಯು ಆ ಅಗ್ನಿದೇವನೇ
ತಾನೆಯೇ ಜ್ವಾಲೆಗಳ ನಾಲಿಗೆಯ ಚಾಚುತಲಿ
ಸಹದೇವನಾತನಾ ಕುದುರೆಯನು ರಥಗಳನು
ಸೈನ್ಯವನು ಸುತ್ತುತಲಿ ಭರದಿಂದ ದಹಿಸಿದನು ॥೫೭೫॥

ಸಹದೇವ ನೋಡುತಲಿ ಚಿಂತೆಯಲಿ ಮುಳುಗುತಲಿ
ಮುಂದೇನು ಮಾಡುವುದು ಎನ್ನುತಲಿ ತೊಳಲುತಲಿ
ಅಗ್ನಿಯಾ ಪ್ರೀತ್ಯರ್ಥ ಗೋಸುಗವೆ ಧರ್ಮಜನು
ರಾಜಸೂಯಾಧ್ವರದ ವ್ರತವನ್ನು ತೊಟ್ಟಿಹನು ॥೫೭೬॥

ಆ ಯಜ್ಞ ಗೋಸುಗವೆ ಸಹದೇವ ಬಂದಿಹನು
ಅಗ್ನಿಯೇ ನೀಲನಾ ಬೆಂಬಲಕೆ ಬರಲಿಕ್ಕೆ
ಕಾರಣವನರುಹುವದು ಎನ್ನುತಲಿ ಜನಮೇಜಯು
ಕೇಳುತಿರೆ ವೈಶಂಪ ಮುನಿವರನು ನುಡಿದಿಹನು ॥೫೭೭॥

ನೀಲನೃಪ ಯಜ್ಞವನು ಗೈಯ್ಯುವಾ ಸಮಯದಲಿ
ಕಡುಚೆಲುವೆ ಸುದರ್ಶನೆಯು ಎಂಬುವಾ ಪುತ್ರಿಯೊಳು
ಅಗ್ನಿಯಾ ಬಳಿಯಲ್ಲಿ ಕೂಡ್ರುತಲಿ ಅಗ್ನಿಯನು
ಪ್ರಜ್ವಲಿಸುತಿರುತಿರಲು ಆ ಅಗ್ನಿದೇವನು ॥೫೭೮॥

ಆಕೆಯಾ ರೂಪಕ್ಕೆ ಮರುಳಾಗಿ ಕಾಮಿಸುತ
ನರರೂಪ ಬ್ರಾಹ್ಮಣನ ರೂಪವನು ಧರಿಸುತಲಿ
ಗುಪಿತದಲಿ ಭೋಗಿಸುತಲಿರುತಿರಲು ನೀಲನೃಪ
ಕೋಪದಲಿ ಶಿಕ್ಷೆಯನು ಈಯಲಿಕೆ ಯತ್ನಿಸಲು ॥೫೭೯॥

ಭೀಕರದ ಜ್ವಾಲೆಗಳು ನೀಲನನು ಸುತ್ತುತಿರೆ
ಭಯಭೀತನಾಗುತಲಿ ತನ್ನಯಾ ಮಗಳನ್ನು
ಅಗ್ನಿಯೇ ಪ್ರೀತಿಪನು ಎನ್ನುತಲಿ ಅರಿಯುತಲಿ
ಪಾವಕಗೆ ಮಗಳನ್ನು ಧಾರೆಯನು ಎರೆದಿಹನು ॥೫೮೦॥

ವರಅಗ್ನಿ ಸಂತುಷ್ಟನಾಗುತಲಿ ನೀಲನಿಗೆ
ಬೇಕಾದ ವರವನ್ನು ಬೇಡುವುದು ಎನ್ನುತಿರೆ
ಆವುದೇ ಕಾರಣದಿ ಎನ್ನಯಾ ಸೈನ್ಯವದು
ಯುದ್ಧದಲಿ ಸೋಲದಾ ಪರಿಯಲ್ಲಿ ವರವನ್ನು ॥೫೮೧॥

ಈಯುವುದು ಎನ್ನುತಿರೆ ತಥಾಸ್ತು ಎನ್ನುತಲಿ
ಅಂದಿನಾ ದಿನದಿಂದ ಪಾವಕನು ತಾನೆಯಲಿ
ಜ್ವಾಲೆಗಳ ನಾಲಗೆಯು ಚಾಚುತಲಿ ಯುದ್ಧದಲಿ
ರಿಪು ಬಲವ ದಹಿಸುತಲಿ ನಾಶವನು ಮಾಡುವನು ॥೫೮೨॥

ಭುಗಿಲೆದ್ದ ಜ್ವಾಲೆಗಳು ಸೈನ್ಯವನು ಸುಡುತಿರಲು
ಸಹದೇವ ಚಿಂತಿಸುತ ಸ್ನಾನವನು ಮಾಡುತಲಿ
ಮಂದರದ ಪರಿಯಲ್ಲಿ ಸ್ಥಿರವಾಗಿ ನಿಲ್ಲುತಲಿ
ಅಗ್ನಿಯನು ನಮಿಸುತಲಿ ಪ್ರಾರ್ಥನೆಯ ಗೈದಿಹನು ॥೫೮೩॥

ಕರಿಹೊಗೆಯ ಮುಸುಕಿರುವ ಹೇ ಅಗ್ನಿದೇವನೆ
ನಿನ್ನಯಾ ಸಂತೋಷ ಪ್ರೀತ್ಯರ್ಥಗೋಸುಗವೆ
ಧರ್ಮಜನು ವರರಾಜಸೂಯದಾ ಯಜ್ಞವನು
ಕೈಕೊಂಡು ದಿಗ್ವಿಜಯಕೆನ್ನನ್ನು ಕಳುಹಿದನು ॥೫೮೪॥

ಸಕಲರಾ ಸುರರಿಂಗೆ ನೀನು ಮುಖವಾಗಿರುವೆ
ಎನ್ನುತಲಿ ನಿನ್ನನ್ನು ವೇದಗಳು ಹೊಗಳುತಿವೆ
ಯಜ್ಞವೇ ನೀನಿರುವೆ ಜಗದಖಿಲ ವಸ್ತುಗಳ
ಪಾವನಗೊಳಿಸುತಿಹ ಪಾವಕನು ನೀನಿರುವೆ ॥೫೮೫॥

ಯಜ್ಞದಲಿ ಅರ್ಪಿಸುವ ಹವಿಸನ್ನು ಸುರರಿಂಗೆ
ತಲುಪಿಸುವ ವರಹವ್ಯವಾಹನನು ನೀನಿರುವೆ
ನಿನಗಾಗಿ ನಾಲ್ಕುಗಳು ವೇದಗಳು ಜನಿಸಿಹವು
ಕಾರಣದಿ ನೀ ಜಾತವೇದನೆಂದೆನಿಸಿರುವೆ ॥೫೮೬॥

ಭುಗಿಭುಗಿಲು ಉರಿಯುತಿಹ ನಾಲಿಗೆಯ ಚಾಚುತಲಿ
ಸ್ವರ್ಗದಾ ದ್ವಾರವನು ನೀಸ್ಪರ್ಶಗೈಯ್ಯುವೆ
ಕಾರಣದಿ ಜ್ವಲನ ಶಿಖಿ ಹುತಾಶ ಎಂಬುವಾ
ನಾಮಗಳು ನಿನಗಿಹವು ಎನ್ನುತಲಿ ಸ್ತುತಿಸಿದನು ॥೫೮೭॥

ಪಿಂಗೇಶ ವೈಶ್ವಾನರೆಂಬುವಾ ಹೆಸರುಗಳ
ತೊಳತೊಳಗಿ ಬೆಳಗುತಿಹ ಅಗ್ನಿದೇವಿರುತಿರುವೆ
ಷಣ್ಮುಖನ ಜನನಕ್ಕೆ ಕಾರಣನು ನೀನಿರುವೆ
ವರರುದ್ರ ಗರ್ಭನಿಹ ಹಿರಣ್ಯಕೃತ್ ಎನಿಸಿರುವೆ ॥೫೮೮॥

ಹೇ ಅಗ್ನಿದೇವನೇ ತೇಜವನು ಕರುಣಿಪುದು
ವರವಾಯು ಎನ್ನಯಾ ಪ್ರಾಣಗಳ ರಕ್ಷಿಸಲಿ
ಈ ಪೃಥ್ವಿ ಅಧ್ಭುತದ ಶಕ್ತಿಯನು ಈಯಲಿ
ಜಲಪತಿಯು ಮಂಗಳವ ಎನಗಿತ್ತು ಸಲಹಲಿ ॥೫೮೯॥

ನೀರಿನಾ ಉತ್ಪತ್ತಿ ಕಾರಣನು ನೀನಿರುವೆ
ಮಹಸತ್ವ ಪೂರಿತನೇ ಹೇಜಾತದೇವನೆ
ಸುರರಿಂಗೆ ಮುಖಪ್ರಾಯನಾಗಿರುವ ಪಾವಕನೆ
ಎನ್ನನ್ನು ಪಾವನವಗೊಳಿಸುವುದು ವಾಕ್ಕಿನಲಿ ॥೫೯೦॥

ಲೋಕದಾ ಪಾಪಗಳ ನಾಶವನು ಮಾಡುತಲಿ
ಪಾವನವ ಮಾಡುತಿಹ ಅನಿಲಜನೆ ಅಗ್ನಿಯೆ
ಜಗದಖಿಲ ಪ್ರಾಣಿಗಳ ಜಠರದಲಿ ವಾಸಿಸುವ
ಜಠರಾಗ್ನಿ ದೇವನೇ ಎನ್ನನ್ನು ರಕ್ಷಿಪುದು ॥೫೯೧॥

ಹೇ ಅಗ್ನಿದೇವನೆ ವರಜಾತವೇದನೇ
ಪಾವನನೆ ಪಾವಕನೆ ಹುತವಹನ ಜ್ವಲನನೆ
ತುಷ್ಟಿಯನು ಪುಷ್ಟಿಯನು ಜ್ಞಾನವನು ಈಯುತಲಿ
ಎನ್ನನ್ನು ರಕ್ಷಿಪುದು ಎನ್ನುತಲಿ ಸ್ತುತಿಸಿದನು ॥೫೯೨॥

ಈ ತೆರದಿ ಸಹದೇವ ಅಗ್ನಿಯನು ಸ್ತುತಿಸುತಲಿ
ಸುರರಿಂಗೆ ಹವ್ಯವನು ತಲುಪಿಸುವ ದೇವನೆ
ಯಜ್ಞಕ್ಕೆ ಅಡೆತಡೆಯ ಮಾಡುವುದು ಸರಿಯಲ್ಲ
ಎನ್ನುತಲಿ ಅಗ್ನಿಯನು ಧ್ಯಾನಿಸುತ ಮನದೊಳಗೆ ॥೫೯೩॥

ಧರ್ಭೆಯಲಿ ಕುಳಿತಿರಲು ಯಜ್ಞೇಶ ಮೆಚ್ಚುತಲಿ
ಸಶರೀರನಾಗುತಲಿ ಕುರುಕುಲ ಪ್ರದೀಪನೆ
ನಿನ್ನನ್ನೂ ಪರಿಕಿಸಲು ಈ ತೆರದಿ ಗೈದಿಹನು
ಧರ್ಮಜನ ಇಚ್ಛೆಯನು ಯಜ್ಞವನು ಅರಿತಿಹೆನು ॥೫೯೪॥

ನೀಲನಿಗೆ ರಕ್ಷಿಸುವ ವಚನವನು ಇತ್ತಿಹೆನು
ಕಾರಣದಿ ನಿನಗಿನಿತು ಕಷ್ಟವನು ಇತ್ತಿಹೆನು
ನಿನ್ನಿಷ್ಟ ಸಲಿಸುವೆನು ಚಿಂತೆಯನು ಮಾಡದಿರು
ಯಮಸುತನ ಯಜ್ಞವದು ನೆರವೇರಲೆನ್ನುತಲಿ ॥೫೯೫॥

ಸಹದೇವ ಸಂತಸದಿ ವರ ಅಗ್ನಿ ದೇವಂಗೆ
ಸಾಷ್ಟಾಂಗ ಗೈಯುತಿರೆ ಪಾವಕನು ನೀಲಂಗೆ
ಆದೇಶವೀಯುತಿರೆ ನೀಲನೃಪ ಅಗಣಿತವ
ಧನಕನಕ ಕಾಣಿಕೆಯನೀಯುತಲಿ ಕಳುಹಿದನು ॥೫೯೬॥

ಮುಂದಕ್ಕೆ ತೆಂಕಣದಿ ದೂರದಲಿ ಸಾಗುತಲಿ
ತ್ರಿಪುರನು ಪೌರವನ ಸೌರಾಷ್ಟ್ರ ಜಯಿಸುತಲಿ
ಭೋಜದಾ ರುಕ್ಮೀನೃಪ ಭೀಷ್ಮಕರ ಬಳಿಯಲ್ಲಿ
ಸಂದೇಶ ಸಹಿತದಲಿ ದೂತನನು ಕಳುಹಿದನು ॥೫೯೭॥

ಭೀಷ್ಮಕನು ಆ ರುಕ್ಮಿನೃಪವರರು ಸಂತಸದಿ
ಪಾಂಡವರ ರಕ್ಷಿಸುವ ಕೃಷ್ಣನಾ ಬಾಂಧವ್ಯ
ಅರಿಯುತಲಿ ಅಗಣಿತದ ಕಾಣಿಕೆಯನೀಯುತಲಿ
ಆದರಿಸಿ ಸ್ನೇಹದಲಿ ಸತ್ಕರಿಸಿ ಕಳುಹಿದರು ॥೫೯೮॥

ಸಾಗರದ ತೀರದಾ ಮ್ಲೇಚ್ಛರನು ನಿಷದರನು
ಪ್ರಾವರಣ ಕಾಲಮುಖಿ ಕೋಲಗಿರಿನಾಯಕರ
ಸುರಭಯನ ತಾಮ್ರನನು ರಾಮಕವ ಕೇರಳವ
ಪಾಖಂಡ ಕರಹಾಟ ದೇಶಗಳ ಜಯಿಸುತಲಿ ॥೫೯೯॥

ಪಾಂಡ್ಯರನು ಪುಂಡ್ರರನು ಆಂಧ್ರರನು ದ್ರಾವಿಡರ
ಜಯಿಸುತಲಿ ಅಗಣಿತದ ಕಾಣಿಕೆಯ ಕೊಳ್ಳುತಲಿ
ಮುಂದಕ್ಕೆ ಸಾಗುತಲಿ ಹಿಡಿಂಬೆಯಾ ಸುತನಾದ
ಅದ್ಭುತ ಪರಾಕ್ರಮಿಯ ಘಟೋತ್ಕಜನ ವೀರನನು ॥೬೦೦॥

ಲಂಕೆಯನು ಆಳುತಿಹ ವಿಭೀಷಣನ ಬಳಿಯಲ್ಲಿ
ಕಳುಹಿಸಲು ಐತಂದು ವಿಭೀಷಣಗೆ ವಿನಯದಲಿ
ಯಜ್ಞದಾ ವಿಷಯವನು ತಿಳುಹಿಸಲು ಸಂತಸದಿ
ಧರ್ಮಜನ ಚಕ್ರಾಧಿಪತ್ಯವನು ಒಪ್ಪುತಲಿ ॥೬೦೧॥

ಅಪರಿಮಿತ ಕಾಣಿಕೆಯ ಕಪ್ಪಗಳ ನೀಯುತಲಿ
ಆದರದಿ ಸತ್ಕಾರ ಗೈಯುತಿರೆ ಘಟೋತ್ಕಜ
ಮರಳುತಲಿ ಹೇರಳದ ಕಾಣಿಕೆಯ ವಿತ್ತವನು
ಸಹದೇವನಂಘ್ರಿಯಲಿ ಇತ್ತಿಹನು ನಮಿಸುತಲಿ ॥೬೦೨॥

ಈ ಪರಿಯ ಸಹದೇವ ತೆಂಕಣದ ರಾಜರನು
ಸಾಮದಲಿ ದಾನದಲಿ ದಂಡದಲಿ ಭೇದದಲಿ
ಜಯಿಸುತಲಿ ಅಗಣಿತದ ಕಾಣಿಕೆಯ ಕೊಳ್ಳುತಲಿ
ಮರಳುತಲಿ ಧರ್ಮಜನ ಚರಣದಲಿ ಅರ್ಪಿಸಿದ ॥೬೦೩॥

**ಪಶ್ಚಿಮದ ದೆಶೆಯೊಳಿಹ ನೃಪರುಗಳ ಸದೆಬಡಿದು ।**
**ಮನುಕುಲದ ಅಗಣಿತದ ಧನಕನಕ ಪಡೆದಿಹನು ॥**

ಕೇಳುವುದು ಜನಮೇಜಯ ಕ್ಷಿತಿಪ ವರನಕುಲ
ಧರ್ಮಜನ ನಮಿಸುತಲಿ ಚತುರಂಗ ಬಲಸಹಿತ
ಮುನ್ನಿನಲಿ ಶ್ರೀಕೃಷ್ಣ ಜಯಿಸಿರ್ದ ದೇಶಗಳ
ಜಯಿಸಿರುವ ವಿಷಯವನು ವಿಸ್ತರಿಸಿ ಪೇಳುವೆನು ॥೬೦೪॥

ಮೊದಲಿಂಗೆ ಕಾರ್ತಿಕಗೆ ಅತಿಪ್ರಿಯವು ಎನಿಸಿರ್ದ
ಧನಧಾನ್ಯ ದನಕರುಗಳಿಂದೆಸೆವ ಸಮೃದ್ಧದ
ರೋಹಿತಕ ಪರ್ವತವ ಮುತ್ತುತಲಿ ಸುತ್ತಣದ
ಮತ್ತಮಯೂರಕರ ವೀರರನು ಗೆಲಿದಿಹನು ॥೬೦೫॥

ಶರೀಷಕ ಮಹೋತ್ಥವದ ರಾಜ್ಯಗಳ ಜಯಿಸುತಲಿ
ಆಕ್ರೋಶ ರಾಜರ್ಷಿಯಾಶ್ರಿತನ ಮಾಡುತಲಿ
ದಶಾರ್ಣ ತ್ರಿಗರ್ತರನು ಅಂಬಷ್ಠ ಮಾಲವರ
ಕರ್ಪತರ ಗೆಲ್ಲುತಲಿ ಕಪ್ಪಗಳ ಕೊಳ್ಳುತಲಿ ॥೬೦೬॥

ಪುಷ್ಕರವ ಉತ್ಸವನ ಸಂಕೇತರೆಂಬುವರ
ಸೋಲಿಸುತ ಸಿಂಧುವಿನ ಸರಸತಿಯ ತೀರದಾ
ನಾಯಕರ ಜಯಿಸುತಲಿ ಸಾಗರದ ತೀರದಾ
ದೇಶಗಳ ಜಯಿಸುತಲಿ ಕಾಣಿಕೆಯ ಕೊಂಡಿಹನು ॥೬೦೭॥

ಮುಂದಕ್ಕೆ ಸಾಗುತಲಿ ಪಂಚನದಿ ಪ್ರವಹಿಸುವ
ಪಂಜಾಬ ಜಯಿಸುತಲಿ ಅಮರಾದ್ರಿಯೊಕ್ರಮಿಸಿ
ಜ್ಯೋತಿಷವ ದಿವ್ಯ ಕಟಪುರಗಳನು ಗೆಲ್ಲುತಲಿ
ವರವ್ಯಾಸ ಪುರವನ್ನು ವಶಪಡಿಸಿಕೊಳ್ಳುತಲಿ ||೬೦೮||

ರಾಮಠರ ಹೂಣರನು ಮ್ಲೇಚ್ಛರಾ ರಾಜರನು
ಜಯಿಸುತಲಿ ಅಲ್ಲಿಂದ ಶ್ರೀಕೃಷ್ಣ ಯಾದವಗೆ
ತಾನಲ್ಲಿ ಬಂದಿರುವ ವಾರ್ತೆಯನು ತಿಳಿಸುತಲಿ
ದೂತರನು ದ್ವಾರಕೆಗೆ ಅಟ್ಟುತಿರೆ ಭರದಲ್ಲಿ ||೬೦೯||

ಶ್ರೀಕೃಷ್ಣ ನೈತಂದು ಹರುಷದಲಿ ಧರ್ಮಜನ
ಸಾರ್ವಭೌಮತ್ವವನು ಒಪ್ಪುತಲಿ ಸಂತಸದಿ
ರತ್ನಗಳ ವಜ್ರಗಳ ಪೀತಾಂಬರಾದಿಗಳ
ಅಗಣಿತವ ಕಾಣಿಕೆಯ ಕಪ್ಪಗಳ ಸಲ್ಲಿಸಿದ ||೬೧೦||

ರಾಜಸೂಯಾಧ್ವರವು ವೈಭವದಿ ಜರಗುತಲಿ
ಧರ್ಮಜನ ಕೀರ್ತಿಯದು ಮೂಜಗದಿ ಪಸರಿಸಲಿ
ನಾವುಗಳು ಪರಿವಾರ ಸಹಿತದಲಿ ಯಜ್ಞಕ್ಕೆ
ಬಹೆವೆಂದು ಹರಸುತಲಿ ಶ್ರೀಕೃಷ್ಣ ಕಳುಹಿಂದು ||೬೧೧||

ಪಯಣವನು ಬೆಳಸುತಲಿ ತನ್ನಯಾ ಮಾವನನು
ಆ ಮದ್ರರಾಜನನು ಶಲ್ಯನನು ಕಾಣುತಿರೆ
ಒಲುಮೆಯಲಿ ಶಲ್ಯನೃಪ ನಕುಲನನ ಸತ್ಕರಿಸಿ
ಧನಕನಕ ಕಾಣಿಕೆಯ ನೀಯುತಲಿ ಕಳುಹಿದನು ||೬೧೨||

ಪಶ್ಚಿಮದ ತೀರವನು ಆಳುತಿಹ ಮ್ಲೇಚ್ಛರನು
ಅಗಣಿತದ ವೀರರನುನೃಪರನ್ನು ಜಯಿಸುತಲಿ
ಬರ್ಬರ ಕಿರಾತರನು ಯವನರನು ಶಕರನ್ನು
ಜಯಿಸುತಲಿ ವರ ಇಂದ್ರಪ್ರಸ್ಥಕ್ಕೆ ಮರಳಿದನು ||೬೧೩||

ಈರೈದು ಸಾವಿರದ ಆನೆಗಳು ಹೊತ್ತಿರುವ
ಅಪರಿಮಿತ ಧನಕನಕ ಕಾಣಿಕೆಯ ವಿತ್ತವನು
ಧರ್ಮಜನ ಚರಣಕ್ಕೆ ಅರ್ಪಿಸುತ ನಮಿಸುತಿರೆ
ಹರುಷವದು ಉಕ್ಕುತಲಿ ನಕುಲನನು ಅಪ್ಪಿದನು ||೬೧೪||

ಈ ಪರಿಯೆ ನಾಲ್ವರೂ ಸೋದರರು ನಾಲ್ದೆಸೆಯ
ಸರ್ವರನು ರಾಜರನು ಸದೆಬಡಿದು ಜಯಿಸುತಲಿ
ವರಭರತವರ್ಷದಲಿ ನುತಚರಿತ ಧರ್ಮಜನ
ಚಕ್ರಾಧಿಪತ್ಯವನು ಸ್ಥಾಪನೆಯ ಗೈದಿಹರು ||೬೧೫||

ಜನಮೇಜಯ ಕ್ಷಿತಿಪ ಕೇಳುವುದು ಈ ಪರಿಯೆ
ಸೋದರ ಚತುಷ್ಟಯರು ರಾಜರನು ಜಯಿಸುತಲಿ
ತಂದಿರುವ ಅಗಣಿತದ ಕಾಣಿಕೆಯ ಸಂಪದದಿ
ರಾಜಭಂಡಾರವದು ತುಂಬುತಲಿ ತುಳುಕಿಹುದು ||೬೧೬||

ಕಳವು ಕೊಲೆಸುಲಿಗೆಗಳು ಕ್ರೌರ್ಯಗಳು ಹಿಂಸೆಗಳು
ಶಬ್ದಗಳು ಕೇಳಿಸವು ಎಲ್ಲಡೆಗೆ ಸುಖಶಾಂತಿ ಸಂತೋಷ
ಪಸರುತಲಿ ಸಕಲ ಪ್ರಜೆ ಸಂತಸದಿ ನಲಿಯುತಿರೆ
ಧರ್ಮಜನ ರಾಜ್ಯದಾ ಕೀರ್ತಿಯದು ಮೆರೆದಿಹುದು ||೬೧೭||

ರಾಜಸೂಯಾಧ್ವರಕೆ ಇದು ಸೂಕ್ತ ಸಮಯವಿದೆ
ಎನ್ನುತಲಿ ಬಂಧುಗಳು ಅಧಿಕಾರಿ ವರ್ಗಗಳು
ಧರ್ಮಜಗೆ ನುಡಿಯುತಿರೆ ಯಜ್ಞವನು ಮಾಡಲಿಕೆ
ಯಮಸುತನು ಸಿದ್ಧತೆಯ ಪ್ರಾರಂಭಗೈದಿಹನು ||೬೧೮||

**ಮುರಹರನು ಮೊದಲಾಗಿ ಅಗಣಿತರು ನೃಪರುಗಳು |**
**ರಾಜಸೂಯಾಧ್ವರಕೆ ಸಡಗರದಿ ಬಂದಿಹರು ||**

ಸ್ವಸ್ತಿಶ್ರೀ ಯಾದವ ಶಿರೋಮಣಿಯ ಮಾಧವನ
ಮುರಮಥನ ಕಂಸಾರಿ ಗಿರಿಧಾರಿ ಮುರಾರಿಯ
ಶ್ರೀಕೃಷ್ಣನಂಘ್ರಿಯಲಿ ನತಮಸ್ತಕನ್ಯಸ್ತ
ಧರ್ಮಜನು ಮಾಡುವಾ ಸಾಷ್ಟಾಂಗ ನಮನಗಳು ||೬೧೯||

ನಿಮ್ಮಯಾ ಕೃಪೆಯಿಂದ ರಾಜಸೂಯಾಧ್ವರದ
ವ್ರತವನ್ನು ತೊಟ್ಟಿಹೆನು ನೀವುಗಳು ಯಾದವರು
ಬಂಧುಗಳು ಸಕಲರು ಯಜ್ಞಕ್ಕೆ ಐತಂದು
ಎಮ್ಮನ್ನು ಹರಸುತಲಿ ಕರುಣೆಯಲಿ ಎನ್ನುತಲಿ ||೬೨೦||

ಓಲೆಯನು ಬರೆಯುತಲಿ ಫಲುಗುಣಗೆ ಈಯುತಲಿ
ದ್ವಾರಕೆಗೆ ತೆರಳುತಲಿ ಶ್ರೀಕೃಷ್ಣಗೀಯುತಲಿ
ಪರಿವಾರ ಸಹಿತಲಿ ಬಹುದೆಂದು ತಿಳಿಸುತಲಿ
ಕರೆತಹುದು ಎನ್ನುತಲಿ ಕಳುಹಿದನು ಭರದಲ್ಲಿ ||೬೨೧||

ಧರ್ಮಜನ ಆಜ್ಞೆಯಲಿ ಸಹದೇವ ಸೋದರನು
ವರಭರತವರ್ಷದಾ ನೃಪರಿಂಗೆ ಸಕಲರಿಗೆ
ಮುನಿಗಳಿಗೆ ಋಷಿಗಳಿಗೆ ಆಮಂತ್ರಣೋಲೆಗಳ
ಬರೆಯುತಲಿ ದೂತರನು ಕಳುಹಿಸಿದ ಶೀಘ್ರದಲಿ ||೬೨೨||

ಧೌಮ್ಯರಾ ಸಲಹೆಯಲಿ ಯಜ್ಞಕ್ಕೆ ಬೇಕಾದ
ಸಾಮಗ್ರಿ ಸಲಕರಣೆ ವಸ್ತುಗಳನೆಲ್ಲವನು
ತರಿಸಲಿಕೆ ಮತ್ತು ಆ ವೇದಿಕೆಯ ನಿರ್ಮಿಸಲು
ಅಧಿಕಾರಿ ವರ್ಗಕ್ಕೆ ಸಹದೇವಗರುಹಿದನು ||೬೨೩||

ವ್ಯಾಸರೇ ಯಜ್ಞಕ್ಕೆ 'ಬ್ರಹ್ಮರೂ' ಆಗಿಹರು
ವರಯಾಜ್ಞವಲ್ಕ್ಯರೇ ಅಧ್ವರ್ಯು ಎನಿಸಿಹರು
ವರಧೌಮ್ಯ ಪೈಲರೂ ಹೋತೃತ್ವವಹಿಸಿದರು
ಋಷಿಗಳಾ ಸುತರೇಳು ಹೋತೃತ್ವರಾಗಿಹರು ॥೮೨೪॥

ಶುಭಸಮಯ ಸನ್ನಿಹಿತವಾಗಿರಲು ದ್ವಿಜರುಗಳು
ಧರ್ಮಜಗೆ ಪುಣ್ಯತರ ಪುಣ್ಯಾಹವಾಚನದಿ
ಯಜ್ಞದಾ ದೀಕ್ಷೆಯನು ಈಯುತಲಿ ಹರಸುತಲಿ
ಯಾಗದಾ ಕುಂಡಗಳ ಸ್ಥಾಪನೆಯ ಗೈದಿಹರು ॥೮೨೫॥

ಯಾಗಕ್ಕೆ ಬೇಕಾದ ಸಾಮಗ್ರಿ ಎಲ್ಲವನು
ಸಿದ್ಧತೆಯ ಮಾಡಿರಲು ನುತಚರಿತ ಧರ್ಮಜನು
ಮಂಗಳದ ಸ್ನಾನವನು ಗೈಯ್ಯುತಲಿ ಶುಭದಲ್ಲಿ
ದಿವ್ಯಾಂಬರಾಭರಣ ಭೂಷಣದಿ ಶೋಭಿಸುತ ॥೮೨೬॥

ಭೂಸುರರು ಶುಭಸ್ವಸ್ತಿ ವಾಚನವ ಗೈಯ್ಯುತಿರೆ
ಮಂಗಳದ ವಾದ್ಯಗಳು ಮೊಳಗುತಿರೆ ಎಲ್ಲೆಡೆಗು
ಬಂಧುಗಳ ಬಾಂಧವರ ನೃಪವೃಂದ ಸಹಿತದಲಿ
ಧರ್ಮಜನು ಬೆಳಗುತಲಿ ಮಂಟಪವ ಹೊಕ್ಕಿಹನು ॥೮೨೭॥

ಶುಭಸಮಯ ಸನ್ನಿಹಿತವಾಗಿರಲು ದ್ವಿಜರುಗಳು
ಧರ್ಮಜಗೆ ಪುಣ್ಯಾಹವಾಚನದ ಕಾರ್ಯದಲಿ
ಯಾಗದಾ ದೀಕ್ಷೆಯನು ಈಯುತಲಿ ಹರಸುತಲಿ
ಯಜ್ಞದಾ ಕುಂಡಗಳ ಸ್ಥಾಪನೆಯ ಗೈದಿಹರು ॥೮೨೮॥

ಧರ್ಮಜನ ಮನೋರಥವೆ ಫಲಿಸಿತೋ ಎಂಬಂತೆ
ಮುರಮಥನ ರಥವಿಳಿದು ಬರುತಿರಲು ತೋಷದಲಿ
ಮಾಧವನ ಚರಣಾರವಿಂದದಲಿ ಎರಗುತಲಿ
ಧರ್ಮಜನು ನುಡಿದಿಹನು ತನುಪುಳಕ ಪೂರದಲಿ ॥೮೨೯॥

ಅರ್ಘ್ಯ ಪಾದ್ಯಾದಿಗಳ ನೀಯುತಲಿ ಸತ್ಕರಿಸಿ
ಕುಶಲವನು ಕೇಳುತಲಿ ಧರ್ಮಜನು ನುಡಿದಿಹನು
ನಿನ್ನಯ ಅನುಗ್ರಹದಿ ಎನ್ನಯಾ ಸೋದರರು
ಈ ಭರತಖಂಡವನು ಸಕಲವನು ಜಯಿಸುತಲಿ ॥೮೩೦॥

ಅಪರಿಮಿತ ಐಶ್ವರ್ಯ ಸಂಪದವ ತಂದಿಹರು
ಯಾಗದಲಿ ವಿಪ್ರರಿಗೆ ದೀನರಿಗೆ ದಲಿತರಿಗೆ
ದಾನವನು ಮಾಡಲಿಕೆ ಇಚ್ಛೆಯನು ಗೈದಿಹೆನು
ನೀ ಎನ್ನ ಹರಸುವುದು ಎನ್ನುತಲಿ ನುಡಿದಿಹನು ॥೮೩೧॥

ಸೋದರರ ಸಹಿತದಲಿ ಸಂಕಲ್ಪಗೈದಿರುವ
ಯಜ್ಞವನು ಮಾಡಲಿಕೆ ಆಜ್ಞೆಯನು ಈಯುವುದು
ನೀನೆಯೇ ಯಜಮಾನನಾಗುತಲಿ ಯಾಗವನು
ಮಾಡುವುದು ಎನ್ನಯಾ ಅಭಿಲಾಷೆ ಇರುತಿಹುದು ॥೮೩೨॥

ಯಜ್ಞವನು ನೀಗೈದೊಡೆನ್ನಯಾ ಪಾಪಗಳು
ನಾಶವನು ಹೊಂದುತಲಿ ಪುಣ್ಯವನು ಪಡೆಯುವೆನು
ನಿನಗಿಂತ ಶ್ರೇಷ್ಠನಾ ಘನಮಹಿಮ ಪುರುಷನನು
ನಾಕಾಣೆ ಎನ್ನುತಲಿ ಧರ್ಮಜನು ನುಡಿದಿಹನು ॥೮೩೩॥

ಕುರುಕುಲ ಪ್ರದೀಪನೆ ನುತಚರಿತ ಧರ್ಮಜನೆ
ನೀನಿಂದು ಚಕ್ರಾಧಿಪತಿಯೆನಿಸಿ ಮೆರೆಯುತಿಹೆ
ನಳನಹುಷಮಾಂಧಾತ ನೃಪರುಗಳ ವೈಭವಕೆ
ಮಿಗಿಲಾಗಿ ಕೀರ್ತಿಯಲಿ ಬೆಳಗುತಿಹೆ ಜಗದೊಳಗೆ ॥೮೩೪॥

ನೀನೀ ಮಹಾಕ್ರತುವ ಗೈಯ್ಯಲಿಕೆ ಯೋಗ್ಯನಿಹೆ
ನೀ ಯಾಗ ಗೈದೊಡೆಯು ಫಲವೆಮಗೆ ದೊರೆಯುವುದು
ಯಾಗದಲಿ ನೀ ವಿಧಿಪ ಕಾರ್ಯವನು ನಾವುಗಳು
ಪಾಲಿಪೆವು ಎನ್ನುತಲಿ ಯಾದವನು ನುಡಿದಿಹನು ॥೮೩೫॥

ಬಳಿಕಲಾ ಧರ್ಮಜನು ಭೀಷ್ಮರನು ದ್ರೋಣರನು
ಕೃಪ ವಿದುರ ಧೃತರಾಷ್ಟ್ರ ಕೌರವರ ಕರೆತರಲು
ನಕುಲನನ ಕಳಿಸುತಿರೆ ಗಜಪುರಕೆ ಐತಂದು
ಧೃತರಾಷ್ಟ್ರ ಭೀಷ್ಮರಿಗೆ ನಮಿಸುತಲಿ ನುಡಿದಿಹನು ॥೮೩೬॥

ರಾಜಸೂಯಾಧ್ವರವ ಧರ್ಮಜನು ಗೈಯ್ಯುವನು
ಪರಿವಾರ ಸಹಿತದಲಿ ನೀವೆಲ್ಲ ಬಹುದೆಂದು
ಆಹ್ವಾನ ಪತ್ರಿಕೆಯ ನೀಯುತಲಿ ನುಡಿಯುತಿರೆ
ಸಕಲರು ಧರ್ಮಜನ ಆಹ್ವಾನ ಸ್ವೀಕರಿಸಿ ॥೮೩೭॥

ಹೇರಳದ ಧನಕನಕ ರತ್ನಗಳ ವಜ್ರಗಳ
ಹೊಳೆಹೊಳೆವ ಪೀತಾಂಬರಾದಿಗಳ ವಸ್ತ್ರಗಳ
ಗಜತುರಗ ಅಪರಿಮಿತ ಕಾಣಿಕೆಯ ಸಹಿತದಲಿ
ವರಇಂದ್ರ ಪ್ರಸ್ಥಕ್ಕೆ ಬಂದಿಹರು ಸಕಲರು ॥೮೩೮॥

ಧೃತರಾಷ್ಟ್ರ ಭೀಷ್ಮರು ಗುರುದ್ರೋಣ ವಿದುರರೂ
ದುರ್ಯೋಧನಾದಿಗಳು ಕೌರವರು ನೂರ್ವರು
ಗಾಂಧಾರ ನೃಪಸುಬಲ ಶಕುನಿ ಕರ್ಣಾದಿಗಳು
ಶಲ್ಯದೊರೆ ಭಗದತ್ತ ಬಾಹ್ಲಿಕನು ಭೂರಿಯು ॥೮೩೯॥

ಆ ಸೋಮದತ್ತ ನೃಪಕೃಪ ದ್ರುಪದ ಶಾಲ್ವನು
ಸಿಂಧುದೊರೆ ಜಯದ್ರಥನು ಪೌಂಡ್ರಕ ಬೃಹದ್ಬಲನು
ಚೇದಿನೃಪ ಶಿಶುಪಾಲ ಮತ್ಸ್ಯದೊರೆ ವಿರಾಟನು
ಅಗಣಿತದ ಮ್ಲೇಚ್ಛರಾ ನೃಪರುಗಳು ಬಂದಿಹರು ॥೬೪೦॥

ಬಲರಾಮ ಅನಿರುದ್ಧ ಪ್ರದ್ಯುಮ್ನ ಸಾಂಬನು
ಕಂಕಗದ ಉಲ್ಮುಕನು ಆ ನಿಶಥ ಸಾರಣನು
ಅಪರಿಮಿತ ಯಾದವರ ಸಹಿತದಲಿ
ರಾಜಸಂಯಾಧ್ವನಕೆ ಸಡಗರದಿ ಬಂದಿಹರು ॥೬೪೧॥

ಅಂಗವಂಗಾದಿಗಳು ಕುಂತಳರು ಕಲಿಂಗನು
ಕಾಶ್ಮೀರ ಮಾಳವರು ಸೌರಾಷ್ಟ್ರ ವೈದರ್ಭ
ಶಕಹೂಣ ಕೋಸಲರು ಪಾಟಲೀ ಪುತ್ರರು
ಭೋಜನೃಪ ಬಾಹ್ಲಿಕನು ಕರ್ನಾಟಕಾಂಧ್ರರು ॥೬೪೨॥

ಚೇರಳರು ಚೋಳರನು ಪಾಂಡ್ಯರೂ ಸಿಂಹಲರು
ತೆಂಕಣದ ಅಗಣಿತದ ದ್ರಾವಿಡರು ನೃಪರುಗಳು
ಅಪರಿಮಿತ ಐಶ್ವರ್ಯ ಕರಿತುರುಗ ಸಹಿತದಲಿ
ಧರ್ಮಜನ ಯಾಗಕ್ಕೆ ವೈಭವದಿ ಬಂದಿಹರು ॥೬೪೩॥

ಅತ್ರಿಕಣ್ವಾದಿಗಳು ಅಂಗಿರಸ ಪರಶುಧರ
ಕೌಶಿಕನು ಜಾಬಾಲಿ ವರಯಾಜ್ಞ ವಲ್ಕ್ಯನು
ಶಾಂಡಿಲ್ಯ ಮಾಂಡವ್ಯ ಮುದ್ಗಲ ಭರದ್ವಾಜ
ಮೊದಲಾದ ಮುನಿವರರು ಮುದದಿಂದ ಬಂದಿಹರು ॥೬೪೪॥

ವೇದಾಂತ ಪಂಡಿತರು ಶಾಸ್ತ್ರಿಗಳು ತಾರ್ಕಿಗರು
ಕವಿ ಗಮಕಿವಾಗ್ಮಿಗಳು ಸಾಹಿತ್ಯಕೋವಿದರು
ಕೀರ್ತನ ವಿಶಾರದರು ಪ್ರವಚನದ ಪರಿಣಿತರು
ಗಾಯಕರು ನಾಟಕರು ನರ್ತಕರು ಬಂದಿಹರು ॥೬೪೫॥

ಕಣ್ಣಿಲ್ಲ ಕಾಲಿಲ್ಲ ಕಿವಿಯಿಲ್ಲ ಮೂಗಿಲ್ಲ
ಅಗಣಿತದ ಆ ಅಂಗವಿಕಲರೂ ಬಂದಿಹರು
ವಿಪ್ರರೂ ಮೊದಲಾಗಿ ಶೂದ್ರರಾ ಪರ್ಯಂತ
ಜಗಜನರು ಬಂದಿಹರು ಧರ್ಮಜನ ಯಜ್ಞಕ್ಕೆ ॥೬೪೬॥

ಗಂಧರ್ವ ಕಿನ್ನರರು ಕಿಂಪುರುಷ ಯಕ್ಷರು
ಖೇಚರರು ಸುರನಿಕರ ಸುರಮುನಿಗಳೆಲ್ಲರು
ಊರ್ವಶಿ ತಿಲೋತ್ತಮೆಯು ಅಪ್ಸರೆಯ ವೃಂದವು
ಯಜ ವನು ನೋಡಲಿಕೆ ಗಗನದಲಿ ನೆರೆದಿಹರು ॥೬೪೭॥

ಬಂದಿರುವ ಭೂಮಿಪರು ಧರ್ಮಜನ ಕಾಣುತಲಿ
ತಂದಿರುವ ಧನಕನಕ ಕಾಣಿಕೆಯನಿತ್ತಿಹರು
ಅವರವರಿಗುಚಿತದಲಿ ಸಹದೇವನುಪಚರಿಸಿ
ಸತ್ಕಾರ ಗೈಯ್ಯುತಲಿ ಸೌಧದಲಿ ಇರಿಸಿಹನು ॥೬೪೮॥

ವರಭರತ ವರ್ಷದಾ ಅಪರಿಮಿತ ನೃಪರುಗಳು
ಅಗಣಿತದ ಭೂಸುರರು ಮುನಿವರರು ಜ್ಞಾನಿಗಳು
ಕಿಕ್ಕಿರಿದು ತುಂಬಿರುವ ಯಜ್ಞದಾ ಮಂಡಪವು
ಇಂದ್ರನಾ ಸಭೆಯಂತೆ ಶೋಭಿಸುತಲಿರ್ದಿಹುದು ॥೬೪೯॥

**ಯಜ್ಞದಾ ಕಾರ್ಯಗಳ ಅವರವರಿಗುಚಿತದಲಿ ।**
**ಧರ್ಮಜನು ಅನುಜರಿಗೆ ಕೃಷ್ಣಂಗೆ ಒಪ್ಪಿಸಿದ ॥**

ಜನಮೇಜಯ ಕ್ಷಿತಿಪ ಕೇಳುವುದು ಯಮಸುತನು
ದೃತರಾಷ್ಟ್ರ ಭೀಷ್ಮರಿಗೆ ಗುರುದ್ರೋಣ ಕೃಪರಿಂಗೆ
ಸಾಷ್ಟಾಂಗ ಗೈಯ್ಯುತಲಿ ಪೂಜಿಸುತ ಸತ್ಕರಿಸಿ
ಯಾಗದಾ ವಿಷಯವನು ಸಕಲವನು ಅರುಹಿದನು ॥೬೫೦॥

ಈ ಎಲ್ಲ ಬೊಕ್ಕಸವು ನಿಮ್ಮದಿದೆ ನೀವೆಲ್ಲ
ಯೋಚಿಸುತ ಯಾಗವಿದು ನಿರ್ವಿಘ್ನವಾಗುತಲಿ
ಕುಂದಿಲ್ಲದಾತೆರದಿ ಯೋಗ್ಯವಿಹ ರೀತಿಯಲಿ
ನಡೆವಂತೆ ಸಲಹೆಗಳ ನೀಯುವವು ಎಂದಿಹನು ॥೬೫೧॥

ಧರ್ಮಜನು ಅನುಜರನು ಬಂಧುಗಳ ಕರೆಸುತಲಿ
ಒಬ್ಬರಿಗೆ ಒಂದೊಂದು ಕಾರ್ಯವನು ನಿಯಮಿಸಿದ
ದ್ವಿಜರುಗಳ ಕ್ಷೇಮವನು ನೋಡಲಿಕೆ ಸಂಜಯನ
ನೃಪರುಗಳ ಕುಶಲಕ್ಕೆ ಸಹದೇವ ಸೋದರನ ॥೬೫೨॥

ಯಜ್ಞಕ್ಕೆ ಬಂದಿರುವ ಸಕಲರಾ ಅತಿಥಿಗಳ
ಆತಿಥ್ಯ ವಿಷಯದಲಿ ಯಜ್ಞದಾ ಕ್ರಿಯೆಯಲ್ಲಿ
ಲೋಪಗಳು ದೋಷಗಳು ಜರುಗದಾ ಪರಿಯಲ್ಲಿ
ನೋಡಲಿಕೆ ಭೀಷ್ಮರನು ದ್ರೋಣರನು ನಿಯಮಿಸಿದ ॥೬೫೩॥

ವಿಪ್ರರಿಗೆ ಅಪರಿಮಿತ ದಕ್ಷಿಣೆಯನೀಯುತಲಿ
ವರಕೃಪನ ನಿಯಮಿಸುತ ಧೃತರಾಷ್ಟ್ರ ಬಾಹ್ಲಿಕರ
ಸಿಂಧುದೊರೆ ಜಯದ್ರಥನ ಆ ಸೋಮದತ್ತನನು
ಯಾಗದಾ ಶಾಲೆಗಳ ಅಧಿಪತಿಯ ಮಾಡಿಹನು ॥೬೫೪॥

ಆ ರಾಜಭಂಡಾರ ಧನವನ್ನು ಸರಿಯಾಗಿ
ವಿನಿಯೋಗ ಗೈಯ್ಯಲಿಕೆ ವಿದುರನನು ಇರಿಸಿಹನು
ಧರಣಿಪರು ತಂದಿರುವ ಅಗಣಿತದ ಕಾಣಿಕೆಯ
ಬೊಕ್ಕಸದೊಳಿರಿಸಲಿಕೆ ದುರ್ಯೋಧನಂಗಿತ್ತ ॥೬೫೫॥

ಧರ್ಮಜನು ಕೃಷ್ಣಂಗೆ ಅವುದೇ ಕಾರ್ಯವನು
ಕೊಡದಿರಲು ಶ್ರೀಕೃಷ್ಣ ನಾವುಗಳು ಯಜ್ಞದಲಿ
ಸುಮ್ಮನೇ ಉಂಡಾಡಿ ಕಾಲವನು ಕಳೆಯೆವು
ನಿನ್ನಯಾ ಶ್ರೇಯಕ್ಕೆ ಶ್ರೇಷ್ಠಫಲ ದೊರೆಯಲಿಕೆ ॥೬೫೬॥

ಯಜ್ಞಕ್ಕೆ ಬಂದಿರುವ ಭೂಸುರರ ಋಷಿವರರ
ಪಾವನದ ಪಾದಗಳ ತೊಳೆಯುವಾ ಕಾರ್ಯವನು
ನಾವುಗಳು ಗೈಯ್ಯುವೆವು ಎನ್ನುತಲಿ ವಿಪ್ರರಾಗಳಾ
ಪಾದಗಳನು ತೊಳೆದಿಹನು ದೇವಾಧಿದೇವನು ॥೬೫೭॥

**ರಾಜಸೂಯಾಧ್ವರವ ಧರ್ಮಜನು ಗೈಯ್ಯುತಿರೆ ।**
**ನೆರೆದಿರುವ ಸಕಲಜನ ಸಂತಸದಿ ನಲಿದಿಹರು ॥**

ಜನಮೇಜಯ ಕ್ಷಿತಿಪ ಕೇಳುವುದು ಧರ್ಮಜನು
ಆರುವಿಧ ಯಜ್ಞದಾ ಕುಂಡಗಳ ಸ್ಥಾಪಿಸುತ
ಇಂದ್ರಂಗೆ ಸ್ವಾಹಾವು ವರುಣಂಗೆ ಸ್ವಾಹಾವು
ಎಂಬುವಾ ಮಂತ್ರಗಳ ಉದ್ಘೋಷ ಗೈಯ್ಯುತಿರೆ ॥೬೫೮॥

ಮಂತ್ರಗಳ ಸುಸ್ವರವು ದಶದಿಶೆಯು ತುಂಬುತಲಿ
ಅಗಸವ ತಾಗುತಿರೆ ಧರ್ಮಜನು ಘೃತವನ್ನು
ತೇಜದಲಿ ಪ್ರಖರದಲಿ ಹೊಳೆಯುತಿಹ ಅಗ್ನಿಯಲಿ
ಧಾರೆಯಲಿ ಸತತವೂ ಬಿಡದಲೆ ಸುರಿಯುತಿರೆ ॥೬೫೯॥

ವರಅಗ್ನಿ ಧಗಧಗನೆ ದುಮುದುಮನೆ ಉರಿಯುತಲಿ
ಕಿಡಿಗಳನು ಸುರಿಸುತಲಿ ಏಳುತಲಿ ನೆಗೆಯುತಲಿ
ಜ್ವಾಲೆಗಳ ನಾಲಿಗೆಯ ಮೇಲಕ್ಕೆ ಬೀಸುತಲಿ
ಸ್ವರ್ಗವನು ಭೇದಿಸುತ ನಾಲಗೆಯು ಚಾಚುತಿರೆ ॥೬೬೦॥

ರಭಸೋಂಕಿ ಸುರನಿಕರ ಏನಿದುವೆ ಎನ್ನುತಲಿ
ಭಯಭೀತರಾಗುತಲಿ ನೋಡುತಿರೆ ಚಕಿತದಲಿ
ಅವನಿಯಲಿ ಪಾಂಡುವಿನ ನಂದನನು ಗೈಯ್ಯುತಿಹ
ರಾಜಸೂಯಾಧ್ವರವ ಕಾಣುತಲಿ ಹರಸಿದರು ॥೬೬೧॥

ಹುತವಹನ ತಲುಪಿಸುವ ಭಕ್ಷ್ಯಗಳ ಹವಿಸನ್ನು
ಸವಿಯುತಲಿ ಸುರವೃಂದ ಸಂತೃಪ್ತರಾಗುತಲಿ
ಇಂದುವಿನ ವಂಶದಲಿ ಈ ಪರಿಯ ಯಜ್ಞವನು
ಇಂದಿನಾ ಪರ್ಯಂತ ಅವರಸು ಗೈದಿಲ್ಲ ॥೬೬೨॥

ಕುರುಕುಲದ ನೃಪರೊಳಗೆ ಖ್ಯಾತನೀ ನುತಚರಿತ
ಧರ್ಮಜನ ಮೀರಿಸುವ ದೊರೆಯೊಬ್ಬ ಅರಿಲ್ಲ
ಪಾಂಡುನೃಪ ಸ್ವರ್ಗದಲಿ ಇಂದ್ರನಾ ಜೊತೆಯಲ್ಲಿ
ಶೋಭಿಸುವ ಖಚಿತದಲಿ ಎನ್ನುತಲಿ ಹರಸಿದರು ॥೬೬೩॥

ಗಗನವನು ಭೇದಿಸುವ ಮಂತ್ರಗಳ ಘೋಷಣದಿ
ಋತ್ವಿಜರು ಈಯುತಿಹ ಘೃತಧಾರೆ ಹವಿಸಿನಲಿ
ಸುರವೃಂದ ಸಂತುಷ್ಟರಾಗುತಲಿ ಸಂತಸದಿ
ಕುರುಕುಲದ ಶ್ರೇಷ್ಠನನ ಧರ್ಮಜನ ಹರಸಿದರು ॥೬೬೪॥

ಮಂಡಿಗೆಯು ಹೋಳಿಗೆ ಘಾರಿಗೆಯು ಪಾಯಸದ
ಷಡ್ರಸದ ಪಕ್ವಾನ್ನದೂಟವನು ಸವಿಯುತಲಿ
ಧನಕನಕ ವಸ್ತ್ರಗಳ ದಕ್ಷಿಣೆಯ ಕೊಳ್ಳುತಲಿ
ದ್ವಿಜವೃಂದ ಸಂತಸದಿ ಧರ್ಮಜನ ಹರಸಿದರು ॥೬೬೫॥

ಎಲ್ಲರಿಗೆ ಹೇರಳದ ದಾನಗಳ ನೀಯುವುದು
ಎಲ್ಲರೂ ತೃಪ್ತಿಯಲಿ ಭೋಜನವ ಗೈಯ್ಯುವುದು
ಎಂಬುವಾ ಶಬ್ದಗಳು ಎಲ್ಲೆಡೆಗೆ ಕೇಳಿಪವು
ಧರ್ಮಜನು ಅಪರಿಮಿತ ದಾನಗಳ ನಿತ್ತಿಹನು ॥೬೬೬॥

ವಿಪ್ರರೇ ಮೊದಲಾಗಿ ಶೂದ್ರರಾ ಪರ್ಯಂತ
ಸರ್ವರೂ ಯಾಗವನು ನೋಡುತಲಿ ಸಂತಸದಿ
ಈ ಪರಿಯ ಯಜ್ಞವನು ನಾವೆಂದು ನೋಡಿಲ್ಲ
ಎನ್ನುತಲಿ ಧರ್ಮಜನು ಕೀರ್ತಿಯನು ಹೊಗಳಿದರು ॥೬೬೭॥

ಈ ತೆರದಿ ಯಮಸುತನ ರಾಜಸೂಯಾಧ್ವರವು
ಹಿಂದಣದ ಯಜ್ಞಗಳನೆಲ್ಲವನು ಮೀರಿಸುತ
ಸಕಲರಾ ಕರ್ಣಗಳ ಹೃದಯವನು ತಣಿಸುತಲಿ
ವೈಭವದಿ ಜರಗುತಲಿ ಕೀರ್ತಿಯಲಿ ಮೆರೆದಿಹುದು ॥೬೬೮॥

ಜನಮೇಜಯ ಕ್ಷಿತಿಪ ಅಲಿಪುದು ಮುಂದಕ್ಕೆ
ಈ ಪರಿಯೆ ಯಜ್ಞವದು ಪರಿಪೂರ್ಣವಾಗುತಿರೆ
ಬ್ರಹ್ಮರ್ಷಿ ಪಂಡಿತರು ನೃಪರುಗಳು ನೆರೆದಿರುವ
ಸಭೆಯೊಳಗೆ ವರಭೀಷ್ಮ ಧರ್ಮಜಗೆ ನುಡಿದಿಹನು ॥೬೬೯॥

**ಯಾದವ ಶಿರೋಮಣಿಗೆ ವರಅಗ್ರ ಪೂಜೆಯನು ।**
**ಸಲ್ಲಿಪುದು ಎಂದಿಹನು ವರಭೀಷ್ಮ ಧರ್ಮಜಗೆ ॥**

ಹೇ ಕಂದ ಧರ್ಮಜನೆ ಬಂದಿರುವ ಅರಸರಿಗೆ
ಮೊದಲಿಂಗೆ ಅವರೊಳಗೆ ಶ್ರೇಷ್ಠಂಗೆ ಅರ್ಘ್ಯವನು
ಈಯುತಲಿ ಪ್ರಾರಂಭಗೈಯ್ಯುತಲಿ ಉಳಿದವರ್ಗೆ
ಉಚಿತದಲಿ ಗೌರವವ ಸಲಿಸುವುದು ಎಂದಿಹನು ॥೬೭೦॥

ಸಭೆಯೊಳಗೆ ಕುಳಿತಿರ್ದ ರಾಜರನು ನೋಡುತಲಿ
ಇವರೊಳಗೆ ಅತಿಶ್ರೇಷ್ಠನಾರಿಹನು ಎನ್ನುತಲಿ
ಧರ್ಮಜನು ಯೋಚಿಸುತ ಚಿಂತಿಸುತ ಹೊಳೆಯದಲೆ
ನದಿಜನಿಗೆ ಧರ್ಮಜನು ನುಡಿದಿಹನು ವಿನಯದಲಿ ॥೬೭೧॥

ತಾತಯ್ಯ ನಾವುಗಳು ಅರಿಯದಾ ಬಾಲಕರು
ಕುರುಕುಲದಿ ನೀವುಗಳೆ ಹಿರಿಯರೆಂದೆನಿಸಿಹಿರಿ
ನೀವುಗಳು ಹೇಳುತಿಹ ಸಭೆಯೊಳಗೆ ಶ್ರೇಷ್ಠಂಗೆ
ಮಹಿಮಂಗೆ ಪುರುಷಂಗೆ ಮೊದಲರ್ಘ್ಯ ವೀಯುವೆನು ॥೬೭೨॥

ಅತಿಶ್ರೇಷ್ಠನಾರಿಹನು ಎಂಬುದನು ಪೇಳುವುದು
ಎನ್ನುತಲಿ ಧರ್ಮಜನು ನುಡಿಯುತಿರೆ ವರಭೀಷ್ಮ
ಕ್ಷಣಕಾಲ ಯೋಚಿಸುತ ಕೃಷ್ಣನನು ನೋಡುತಲಿ
ನಿರ್ಧಾರಗೈಯ್ಯುತಲಿ ಧರ್ಮಜಗೆ ನುಡಿದಿಹನು ॥೬೭೩॥

ಗ್ರಹತಾರೆಗಳಿಗೆಲ್ಲ ಪ್ರಭುವಾದ ರವಿಯಂತೆ
ಶಕ್ತಿಯಲಿ ವೀರ್ಯದಲಿ ದಿವ್ಯ ಪ್ರತಾಪದಲಿ
ಅಪರಿಮಿತ ಪ್ರಭೆಯಲ್ಲಿ ತೊಳತೊಳಗಿ ಬೆಳಗುತಿಹ
ಘನಮಹಿಮ ಕೃಷ್ಣನೇ ನಮಗೆಲ್ಲ ಶ್ರೇಷ್ಠನಿಹ ॥೬೭೪॥

ಸಕಲ ಸಚರಾಚರದ ವಿಶ್ವಕ್ಕೆ ಕಾರಣನು
ಆದ್ಯಂತವಿಲ್ಲದಿಹ ಪರಮನೀ ಪುರುಷಂಗೆ
ಈ ಸಭೆಯ ಮಧ್ಯದಲಿ ಮಾನ್ಯನಿಹ ಶ್ರೇಷ್ಠನಿಹ
ಕೃಷ್ಣಂಗೆ ಮೊದಲರ್ಘ್ಯವೀಯುವುದು ಎನ್ನುತಲಿ ॥೬೭೫॥

ವರಭೀಷ್ಮ ನುಡಿಯುತಿರೆ ಸಹದೇವ ಹರುಷದಲಿ
ವೃಷ್ಣಿಕುಲದೀಪಕಗೆ ಶ್ರೀಕೃಷ್ಣರಾಯಂಗೆ
ಪರಿಮಳವ ಸೂಸುತಿಹ ನಿರ್ಮಲದ ಉದಕದಲಿ
ಮೊದಲರ್ಘ್ಯವಿತ್ತಿಹನು ಶಿರಬಾಗಿ ನಮಿಸುತಲಿ ॥೬೭೬॥

**ಜಗದಖಿಲ ದೈವವನು ಶ್ರೀಕೃಷ್ಣ ರಾಯನನು ।**
**ದುರುಳನಾ ಶಿಶುಪಾಲ ಜರೆದಿಹನು ಸಭೆಯೊಳಗೆ ॥**

ಸಭೆಯೊಳಗೆ ನೆರೆದಿರ್ದ ನೃಪತಿಗಳು ಪ್ರಜೆಗಳು
ಚೇದಿನೃಪ ಶಿಶುಪಾಲನೊಬ್ಬನನು ಉಳಿಯುತಲಿ
ಸಕಲರೂ ಆನಂದ ಸಾಗರದಲಿ ಮುಳುಗಿದರು
ದುರುಳನಾ ಶಿಶುಪಾಲ ಸಹಿಸದಲೆ ನುಡಿದಿಹನು ॥೬೭೭॥

ಕುರುಕುಲ ಶಿಖಾಮಣಿಯೆ ನೃಪವರನೆ ಧರ್ಮಜನೆ
ಕ್ಷತ್ರಿಯ ಕುಲೋತ್ಪನ್ನ ರಾಜಾಧಿರಾಜರಿಗೆ
ಸಲ್ಲಿಸಲು ಯೋಗ್ಯಮಿಹ ಮೊದಲನೆಯ ಅರ್ಘ್ಯವನು
ಗೊಲ್ಲನೀ ಕೃಷ್ಣಂಗೆ ನೀನೆಂತು ಇತ್ತಿರುವೆ ॥೬೭೮॥

ಈ ರಾಜಸಭೆಯೊಳಗೆ ಕ್ಷಾತ್ರಕುಲ ವೀರರು
ನೃಪಶ್ರೇಷ್ಠರಿರುತಿರಲು ದಾಸ್ಯಕುಲವೆನಿಸುತಿಹ
ಗೌಳಿಗರ ವಂಶದಲಿ ಜನಿಸಿರುವ ಕೃಷ್ಣಂಗೆ
ಹೀನನಿಗೆ ಪ್ರಥಮಾರ್ಘ್ಯ ನೀನೆಂತು ಇತ್ತಿರುವೆ ॥೬೭೯॥

ಧರ್ಮವನು ಅರಿಯದಾ ಬಾಲಕರು ನೀವಿಹಿರಿ
ಮುದಿಹದ್ದು ಆಗಿರುವ ವೃದ್ಧನೀ ಗಾಂಗೇಯ
ಅನುಚಿತದ ಹೇಯಮಿಹ ಸಲಹೆಯನು ನಿನಗಿತ್ತು
ಘೋರತರ ಅಪರಾಧ ಪಾಪವನು ಮಾಡಿಹನು ॥೬೮೦॥

ದಾಸ್ಯಕುಲ ಸಂಭೂತ ದಾಸನೆಂದೆನಿಸುತಿಹ
ಗೊಲ್ಲನೀ ಕ್ಷಾತ್ರಕುಲ ರಾಜರಾ ಮಧ್ಯದಲಿ
ವರಅಗ್ರ ಪೂಜೆಯನು ಕೊಳ್ಳಲಿಕೆ ಆವಪರಿ
ಯೋಗ್ಯನಿಹ ಶ್ರೇಷ್ಠನಿಹ ಎಂಬುದನು ಪೇಳುವುದು ॥೬೮೧॥

ಬಾಲ್ಯದಲಿ ಚೋರತನ ಜಾರತನ ಗೈದಿರುವ
ಹಾವನ್ನು ಮಾವನನು ಹೆಂಗಸನ ಕೊಂದಿರುವ
ರಣದೊಳಗೆ ಪೌಂಡ್ರಕಗೆ ಅಂಜುತಲಿ ಓಡಿರುವ
ಹೀನನೀ ಯಾದವನು ಮಾಧವನು ಮಾನ್ಯನೆ ॥೬೮೨॥

ವಯಸಿನಲಿ ಹಿರಿಯನಿಹ ಎನ್ನುತಲಿ ಬಗೆದಿಹೆಯಾ
ವಸುದೇವ ಪಿತನಿರಲು ಇವನೆಂತು ಹಿರಿಯನಿಹ
ಪಿತನೆದುರು ಸುತನನ್ನು ಪೂಜಿಪುದು ಸಲ್ಲದಿದು
ಲೋಕದಲಿ ರೂಢಿಗಿದು ವಿಪರೀತಮಾಗಿಹುದು ॥೬೮೩॥

ನಿನ್ನಯಾ ಹಿತವನ್ನು ಶ್ರೇಯವನು ಬಯಸುವನು
ಎನ್ನುತಲಿ ವರಅಗ್ರ ಪೂಜೆಯನು ಮಾಡಿಹೆಯಾ
ನಿನ್ನಯಾ ಅಭ್ಯುದಯ ಆಶಿಸುವ ದ್ರುಪದನನು
ತೊರೆಯುತಲಿ ಕೃಷ್ಣನನು ಏತಕ್ಕೆ ಪೂಜಿಸಿದೆ ॥೬೮೪॥

ಗುರುವೆಂದು ಕೃಷ್ಣನನು ಭಾವಿಸುತ ಗೈದಿಹೆಯಾ
ನಿಮಗೆಲ್ಲ ಶಸ್ತ್ರಾಸ್ತ್ರ ವಿದ್ಯೆಯನು ಕಲಿಸಿರುವ
ಗುರುದ್ರೋಣರಿಲ್ಲಿಯೇ ಶೋಭಿಸುತಲಿರುತಿರಲು
ದನಕಾಯ್ವ ಕೃಷ್ಣನೀ ದ್ರೋಣನಿಗೆ ಶ್ರೇಷ್ಠನೆ ॥೬೮೫॥

ಈ ಸಭೆಯ ಮಧ್ಯದಲಿ ಘನಮಹಿಮ ಪುರುಷರು
ವೀರಾಧಿವೀರರು ನೃಪರುಗಳು ಶೋಭಿಪರು
ಸರ್ವರಿಗೆ ಅಪಮಾನ ಗೈದಿರುವ ಪರಿಯಲ್ಲಿ
ಅಯೋಗ್ಯನಿಹ ಕೃಷ್ಣಂಗೆ ಪೂಜೆಯನು ಗೈದಿರುವೆ ॥೬೮೬॥

ಶ್ರೇಷ್ಠನಿಹ ಋತ್ವಿಜನು ಎನ್ನುತಲಿ ತಿಳಿಯುತಲಿ
ಮೊದಲರ್ಘ್ಯವೀಯುತಲಿ ಮರ್ಯಾದೆ ಮಾಡಿಹೆಯಾ
ಋತ್ವಿಜರೊಳುಗುರು ವ್ಯಾಸರೇ ಇರುತಿರಲು
ದನಗಾಹಿಗೇತಕ್ಕೆ ಪೂಜೆಯನು ಸಲ್ಲಿಸಿದೆ ॥೬೮೭॥

ಕುರುಕುಲಕೆ ಶ್ರೇಷ್ಠನಿಹ ಹಿರಿಯರಿಯು ಭೀಷ್ಮನಿರೆ
ದನಕಾಯ್ವ ಕೃಷ್ಣನನ ನೀನೆಂತು ಪೂಜಿಸಿದೆ
ಶಾಸ್ತ್ರದಲಿ ಪರಿಣತರು ಅಶ್ವತ್ಥಾಮ ಕೃಪರಿರಲು
ಮತಿಹೀನ ಕೃಷ್ಣನನು ನೀನೆಂತು ಪೂಜಿಸಿದೆ ॥೧೮೮॥

ರಾಜರಲಿ ಶ್ರೇಷ್ಠನಿಹ ದುರ್ಯೋಧನಿಲ್ಲಿರಲು
ಗೋವಳನ ಕೃಷ್ಣನನು ನೀನೆಂತು ಪೂಜಿಸಿದೆ
ಮದ್ರೇಶ ಶಲ್ಯನೂ ಭೀಷ್ಮಕರು ಇರುತಿರಲು
ದನಗಾಯ್ವ ಯಾದವನು ಆವಪರಿ ಶ್ರೇಷ್ಠನಿಹ ॥೧೮೯॥

ವಿಪ್ರಕುಲದಗ್ರನಿಹ ಆ ಪರಶುರಾಮನ
ಪ್ರಿಯ ಶಿಷ್ಯನಾಗಿರುವ ಜಗವೀರನೆನಿಸುತಿಹ
ಖ್ಯಾತಮಿಹ ಅಂಗಪತಿ ಕರ್ಣನನು ತ್ಯಜಿಸುತಲಿ
ಈ ಹೇಡಿ ಕೃಷ್ಣನನು ನೀನೆಂತು ಪೂಜಿಸಿದೆ ॥೧೯೦॥

ಋತ್ವಿಜನು ಗುರುವರನು ನೃಪವರನು ಇಲ್ಲದಿಹ
ಹೀನನೀ ಗೊಲ್ಲನಿಗೆ ಪೂಜೆಯನು ಸಲ್ಲಿಸುತ
ರಾಜಾಧಿರಾಜರಿಗೆ ಯಜ್ಞಕ್ಕೆ ಕರೆಸುತಲಿ
ಅಪಮಾನ ಗೈದಿರುವ ಅಪರಾಧಿ ನೀನಿರುವೆ ॥೧೯೧॥

ನಿನ್ನಯಾ ಭೀತಿಯಲಿ ಯುದ್ಧಕ್ಕೆ ಅಂಜುತಲಿ
ಶರಣಾಗಿ ಕಪ್ಪಗಳ ಕಾಣಿಕೆಯನಿತ್ತಿಲ್ಲ
ಧರ್ಮಾತ್ಮ ನೀನೆಂಬ ಕಾರಣದಿ ನಿನ್ನಯಾ
ಸಾರ್ವಭೌಮತ್ವವನು ನಾವುಗಳು ಒಪ್ಪಿಹೆವು ॥೧೯೨॥

ರಾಜತ್ವಲವಲೇಶವಿಲ್ಲದಿಹ ದಾಸನನು
ಪೂಜಿಸುತ ಧರ್ಮದಲಿ ನೀ ಭ್ರಷ್ಟನಾಗಿರುವೆ
ಜರೆಸಂಧವೀರನನು ಮೋಸದಲಿ ಕೊಲ್ಲಿಸಿದ
ಕಳ್ಳನನು ಪೂಜಿಸುತ ನೀ ಹೀನನಾಗಿರುವೆ ॥೧೯೩॥

ಹೇ ಕೃಷ್ಣ ನಿನ್ನಯಾ ಬಾಂಧವ್ಯ ಕಾರಣದಿ
ಪಾಂಡವರು ಪೂಜೆಯನು ಸಲ್ಲಿಸಲು ಆಶಿಸಲು
ನಿನ್ನಯಾ ಯೋಗ್ಯತೆಯ ಅರಿಯದಲೆ ಮೌಢ್ಯದಲಿ
ನೀನೆಂತು ಪೂಜೆಯನು ಕೊಳ್ಳಲಿಕೆ ಒಪ್ಪಿರುವೆ ॥೧೯೪॥

ವರಅಗ್ರ ಪೂಜೆಯನು ಕೊಳ್ಳುತಲಿ ನಿನ್ನಯಾ
ಗೌರವವು ಹೆಚ್ಚಿಹುದು ಎನ್ನುತಲಿ ತಿಳಿದಿಹೆಯಾ
ರಾಜನಾಲಕ್ಷಣಗಳೊಂದಿರದ ನಿನ್ನನ್ನು
ಪೂಜೆಯನು ಗೈದಿಹುದು ಅಪಮಾನ ತಿಳಿಯುವದು ॥೧೯೫॥

ಷಂಢನಿಗೆ ಸುಂದರಿಯು ಕನ್ಯೆಯನು ಇತ್ತಂತೆ
ಅಂಧನಿಗೆ ಕನ್ನಡಿಯು ನೋಡಲಿಕೆ ಇತ್ತಂತೆ
ರಾಜನೇ ಅಲ್ಲದಿಹ ನಿನಗಿತ್ತ ವರಪೂಜೆ
ನಿಷ್ಫಲವು ವ್ಯರ್ಥವಿದೆ ಎನ್ನುತಲಿ ನುಡಿದಿಹನು ॥೧೯೬॥

ರಾಜಾಧಿರಾಜರೇ ಇಂದಿನೀ ಸಭೆಯೊಳಗೆ
ಧರ್ಮಜನ ಭೀಷ್ಮನಾ ಯೋಗ್ಯತೆಯು ಕೃಪಣತೆಯು
ಎಂತಿಹುದು ಎಂಬುವುದು ಸರಿಯಾಗಿ ಅರಿವಾಯ್ತು
ಧರ್ಮಜನು ಎಮ್ಮಯಾ ಅಪಮಾನಗೈದಿಹನು ॥೧೯೭॥

ನಾವಿನ್ನು ಇಲ್ಲಿಹುದು ನಮ್ಮಯಾ ಗೌರವಕೆ
ಶೌರ್ಯಕ್ಕೆ ಸಲ್ಲದಿದು ಕುಂದಿಹುದು ಶೋಭಿಸದು
ಎನ್ನುತಲಿ ಕೆಲನೃಪರ ಸಹಿತದಲಿ ಶಿಶುಪಾಲ
ಸಭೆಯನ್ನು ತೂರೆಯುತಲಿ ಹೊರವಂಟ ಕ್ರೋಧದಲಿ ॥೧೯೮॥

ಧರ್ಮಸುತ ನೋಡುತಲಿ ಧಾವಿಸುತ ಭರದಲ್ಲಿ
ತಡೆಯುತಲಿ ಶಿಶುಪಾಲಗೊರೆದಿಹನು ವಿನಯದಲಿ
ಜ್ಞಾನದಲಿ ವೃದ್ಧರಿಹ ವಯಸಿನಲಿ ಹಿರಿಯರಿಹ
ಭೀಷ್ಮರೀ ಕೃಷ್ಣನನು ಅರಿಹನು ಎನ್ನುತಲಿ ॥೧೯೯॥

ತತ್ವತಃ ಪೂರ್ಣದಲಿ ಖಚಿತದಲಿ ಅರಿಯುತಲಿ
ಸಭೆಯೊಳಗೆ ಆ ಬಾಲ ವೃದ್ಧರನು ಸಕಲರನು
ಒಬ್ಬರನು ಬಿಡದಲೆ ಪರಿಕಿಸುತ ನಿಶ್ಚೈಸಿ
ಕೃಷ್ಣನೇ ಶ್ರೇಷ್ಠನಿಹ ಎನ್ನುತಲಿ ನುಡಿದಿಹರು ॥೨೦೦॥

ಸಕಲರೀ ನೃಪರುಗಳು ವರಅಗ್ರ ಪೂಜೆಯನು
ಕೃಷ್ಣಂಗೆ ಸಲ್ಲಿಸಲು ಸಮ್ಮತಿಸಿ ಸುಮ್ಮನಿರೆ
ನೀ ಸಹಿತ ಅವರಪರಿ ಒಪ್ಪುವುದು ಎನ್ನುತಲಿ
ಧರ್ಮಜನು ಶಿಶುಪಾಲಗೊರೆದಿಹನು ಸಂತೈಸಿ ॥೨೦೧॥

**ವೇದೋಪನಿಷದುಗಳ ತತ್ವದ ಮಹಂತನಿಹ ।**
**ಯಾದವನ ಸ್ತುತಿಸಿಹನು ವರಭೀಷ್ಮ ಭಕುತಿಯಲಿ ॥**

ಶಿಶುಪಾಲ ದುರುಳನಿಗೆ ಧರ್ಮಜನ ಮೃದುಹಿತದ
ಸತ್ಯಗುಣಪೂರಿತದ ನಯ ನುಡಿಗಳೊರೆಯುತಿರೆ
ಬೋರ್ಗಲ್ಲ ಮೇಲಕ್ಕೆ ಮಳೆನೀರು ಸುರಿದಂತೆ
ವ್ಯರ್ಥವಿದು ಎನ್ನುತಲಿ ವರಭೀಷ್ಮ ನುಡಿದನು ॥೨೦೨॥

ಸಭೆಯೊಳಗೆ ನೆರೆದಿರುವ ಸಕಲರೀ ರಾಜರನು
ಶೌರ್ಯದಲಿ ಸೋಲಿಸುತ ರಾಜ್ಯಗಳ ಮರಳಿತ್ತ
ರಾಜರಿಗೆ ರಾಜನಿಹ ಕ್ಷತ್ರಿಯರ ಗುರುವೆನಿಪ
ಕೃಷ್ಣಂಗೆ ಪೂಜೆಯನು ಗೈದಿಹುದು ಯೋಗವಿದೆ. ॥೨೦೩॥

ಯುದ್ಧವನು ಗೈಯ್ಯುತಲಿ ನೃಪರುಗಳ ಜಯಿಸುತಲಿ
ಅವರುಗಳ ರಾಜ್ಯಗಳ ಅವರಿಂಗೆ ಆದರದಿ
ಪ್ರೇಮದಲಿ ಇತ್ತೊಡೆಯು ಗುರುವೆಂದು ಎನಿಸುವನು
ಎನ್ನುತಲಿ ಜಗದೊಳಗೆ ಶೃತಿಸಿದ್ಧವಿರುತಿಹುದು ॥೨೦೪॥

ಮಾಗಧನ ಪುತ್ರನನು ಹಂಸನಾ ತನಯನನು
ಪೌಂಡ್ರಕನ ಮಗನನ್ನು ನರಕನಾ ತನುಜನನು
ಸಮರದಲಿ ಮುರಹರನು ಸೋಲಿಸುತ ಅವರಿಂಗೆ
ಪಟ್ಟವನು ಕಟ್ಟಿರುವ ಪರಮಗುರು ಈತನಿಹ ॥೨೦೫॥

ವಿಪ್ರರಾ ಪರಿಯಲ್ಲಿ ವೇದಗಳ ಪರಿಣತನು
ಕ್ಷತ್ರಿಯರ ಪರಿಯಲ್ಲಿ ಭುಜಬಲದಿ ವಿಕ್ರಮನು
ಜ್ಞಾನದಲಿ ಶ್ರೇಷ್ಠನಿಹ ಹಿರಿಯನಲಿ ಹಿರಿಯನಿಹ
ಕೃಷ್ಣನೇ ಶ್ರೇಷ್ಠನಿಹ ಎನ್ನುತಲಿ ನುಡಿದಿಹನು ॥೨೦೬॥

ಶಕ್ತಿಯಲಿ ಶೌರ್ಯದಲಿ, ದಾನದಲಿ ತತ್ವದಲಿ
ಗೌರವದಿ ಕೀರ್ತಿಯಲಿ ಜ್ಞಾನದಲಿ ದಯೆಯಲ್ಲಿ
ಸಕಲಮೀ ಸದ್ಗುಣದಿ ಕೃಷ್ಣನೇ ಶ್ರೇಷ್ಠನಿಹ
ಎನ್ನುತಲಿ ವರಅಗ್ರಪೂಜೆಯನು ಗೈದಿಹೆವು ॥೨೦೭॥

ಋತ್ವಿಜನು ಗುರುವಿಹನು ಆಚಾರ್ಯ ಪುರುಷನಿಹ
ಸ್ನಾತಕನು ಭೂಪತಿಯು ಮೇಲಾಗಿ ಪಾಂಡವರ
ಅಭ್ಯುದಯ ಶ್ರೇಯವನು ಬಯಸುತಲಿ ರಕ್ಷಿಪನು
ಎನ್ನುತಲಿ ಕೃಷ್ಣನನು ಪೂಜೆಯನು ಗೈದಿಹೆವು ॥೨೦೮

ಲೋಕದಾ ದೃಷ್ಟಿಯಲಿ ಕೃಷ್ಣನಾ ಮಹತಿಯನು
ಹೇಳಿದೆವು ತತ್ವದಾ ದೃಷ್ಟಿಯಲಿ ಪೇಳುವೆನು
ತೋರುವಿ ಜಗಕೆಲ್ಲ ಸಕಲ ಸಚರಾಚರಕೆ
ಕೃಷ್ಣನೇ ಕಾರಣನು ಕರ್ತೃವಿಹನೀತನು ॥೨೦೯॥

ಆದಿಯಲಿ ವಿಶ್ವಮಿದು ಜಲಮಯವು ಇರುತಿರಲು
ಎಲ್ಲೆಡೆಗು ಗಾಢಾಂಧಕಾರವದು ಕವಿದಿರಲು
ಚೈತನ್ಯರೂಪಮಿಹ ಪರಬ್ರಹ್ಮ ಶ್ರೇಷ್ಠನು
ಸಂಕಲ್ಪ ಮಾತ್ರದಲಿ ಲೀಲಾ ವಿನೋದದಲಿ ॥೨೧೦।

ರಜೋಗುಣ ಪೂರಿತನ ಬ್ರಹ್ಮನನ ಮತ್ತೆಯು
ಸತ್ವಗುಣ ಪೂರಿತನ ಪಾವನನ ವಿಷ್ಣುವನು
ತಮೋಗುಣ ಸಂಪನ್ನ ರುದ್ರನನು ಸೃಜಿಸುತಲಿ
ವಿಧವಿಧದ ಕಾರ್ಯಗಳನವರಿಂಗೆ ನಿಯಮಿಸಿದ ॥೨೧೧॥

ಆದಿಯಲಿ ಲೋಕಗಳ ವರಬ್ರಹ್ಮ ಸೃಜಿಸುವುದು
ಹದಿನಾಲ್ಕು ಲೋಕಗಳ ನರಯಣನು ಪೊರೆಯುವದು
ರುದ್ರನೀ ವಿಶ್ವವನು ನಾಶವನುಗೈಯ್ಯುವುದು
ಎನ್ನುತಲಿ ಮೂವರಿಗೆ ಕಾರ್ಯಗಳನೊಪ್ಪಿಸಿದ ॥೨೧೨॥

ವಾಯುವಲಿ ತೇಜದಲಿ ಆಗಸದಿ ಪೃಥ್ವಿಯಲಿ
ಜಲದಲ್ಲಿ ಸಕಲಮೀ ಪಂಚಭೂತಂಗಳಲಿ
ಪಶುಪಕ್ಷಿ ಪ್ರಾಣಿಯಲಿ ಬ್ರಹ್ಮಾಂಡವೆಲ್ಲವನು
ವ್ಯಾಪಿಸಿಹ ಪರಬ್ರಹ್ಮ ಕೃಷ್ಣನೇ ಇಹನೆಂದ ॥೨೧೩॥

ಎನ್ನೊಳಗೆ ತಾನಿರ್ದು ಈ ಪರಿಯೆ ನುಡಿಸುವನು
ನಿನ್ನೊಳಗೆ ತಾನಿರ್ದು ಆ ಪರಿಯೆ ನುಡಿಸುವನು
ಜಗದರಂಗಸ್ಥಳದಿ ಸುರಅಸುರ ಶಕ್ತಿಯಲಿ
ಆಡಿಸುವ ವರಸೂತ್ರಧಾರನೀ ಈತನಿಹ ॥೨೧೪॥

ತಾಯ್ತಂದೆ ಪುತ್ರರುಗಳೆಂಬುವಾ ಮೋಹದಾ
ಮಾಯೆಯಾ ಜಾಲವನು ಬೀಸುತಲಿ ನರರನ್ನು
ತನ್ನಯಾ ಲೀಲೆಯಲಿ ವಿಧವಿಧದಿ ಆಡಿಸುತ
ಲೋಕಗಳ ತನ್ನಲ್ಲಿ ಲಯಗೊಳಿಪನೀತನು ॥೨೧೫

ಮರಳಿನಲಿ ಮನೆಗಳನು ಕಟ್ಟುತಲಿ ಬಾಲಕರು
ಆಟಗಳ ಆಡುತಲಿ ಕೆಡಹುವಾ ಪರಿಯಲ್ಲಿ
ತನ್ನಯ ವಿನೋದದಲಿ ಲೋಕವನು ಸೃಷ್ಟಿಸುತ
ಅಂತ್ಯದಲಿ ಲಯಗೈವ ಮಹರುದ್ರನೀತನಿಹ ॥೨೧೬॥

ಆದ್ಯಂತನೀತನಿಹ ಸನಾತನನು ಈತನಿಹ
ಬುದ್ಧಿಮನ ಇಂದ್ರಿಯವು ಸೂರ್ಯ ಚಂದ್ರಾದಿಗಳು
ಆಗಸವು ಭೂಮಿಯಿದು ಜಗದೊಳಹ ಜೀವಿಗಳು
ಪ್ರಾಣಿಗಳು ಸಕಲವು ಕೃಷ್ಣನೊಳು ಇರುತಿಹವು ॥೨೧೭॥

ವಿಶ್ವತೋಚಕ್ಷುವಿಹ ವಿಶ್ವತೋ ಬಾಹುವಿಹ
ವಿಶ್ವತೋ ಊರುವಿಹ ವಿಶ್ವತೋ ಪಾದವಿಹ
ವಿಶ್ವದೀ ಸ್ಥಾವರವ ಜಂಗಮವನೆಲ್ಲವನು
ವ್ಯಾಪಿಸುತ ದಶಾಂಗುಲವ ಮೀರುತಲಿ ನಿಂತಿಹನು ॥೨೧೮॥

ಸಕಲಮೀ ಪ್ರಾಣಿಗಳ ನಯನದಲಿ ಕರ್ಣದಲಿ
ಇಂದ್ರಿಯಗಳೊಳಗೆಲ್ಲ ವ್ಯಾಪಿಸುತ ನೆಲಸಿಹನು
ಈತನಾ ಇಚ್ಛೆಯಲಿ ರಸರೂಪ ಗ್ರಹಣಾದಿ
ಬುದ್ಧಿಗಳು ಮನಸುಗಳು ಕಾರ್ಯಗಳ ಗೈಯ್ಯುವವು ॥೨೧೯॥

ಸೂರ್ಯನನು ಚಂದ್ರನನು ತಾರೆಗಳ ಗ್ರಹಗಳನು
ಅಗ್ನಿಯನು ವರುಣನನು ಗಿರಿಗಳನು ನದಿಗಳನು
ಹದಿನಾಲ್ಕು ಲೋಕಗಳ ಶತಕೋಟಿ ಜೀವಿಗಳ
ಭೂತಂಗಳೆಲ್ಲವನು ಈತನೇ ಸೃಷ್ಟಿಸಿದ ॥೨೨೦॥

ಈತನಾ ಮುಖದಿಂದ ಭೂಸುರರು ಶ್ರೇಷ್ಠರು
ಬಾಹುವಲಿ ಕ್ಷತ್ರಿಯರು ವೀರಾಧಿ ವೀರರು
ಊರುವಲಿ ವೈಶ್ಯನು ಪಾದದಲಿ ಶೂದ್ರರು
ಸಕಲರೂ ಈತನಲಿ ಜನಿಸಿಹರು ಆದಿಯಲಿ ॥೨೨೧॥

ಹದಿನಾಲ್ಕು ಲೋಕಗಳ ಸೃಷ್ಟಿಸುತ ಲೀಲೆಯಲಿ
ವಿಶ್ವದಾ ಕಾರ್ಯಗಳ ವಿನೋದದಲಿ ಗೈಯ್ಯುತಲಿ
ಲೋಕದೀ ಸಂಸಾರವೆಲ್ಲವನು ಮಾಡುತಲಿ
ಮೋಹಿಸದೆ ನಿರ್ಮೋಹಿ ನಿರ್ಲಿಪ್ತನಿಹನೀತ ॥೨೨೨॥

ಅಣುಗಿಂತ ಅಣುತರನು ಮಹತ್ತಿಗೆ ಮಹತ್ತರನು
ಅಂಗುಷ್ಠ ಪರಿಮಿತಿಯ ಪುರುಷನೀ ಪರಮಾತ್ಮ
ಜಗದಖಿಲ ಪ್ರಾಣಿಗಳ ಹೃದಯದಲಿ ವಾಸಿಸುತ
ಬ್ರಹ್ಮಾಂಡವೆಲ್ಲವನು ವ್ಯಾಪಿಸಿಹನೀತನು ॥೨೨೩॥

ಸುಗುಣನಿಹ ಸಾಕಾರ ನಿರ್ಗುಣ ನಿರಾಕಾರ
ವ್ಯಕ್ತನಿಹ ಅವ್ಯಕ್ತ ಗೋಚರ ಅಗೋಚರನು
ಶೃತಿಸ್ಮೃತಿ ಪುರಾಣಕ್ಕೆ ತರ್ಕಕ್ಕೆ ನಿಲುಕದಿಹ
ಏಕಮೇವಾದ್ವಿತಿಯ ಪುರುಷನಿಹನೀತ ॥೨೨೪॥

ಈತನೇ ಪೃಥ್ವಿಯಿಹ ಆಗಸನು ತೇಜನಿಹ
ಜಲವಾಯ ರವಿಶಶಿಯು ವರುಣಾಗ್ನಿದಶದಿಶೆಯು
ಗಿರಿಪರ್ವತಾದಿಗಳು ಸಾಗರವು ಸಸ್ಯಗಳು
ಗೋಚರಿಪ ಬ್ರಹ್ಮಾಂಡವೆಲ್ಲವೂ ಈತನಿಹ ॥೨೨೫॥

ಜಾಗ್ರತವು ಸ್ವಪ್ನವದು ಸುಷುಪ್ತಿ ತೂರ್ಯಗಳು
ದಿನ ರಾತ್ರಿ ಪಕ್ಷಗಳು ಮಾಸಗಳು ಋತುವೆಲ್ಲ
ಆಯನಗಳು ವರ್ಷಗಳು ಇವುಗಳನು ಮೀರುತಲಿ
ನಿಂತಿರುವ ನಿತ್ಯನು ಸನಾತನನು ಈತನಿಹ ॥೨೨೬॥

ತಾನೆಯೇ ತನ್ನೊಳಗೆ ತನ್ನಯಾ ಲೀಲೆಯಲಿ
ಲೋಕವನು ಸೃಷ್ಟಿಸುತ ಭೂತಗಳ ಪ್ರಾಣಿಗಳ
ಸೃಜಿಸುತಲಿ ವಿಧವಿಧದ ಆಟಗಳನಾಡಿಸುತ
ತನ್ನೊಳಗೆ ಲಯಗೊಳಿಪ ಪರಬ್ರಹ್ಮನೀತನಿಹ ॥೨೨೭॥

ಸುರಅಸುರ ಶಕ್ತಿಗಳ ಈತನೇ ಸೃಜಿಸಿಹನು
ಎನ್ನೊಳಗೆ ಸಾತ್ವಿಕದಿ ಈತನೇ ನುಡಿಯುವನು
ಶಿಶುಪಾಲ ದುರುಳನಲಿ ತಾಮಸದಿ ನುಡಿಯುವನು
ವೇದಾಂತ ವೇದ್ಯನನು ಖಳನೆತ್ತ ಅರಿತಿಹನು ॥೨೨೮॥

ಸಾವಿರದ ವರುಷಗಳ ತಪಸಿಂಗೆ ತೋರದಿಹ
ಆಗಮಕೆ ನಿಗಮಕ್ಕೆ ತರ್ಕಕ್ಕೆ ಸಿಲುಕದಿಹ
ನರರೂಪಧರಿಸುತಲಿ ಧರೆಗಿಳಿದು ಬಂದಿರುವ
ಪುರುಷೋತ್ತಮೀತನಿಹ ನರಯಣನು ಎಂದಿಹನು ॥೨೨೯॥

ಸಾವಿರದ ನಾಲಿಗೆಯ ಆ ಆದಿಶೇಷನು
ಈತನನು ಹೊಗಳಲಿಕೆ ಅಸಮರ್ಥನಾಗಿಹನು
ವೇದಗಳು ಈತನಾ ಗುಣಗಳನು ಮಹಿಮೆಯನು
ಸ್ತುತಿಸುತಲಿ ಬಳಲುತಲಿ ಮೌನವನು ತಾಳಿಹವು ॥೨೩೦॥

ಪೂರ್ವದಲಿ ತಮನೆಂಬ ರಕ್ಕಸನು ವೇದಗಳ
ಕೊಳ್ಳುತಲಿ ಸಾಗರದ ತಳವನ್ನು ಹೊಕ್ಕಿರಲು
ಮತ್ಸ್ಯದಾ ರೂಪದಲಿ ಅಸುರನನು ವಧೆಗೈದು
ವೇದಗಳ ತಂದಿರುವ ಘನಪುರುಷನೀತನಿಹ ॥೨೩೧॥

ಕಡಲಿನಾ ಮಂಥನದಿ ಮೇದಿನಿಯ ಹೊತ್ತಿರುವ
ಆ ಆದಿಶೇಷನನು ಹಗ್ಗವನು ಮಾಡುತಲಿ
ಕಡೆಯುತಿಹ ಕಡೆಗೋಲ ಮಂದರದ ಪರ್ವತವ
ಕೂರ್ಮದಾ ರೂಪದಲಿ ಧರಿಸಿರುವ ಮಹಿಮನಿಹ ॥೨೩೨॥

ದೈತ್ಯನು ಹಿರಣ್ಯಾಕ್ಷ ಪೃಥ್ವಿಯನು ಕೊಳ್ಳುತಲಿ
ಪಾತಾಳ ಲೋಕವನು ಸೇರಿರಲು ಬೆಂಬತ್ತಿ
ಯಜ್ಞಮಯ ದೇಹದೀ ವೇದಾಂತ ವೇದ್ಯನಿಹ
ವಿಶ್ವವನು ರಕ್ಷಿಸುವ ಪುಣ್ಯ ಪುರುಷೋತ್ತಮನು ॥೨೩೩॥

ವರಾಹದಾ ರೂಪವನು ತಾಳುತಲಿ ಕಾದುತಲಿ
ಅಸುರನಾ ಅಸುವನ್ನು ಕೊಳ್ಳುತಲಿ ವಧಿಸುತಲಿ
ಲೋಕವನು ವರಆದಿ ಶೇಷನಾ ಶಿರದಲ್ಲಿ
ಸ್ಥಾಪಿಸಿದ ದೇವಾದಿದೇವನೇ ಕೃಷ್ಣನಿಹ ॥೨೩೪॥

ಅತನಾ ಸೋದರನು ಹಿರಣ್ಯಕಶ್ಯಪನು
ಹರಿಯನ್ನು ದ್ವೇಷಿಸುತ ಪ್ರಹ್ಲಾದ ಸುತನನ್ನು
ಹಿಂಸಿಸಲು ಗರ್ಜಿಸುತ ಕಂಭದಲಿ ಮೂಡುತಲಿ
ನರಸಿಂಹರೂಪದಲಿ ದೈತ್ಯನನು ಇರಿದಿಹನು ॥೨೩೫॥

ವಾಮನನ ರೂಪವನು ತಾಳುತಲಿ ಈ ಮಹಿಮ
ಯಜ್ಞವನು ಗೈಯುತಿಹ ಬಲಿಚಕ್ರವರ್ತಿಯನು
ತ್ರಯಪಾದ ಭೂಮಿಯನು ಕೊಡುಎಂದು ಬೇಡುತಲಿ
ಪಾತಾಳಕಿಕ್ಕಿರುವ ಘನಶೌರಿಯೀತನಿಹ ॥೭೩೬॥

ಜಗದೊಳಗೆ ಧರ್ಮವದು ಗ್ಲಾನಿಯದು ಆಗಿರಲು
ದತ್ತಾತ್ರೇಯ ರೂಪದಲಿ ಹೈಹಯನರಾಜ್ಯದಲಿ
ಲೋಕವಲಿ ಎಲ್ಲೆಡೆಗೆ ಧರ್ಮವನು ಸ್ಥಾಪಿಸಿದ
ಧರ್ಮದಾ ಮೂರುತಿಯು ಶ್ರೀಕೃಷ್ಣನಿಹನೆಂದ ॥೭೩೭॥

ಕ್ಷತ್ರಿಯರ ವಂಶವನು ಇಪ್ಪತ್ತೊಂದು ಸಲ
ನಾಶವನು ಮಾಡುತಲಿ ಅಪ್ರತಿಮ ವೀರನನು
ಆ ಕಾರ್ತವೀರ್ಯನನು ವಧೆಗೈದ ಮಹವೀರ
ಪರಶುಧರ ಭಾರ್ಗವನು ರಾಮನೇ ಈತನಿಹ ॥೭೩೮॥

ತ್ರೇತೆಯಲಿ ಸೀತೆಯನು ಕದ್ದೊಯ್ದ ದಶಶಿರನ
ಸಾಗರಕೆ ಸೇತುವೆಯ ಕಟ್ಟುತಲಿ ಶೌರ್ಯದಲಿ
ಅಸುರನನು ವಧಿಸುತಲಿ ಸೋದರ ವಿಭೀಷಣಗೆ
ಪಟ್ಟವನು ಕಟ್ಟಿರುವ ಶ್ರೀರಾಮನೀತನಿಹ ॥೭೩೯॥

ಕಡುಮೂರ್ಖರಾವಣನು ಮಂದಮತಿ ಶಿಶುಪಾಲ
ಈರ್ವರೊಳು ಆವುದೂ ಅಂತರವ ನಾಕಾಣೆ
ರಾಘವನು ರಾವಣನ ವಧೆಗೈದ ಪರಿಯಲ್ಲಿ
ಶಿಶುಪಾಲ ದುರುಳನನು ಶ್ರೀಕೃಷ್ಣನಿರಿಯುವನು ॥೭೪೦॥

ಸುರರನ್ನು ಗೆಲಿದಿರುವ ಆ ಕಾಲನೇಮಿಯನು
ಕೃತಯುಗದ ಸಮಯದಲಿ ಶೌರ್ಯದಲಿ ಜಯಿಸಿಹನು
ಈ ಯುಗದಿ ಶ್ರೀಕೃಷ್ಣನಾಗುತಲಿ ಜನಿಸುತಲಿ
ಕಂಸಾದಿ ದೈತ್ಯರನು ವಧಿಸಿಹನು ಈತನು ॥೭೪೧॥

ಬಾಲ್ಯದಲಿ ಕಿರು ಬೆರಳ ತುದಿಯಲ್ಲಿ ಗೋವರ್ಧನ
ಗಿರಿಯನ್ನು ಎತ್ತುತಲಿ ಗೋವುಗಳ ರಕ್ಷಿಸಿದ
ಯಮುನೆಯಾ ಮಡುವಿನಲಿ ಘೋರವಿಷಪೂರಿತದ
ಕಳಿಂಗ ಸರ್ಪವನು ಮರ್ದಿಸಿಹ ಮಹಿಮನಿಹ ॥೭೪೨॥

ಪೂತನಿಯ ರಕ್ಕಸಿಯ ಧೇನುಕಾನ ಶಕಟನನು
ಕೇಶಿಯನು ವತ್ಸನನು ಚಾಣೂರ ಮುಷ್ಟಿಯನು
ಶುಂಭನ ನಿಶುಂಭನನ ಕಂಸನನು ನರಕಾಸುರನ
ಹಂಸನನು ಡಿಂಭಕನ ಇರಿದಿಹನು ಈತನು ॥೭೪೩॥

ಪೌಂಡ್ರಕ ಸೃಗಾಲನನು ಹಯಗ್ರೀವ ಸಾಲ್ವನನು
ಅಗಣಿತದ ಅಸುರರನು ನೃಪರನ್ನು ಜಯಿಸಿರುವ
ಅಪ್ರತಿಮ ವಿಕ್ರಮನ ಶೌರ್ಯವನು ಮಹಿಮೆಯನ
ಮಂದಮತಿ ಶಿಶುಪಾಲ ಇವನೆತ್ತ ಅರಿತಿಹನು ॥೭೪೪॥

ಗಿರಿಗಳಲಿ ಹಿಮಗಿರಿಯು ನದಿಗಳಲಿ ಜಾಹ್ನವಿಯು
ಗ್ರಹಗಳಿಗೆ ನಕ್ಷತ್ರ ಮಂಡಲಕೆ ಚಂದ್ರಮನು
ನಭದೊಳಗೆ ರವಿಯಂತೆ ಶ್ರೇಷ್ಠನಿಹ ಪರಿಯಲ್ಲಿ
ಹದಿನಾಲ್ಕು ಲೋಕದಲಿ ಕೃಷ್ಣನೇ ಶ್ರೇಷ್ಠನಿಹ ॥೭೪೫॥

ಬಾಲಮತಿ ಮಂದಮತಿ ಹೀನಮತಿ ಶಿಶುಪಾಲ
ತ್ರೈಲೋಕ್ಯ ಪೂಜ್ಯನನ ಕೃಷ್ಣನನು ಅರಿಯದಲೆ
ಆನೆಯನು ಕಾಣುತಲಿ ಶ್ವಾನ ತಾ ಬೊಗಳ್ವಂತೆ
ಹೀನನೀ ಶಿಶುಪಾಲ ಕೃಷ್ಣನನು ನಿಂದಿಪನು ॥೭೪೬॥

ಆ ಬಾಲ ವೃದ್ಧರಲಿ ನೆರೆದಿರುವ ರಾಜರಲಿ
ಶ್ರೀಕೃಷ್ಣ ಪೂಜೆಯಲಿ ಅರ್ಹನಲ್ಲೆನ್ನುತಲಿ
ಹೇಳುವವರೊಬ್ಬನನು ನಾಕಾಣೆ ಸಭೆಯೊಳಗೆ
ಶಿಶುಪಾಲನೋರ್ವನೇ ಯಾದವನ ನಿಂದಿಪನು ॥೭೪೭॥

ಕೃಷ್ಣಂಗೆ ಸಲ್ಲಿಸಿದ ವರಅಗ್ರ ಪೂಜೆಯದು
ತನಗಿಷ್ಟ ಸಮ್ಮತವು ಇಲ್ಲದಿರೆ ಶಿಶುಪಾಲ
ತನ್ನಿಷ್ಟ ಬಂದಂತೆ ನಡೆಯುವುದು ಎನ್ನುತಲಿ
ಗಾಂಗೇಯ ನುಡಿಯುತಲಿ ಮೌನವನು ತಾಳಿದನು ॥೭೪೮॥

ಬಳಿಕದಾ ಸಹದೇವ ಪೇಳುತಲಿ ನೃಪರುಗಳೆ
ಶಕ್ತಿಯಲಿ ಶೌರ್ಯದಲಿ ಸಾಹಸದಿ ವಿಕ್ರಮದಿ
ಕರುಣೆಯಲಿ ಜ್ಞಾನದಲಿ ಮಹಿಮೆಯಲಿ ಶ್ರೇಷ್ಠನಿಹ
ಎನ್ನುತಲಿ ಕೃಷ್ಣಂಗೆ ಪೂಜೆಯನು ಮಾಡಿಹೆವು ॥೭೪೯॥

ಕೃಷ್ಣಂಗೆ ವರಅಗ್ರ ಪೂಜೆಯನು ಗೈದಿಹುದು
ಯೋಗ್ಯವದು ಅಲ್ಲೆಂದು ಆರೊಬ್ಬರುಸುರಿದರೆ
ಆತನಾ ಶಿರವನ್ನು ಪಾದದಲಿ ಮೆಟ್ಟುವೆನು
ಎನ್ನುತಲಿ ಪಾದವನು ಮೇಲಕ್ಕೆ ಎತ್ತಿದನು ॥೭೫೦॥

ಇಲ್ಲದಿರೆ ಕೃಷ್ಣಂಗೆ ಸಲ್ಲಿಸಿದ ಪೂಜೆಯದು
ಯೋಗ್ಯವಿದೆ ಎನ್ನುತಲಿ ಸಮ್ಮತಿಯನೀಯುವುದು
ಎನ್ನುತಲಿ ಸಹದೇವ ಸಾರುತಿರೆ ಸಕಲರೂ
'ಸಾಧುವಿದೆ' ಎನ್ನುತಲಿ ಸಮ್ಮತಿಯನಿತ್ತಿಹರು ॥೭೫೧॥

ಮುನಿವರ್ಯ ನಾರದರು ಸಭೆಯೊಳಗೆ ಏಳುತಲಿ
ಪರಮಪುರಷೋತ್ತಮನ ದೇವರಿಗೆ ಸಮವಿರುವ
ಕೃಷ್ಣನನು ಪೂಜಿಸದ ನರರುಗಳು ಪಾಪಿಗಳು
ಜೀವಂತ ಶವವೆಂದು ತಿಳಿಯುವದು ಎಂದಿಹರು ॥೭೫೨॥

**ಶಿಶುಪಾಲ ಕೋಪದಲಿ ಸೈನ್ಯದಾ ಸಹಿತದಲಿ ।**
**ಯುದ್ಧವನು ಗೈಯ್ಯಲಿಕೆ ಸನ್ನದ್ಧನಾಗಿಹನು ॥**

ಬಳಿಕಲಾ ಸಹದೇವ ಪೂಜ್ಯನನು ಹಿರಿಯನನು
ಸತ್ಕರಿಸಿ ಅರ್ಘ್ಯಾದಿ ಕಾರ್ಯಗಳ ಮುಗಿಸುತಿರೆ
ಸಹದೇವ ನುಡಿದಿರುವ ನುಡಿಗಳನು ಶಿಶುಪಾಲ
ಮನದೊಳಗೆ ಕ್ಷಣಕ್ಷಣದಿ ನೆನೆಯುತಲಿ ಕುದಿಯುತಲಿ ॥೭೫೩॥

ನೆರೆದಿರ್ದ ರಾಜರಿಗೆ ನೃಪವರರೆ ಧರ್ಮಜನು
ಮುದಿಹುಚ್ಚ ಭೀಷ್ಮರಾ ಮಾತುಗಳ ಕೇಳುತಲಿ
ಕಳ್ಳನೀ ಗೊಲ್ಲನನು ಕೃಷ್ಣನನು ಪೂಜಿಸುತ
ನಮ್ಮನ್ನು ಸಭೆಯೊಳಗೆ ಅಪಮಾನಗೊಳಿಸಿಹನು ॥೭೫೪॥

ನೃಪಕುಲಕೆ ನಮಗೆಲ್ಲ ನಾಚಿಕೆಯು ವಿಷಯವಿದು
ನೃಪಕುಲಕೆ ಗೈದಿರುವ ಅಪರಾಧ ಮೋಸವಿದು
ನಮ್ಮನ್ನು ಕರೆಸುತಲಿ ಅಪಮಾನ ಗೈದಿರುವ
ಧರ್ಮಜನ ಯಜ್ಞವನು ಈಗಲೇ ಕೆಡಿಸುವುದು ॥೭೫೫॥

ಹೇಡಿಗಳು ನಾವಲ್ಲ ನಾಯಕನು ನಾನಿಹೆನು
ಅಂಜದಿರಿ ಕೃಷ್ಣಂಗೆ ಸಲ್ಲಿಸಿದ ಪೂಜೆಯದು
ತಪ್ಪೆಂದು ಸಾರುತಲಿ ಯುದ್ಧವನು ಗೈಯ್ಯುವುದು
ಎನ್ನುತಲಿ ಶಿಶುಪಾಲ ಗರ್ಜಿಸುತ ನುಡಿದಿಹನು ॥೭೫೬॥

ವರಅಗ್ರ ಪೂಜೆಯಾ ಮರ್ಯಾದೆ ದೊರೆಯದಿಹ
ನೃಪರುಗಳು ಕೇಳುತಲಿ ಕೋಪದಲಿ ಉರಿಯುತಲಿ
ಸೈನ್ಯಗಳ ಸಹಿತದಲಿ ಪಾಂಡವರ ಜೊತೆಯಲ್ಲಿ
ಯುದ್ಧವನು ಗೈಯ್ಯಲಿಕೆ ಸನ್ನದ್ಧರಾಗಿಹರು ॥೭೫೭॥

ನೃಪರುಗಳ ಸಭೆಯಲ್ಲಿ ಆರ್ಭಟೆಯು ಗರ್ಜನೆಯು
ಕಳಕಳದ ನಿಸ್ವನದ ಕೊಲಾಹಲೆಸೆಯುತಿರೆ
ಧರ್ಮಜನು ಕೇಳುತಲಿ ಚಿಂತಿಸುತ ಕಳವಳದಿ
ಸನಿಹದಲಿ ಇರುತಿರುವ ಭೀಷ್ಮಂಗೆ ನುಡಿದಿಹನು ॥೭೫೮॥

ಮುತ್ತಯ್ಯ ಗಾಂಗೇಯ ಈ ಸಕಲ ನೃಪರುಗಳು
ಎಮ್ಮೊಡನೆ ಕಾಳಗಕೆ ಬರುವಂತೆ ತೋರುತಿದೆ
ಯಜ್ಞವಿದು ಸಂಪೂರ್ಣ ಮುಕ್ತಾಯಗೊಳ್ವಂತೆ
ಮಾರ್ಗವನು ಸೂಚಿಪುದು ಎನ್ನುತಲಿ ನುಡಿದಿಹನು ॥೭೫೯॥

ಧರ್ಮಜನೆ ಭಯಬೇಡ ಧೈರ್ಯವನು ಹಿಡಿಯುವುದು
ನಾಯಿಗಳು ಸಿಂಹವನು ಕೊಲ್ಲಲಿಕೆ ಸಾಧ್ಯವೇ
ಸಿಂಹವನು ನಿದ್ರಿಸುವ ಸಮಯದಲಿ ಶ್ವಾನಗಳು
ಬೊಗಳುವಾ ತೆರದಲ್ಲಿ ಇವರುಗಳು ಬೊಗಳುವರು ॥೭೬೦॥

ಕೇಸರಿಯ ಪರಿಯಲ್ಲಿ ಸುಮ್ಮನಿಹ ಕೃಷ್ಣನನು
ದುರುಳನೀ ಶಿಶುಪಾಲ ರೋಷದಲಿ ಕೆಣಕಿಹನು
ಶ್ರೀಕೃಷ್ಣನೇಳುತಲಿ ಶಿಶುಪಾಲ ಸಹಿತದಲಿ
ನೃಪವರ್ಗವೆಲ್ಲವನು ಯಮಲೋಕಕಟ್ಟುವನು ॥೭೬೧॥

ಜಗದೊಳಗೆ ಸಕಲಮೀ ಭೂತಗಳ ಪ್ರಾಣಗಳು
ವ್ಯಾಪಾರವೆಲ್ಲಕೂ ಕಾರಣನು ಎನಿಸಿರುವ
ಪರದೈವ ಕೃಷ್ಣನಾ ಕರುಣೆಯಾ ಕವಚವದು
ನಿನಗಿರಲು ಆವುದೂ ಭಯಬೇಡ ಎಂದಿಹನು ॥೭೬೨॥

ಘನಮಹಿಮ ಶ್ರೀಕೃಷ್ಣ ದೇವನನು ನಂಬುತಲಿ
ನಾವುಗಳು ಗೈದಿರುವ ಕಾರ್ಯವದು ಯೋಗ್ಯವಿದೆ
ತನ್ನನ್ನು ನಂಬಿರುವ ಭಕುತರನು ಕೈಬಿಡದ
ಶ್ರೀಕೃಷ್ಣ ನಿಮ್ಮನ್ನು ಸಲುಹುವನು ಎಂದಿಹನು ॥೭೬೩॥

**ಶಿಶುಪಾಲ ಕ್ರೋಧದಲಿ ನದಿಸುತನ ಭೀಷ್ಮನನು**
**ಯಾದವನ ಮಾಧವನ ನಿಂದನೆಯ ಗೈದಿಹನು ॥**

ಭೀಷ್ಮರಾ ನುಡಿಗೇಳ್ದು ಕಳವಳವ ತ್ಯಜಿಸುತಲಿ
ಧರ್ಮಜನು ಸ್ಥೈರ್ಯದಲಿ ನೆಮ್ಮದಿಯೊಳಿರುತಿರಲು
ಚೈದ್ಯನಾ ಕ್ರೋಧವದು ನೆತ್ತಿಯೊಳು ಏರುತಲಿ
ಕಟುತರದಿ ಭೀಷ್ಮನನು ನಿಂದೆಯನು ಗೈದಿಹನು ॥೭೬೪॥

ಅರೆಮರೆವು ಕೂಡಿರುವ ಮುದಿಹುಚ್ಚ ಭೀಷ್ಮನೇ
ಭಯಗೊಳಿಪ ಸುಳ್ಳಿನಾ ಕಂತೆಯನು ಹೇಳುತಲಿ
ರಾಜಾಧಿರಾಜರನು ವೀರಾಧಿ ವೀರರನು
ಅಪಮಾನಗೊಳಿಸಲಿಕೆ ನಾಚಿಕೆಯು ಬಾರದೆ ॥೭೬೫॥

ಕುರುಕುಲ ಪಿತಾಮಹನು ಮಾರ್ಗದಾ ದರ್ಶಕನು
ಎನ್ನುತಲಿ ನಿನ್ನನ್ನು ನಂಬಿದುದು ನಿಷ್ಫಲವು
ಕುರುಡೊಬ್ಬ ಕುರುಡನಿಗೆ ದಾರಿಯನು ತೋರ್ದಂತೆ
ಹಾಳಾದ ಬಾವಿಯಲಿ ಪಾಂಡವರ ನೂಕಿರುವೆ ॥೭೬೬॥

ಶೂರತನ ಸಾಹಸವ ನೀನೆಂತು ಅರಿತಿರುವೆ
ನಪುಂಸಕನು ನೀನಿರುವೆ ನಿನ ಬ್ರಹ್ಮಚರ್ಯವದು
ಜನರನ್ನು ಮೋಸವನು ಗೊಳಿಸಲಿಕೆ ಇರುತಿಹುದು
ನಪುಂಸಕಗೆ ಸರಿಯಾಗಿ ನೀನಿಂತು ನುಡಿದಿರುವೆ ॥೭೬೭॥

ಚೋರತನ ಜಾರತನ ಗೈದಿರುವ ಹೀನನಿಗೆ
ಕಳ್ಳನಿಗೆ ಗೊಲ್ಲನಿಗೆ ವರಅಗ್ರ ಪೂಜೆಯನು
ಸಲ್ಲಿಸಲು ಸಲಹೆಯನು ಇತ್ತಿರುವ ಕಡುಪಾಪಿ
ಧರ್ಮವನು ಅರಿಯದಾ ಅಧರ್ಮಿ ನೀನಿರುವೆ ॥೭೬೮॥

ಉಪನಿಷದ ವಾಕ್ಯದಲಿ ಗೊಲ್ಲನನು ಸ್ತುತಿಸುತಲಿ
ಗುಣಗಾನ ಗೈಯ್ಯುತಲಿ ಎಮ್ಮಯಾ ಹೃದಯವನು
ತಲ್ಲಣವ ಗೊಳಿಸಿರುವ ನಿನ್ನಯಾ ನಾಲಗೆಯು
ಸಾವಿರದ ಹೋಳಾಗಿ ಕತ್ತರಿಸಿ ಬೀಳದೇ ॥೭೬೯॥

ಆ ಕಾಲಯವನನು ಕಪಟದಲಿ ಕೊಲಿಸಿದನು
ರಣದೊಳಗೆ ಪೌಂಡ್ರಕಗೆ ಅಂಜುತಲಿ ಓಡುತಲಿ
ಸಾಗರದ ಮಧ್ಯದಲಿ ದ್ವಾರಕೆಯ ಕಟ್ಟುತಲಿ
ವಾಸಿಸುವ ಈ ಗೊಲ್ಲ ರಣಹೇಡಿ ಇರುತಿಹನು ॥೭೭೦॥

ಶಕಟನನು ಧೇನುಕನ ವೃಷಭನನ ಬಕಾಸುರನ
ಕೇಶಿನಿಯು ಪೂತನಿಯು ಕಾಳಿಂಗ ವತ್ಸನನು
ಚಾಣೂರ ಮುಷ್ಟಿಯನು ಕಂಸನನು ಮೊದಲಾದ
ವೀರರನು ಕೊಂದಿಹನು ಎನ್ನುತಲಿ ವರ್ಣಿಸಿದೆ ॥೭೭೧॥

ಬಂಡಿಯನು ಹೋರಿಯನು ಪಕ್ಷಿಯನು ಎತ್ತನ್ನು
ಗಾಳಿಯನು ಹೆಂಗುಸನು ಹಾವನ್ನು ಕೊಂದಿಹುದು
ಇದು ಆವ ಘನಕಾರ್ಯ ಸಾಹಸದ ಕಾರ್ಯವಿದೆ
ಎನ್ನುತಲಿ ಗೊಲ್ಲನಾ ವರ್ಣನೆಯ ಗೈದಿರುವೆ ॥೭೭೨॥

ಕಿರಿಬೆರಳ ತುದಿಯಲ್ಲಿ ಗೋವರ್ಧನಾದ್ರಿಯನು
ಹಿಡಿಯುತಲಿ ಏಳುದಿನ ಗೋವುಗಳ ರಕ್ಷಿಸಿದ
ಎನ್ನುತಲಿ ಸ್ತುತಿಸಿರುವ ಗೆದ್ದಲಿನ ಹುಳುತಿಂದ
ಗಿರಿಯನ್ನು ಎತ್ತಿಹುದು ಅದ್ಭುತವು ಎನಿಸದದು ॥೭೭೩॥

ನೀನೊಬ್ಬ ಮಾತ್ರವೇ ಧರ್ಮವನು ಅರಿತಿಹೆಯಾ
ವೃಷಭನನು ಕೊಲ್ಲುತಲಿ ಗೋಹತ್ಯೆ ಪಾಪವನು
ಪೂತನಿಯ ವಧಿಸುತಲಿ ಸ್ತ್ರೀಹತ್ಯೆ ಪಾಪವನು
ಗೈದಿರುವ ಈ ಕೃಷ್ಣ ಪೂಜಾರ್ಹನಾಗಿಹನೆ ॥೭೭೪॥

ಮಾವನಿಹ ಕಂಸನಾ ಮನೆಯಲ್ಲಿ ವಾಸಿಸುತ
ಸವಿರಸದ ಪಕ್ವಾನ್ನದೂಟವನು ಸವಿಯುತಲಿ
ಅನ್ನವನು ಇಕ್ಕಿರುವ ಕಂಸನನು ಕೊಂದಿರುವ
ಕೃತಘ್ನಯಾದವನು ಪೂಜಾರ್ಹನಾಗಿಹನೆ ॥೭೭೫॥

ಹದಿನಾಲ್ಕು ಲೋಕಕ್ಕೆ ಕೃಷ್ಣನೇ ಒಡೆಯನಿಹ
ದೇವಾಧಿದೇವನಿಹ ಎನ್ನುತಲಿ ವರ್ಣಿಸಿದೆ
ಸಾವಿರದ ಬಾರಿಯೂ ಸ್ತುತಿಯನ್ನು ಗೈದರೂ
ದನಕಾಯ್ವ ಗೊಲ್ಲನೀ ದೇವ ತಾ ಎನಿಸದಿಹ ॥೭೭೬॥

ಸಿಂಹದಾ ಪೀಠದಲಿ ನಾಯಿಯನು ಕೂಡ್ರಿಸಲು
ಎಲುಬುಗಳ ತಿನ್ನುವಾ ತನ್ನಯ ಸ್ವಭಾವವನು
ಎಂದಿಗೂ ತೊರೆಯದಿಹ ಪರಿಯಲ್ಲಿ ಗೋಪಾಲ
ದನಕಾಯ್ವ ಗುಣಗಳನು ಎಂದಿಗೂ ತೊರೆಯದಿಹ ॥೭೭೭॥

ನೀ ಜ್ಞಾನಿ ಧರ್ಮಿಷ್ಠ ಎನ್ನುತಲಿ ಬೊಗಳುತಿಹೆ
ನಿನ್ನಯಾ ಸೋದರನ ಪತ್ನಿಯರು ಈರ್ವರೂ
ನಿನ್ನಯಾ ಸಮ್ಮುಖದಿ ಅನ್ಯರಾ ಸಂಗದಲಿ
ಮಕ್ಕಳನು ಪಡೆದಿಹರು ಧರ್ಮಿಷ್ಠ ನೀನಿಹೆಯಾ ॥೭೭೮॥

ಪುತ್ರೋರ್ವನಿಲ್ಲದಿರೆ ಮೋಕ್ಷವದು ದೊರೆಯದದು
ಎಂಬಂತೆ ಮಕ್ಕಳುಗಳಿಲ್ಲದಿಹ ನಪುಂಸಕಗೆ
ಮೋಕ್ಷವದು ಲಭಿಸದದು ಪುಣ್ಯತರ ಕಾರ್ಯಗಳ
ನೀನೆನಿತು ಗೈದರೂ ಸಕಲವೂ ನಿಷ್ಫಲವು ॥೭೭೯॥

ಮುದಿಹಂಸ ಮೋಸದಲಿ ಪಕ್ಷಿಗಳ ಸಂಕುಲಕೆ
ಸತ್ಯವನು ಧರ್ಮವನು ಉಪದೇಶ ಗೈಯ್ಯುತಲಿ
ಪಕ್ಷಿಗಳು ಆಹಾರಕೋಸುಗವೆ ತೆರಳುತಿರೆ
ವಿಹಗಗಳ ಮರಿಗಳನು ಕೊಲ್ಲುತಲಿ ತಿನ್ನುತಿರೆ ॥೭೮೦॥

ಖಗನಿಕರ ಅರಿಯುತಲಿ ಹಂಸನನು ಕೊಂದಂತೆ
ನಿನ್ನಯಾ ಢಾಂಭಿಕದ ಧರ್ಮವನು ಪ್ರೇಮವನು
ಅರಿಯುತಲಿ ನಿನ್ನಯಾ ಬಾಂಧವರು ನಿನ್ನನ್ನು
ಹಂಸನನು ಕೊಂದಂತೆ ವಧಿಸುವರು ನಂಬುವುದು ॥೭೮೧॥

ಹೇಭೀಷ್ಮ ಮಾಧವನು ಮಾಗಧನ ವಧಿಸಲಿಕೆ
ಭೀಮಾರ್ಜುನೀರ್ವರಾ ಸಹಿತದಲಿ ಮೂವರೂ
ಗಿರಿವ್ರಜಕೆ ಮಹಾದ್ವಾರ ಮೂಲಕದಿ ತೆರಳದಲೆ
ರಾತ್ರಿಯಲಿ ಕುಮಾರ್ಗದಲಿ ಪಟ್ಟಣ ಪ್ರವೇಶಿಸುತ ॥೭೮೨॥

ದ್ವಿಜವೇಷ ಧರಿಸುತಲಿ ಅರಮನೆಗೆ ತೆರಳುತಲಿ
ಮೋಸದಲಿ ಮಾಗಧನ ಕೊಂದಿಹುದು ಧರ್ಮವೇ
ಕೃಷ್ಣನಾ ಕೈಬೆರಳ ಸನ್ನೆಯಲಿ ಪವನಜನು
ಅರಿಯುತಲಿ ಮಾಗಧನ ಕೊಂದಿಹುದು ಶೌರ್ಯವೇ ॥೭೮೩॥

ದ್ವಿಜವೇಷ ಧರಿಸುತಲಿ ಅರಮನೆಗೆ ತೆರಳುತಲಿ
ಸತ್ಕಾರ ಗೈಯ್ಯುತಿರೆ ಏತಕ್ಕೆ ತ್ಯಜಿಸಿಹನು
ಸರ್ವವೂ ತಾನೆಯೇ ಇರ್ದೊಡೆಯು ಕೇಶವನು
ದ್ವಿಜನೆಂದು ತಾನೇಕೆ ಹೇಳದೆ ಇರ್ದಿಹನು ॥೭೮೪॥

ಹೆಣ್ಣಿಗನು ನೀನಿರುವೆ ಮೇಲಾಗಿ ಮುದಕನಿಹೆ
ಮಾರ್ಗದರೀ ಪಾಂಡವರ ದುರ್ಮಾರ್ಗಕೊಯ್ಯುತಿಹೆ
ನಿನ್ನಯಾ ನುಡಿಗಳನು ಪಾಲಿಸುವ ಪಾಂಡವರ
ಘನತೆಯದು ಎಷ್ಟಿಹುದು ಎಂಬುದನು ಯೋಚಿಪುದು ॥೭೮೫॥

ಈ ಪರಿಯೆ ಶಿಶುಪಾಲ ನುಡಿಯುತಿರೆ ಕಲಿಭೀಮ
ರಕ್ತವದು ಕುದಿಯುತಲಿ ಆ ರಕ್ತ ನಯನದಲಿ
ಕೆಂಡವನು ಕಾರುತಲಿ ಅಬ್ಬರದಿ ಗರ್ಜಿಸುತ
ಗದೆಯನ್ನು ತಿರುಹುತಲಿ ಚೈದ್ಯನನು ವಧಿಸಲಿಕೆ ॥೭೮೬॥

**ಶಿಶುಪಾಲ ದುರುಳನಾ ಪೂರ್ವದಾ ವಿಷಯವನು ।**
**ವರಭೀಷ್ಮ ವಿಶದದಲಿ ಭೀಮನಿಗೆ ಅರುಹಿದನು ॥**

ಭರದಿಂದ ಮರುತಜನು ಮುನ್ನುಗ್ಗಿ ಧಾವಿಸಲು
ವರಭೀಷ್ಮ ನೋಡುತಲಿ ಮುನ್ನಿನಲಿ ಪರಶಿವನು
ಮಹಸೇನ ವೀರನನು ತಡೆದಂತೆ-ಭೀಮನನು
ಬಿಗಿದಪ್ಪಿ ಹಿಡಿಯುತಲಿ ಸಾಂತ್ವನವಗೊಳಿಸಿದನು ॥೭೮೭॥

ಹೇ ಭೀಷ್ಮ ಎನ್ನನ್ನು ವಧಿಸಲಿಕೆ ಧಾವಿಸುತ
ಬರುತಲಿಹ ಭೀಮನನು ತಡೆಯದಲೆ ಬಿಟ್ಟುಬಿಡು
ದೀಪವನು ಮುತ್ತುತಲಿ ನೊರಜುಗಳು ಸಾಯ್ವಂತೆ
ಎನ್ನನ್ನು ಮುತ್ತುತಲಿ ಪವನಜನು ಸಾಯುವನು ॥೭೮೮॥

ಚೈದ್ಯನಾ ನುಡಿಗೇಳ್ದ ಭೀಮನಾ ಕ್ರೋಧವದು
ನೂರ್ಮಡಿಯು ಹೆಚ್ಚಾಗಿ ಹಲ್ಲುಗಳ ಕಡಿಯುತಲಿ
ಚೈದ್ಯನನು ಕೊಲ್ಲಲಿಕೆ ದುರುದುರುನೆ ನೋಡುತಿರೆ
ಗಾಂಗೇಯ ಭೀಮನನು ಸಂತೈಸಿ ನುಡಿದಿಹನು ॥೭೮೯॥

ಹೇ ಭೀಮ ಪೂರ್ವದಲಿ ಹಿರಣ್ಯಾಕ್ಷನೆನಿಸಿಹ
ನಂತರದ ಜನ್ಮದಲಿ ದಶಶಿರನು ಎನಿಸಿಹನು
ಇಂದಿನಲಿ ಶಿಶುಪಾಲ ಎನಿಸುತಲಿ ಜನಿಸಿಹನು
ಈತನನು ವಧಿಸಲಿಕೆ ಅಸಮರ್ಥನೀನಿರುವೆ ॥೭೯೦॥

ಹಿರಣ್ಯನಯನನನು ಮತ್ತೆ ಆ ರಾವಣನ
ವಧಿಸಿರುವ ದೇವನೇ ಈತನನು ವಧಿಸುವನು
ಮಾನವರು ಕೊಲ್ಲಲಿಕೆ ಅಸಮರ್ಥರಿರುತಿಹರು
ಈತನಾ ವೃತ್ತಾಂತ ಅರುಹುವೆನು ಕೇಳಂದ ॥೭೯೧॥

ಚೇದಿಯಾ ನೃಪವರನ ಸಾಧ್ವಿಸತಿ ಶೃತಸ್ರುವಳ
ಉದರದಲಿ ಶಿಶುಪಾಲ ನೇತ್ರಗಳು ಮೂರುಳ್ಳ
ಬಾಹುಗಳು ನಾಲ್ಕುಳ್ಳ ಶಿಶುವಾಗಿ ಜನಿಸುತಲಿ
ದಶದಿಕ್ಕು ನಡುಗುವಾ ಪರಿಯಲ್ಲಿ ಗರ್ಜಿಸಿದ ॥೭೯೨॥

ಪಶುಪಕ್ಷಿ ಪ್ರಾಣಿಗಳು ರೋದನವ ಗೈದಿಹವು
ಹಕ್ಕಿಗಳು ಮರದಿಂದ ಪಟಪಟನೆ ಬಿದ್ದಿಹವು
ಕಲ್ಮಣ್ಣು ಮಾಂಸದಾ ಮುದ್ದೆಗಳು ಬಿದ್ದಿಹವು
ಭೂಮಿಯದು ಕಂಪಿಸುತ ಅಪಶಕುನವಾಗಿಹವು ॥೭೯೩॥

ತಾಯ್ತಂದೆ ಬಂಧುಗಳು ಭಾಂಧವರು ಸಕಲರೂ
ವಿಚಿತ್ರವಿಹ ಶಿಶುವನ್ನು ಕಾಣುತಲಿ ಚಿಂತೆಯಲಿ
ಘೋರತರ ಉತ್ಪಾತ ಅಪಶಕುನವಾಗುತಿರೆ
ಶಿಶುವನ್ನು ತ್ಯಜಿಸಲಿಕೆ ನಿಶ್ಚಯವ ಮಾಡಿದರು ॥೭೯೪॥

ಆ ಸಮಯ ಸುರಮುನಿಯು ನಾರದರು ಬರುತಿರಲು
ಅರ್ಘ್ಯಪಾದ್ಯಾದಿಗಳ ಸತ್ಕಾರ ಗೈಯ್ಯುತಲಿ
ಶಿಶುವಿನಾ ಮುಂದಣದ ಭವಿಷ್ಯವನು ಕೇಳುತಿರೆ
ನಾರದರು ನೃಪವರೆಗೆ ಅರುಹಿವರು ಗುಪಿತದಲಿ ॥೭೯೫॥

ನಿನ್ನಸುತ ಶಿಶುಪಾಲ ಅಪ್ರತಿಮ ವಿಕ್ರಮನು
ಅದ್ಭುತ ಪರಾಕ್ರಮಿಯು ಎನಿಸುವನು ಜಗದೊಳಗೆ
ಈತನಿಗೆ ಬಾಲ್ಯದಲಿ ಮೃತ್ಯುವಿನ ಭಯವಿಲ್ಲ
ಶಿಶುವನ್ನು ತ್ಯಜಿಸದಲೆ ಪೋಷಿಪುದು ಎಂದಿಹನು ॥೭೯೬॥

ಈತನನು ವಧಿಸುವಾ ಬಲಶಾಲಿ ಓರ್ವನು
ಬೇರೆಯಾ ಸ್ಥಳದಲ್ಲಿ ಜನಿಸಿಹನು ಎನ್ನುತಿರೆ
ಕಳವಳದಿ ಸಾಮ್ರಾಜ್ಞಿ ಎನ್ನಯಾ ಸುತನನ್ನು
ವಧಿಸುವವರಾರಿಹರು ಎನ್ನುತಲಿ ಕೇಳುತಿರೆ ॥೭೯೭॥

ಆವನಾ ತೊಡೆಯಲ್ಲಿ ಈ ಶಿಶುವು ಮಲಗಿರಲು
ಐಯ್ಯುಹೆಡೆ ಸರ್ಪದಾ ಪರಿಯಲ್ಲಿ ಶೋಭಿಸುವ
ಈತನಾ ಮೂರನೆಯ ನಾಲ್ಕನೆಯ ಹಸ್ತಗಳು
ಒಣಗಿದೆಲೆ ಬೀಳ್ವಂತೆ ಕಳಚುತಲಿ ಬೀಳುವವೊ ॥೭೯೮॥

ಮತ್ತೆ ಆ ಮೂರನೆಯ ಹಣೆಗಣ್ಣು ಹಿಂಗುವದೊ
ಆತನೇ ಈ ಶಿಶುವ ಕೊಲ್ಲುವನು ಎನ್ನುತಲಿ
ಚಿಂತೆಯನು ಮಾಡದಿರಿ ಮಗುವನ್ನು ಪೋಷಿಪುದು
ಎನ್ನುತಲಿ ನಾರದರು ನುಡಿಯುತಲಿ ತೆರಳಿದರು ॥೭೯೯॥

ಲೋಕನಲಿ ಈ ಪರಿಯ ವಿಚಿತ್ರತರವಾಗಿರುವ
ಅಚ್ಚರಿಯ ಶಿಶುವೊಂದು ಜನಿಸಿರುವ ವಾರ್ತೆಯದು
ದೇಶದಿ ವಿದೇಶದಲಿ ಶೀಘ್ರದಲಿ ಪಸರುತಿರೆ
ಅಗಣಿತದ ನೃಪರುಗಳು ನೋಡಲಿಕೆ ಬಂದಿಹರು ॥೮೦೦॥

ಬಂದಿರುವ ಅರಸರನು ಚೇದಿನೃಪ ಸತ್ಕರಿಸಿ
ನೃಪರುಗಳ ತೊಡೆಯಲ್ಲಿ ಮಗುವನ್ನು ಮಲಗಿಸುತ
ಕರವೆರಡು ಕಳಚುವವೊ ಹಣೆಗಣ್ಣು ತೊಲಗುವದೊ
ಎನ್ನುತಲಿ ಚಿಂತೆಯಲಿ ಪರಿಕಿಸುತಲಿರ್ದಿಹನು ॥೮೦೧॥

**ತವಸುತನ ಅಪರಾಧ ಶತವನ್ನು ಕ್ಷಮಿಸುವೆನು ।**
**ಮೀರಿದೊಡೆ ವಧಿಸುವೆನು ಎಂದಿಹನು ಯಾದವನು ॥**

ಕೆಲದಿನದಿ ವಾರ್ತೆಯಿದು ದ್ವಾರಕೆಗೆ ಪಸರುತಿರೆ
ತನ್ನತ್ತೆಯಾಗಿರುವ ಚೇದಿಯಾ ನೃಪನರಸಿ
ಕರನಾಲ್ಕು ಹಣೆಗಣ್ಣು ಇರುತಿರುವ ಶಿಶುವನ್ನು
ಹೆತ್ತಿರುವ ವಿಷಯವನು ಮುರಹರನು ಕೇಳುತಲಿ ॥೮೦೨॥

ಕೌತುಕದಿ ನೋಡಲಿಕೆ ಬಲರಾಮ ಸಹಿತದಲಿ
ಬರುತಿರಲು ಚೇದಿನೃಪ ಈರ್ವರನು ಸತ್ಕರಿಸಿ
ಬಂಧುಗಳ ಕ್ಷೇಮವನು ಕುಶಲವನು ಕೇಳುತಲಿ
ಆಸನದಿ ಸುಖವಾಗಿ ಉಪವಿಷ್ಟವಾಗಿರಲು ॥೮೦೩॥

ಮಹರಾಣಿ ಶ್ರುತಿಶ್ರವಳು ಪ್ರೇಮದಲಿ ಐತಂದು
ಅಣ್ಣನಾ ಮಗನಾದ ಕೃಷ್ಣನಾ ತೊಡೆಯಲಿ
ತನ್ನಯಾ ಶಿಶುವನ್ನು ಮಲಗಿಸಲು ಆ ಕ್ಷಣದಿ
ಕರವೆರಡು ಕಳಚುತಲಿ ಧರೆಯಲ್ಲಿ ಬಿದ್ದಿಹವು ॥೮೦೪॥

ಮತ್ತೆ ಆ ಹಣೆಗಣ್ಣು ಮಾಯವದು ಆಗುತಿರೆ
ಕಂಬನಿಯ ಸುರಿಸುತಲಿ ಶ್ರುತಿಶ್ರವಳು ನುಡಿದಿಹಳು
ಹೇ ಸೋದರಳಿಯನೇ ಒಲುಮೆಯಾ ಕೃಷ್ಣನೇ
ಎನ್ನಯಾ ಮಾತೊಂದು ನಡೆಸುವುದು ಎನ್ನುತಿರೆ ॥೮೦೫॥

ಅತ್ತೆಯೇ ಹೇಳುವುದು ನಿನ್ನಯಾ ಮಾತನ್ನು
ತಪ್ಪದೆಯೆ ನಡೆಸುವೆನು ಎನ್ನುತಿರೆ ಮಾಧವನು
ಎನ್ನಸುತ ಶಿಶುಪಾಲ ನಿನ್ನಲ್ಲಿ ಗೈಯ್ಯುವಾ
ಅಪರಾಧವೆಲ್ಲವನು ಕ್ಷಮಿಸುವುದು ಕರುಣೆಯಲಿ ॥೮೦೬॥

ಈ ವರವ ನೀಯುವುದು ಎನ್ನುತಲಿ ನುಡಿಯುತಿರೆ
ನಿನ್ನಯಾ ಸುತಗೈವ ಅಪರಾಧ ಶತವನ್ನು
ಕ್ಷಮಿಸುವೆನು ಚಿಂತೆಯನು ಮಾಡದಿರು ಎನ್ನುತಲಿ
ಬಲರಾಮ ಸಹಿತದಲಿ ದ್ವಾರಕೆಗೆ ತೆರಳಿದನು ॥೮೦೭॥

ಶ್ರೀಕೃಷ್ಣನಿತ್ತಿರುವ ಈ ವರದ ಬಲದಿಂದ
ಉನ್ಮತ್ತನಾಗುತಲಿ ತನ್ನನ್ನು ಕೊಲ್ಲಲಿಕೆ
ಜಗದೊಳಗೆ ಒಬ್ಬರೂ ಇಲ್ಲೆಂದು ಭಾವಿಸುತ
ದುರುಳನೀ ಶಿಶುಪಾಲ ಯುದ್ಧಕ್ಕೆ ಕರೆಯುತಿಹ ॥೮೦೮॥

ಕೃಷ್ಣನಾ ಪ್ರೇರಣೆಯ ಕಾರಣದಿ ಶಿಶುಪಾಲ
ಈ ಪರಿಯೆ ಬಾಯಿಯಲಿ ಬಂದಂತೆ ಬೊಗಳುತಿಹ
ಈತನಾ ಪಾಪದಾ ಬಟ್ಟಲವು ತುಂಬಿಹುದು
ಈಗಲೇ ಮೃತ್ಯುವಿನ ಬಾಯಿಯನು ಹೊಕ್ಕಿಹನು ॥೮೦೯॥

ಕೃಷ್ಣನಾ ರೂಪದಲಿ ಧರೆಗಿಳಿದು ಬಂದಿರುವ
ನರಯಣನು ದುರುಳನಾ ಹರಣವನು ಕೊಳ್ಳುವನು
ಮಿಡುಕದಿರು ದುಡುಕದಿರು ಸಹನೆಯನು ತಾಳುವುದು
ಎನ್ನುತಲಿ ಪವನಜನ ಸಾಂತ್ವನವ ಗೊಳಿಸಿದನು ॥೮೧೦॥

ನದಿಸುತನ ನುಡಿಗೇಳ್ದು ಶಿಶುಪಾಲ ಮತ್ತೆಯೂ
ಕೋಪದಾ ಸಾಗರವು ಉಕ್ಕುತಲಿ ನುಡಿದಿಹನು
ಹೇಭೀಷ್ಮ ಕೃಷ್ಣನಾ ಗುಣಗಾನ ಗೈಯ್ಯುತಿಹ
ಅನ್ಯರನು ಗಣ್ಯರನು ನೀನೇಕೆ ಸ್ತುತಿಸದಿಹೆ ॥೮೧೧॥

ನಿನ್ನಯಾ ನಾಲಗೆಗೆ ಅನ್ಯರನು ಹೊಗಳುವಾ
ಹವ್ಯಾಸ ಇದ್ದೊಡೆಯೆ ಇಲ್ಲಿಯೇ ಶೋಭಿಸುವ
ವೀರಾಧಿ ವೀರರನು ರಾಜರನು ಸ್ತುತಿಸುವುದು
ಓರ್ವನೇ ಕೃಷ್ಣನನು ಹೊಗಳುವುದ ನಿಲ್ಲಿಪುದು ॥೮೦೨॥

ಈ ಕಡೆಗೆ ಬಲಶಾಲಿ ಬಾಹ್ಲಿಕರ ನೋಡುವುದು
ಹುಟ್ಟಿದಾ ಕ್ಷಣದಲ್ಲಿ ಭೂಮಿಯದು ಸೀಳಿದುದು
ಆವನ ಬಳಿ ಥಳಥಳಿಪ ಕಿರೀಟದಿ ಶೋಭಿಸುವ
ಜಗಖ್ಯಾತ ಅಂಗಪತಿ ಕಲಿಕರ್ಣ ಕುಳಿತಿಹನು ॥೮೦೩॥

ಇಂದ್ರನಿಗೆ ಸರಿಸಮನ ಮಾಗಧನ ವೀರನನು
ಬಾಹುಬಲ ಯುದ್ಧದಲಿ ಬಳಲಿಸುತ ಜಯಿಸಿಹನು
ಭಾರ್ಗವನ ಶಿಷ್ಯನಿಹ ಲೋಕೈಕ ವೀರನಿಹ
ಘನ ಕರ್ಣನೀತನನ ನೀನೇಕೆ ಸ್ತುತಿಸದಿಹೆ ॥೮೧೪॥

ಜಗದೊಳಗೆ ದ್ರೋಣಂಗೆ ಅಶ್ವತ್ಥಾಮ ವೀರರಿಗೆ
ಸರಿಸಮ ಪರಾಕ್ರಮಿಯ ಕಂಡಿಲ್ಲ ಕೇಳಿಲ್ಲ
ನಿಮಿಷದಲಿ ಲೋಕವನು ಭಸ್ಮವನು ಮಾಡುವರು
ಇವರನ್ನು ಅರಿತಿರುವ ನೀನೇಕೆ ಹೊಗಳದಿಹೆ ॥೮೧೫॥

ಭೂಮಿಯಲಿ ಅಪ್ರತಿಮ ಪರಾಕ್ರಮಿಯು ಎನಿಸಿರುವ
ದುರ್ಯೋಧನೀತನನ ಏತಕ್ಕೆ ಹೊಗಳದಿಹೆ
ಸಿಂಧುನೃಪ ಜಯದ್ರಥನು ಶೌರ್ಯದಲಿ ಹೀನನೇ
ಕಿಂಪುರುಷ ಆಚಾರ್ಯ ದ್ರುಮನಿಲ್ಲಿ ಮೆರೆಯುತಿಹ ॥೮೧೬॥

ಶಾರದ್ವತಾತ್ಮಜನು ವರಕೃಪನು ಕುರುಕುಲಕೆ
ಆಚಾರ್ಯ ರೆಂಬುವದು ಜಗವೆಲ್ಲ ಅರಿತಿಹುದು
ಈ ಪರಿಯ ಪೂಜಾರ್ಹ ಶ್ರೇಷ್ಠರನು ತೊರೆಯುತಲಿ
ದನಕಾಯ್ವ ಕೃಷ್ಣನನು ನೀನೇಕೆ ವರ್ಣಿಸುವೆ ॥೮೧೭॥

ಬಿಲ್ಲಿನಾ ಕೋವಿದನು ವರರುಕ್ಮಿ ಭೀಷ್ಮಕನ
ಭಗದತ್ತ ಬೃಹದ್ರಥನ ನೃಪದಂತ ವಕ್ತ್ರನನ
ದ್ರುಪದನನು ವಿರಾಟನನು ವಿಂದಾನುವಿಂದರನು
ಸೌಬಲ ಜಯತ್ಸೇನ ವರ ಏಕಲವ್ಯನನ ॥೮೧೮॥

ನೃಪತಿಲಕ ಶ್ರೇಷ್ಠನಿಹ ಮದ್ರದೊರೆ ಶಲ್ಯನನು
ಹೊಗಳದೆಯೆ ಕಂಸನಾ ಮನೆಯೊಳಿಹ ದನಗಳನು
ಕಾಯುವೀ ಗೊಲ್ಲನನ ದೇವನೆಂದೆನ್ನುತಲಿ
ಸ್ತುತಿಸುತಲಿ ಮೂರ್ಖರಾ ಪಾಂಡಿತ್ಯ ಮೆರೆದಿರುವೆ ॥೮೧೯॥

ಗಾಂಗೇಯ ಮಗುದೊಮ್ಮೆ ಹೇಳುವೆನು ಕೇಳುವುದು
ಕುರುಕುಲಕೆ ನೀ ಹಿರಿಯ ವೃದ್ಧನು ಪಿತಾಮಹನು
ಎನ್ನುತಲಿ ಸಭೆಯೊಳಿಹ ರಾಜರುಗಳೆಲ್ಲರು
ನೀಗೈದ ಅಪಮಾನ ಸಹಿಸುತಲಿ ಕುಳಿತಿಹರು ॥೮೨೦॥

ಕಾರಣದಿ ಈ ಕ್ಷಣದ ಪರ್ಯಂತ ಬದುಕಿರುವೆ
ಇಲ್ಲದಿರೆ ನೀ ಸತ್ತು ಬಹುಕಾಲವಾಗಿಹುದು
ರಾಜರಾ ಔದಾರ್ಯ ವಿಷಯವದು ಅಂತಿರಲಿ
ನೀನಿಂದು ಬದುಕಿರುವೆ ಎನ್ನುತಲಿ ನುಡಿದಿಹನು ॥೮೨೧॥

ವರಭೀಷ್ಮ ಕೇಳುತಲಿ ಕೋಪವದು ಉಕ್ಕುತಲಿ
ರಾಜರಾ ಔದಾರ್ಯ ವಿಷಯುವದು ಅಂತಿರಲಿ
ಈ ನೃಪರು ಸಕಲರೂ ಶರಿಸಮರು ಎನಗಿಹರೆ
ತೃಣಕಿಂತ ಕಡೆಯಾಗಿ ಇವರಿಹರು ಎಂದಿಹನು ॥೮೨೨॥

ನದಿಸುತನ ನುಡಿಗೇಳ್ದು ನೃಪರುಗಳು ಸಕಲರೂ
ರೋಷದಲಿ ಉದ್ರಿಕ್ತರಾಗುತಲಿ ಏಳುತಲಿ
ಗರ್ವದಲಿ ನುಡಿಯುತಿಹ ಭೀಷ್ಮನನು ಈ ಕ್ಷಣದಿ
ವಧಿಸುವುದು ಎನ್ನುತಲಿ ಗರ್ಜನೆಯ ಗೈಯುತಿರೆ ॥೮೨೩॥

ಕುಶಲಮತಿ ವರಭೀಷ್ಮ ಮತ್ತೊಮ್ಮೆ ನುಡಿದಿಹನು
ಮಾತಿಂಗೆ ಮಾತುಗಳು ಬೆಳೆಯುವುದು ಸಹಜವಿದು
ಸರ್ವರಲಿ ಶ್ರೇಷ್ಠನಿಹ ಎನ್ನುತಲಿ ಕೃಷ್ಣನನು
ನಾವುಗಳು ವರಅಗ್ರ ಪೂಜೆಯನು ಗೈದಿಹೆವು ॥೮೨೪॥

ಕೃಷ್ಣನನು ಹೀನನೆಂದೆನ್ನುತಲಿ ಭಾವಿಸುವ
ನೃಪರುಗಳು ಕೃಷ್ಣನಾ ಜೊತೆಯಲ್ಲಿ ಈಗಲೇ
ಯುದ್ಧವನು ಗೈಯ್ಯುತಲಿ ಜಯಿಸುವುದು ಇಲ್ಲವೆ
ಅವನಿಂದ ಮರಣವನು ಅಪ್ಪುವುದು ಎಂದಿಹನು ॥೮೨೫॥

**ಮುರಹರನು ಚಕ್ರವನು ಎಸೆಯುತಲಿ ಕ್ರೋಧದಲಿ।**
**ಶಿಶುಪಾಲ ದುರುಳನಾ ಶಿರವನ್ನು ತರಿದಿಹನು॥**

ನದಿಸುತನ ನುಡಿಗಳನು ಕೇಳುತಲಿ ಶಿಶುಪಾಲ
ಕ್ರೋಧದಾ ಸಾಗರವು ಉಕ್ಕುತಲಿ ನುಡಿದಿಹನು
ಗಡಗೊಲ್ಲ ಬಡಕೃಷ್ಣ ಎನ್ನನ್ನು ಕೊಲ್ಲುವನೆ
ಹೇಕೃಷ್ಣ ಎನ್ನೊಡನೆ ಯುದ್ಧವನು ಗೈಯುವುದು ॥೮೨೬॥

ಹಾವನ್ನು ಹೋರಿಯನು ಹೆಂಗಸನು ಕೊಂದಿಹೆನು
ಎನ್ನುತಲಿ ಗರ್ವದಲಿ ನೀ ಮೆರೆಯುತಿಹೆಯಾ
ಕದನದಲಿ ಈಗಲೇ ಪಾಂಡವರ ಸಹಿತದಲಿ
ನಿನ್ನನ್ನು ಯಮಲೋಕಕಟ್ಟುವೆನು ಕೇಳುವುದು ॥೮೨೭॥

ನೆರೆದಿರುವ ಗಣ್ಯರನು ರಾಜರನು ಮಾನ್ಯರನು
ತೊರೆಯುತಲಿ ಕಂಸನಾ ಮನೆಯೊಳಿಹ ಊಳಿಗನ
ಗವಳಿಗನ ಪೂಜಿಸುತ ಅಪಮಾನಗೈದಿರುವ
ಪಾಂಡವರು ಅಕ್ಷಮ್ಯ ಅಪರಾಧವೆಸಗಿಹರು ॥೮೨೮॥

ವಧೆಗರ್ಹರಾಗಿರುವ ಪಾಂಡವರ ಐವರನು
ನಿನ್ನೊಡನೆ ಯಮಸದನಕಟ್ಟುವೆನು ಎನ್ನುತಲಿ
ಧನುವನ್ನು ಜಡಿಯುತಲಿ ಅಬ್ಬರದಿ ಗರ್ಜಿಸಲು
ಯಾದವನು ಏಳುತಲಿ ನುಡಿದಿಹನು ವಿನಯದಲಿ ॥೮೨೯॥

ಸಭಿಕರೇ ನೃಪರುಗಳೆ ಶಿಶುಪಾಲ ನುಡಿದಿರುವ
ಉದ್ಧಟದ ಜಂಭದಾ ನುಡಿಗಳನು ಕೇಳಿಹಿರಿ
ದುರುಳನೀ ಶಿಶುಪಾಲ ಯದುಕುಲದ ಶೃತಿಸ್ರವಳ
ಎನ್ನಯಾ ತಂದೆಯಾ ಸೋದರಿಯ ಮಗನಿಹನು ॥೮೩೦॥

ಇವನೆಮ್ಮ ಅಳಿಯನಿಹ ಬಂಧುವಿಹ ಎನ್ನುತಲಿ
ಎಂದಿಗೂ ಇವನಿಂಗೆ ಕೇಡನ್ನು ಮಾಡಿಲ್ಲ
ಆದರೂ ಎಮ್ಮನ್ನು ಮತ್ಸರದಿ ದ್ವೇಷಿಸುತ
ಅಗಣಿತದ ಕಷ್ಟಗಳ ಈತನೆಮಗಿತ್ತಿಹನು ॥೮೩೧॥

ಒಂದುಸಲ ಪ್ರಾಗ್ಜ್ಯೋತಿಪುರ ತೆರಳಿರಲು
ಸಾವಿರದ ಸಮಯವನು ಸಾಧಿಸುತ ಈ ದುರುಳ
ದ್ವಾರಕೆಯ ಮುತ್ತುತಲಿ ಬೆಂಕಿಯನು ಇಕ್ಕುತಲಿ
ದಹಿಸುತಲಿ ಕಷ್ಟಗಳ ಕೊಟ್ಟಿರುವ ದುಷ್ಟನಿಹ ॥೮೩೨॥

ರೈವತಕ ಪರ್ವತದಿ ವರಅಗ್ರ ಸೇನನೃಪ
ವಿಹರಿಸುತಲಿರುತಿರಲು ಸೇವಕರ ವಧಿಸುತಲಿ
ಕೆಲವರನು ಬಂಧಿಸುತ ನಗರಕ್ಕೆ ಕೊಂಡೊಯ್ದು
ಈ ಪರಿಯ ಅಗಣಿತದ ಪಾಪಗಳ ಗೈದಿಹನು ॥೮೩೩॥

ಎನ್ನಯಾ ಪಿತಗೈವ ಯಜ್ಞದಾ ಕುದುರೆಯನು
ಬಚ್ಚಿಟ್ಟು ಯಾಗಕ್ಕೆ ತೊಂದರೆಯನಿತ್ತಿಹನು
ವರತಪಸಿ ಅಕ್ರೂರ ಶ್ರೇಷ್ಠನಾ ಪತ್ನಿಯನು
ಅಪಹರಣ ಗೈಯ್ಯುತಲಿ ಮಹಪಾಪ ಗೈದಿಹನು ॥೮೩೪॥

ತನ್ನಯ ಮಿತ್ರನಿಹ ಕರೂಷ ನೃಪನಿಂಗೆ
ಈಯಲಿಕೆ ವಿಶಾಲದೊರೆ ಕನ್ಯೆಯನು ಭದ್ರೆಯನು
ಅಪಹರಣಗೈದಿಹನು ಈ ತೆರನ ಪಾಪಗಳ
ಎನ್ನತ್ತೆಗೋಸ್ಕರವೆ ತಾಳ್ಮೆಯಲಿ ಸಹಿಸಿದೆವು ॥೮೩೫॥

ಇಂದಿನಲಿ ಸಭೆಯಲ್ಲಿ ನಿಮ್ಮಯಾ ಎದುರಿನಲಿ
ಎಮ್ಮನ್ನು ಬಾಯಲ್ಲಿ ಬಂದತೆ ಬೊಗಳಿಹನು
ಎಮ್ಮಯಾ ವಿಷಯದಲಿ ಎಷ್ಟೊಂದು ದ್ವೇಷವಿದೆ
ಎಂಬುದನು ನೀವೆಲ್ಲ ಕೇಳುತಲಿ ಅರಿತಿಹಿರಿ ೮೩೬॥

ಪೂರ್ವದಲಿ ಈ ಮೂರ್ಖ ರುಕ್ಮಿಣಿಯ ಬಯಸಿರ್ದ
ರುಕ್ಮಿಣಿಯ ಮದುವೆಯದು ಎನ್ನೊಡನೆ ನಡೆದಿರಲು
ಮತ್ಸರದಿ ಎಮ್ಮನ್ನು ದ್ವೇಷಿಸುತಲಿರುತಿಹನು ?
ಅಗಣಿತದ ಕಷ್ಟಗಳ ಹಿಂಸೆಯನು ಕೊಟ್ಟಿಹನು ॥೮೩೭॥

ಶಿಶುಪಾಲ ಕೇಳುತಲಿ ತನುರಕುತ ಕುದಿಯುತಲಿ
ಎಲವೆಲವೊ ಕೃಷ್ಣನೇ ಎನ್ನೊಡನೆ ನಿನ್ನಯಾ
ಹೆಂಡತಿಯು ಮದುವೆಯದು ನಿಶ್ಚಯವು ಆಗಿತ್ತು
ಎನ್ನುತಲಿ ಹೇಳಲಿಕೆ ನಾಚಿಕೆಯು ಬಾರದೇ ॥೮೩೮॥

ಕಳ್ಳನಾ ತೆರದಲ್ಲಿ ರುಕ್ಮಿಣಿಯ ಅಪಹರಿಸಿ
ತಂದಿರುವ ನೀನಾರು ಘನವೀರ ಶೂರನಿಹೆ
ಅಗಣಿತದ ಚೋರತನ ಜಾರತನ ಕೃತ್ಯಗಳ
ಗೈದಿರುವ ಮಹಕಳ್ಳ ನೀನಿರುವೆ ಎಂದಿಹನು ॥೮೩೯॥

ಚೈದ್ಯನಾ ನುಡಿಗಳನು ಕೇಳುತಲಿ ಕೇಶವನು
ನೃಪರುಗಳೆ ಈ ತನಕ ಈತನನು ಕ್ಷಮಿಸಿರುವ
ಕಾರಣವನುಸುರುವೆನು ಕೇಳುವುದು ಎನ್ನುತಲಿ
ತಾನಿತ್ತ ವರವನ್ನು ಅರುಹಿದನು ವಿಶದದಲಿ ॥೮೪೦॥

ಈತನಾ ತಾಯಿಯಳು ಎನ್ನತ್ತೆ ಶೃತಿಶ್ರವಳು
ಸುತಗೈವ ಅಪರಾಧ ಶತವನ್ನು ಕ್ಷಮಿಸುವುದು
ಎನ್ನುತಲಿ ದೈನ್ಯದಲಿ ರೋದಿಸುತ ಕೇಳುತಿರೆ
ವರವನ್ನು ಇತ್ತಿಹೆನು ಎನ್ನತ್ತೆಗೋಸ್ಕರದಿ ॥೮೪೧॥

ಅಪರಾಧ ಶತವೀಗ ಮೀರಿಹವು ನಾವಿನ್ನು
ಅವುದನು ಕ್ಷಮಿಸದೆಯೆ ನಿಮ್ಮೆದುರು ವಧಿಸುವೆನು
ಎನ್ನುತಲಿ ಅಗಣಿತದ ಅಸುರರನು ತರಿದಿರುವ
ವರದಿವ್ಯ ಚಕ್ರವನು ಅಸುರಾರಿ ನೆನೆಯುತಿರೆ ॥೮೪೨॥

ಆ ಕ್ಷಣದಿ ದಶದಿಶೆಯ ಬೆಳಗುತಲಿ ತೇಜದಲಿ
ಸುದರ್ಶನಾ ಚಕ್ರವದು ತಿರುಗುತಲಿ ಬರುತಲಿರೆ
ಮುರಹರನು ಬೆರಳಿನಾ ಮಧ್ಯದಲಿ ಧರಿಸುತಲಿ
ಗರಗರನೆ ತಿರುಗಿಸುತ ದುರುಳನಾ ಮೇಲೆಸೆಯೆ ॥೮೪೩॥

ಕಣ್ಣವೆಯು ಮುಚ್ಚುವಾ ಸಮಯದಲಿ ಐತಂದು
ದೇವೇಂದ್ರ ಕ್ರೋಧದಲಿ ಎಸೆದಿರುವ ಘೋರತರ
ವಜ್ರಾಯುಧಾಘಾತಕುರುಳುತಲಿ ಗಿರಿಶಿಖರ
ಬೀಳ್ವಂತೆ ಸುದರ್ಶನಾ ಚಕ್ರವದು ಭರದಲ್ಲಿ ॥೮೪೪॥

ದುರುಳನಾ ಕೊರಲನ್ನು ಕೊರೆಯುತಿರೆ ಕತ್ತುತಲಿ
ಶಿರ ಉರುಳಿ ಬಿದ್ದಿಹುದು ರಕುತವದು ಚಿಮ್ಮುತಲಿ
ಶತಸೂರ್ಯ ಪ್ರಭೆಯಲ್ಲಿ ದಶದಿಶೆಯ ಬೆಳಗುತಲಿ
ದಿವ್ಯದಾ ತೇಜವದು ಕೊರಲಿಂದ ಹೊಮ್ಮುತಲಿ ॥೮೪೫॥

ಮುರಹರನ ಚರಣಕ್ಕೆ ಎರಗುತಲಿ ನಮಿಸುತಲಿ
ಸುತ್ತಲೂ ಪ್ರದಕ್ಷಿಣೆಯ ಗೈಯ್ಯುತಲಿ ಕೇಶವನ
ದೇಹದೊಳು ಸೇರಿದುದು ಸಕಲರೂ ನೋಡುತಲಿ
ಬೆರಗಾಗಿ ಕೃಷ್ಣನನು ಸ್ತುತಿಸಿದರು ಭಕುತಿಯಲಿ ॥೮೪೬॥

ನಭದೊಳಗೆ ನೋಡುತಲಿ ನಿಂತಿರ್ದ ಸುರವೃಂದ
ಶ್ರೀರಾಮ ರಾವಣನ ವಧಿಸಿರುವ ಪರಿಯಲ್ಲಿ
ಶ್ರೀಕೃಷ್ಣ ಚೈದ್ಯನನು ವಧಿಸಿದನು ಎನ್ನುತಲಿ
ಪುಷ್ಪದಾ ವೃಷ್ಟಿಯನು ಗೈದಿಹರು ಸಂತಸದಿ ॥೮೪೭॥

ಒಳಕಲಾ ಮಾಧವನ ಆಜ್ಞೆಯಲಿ ಧರ್ಮಸುತ
ಸೋದರರ ಕರೆಸುತಲಿ ಮೃತನಾದ ಚೈದ್ಯನಾ
ಉತ್ತರ ಕ್ರಿಯಾದಿಗಳನೆಲ್ಲವನು ಗೈಯ್ಯುತಿರೆ
ಶಿಶುಪಾಲನಾತ್ಮಜರು ರೋದಿಸುತ ಐತಂದು ॥೮೪೮॥

ಮಾಧವನ ಪಾದಕ್ಕೆ ಎರಗುತಲಿ ದೈನ್ಯದಲಿ
ನಾವಿಂದು ಪರದೇಶಿ ನಮ್ಮನ್ನು ರಕ್ಷಿಪುದು
ಎನ್ನುತಲಿ ನುಡಿಯುತಿರೆ ಕರುಣೆಯಲಿ ಶ್ರೀಕೃಷ್ಣ
ಚೈದ್ಯನಾ ಸುತರಿಂಗೆ ಪಟ್ಟವನು ಕಟ್ಟಿದನು ॥೮೪೯॥

**ಮುರಹರನ ಕೃಪೆಯಲ್ಲಿ ರಾಜಸೂಯಾಧ್ವರವ ।**
**ಧರ್ಮಜನು ಗೈಯುತಿರೆ ಸಕಲಜನ ನಲಿದಿಹುದು ॥**

ಮತ್ತೆ ಆ ಧರ್ಮಜನು ರಾಜಸೂಯಾಧ್ವರವ
ಕಾರ್ಯಂಗಳೆಲ್ಲವನು ವೈಭವದಿ ಗೈಯುತಲಿ
ಸಕಲರಾ ಕಣ್ಮನವ ಹೃದಯಗಳ ತಣಿಸುತಲಿ
ಆ ಮಹಾಯಾಗವನು ಮುಕ್ತಾಯಗೊಳಿಸಿದನು ॥೮೫೦॥

ಅಕ್ಕಿಯಾ ಬೇಳೆಗಳ ಬೆಲ್ಲದಾ ಸಕ್ಕರೆಯ
ರಾಶಿಯಲಿ ಒಟ್ಟಿರುವ ಪರ್ವತಗಳೆಸೆದಿಹವು
ಕೆನೆಮೊಸರ ಹಾಲಿನಾ ತುಪ್ಪದಾ ಜೇನಿನಾ
ಹೊಳೆಹಳ್ಳ ಹರಿದಿಹವು ಧರ್ಮಜನ ಯಜ್ಞದಲಿ ॥೮೫೧॥

ಅಗಣಿತದ ಭೂಸುರರು ನೃಪರುಗಳು ಸಕಲಪ್ರಜೆ
ಮಂಡಿಗೆಯ ಘಾರಿಗೆಯ ಪಂಚಪಕ್ವಾನ್ನಗಳ
ಸವಿರಸದ ಊಟವನು ಸವಿಯುತಲಿ ತೇಗುತಲಿ
ಧರ್ಮಜನ ಹೊಗಳಿದರು ಸಂತಸದಿ ತಣಿಯುತಲಿ ॥೮೫೨॥

ಅಪರಿಮಿತ-ಧನಕನಕ ರತ್ನಗಳ ವಜ್ರಗಳ
ಸ್ವರ್ಣಧಾಭರಣಗಳ ಪೀತಾಂಬರಾದಿಗಳ
ಸಾವಿರದ ಗೋವುಗಳ ಸಕಲರಿಗೆ ವಿಪ್ರರಿಗೆ
ದಾನಗಳ ದಕ್ಷಿಣೆಯ ಧರ್ಮಜನು ಇತ್ತಿಹನು ॥೮೫೩॥

ಧರ್ಮಜನು ಅವಭೃತದ ಸ್ನಾನವನು ಗೈಯ್ಯುತಲಿ
ಹೊಳೆಹೊಳೆವ ಚೀನಾಂಬರಾಭರಣ ಧರಿಸುತಲಿ
ಬರುತಲಿರೆ ಕ್ಷತ್ರಿಯರು ನೃಪರುಗಳು ಸಕಲರೂ
ಯಮಸುತನ ಬಳಿಬಂದು ಸ್ತುತಿಸುತಲಿ ನುಡಿದಿಹರು ೮೫೪॥

ಭರತಕುಲ ದೀಪಕನೆ ಚಂದ್ರಕುಲ ನೃಪರೊಳಗೆ
ಈ ಪರಿಯ ಯಜ್ಞವನು ಆವ ನೃಪಗೈದಿಲ್ಲ
ನಳನಹುಷ ಮಾಂಧಾತ ಭೂಪರಿಗೆ ಮಿಗಿಲಾಗಿ
ನಿನ್ನಯಾ ಕೀರ್ತಿಯಿದು ಚಂದ್ರಾರ್ಕ ಮೆರೆಯುವದು ॥೮೫೫॥

ಈ ಯಾಗ ಗೈಯ್ಯುತಲಿ ಧರ್ಮಜನು ಪಾಲಿಸುತ
ಚಕ್ರಾಧಿಪತಿಯೆನಿಸಿ ಜಗದೊಳಗೆ ಮೆರೆಯುತಿರೆ
ಹೋಗಿ ಬಹೆವಪ್ಪಣೆಯ ನೀಯುವದು ಎನ್ನುತಲಿ
ನೆರೆದಿರುವ ಸಕಲರರೂ ನೃಪರುಗಳು ನುಡಿಯುತಿರೆ ॥೮೫೬॥

ಧರ್ಮಜನು ವಿಧವಿಧದ ಉಡುಗೊರೆಯನೀಯುತಲಿ
ಅನುಜರನು ಕರೆಸುತಲಿ ಎಮ್ಮಯಾ ಮೇಲಿರುವ
ಅಭಿಮಾನ ಪ್ರೀತಿಯಲಿ ಭೂಪತಿಗಳೈತಂದು
ಯಾಗಕ್ಕೆ ಅಪರಿಮಿತ ನೆರವನ್ನು ಇತ್ತಿಹರು ॥೮೫೭॥

ಪುರದ ಹೊರ ಸರಹಿಯಾ ಪರ್ಯಂತ ನೃಪರುಗಳ
ಕಳುಹಿಸುತ ಬಹುದೆಂದು ನುಡಿಯುತಿರೆ ಅನುಜರಿಗೆ
ಪವನಜನು ಧೃತರಾಷ್ಟ್ರ ಭೀಷ್ಮರನು ಮುನಿವರರ
ಅರ್ಜುನನು ಆ ಯಜ್ಞಸೇನನ ನೃಪವರನ ॥೮೫೮॥

ಸಹದೇವ ದ್ರೋಣರನು ಅಶ್ವತ್ಥ ಕೃಪರನ್ನು
ಆ ನಕುಲ ಪುತ್ರನಸಮೇತದಲಿ ಸುಬಲನನು
ದ್ರೌಪದಿ ಸುಭದ್ರೆಯರ ಸುತರುಗಳು ಪರ್ವತದ
ಅಧಿಪತಿಗಳೆಲ್ಲರನು ಕಳುಹಿದರು ಉಚಿತದಲಿ ॥೮೫೯॥

ಯಜ್ಞಕ್ಕೆ ಬಂದಿರುವ ಲಕ್ಷೋಪಲಕ್ಷದಾ
ಭೂಸುರರು ಸಕಲರೂ ಮೃಷ್ಟಾನ್ನ ಭೋಜನವ
ಸವಿಯುತಲಿ ತೃಪ್ತಿಯಲಿ ದಕ್ಷಿಣೆಯ ಕೊಳ್ಳುತಲಿ
ಸಂತಸದಿ ಧರ್ಮಜನ ಹರಸುತಲಿ ತೆರಳಿದರು ॥೮೬೦॥

**ತನ್ನಯಾ ಪ್ರಾಣಗಳ ಪಾಂಡವರ ದ್ರೌಪದಿಯ।**
**ಹರಸುತಲಿ ಶ್ರೀಕೃಷ್ಣ ದ್ವಾರಕೆಗೆ ತೆರಳಿದನು ॥**

ಸಕಲರೂ ತೆರಳುತಿರೆ ಶ್ರೀಕೃಷ್ಣ ಧರ್ಮಜಗೆ
ಈ ರಾಜಸೂಯವನು ವೈಭವದಿ ಮಾಡುತಲಿ
ತಂದೆಯನು ಪಾಂಡುವನು ಸ್ವರ್ಗಕ್ಕೆ ಕಳುಹಿಸುತ
ಇಂದ್ರನಾ ಜೊತೆಯಲ್ಲಿ ಶೋಭಿಸುವ ತೆರದಲ್ಲಿ ॥೮೬೧॥

ಮಾಡುತಲಿ ಜಗದೊಳಗೆ ಕೀರ್ತಿಯಲಿ ಮೆರೆಯುತಿಹೆ
ನಿನ್ನಯಾ ಸೌಭಾಗ್ಯಕೆಣೆಯುಂಟೆ ಲೋಕದಲಿ
ನಾವಿನ್ನು ದ್ವಾರಕೆಗೆ ತೆರಳುವೆವು ಹರ್ಷದಲಿ
ಅಪ್ಪಣೆಯ ನೀಯುವದು ಎನ್ನುತಲಿ ನುಡಿದಿಹನು ॥೮೬೨॥

ಧರ್ಮಜನು ದೈನ್ಯದಲಿ ಗದ್ಗದಿತ ಕಂಠದಲಿ
ಕೇಶವನೆ ನಿನ್ನಯಾ ಕರುಣೆಯು ಅನುಗ್ರಹದಿ
ನೃಪರುಗಳು ಎನ್ನಯಾ ಸಾರ್ವಭೌಮತ್ವವನು
ಒಪ್ಪುತಲಿ ಕಪ್ಪಗಳ ಕಾಣಿಕೆಯನಿತ್ತಿಹರು ೮೬೩

ನಿನ್ನಯ ಸಹಾಯದಲಿ ಪ್ರೀತಿಯಲಿ ಕೃಪೆಯಲ್ಲಿ
ರಾಜಸೂಯಾಧ್ವರವು ವೈಭವದಿ ಜರುಗಿಹುದು
ನಿನ್ನನ್ನು ತೊರೆಯುತಲಿ ಕ್ಷಣವೊಂದು ಜೀವಿಸೆನು
ತೆರಳಲಿಕೆ ಆಜ್ಞೆಯನು ನಾನೆಂತು ಈಯುವೆನು ॥೮೬೪॥

ಆದೊಡೆಯು ದ್ವಾರಕೆಗೆ ತೆರಳುವದವಶ್ಯವಿದೆ
ಎಂಬುದನು ನಾಬಲ್ಲೆ ನೀನಿಲ್ಲದಿರ್ದೊಡೆಯು
ದಾನವರು ಶತ್ರುಗಳು ದ್ವಾರಕೆಯ ಮುತ್ತುತಲಿ
ನಾಶವನು ಮಾಡುವರು ಕಾರಣದಿ ತೆರಳುವುದು ॥೮೬೫॥

ಹೋಗಿ ಬಾ ಎನ್ನುತಲಿ ಧರ್ಮಸುತ ನುಡಿಯುತಿರೆ
ಅರಮನೆಯ ಒಳಗಡಗೆ ಮುರಹರನು ತೆರಳುತಲಿ
ಕುಂತಿಯಾ ಚರಣಕ್ಕೆ ಸಾಷ್ಟಾಂಗವೆರಗುತಲಿ
ಹರ್ಷಾಶ್ರು ಸುರಿಸುತಲಿ ನಸುನಗುತ ನುಡಿದಿಹನು ॥೮೬೬॥

ಹೇ ಅತ್ತೆ ನಿನ್ನಯಾ ಸುತರುಗಳು ಪಾಂಡವರು
ಜಗದಖಿಲ ನೃಪರುಗಳ ಶೌರ್ಯದಲಿ ಜಯಿಸುತಲಿ
ಸಾರ್ವಭೌಮತ್ವವನು ಪಡೆಯುತಲಿ ಮೆರೆಯುತಲಿ
ಅಧ್ವರವ ಗೈಯುತಲಿ ಕೀರ್ತಿಯಲಿ ಬೆಳಗಿಹರು ॥೮೬೭॥

ದಿವಿಜರನು ಹಡೆದಿರುವ ವರ ಅದಿತಿಯಂತೆ
ಪಾಂಡವರ ಪಡೆಯುತಲಿ ನೀ ಧನ್ಯಳಾಗಿರುವೆ
ದ್ವಾರಕೆಗೆ ತೆರಳುವೆನು ಅಪ್ಪಣೆಯ ನೀಯುವುದು
ಎನ್ನುತಲಿ ಕುಂತಿಯಾ ಚರಣಕ್ಕೆ ಎರಗಿದನು ॥೮೬೮॥

ವಿಷದೊಳಗೆ ರಕ್ಷಿಸಿಹೆ ಉರಿಯೊಳಗೆ ಸಲುಹಿರುವೆ
ದುಷ್ಟನನು ವಧಿಸುತಲಿ ಅಧ್ವರವ ಮೆರೆಯಿಸಿದೆ
ನಿನ್ನಯಾ ಕೈಯಲ್ಲಿ ಪಾಂಡವರ ಕೊಟ್ಟಿಹೆನು
ಹಾನಿಯದು ವೃದ್ಧಿಯದು ನಿನ್ನನ್ನು ಕೂಡಿಹುದು ॥೮೬೯॥

ಕುಂತಿಯಾ ಆಜ್ಞೆಯನು ಯಾದವನು ಕೊಳ್ಳುತಿರೆ
ದ್ರೌಪದಿಯು ಭರದಲ್ಲಿ ಧಾವಿಸುತ ಐತಂದು
ಕೃಷ್ಣನಾ ಪಾದದಲಿ ಶಿರವನ್ನು ಇರಿಸುತಲಿ
ನಮಿಸುತಲಿ ಅಶ್ರುಗಳ ಸುರಿಸುತಲಿ ನುಡಿದಿಹಳು ॥೮೭೦॥

ವಿಷದನ್ನವಿಕ್ಕಿದೊಡೆ ರಕ್ಷಿಸಿದ ದೇವನೆ
ಕಿಚ್ಚನ್ನು ಹಚ್ಚಿದೊಡೆ ಸಲುಹಿರುವ ದೇವನೆ
ಶಿಶುಪಾಲ ರಕ್ಕಸನ ಶಿರವನ್ನು ತರಿಯುತಲಿ
ಯಜ್ಞವನು ರಕ್ಷಿಸಿದ ದೇವಾಧಿದೇವನೆ ॥೮೭೧॥

ಮಮಪ್ರಾಣ ಪಾಂಡವರು ಎನ್ನುತಿಹ ದೇವನೆ
ನಿನ್ನನ್ನು ತೊರೆಯುತಲಿ ನಾವೆಂತು ಜೀವಿಪೆವು
ನಿನ್ನಯಾ ಪ್ರಾಣಗಳ ತೆರದಲ್ಲಿ ಇರುತಿರುವ
ಪಾಂಡವರನೈವರನು ಪೊರೆಯುವುದು ಎಂದಿಹಳು ॥೮೭೨॥

ಏಳವ್ವ ತಂಗಿಯೇ ಸಾಧ್ವಿಯೇ ದ್ರೌಪದಿಯೆ
ಜಗದಖಿಳ ಸ್ತ್ರೀಕುಲಕೆ ನೀ ರತ್ನ ಮಕುಟವಿಹೆ
ಪಾಪಗಳ ಪರಿಹರಿಪ ಪಾವನ ಪತಿವ್ರತಿಯು
ಮಹಿಳಾ ಶಿರೋಮಣಿಯು ನೀನಿರುವೆ ಏಳೆಂದ ॥೮೭೩॥

ನಿನ್ನಯಾ ಐವರೂ ಪತಿಗಳತಿ ವಿಕ್ರಮರು
ಜಗವನ್ನು ಜಯಿಸಿರುವ ಜಗಸಾರ್ವಭೌಮರು
ರಾಜಸೂಯಾಧ್ವರವ ಗೈದಿರುವ ಶ್ರೇಷ್ಠರು
ಲೋಕದಲಿ ನಿನ್ನಯಾ ಭಾಗ್ಯಕ್ಕೆ ಎಣೆಯುಂಟೆ ॥೮೭೪॥

ಧರ್ಮಜನು ಧರ್ಮಿಷ್ಠ ನಯವಿದನು ಸದ್ಗುಣನು
ಪವನಜನು ಕೋಪಿಷ್ಠ ಮಹರುದ್ರನಿರುತಿಹನು
ಅರ್ಜುನನು ಶೂರನಿಹ ನಯನೀತಿ ಕೋವಿದನು
ಆ ನಕುಲ ಸಹದೇವ ಶಿಶುಮನದ ಮುಗ್ಧರು ॥೮೭೫॥

ಐವರನು ಸರಿಯಾಗಿ ಅರಿಯುತಲಿ ಸೇವಿಪುದು
ಧನಕನಕ ಐಶ್ವರ್ಯ ಸಾಮ್ರಾಜ್ಯ ಸಂಪತ್ತು
ಚಂಚಲದಿ ಚಲಿಸುತಿಹ ಲಕ್ಷ್ಮಿಯನು ಎಂದಿಗೂ
ಮೆಚ್ಚದಿರು ಅವಳಾರು ಬಳಿಯಲ್ಲಿ ನಿಲ್ಲಳು ॥೮೭೬॥

ಸಿರಿ ಇರಲಿ ಇಲ್ಲವೇ ದಾರಿದ್ರ್ಯವಿರುತಿರಲಿ
ಅರಮನೆಯು ಇಲ್ಲವೆ ಗುಡಿಸಲವೆ ಇರುತಿರಲಿ
ಆವುದೇ ಇರ್ದರೂ ಪತಿಗಳಾ ಸಹಿತದಲಿ
ನೀನಿರ್ದ ತಾಣವೇ ಸ್ವರ್ಗವದು ಎನಿಸುವದು ॥೮೭೭॥

ಚಿಂತೆಯನು ಮಾಡದಿರು ಸೋದರಿಯೆ ದ್ರೌಪದಿಯೆ
ಮನದೊಳಗೆ ಎನ್ನನ್ನು ನೆನಸಿದಾ ಕ್ಷಣದಲ್ಲಿ
ತಪ್ಪದಲೆ ದರ್ಶನವ ಕೊಡುವೆನೆನ್ನುತಲಿ
ದ್ರೌಪದಿಯ ಸಾಂತ್ವನವ ಗೊಳಿಸಿದನು ಮಾಧವನು ॥೮೭೮॥

ಸೋದರಿ ಸುಭದ್ರೆಯನು ಕುಶಲವನು ಕೇಳುತಲಿ
ಅಭಿಮನ್ಯು ಅಳಿಯನನು ಪ್ರೀತಿಯಲಿ ಬಿಗಿದಪ್ಪಿ
ನಿಮಗೆಲ್ಲ ಶುಭವಾಗಲೆನ್ನುತಲಿ ಹರಸುತಲಿ
ಮಾಧವನು ಅರಮನೆಯ ಹೊರಗಡೆಗೆ ಐತಂದು ॥೮೭೯॥

ಮಂಗಲದ ಸ್ನಾನವನು ಗೈಯುತಲಿ ಶುದ್ಧದಲಿ
ಪೀತಾಂಬರಾದಿಗಳ ಆಭರಣ ಧರಿಸುತಲಿ
ವಿಪ್ರರಿಗೆ ನಮಿಸುತಲಿ ಹರಕೆಯನು ಕೊಳ್ಳುತಲಿ
ಪಯಣದಲಿ ಹೊರಡಲಿಕೆ ಸಿದ್ಧ ತಾನಾಗಿರಲು ॥೮೮೦॥

ಸಾರಥಿಯು ದಾರುಕನು ದಿವ್ಯಾಶ್ವ ಹೂಡಿರುವ
ಗರುಡದಾ ಲಾಂಛನದ ಬಾವುಟವು ಫಡಫಡಿಪ
ಸ್ವರ್ಣದಾ ರಥವನ್ನು ತರುತಲಿರೆ ಶ್ರೀಕೃಷ್ಣ
ಸುತ್ತಲೂ ಪ್ರದಕ್ಷಿಣೆಯ ಗೈಯುತಲಿ ಏರಿದನು ॥೮೮೧॥

ದಿವ್ಯರಥ ಮುಂದಕ್ಕೆ ಸಾಗುತಿರೆ ಧರ್ಮಜನು
ಹಿಂದಿನಲಿ ಅನುಜರಿಂದೊಡಗೂಡಿ ನಡೆದಿಹನು
ಪುರದ ಹೊರ ಕೊಳದೆಡೆಗೆ ರಥಸಾಗಿ ಬರುತಿರಲು
ಮುರಹರನು ನಿಲ್ಲಿಸುತ ಯಮಸುತಗೆ ನುಡಿದಿಹನು ॥೮೮೨॥

ಯೌವ್ವನವು ಶೌರ್ಯತ್ವ ಐಶ್ವರ್ಯ ಸಂಪತ್ತು
ರಾಜ್ಯದಾಮದಗಳಿವು ನೃಪರನ್ನು ಕೊಲ್ಲುವವು
ಬೇಟೆಯಲಿ ದ್ಯೂತದಲಿ ಆಟದಲಿ ಮದ್ಯದಲಿ
ಪರಸ್ತ್ರೀಯ ಸಂಗದಲಿ ಆಶೆಯನು ಮಾಡದಿರು ॥೮೮೩॥

ಮಳೆಯನ್ನು ಆಶ್ರಯಿಸಿ ಪ್ರಾಣಿಗಳು ಬಾಳ್ವಂತೆ
ಮರಗಳನು ಆಶ್ರಯಿಸಿ ಪಕ್ಷಿಗಳು ಇರುವಂತೆ
ದೇವೇಂದ್ರನಾಶ್ರಯಿಸಿ ದೇವತೆಗಳಿರುವಂತೆ
ನಿನ್ನನ್ನು ಆಶ್ರಯಿಸಿ ಸಕಲಪ್ರಜೆ ಸುಖವಿರಲಿ ॥೮೮೪॥

ನೀ ಇಂದ್ರಪ್ರಸ್ಥಕ್ಕೆ ಮರುಳುವುದು ಎನ್ನುತಲಿ
ಶ್ರೀಕೃಷ್ಣನುಡಿಯುತಲಿ ದ್ವಾರಕೆಗೆ ತೆರಳಿದನು
ಮುರಹರನ ನುಡಿಗಳನು ಧರ್ಮಜನು ಕೇಳುತಲಿ
ಮನದೊಳಗೆ ನೆನೆಯುತಲಿ ವಿರಹದಾ ತಾಪದಲಿ ॥೮೮೫॥

ದುಗುಡದಲಿ ಮಿಡುಕುತಲಿ ತಮ್ಮಂದಿರೊಡಗೂಡಿ
ಘನಮಹಿಮ ಕೃಷ್ಣನಾ ಕರುಣೆಯದು ಎಂತಿಹುದೊ
ಎನ್ನುತಲಿ ಶ್ರೀವೀರನರಯಣನ ಪದಯುಗವ
ನೆನೆಯುತಲಿ ಮರಳಿದನು ಪಿಂಇಂದ್ರ ಪ್ರಸ್ಥಕ್ಕೆ ॥೮೮೬॥

ಯಜ್ಞಕ್ಕೆ ಬಂದಿರುವ ಸಕಲರೂ ನೃಪರುಗಳು
ಧರ್ಮಜನ ಆಜ್ಞೆಯನು ಪಡೆಯುತಲಿ ತೆರಳಿದರು
ಶಕುನಿಯು ಸುಯೋಧನನು ಈರ್ವರೂ ಮಾತ್ರವೇ
ಮಯರಚಿತ ಸಭೆಯನ್ನು ವೀಕ್ಷಿಸುತ ಇರ್ದಿಹರು ॥೮೮೭॥

**ಮುಂದಣದ ಸಮಯದಲಿ ಘನಘೋರ ಯುದ್ಧವದು ।**
**ಸಂಭವಿಪುದೆನ್ನುತಲಿ ವರವ್ಯಾಸ ನುಡಿದಿಹನು ॥**

ವರವ್ಯಾಸ ಋಷಿವರರು ಶಿಷ್ಯರ ಸಮೇತದಲಿ
ಧರ್ಮಜನ ಬಳಿಬಂದು ಹರಸುತಲಿ ನುಡಿದಿಹರು
ಕಷ್ಟತರ ಎನಿಸುತಿಹ ರಾಜಸೂಯಾಧ್ವರವ
ಗೈಯುತಲಿ ಜಗಸಾರ್ವಭೌಮತ್ವ ಪಡೆದಿರುವೆ ॥೮೮೮॥

ನಿನ್ನಿಂದ ಕುರುನೃಪರು ಧನ್ಯರೆಂದೆನಿಸಿಹರು
ಜಗದೊಳಗೆ ಕುರುಕುಲದ ಕೀರ್ತಿಯದು ಮೆರೆದಿಹುದು
ಯಾಗದಲಿ ನಾವುಗಳು ಸಂತುಷ್ಟರಾಗಿಹೆವು
ಹೋಗಿ ಬಹೆವಪ್ಪಣೆಯ ನೀಯುವುದು ಎಂದಿಹರು ॥೮೮೯॥

ಧರ್ಮಸುತ ವ್ಯಾಸರಿಗೆ ಆಸನವ ನೀಯುತಲಿ
ಅರ್ಘ್ಯಪಾದ್ಯಾದಿಗಳನೀಯುತಲಿ ಸತ್ಕರಿಸಿ
ಸಾಷ್ಟಾಂಗವೆರಗುತಲಿ ರಾಜಸೂಯಾಧ್ವರವ
ಫಲವನ್ನು ತಿಳಿಯುವಾ ತವಕದಲಿ ನುಡಿದಿಹನು ॥೮೯೦॥

ಮುನ್ನಿನಲಿ ಈ ಯಜ್ಞಫಲಗಳನು ವಿವರಿಸುತ
ನೆಲಅಂತರಿಕ್ಷಕ್ಕೆ ಸುರಲೋಕ ಮೂರಕ್ಕೆ
ಸಂಬಂಧವಿರುತಿರುವ ಮೂರುವಿಧ ಉತ್ಪಾತ
ಸಂಭವಿಪವೆನ್ನುತಲಿ ನಾರದರು ನುಡಿದಿಹನು ॥೮೯೧॥

ಶಿಶುಪಾಲ ವಧೆಯಿಂದ ನೆಲದೊಂದು ಉತ್ಪಾತ
ಸಂಭವಿಸಿತೆನ್ನುತಲಿ ಭಾವಿಪುದು ಯೋಗ್ಯವೆ ?
ಮುಂದಕ್ಕೆ ಮತ್ತಾವ ಉತ್ಪಾತ ಘಟಿಸುವುದು
ಎಂಬುವದು ಪೇಳುವುದು ಎನ್ನುತಲಿ ನುಡಿದಿಹನು ॥೮೯೨॥

ತ್ರಿಯಕಾಲಜ್ಞಾನಿಯಿಹ ವರವ್ಯಾಸ ಋಷಿವರರು
ಹದಿಮೂರುವರ್ಷಗಳ ಕಾಲವೀ ಉತ್ಪಾತ
ದುಷ್ಫಲವನೀಯುವವು ಘೋರತರ ಯುದ್ಧದಲಿ
ಕ್ಷತ್ರಿಯರ ನಾಶಕ್ಕೆ ಕಾರಣಗಳೆನಿಸುವವು ॥೮೯೩॥

ನಿನ್ನನ್ನು ನೆಪಮಾಡಿ ಜಗದಖಿಲಿ ನೃಪರುಗಳು
ಕಲಹದಲಿ ಸಂಗ್ರಾಮಗೈಯುತಲಿ ಮಡಿಯುವರು
ಭೀಮಾರ್ಜುನೀರ್ವರಾ ಬಾಹುಬಲಿ ಶೌರ್ಯವದು
ಕ್ಷತ್ರಿಯರ ನಾಶಕ್ಕೆ ಕಾರಣವು ಎನಿಸುವವು ॥೮೯೪॥

ಇಂದಿನೀ ರಾತ್ರಿಯಲಿ ತ್ರಿಪುರಹರ ತ್ರಿನೇತ್ರನು
ತ್ರಿಶೂಲವನು ಧರಿಸುತಲಿ ರೌದ್ರದಲಿ ಭೀಕರದಿ
ವೃಷಭವನು ಏರುತಲಿ ದಕ್ಷಿಣದ ದೆಸೆಯನ್ನು
ನೋಡುತಿಹ ಕನಸನ್ನು ನೀಕಾಂಬೆ ಎಂದಿಹನು ॥೮೯೫॥

ಈ ಕನಸು ಮುಂದಕ್ಕೆ ಸಂಭವಿಪ ಉತ್ಪಾತ
ಘೋರತರ ಕಷ್ಟದ ಪರಂಪರೆಯು ಸೂಚಿಪುದು
ಅಂಜದಿರು ಧರ್ಮಜನೆ ಕಾಲವನು ದೈವವನು
ಮೀರಲಿಕೆ ಜಗದೊಳಗೆ ಆರಿಗೂ ಅಸದಳವು ॥೪೯೬॥

ದೇವನಾ ಇಚ್ಛೆಯಲಿ ಎಲ್ಲವೂ ನಡೆಯುವುದು
ಚಿಂತೆಯನು ಮಾಡದಲೆ ಧೈರ್ಯದಲಿ ಸ್ಥೈರ್ಯದಲಿ
ಧರ್ಮವಲಿ ರಾಜ್ಯವನು ಆಳುವುದು ಎನ್ನುತಲಿ
ವರವ್ಯಾಸ ತೆರಳಿದನು ಕೈಲಾಸ ಪರ್ವತಕೆ ॥೪೯೭॥

ಬಳಿಕಲಾ ಧರ್ಮಜನು ದ್ವೈಪಾಯನುಸುರಿರುವ
ಮುಂದಕ್ಕೆ ಸಂಭವಿಪ ಭೀಕರದ ನಾಶವನು
ನೆನೆಯುತಲಿ ಮುನಿವರನ ನುಡಿಗಳವು ಎಂದಿಗೂ
ಸುಳ್ಳಾಗವೆನ್ನುತಲಿ ಕಳವಳದಿ ಚಿಂತಿಸುತ ॥೪೯೮॥

ಅನುಜರನು ಕರೆಸುತಲಿ ಸೋದರರೆ ಘನಮಹಿಮ
ಮುನಿವರರ ವ್ಯಾಸರಾ ನುಡಿಗಳನು ಕೇಳಿದಿರಿ
ಎನ್ನಯಾ ಕಾರಣದಿ ಘೋರತರ ಯುದ್ಧವದು
ಸಂಭವಿಸಿ ಅಗಣಿತದ ಕ್ಷತ್ರಿಯರು ಸಾಯುವರು ॥೪೯೯॥

ಈ ಪರಿಯ ಪಾಪಕ್ಕೆ ಕಾರಣನು ನಾನಾಗಿ
ಬದುಕುವದಕಿಂತಲೂ ಸಾಯುವದೆ ಲೇಸೆಂದು
ಈ ಕ್ಷಣದಿ ಪ್ರಾಣವನು ತೊರೆಯುವೆನು ಎನ್ನುತಲಿ
ಧರ್ಮಜನು ನುಡಿಯುತಿರೇ ಅರ್ಜುನನು ನುಡಿದಿಹನು ॥೫೦೦॥

ಧರ್ಮಜನೆ ದುರ್ವಿಧಿಯ ತಪ್ಪಿಸುವರಾರಿಲ್ಲ
ವಿಧಿಲಿಖಿತವಳಿಸುವರು ಜಗದೊಳಗೆ ಆರಿಲ್ಲ
ಈ ಪರಿ ವಿಪತ್ತಿನಲಿ ಧೈರ್ಯದಲಿ ಸ್ಥೈರ್ಯದಲಿ
ಸುವಿವೇಕ ಬುದ್ಧಿಯಲಿ ಕರ್ತವ್ಯಗೈಯ್ಯುವುದು ॥೫೦೧॥

ಈ ಆತ್ಮಹತ್ಯೆಯಾ ಬುದ್ಧಿಯನು ತೊರೆಯುತಲಿ
ಸೂಕ್ತವಿಹ ಮಾರ್ಗದಲಿ ಧರ್ಮದಲಿ ನಡೆಯುವುದು
ಎನ್ನುತಲಿ ಫಲಗುಣನು ನುಡಿಯುತಿರೆ ಯಮಸುತನು
ಕಿಲಕ್ಷಣವು ಯೋಚಿಸುತ ಪುನರಪಿಯು ನುಡಿದಿಹನು ॥೫೦೨॥

ಸೋದರರೆ ಎನ್ನಯ ಪ್ರತಿಜ್ಞೆಯನು ಕೇಳುವುದು
ನಾನಿನ್ನು ನಿಮ್ಮನ್ನು ಆರನ್ನು ನೋಯಿಸೆನು
ನೃಪರುಗಳನೊಬ್ಬರನು ದ್ವೇಷಿಸೆನು ಹಿಂಸಿಸೆನು
ಪ್ರಜೆಗಳನು ಸಕಲರನು ಪ್ರೀತಿಯಲಿ ಪೊರೆಯುವೆನು ॥೫೦೩॥

ಆವುದೇ ಕಾರಣದಿ ಹಗೆತನವ ಮಾಡದಲೆ
ಸೌಹಾರ್ದ ಪ್ರೇಮದಲಿ ಸಖ್ಯದಲಿ ನಡೆಯುತಲಿ
ಘನಘೋರ ಯುದ್ಧವದು ಸಂಭವಿಸದಿರದಂತೆ
ಧರ್ಮದಲಿ ರಾಜ್ಯದಾ ಪಾಲನೆಯ ಗೈಯ್ಯುವೆನು ॥೫೦೪॥

ಈ ಪರಿಯೆ ನಡೆಯುತಿರೆ ಧರ್ಮಜನು ಯುದ್ಧಕ್ಕೆ
ಕಾರಣನು ಎಂಬುವಾ ಅಪವಾದ ತಪ್ಪುವುದು
ಎನ್ನುತಲಿ ಯಮಸುತನು ನುಡಿಯುತಿರೆ ಸೋದರರು
ಸಂತಸದಿ ತಮ್ಮಯಾ ಅರಮನೆಗೆ ತೆರಳಿದರು ॥೫೦೫॥

**ಮಯಸಭೆಯ ಸರಸಿಯನು ಅರಿಯದಲೆ ಬೀಳುತಿರೆ ।**
**ದ್ರೌಪದಿಯು ನಗುತಲಿರೆ ಕೌರವನು ನೊಂದಿಹನು ॥**

ಜನಮೇಜಯ ಕ್ಷಿತಿಪ ಮುನ್ನಿನಲಿ ಪೇಳ್ದಂತೆ
ಯಜ್ಞಕ್ಕೆ ಬಂದಿರ್ದ ನೃಪರುಗಳು ತೆರಳುತಿರೆ
ಕೌರವನು ಸೌಬಲನು ಮಯಸಭೆಯ ಸೊಬಗನ್ನು
ಸೌಂದರ್ಯ ವೀಕ್ಷಿಸುತ ಕೆಲಕಾಲವಿರ್ದಿಹರು ॥೫೦೬॥

ಮುತ್ತುಗಳ ರತ್ನಗಳ ವಜ್ರಗಳ ಭಿತ್ತಿಗಳ
ನೃತ್ಯಗಳ ಭಂಗಿಗಳ ಚಿತ್ರನೆಯ ಸ್ತಂಭಗಳ
ಥಳಥಳನೆ ಹೊಳೆಯುತಿಹ ಸಭೆಯನ್ನು ನೋಡುತಲಿ
ಕೌರವನು ಸೌಬಲನು ಅಚ್ಚರಿಯಗೊಂಡಿಹರು ॥೫೦೭॥

ಮಂದಿರದಿ ಅಲೆಯುತಲಿ ಶಿಲ್ಪದಾ ಸೊಬಗನ್ನು
ದುರ್ಯೋಧನೀಕ್ಷಿಸುತ ಬೆರಗಿನಲಿ ನಡೆದಿರಲು
ಆ ಸಭೆಯ ಮಧ್ಯದಲಿ ಶುಭ್ರದಾ ಸಲಿಲದಲಿ
ಹೊಳೆಹೊಳೆವ ಕೊಳದಂತೆ ತೋರುತಿಹ ಸುಂದರದ ॥೫೦೮॥

ಸ್ಫಟಿಕದಾ ಸ್ಥಳದೆಡೆಗೆ ಮೆಲ್ಲನೆ ಬರುತಿರಲು
ಕೊಳವೆಂದು ಭಾವಿಸುತ ತೊಟ್ಟಿರುವ ಧೋತ್ರವನು
ಮೊಳಕಾಲ ಮೇಲಕ್ಕೆ ಎತ್ತುತಲಿ ನಡೆಯುತಿರೆ
ಕಲ್ಲನ್ನು ಕಾಣುತಲಿ ಪೆಚ್ಚಾಗಿ ನಿಂತಿಹನು ॥೫೦೯॥

ಹುಚ್ಚಾಗಿ ನಿಲ್ಲುತಲಿ ಕಲ್ಲಿನಲಿ ತನ್ನಯಾ
ಪ್ರತಿಬಿಂಬ ಕಾಣುತಲಿ ಹುಚ್ಚುಮುಖ ನೋಡುತಲಿ
ತನ್ನಯಾ ಅಜ್ಞಾನ ಮೂರ್ಖತನ ನೆನೆಯುತಲಿ
ಮನದೊಳಗೆ ಕುಂದಿಹನು ನೊಂದಿಹನು ಬೆಂದಿಹನು ॥೫೧೦॥

ನಿಸ್ತೇಜವದನದಲಿ ಖಿನ್ನದಾ ಮನದಿಂದ
ಮುಂದಕ್ಕೆ ಸಾಗುತಿರೆ ಮೊದಲಿನಾ ಪರಿಯಲ್ಲಿ
ಸುಂದರ ಸರೋವರವ ಕಾಣುತಲಿ ಕೌರವನು
ಇದು ರತ್ನಖಚಿತದಾ ಕೊಳವೆಂದು ಭಾವಿಸುತ ॥೫೧೧॥

ಉಟ್ಟಿರುವ ಧೋತ್ರವನು ಮೇಲಕ್ಕೆ ಎತ್ತದೆಯೆ
ಭರದಿಂದ ನಿಜವಿರುವ ಕೊಳದಲ್ಲಿ ಕಾಲಿಡಲು
ಕೆಸರಿನಲಿ ಕೊಸರುತಲಿ ಮುಗ್ಗರಿಸಿ ಕಂಪಿಸುತ
ನೀರಿನೊಳು ಮುಳುಗುತಲಿ ಬಿದ್ದಿಹನು ನೆನೆಯುತಲಿ ||೯೧೨||

ತೊಟ್ಟಿರುವ ವಸ್ತ್ರಗಳು ಸಕಲವೂ ನನೆಯುತಲಿ
ಶೀತಲದ ಚಳಿಯಲ್ಲಿ ಕೌರವನು ನಡುಗುತಿರೆ
ಸುತ್ತಲೂ ನಿಂತಿರುವ ಭೀಮಾರ್ಜುನಾದಿಗಳು
ದ್ರೌಪದಿಯು ಘೊಳ್ಳೆಂದು ಗಹಗಹಿಸಿ ನಕ್ಕಿಹರು ||೯೧೩||

ಸಾವಿರದ ಅಲಗುಗಳು ಹೃದಯವನು ಇರಿದಂತೆ
ಕೌರವನು ನೋವಿನಲಿ ತಾಪದಲಿ ನವೆಯುತಿರೆ
ಧರ್ಮಜನ ಆಜ್ಞೆಯಲಿ ಸೇವಕರು ಹೊಸವಸ್ತ್ರ
ಈಯುತಿರೆ ಕೌರವನು ಧರಿಸುತಲಿ ನಡೆದಿಹನು ||೯೧೪||

ಮಾನಧನನಾಗಿರುವ ಕೌರವನು ಕುರುಪತಿಯು
ಅಪಮಾನ ಸಹಿಸದೆಯೆ ಹೊರಹೋಗಬೇಕೆಂದು
ಎದುರಿನಲಿ ಕಾಣುತಿಹ ಬಾಗಿಲಕೆ ಧಾವಿಸಲು
ಬಾಗಿಲದ ಪರಿಯಲ್ಲಿ ತೋರುತಿಹ ಗೋಡೆಯಲಿ ||೯೧೫||

ತಲೆಬಡಿದು ಬುಗುಟೆದ್ದು ಮೂರ್ಛೆಯನು ಹೊಂದುತಲಿ
ಬೀಳುತಲಿ ಏಳುತಲಿ ಮುಂದಕ್ಕೆ ಸಾಗುತಲಿ
ಕೃತಕವಿದು ಬಾಗಿಲವು ಎನ್ನುತಲಿ ಸಾಗುತಿರೆ
ಹೊಸ್ತಿಲವ ನೆಡಹುತಲಿ ಪುನರಪಿಯು ಬಿದ್ದಿಹನು ||೯೧೬||

ಮತ್ತೊಮ್ಮೆ ಭೀಮಾರ್ಜುನಾದಿಗಳು ದ್ರೌಪದಿಯು
ಕೌರವನ ನೋಡುತಲಿ ಅಂಧನಾ ಮಗನಿವನು
ಅಂಧನೇ ಇಹನೆಂದು ಗಹಗಹಿಸಿ ನಗುತಿರಲು
ಕೌರವನ ರಕುತವದು ತಳಮಳದಿ ಕುದಿಹುದು ||೯೧೭||

ಆ ಮಯನ ಸಭೆಯೊಳಗೆ ಧೋತ್ರವನು ಕೌರವನು
ಮೊಳಕಾಲ ಮ್ಯಾಲಕ್ಕೆ ಎತ್ತುತಲಿ ನಡೆಯುತಿರೆ
ದ್ರೌಪದಿಯು ನೋಡುತಲಿ ಘೊಳ್ಳೆಂದು ನಗುತಿರಲು
ಕೌರವನು ಕೋಪದಲಿ ನಖಶಿಖದಿ ಉರಿದಿಹನು ||೯೧೮||

ದ್ವೇಷದಾ ಬೀಜವದು ಧರ್ಮಜನ ಭೂಮಿಯಲಿ
ಬಿತ್ತುತಲಿ ಭೀಮನಾ ನಗೆಯಲ್ಲಿ ಅಂಕುರಿಸಿ
ಅರ್ಜುನನ ನೀರಿನಲಿ ಮೊಳಕೆಯದು ಒಡೆಯುತಲಿ
ದ್ರೌಪದಿಯ ಹಾಸ್ಯದಲಿ ಫಲಪಕ್ವವಾಗಿಹುದು ||೯೧೯||

ಈ ಪರಿಯ ಅಪಮಾನವಾಗುತಿರೆ ಮಾನನಿಧಿ
ಕೌರವನು ಮನದೊಳಗೆ ಕಳವಳವಗೊಳ್ಳುತಲಿ
ನೋಯುತಲಿ ನವೆಯುತಲಿ ಧರ್ಮಜನ ಆಜ್ಞೆಯನು
ಕೊಳ್ಳುತಲಿ ಗಜಪುರಕೆ ಮರಳಿದನು ಖಿನ್ನದಲಿ ||೯೨೦||

ಪಾಂಡವರ ಅಭ್ಯುದಯ ವೈಭವದ ಸಂಪದವ
ಯಜ್ಞದಲಿ ಧರ್ಮಜಗೆ ಜಗದಖಿಲ ನೃಪರುಗಳು
ನಮಿಸುತಲಿ ಕಾಣಿಕೆಯ ನೀಯುತಿಹ ದೃಶ್ಯಗಳ
ಮನದೊಳಗೆ ನೆನೆಯುತಲಿ ಕೌರವನು ನೊಂದಿಹನು ||೯೨೧||

**ಕರೆಸುವುದು ಧರ್ಮಜನ ದ್ಯೂತದಲಿ ಗೆಲ್ಲುವೆನು |**
**ಎನ್ನುತಲಿ ಆ ಶಕುನಿ ಕೌರವಗೆ ನುಡಿದಿಹನು ||**

ಈ ಪರಿಯೆ ಕೌರವನು ಚಿಂತಿಸುತಲಿರುತಿರಲು
ಆ ಶಕುನಿ ನುಡಿಸಿದೊಡೆ ನುಡಿಯದೇ ಇರುತಿರಲು
ಕ್ಷಣಕ್ಷಣದಿ ನಿಟ್ಟುಸಿರ ಬಿಡುತಲಿಹ ಕೌರವನ
ಎತ್ತರದ ದನಿಯಲ್ಲಿ ಕೌರವನ ಕೇಳಿದನು ೯೨೨||

ನುಡಿಸಿದೊಡೆ ನುಡಿಯದಿಹ ಕಾರಣವನುಸುರುವುದು
ಮುಖವೇಕೆ ಬಾಡಿಹುದು ನಿಸ್ತೇಜವಾಗಿಹುದು
ಮನದೊಳಿಹ ದುಗುಡವನು ಚಿಂತೆಯಾ ಕಾರಣವ
ಹೇಳುವುದು ಎನ್ನುತಲಿ ಸೌಬಲನು ನುಡಿದಿಹನು ||೯೨೩||

ಮಾತುಲನೆ ಯಮಸುತನ ಫಲಗುಣನ ಬಲದಿಂದ
ಧರ್ಮಜನು ಜಗಸಾರ್ವಭೌಮನೆಂದೆನಿಸಿಹನು
ದೇವೇಂದ್ರಗೈದಿರುವ ಯಜ್ಞಕ್ಕೆ ಸಮನಿರುವ
ರಾಜಸೂಯಾಧ್ವರವ ಧರ್ಮಜನು ಗೈದಿಹರು ||೯೨೪||

ಸರಿಸಮರದಾಯಾದಿ ಬಂಧುಗಳ ವೈಭವವ
ಕಾಣುತಲಿ ಹೃದಯವದು ದ್ವೇಷದಲಿ ಉರಿಯುತಿದೆ
ಬೇಸಿಗೆಯ ಕಾಲದಲಿ ಬತ್ತುವಾ ಕೊಳದಂತೆ
ಮಾತ್ಸರ್ಯರವಿಯಿಂದ ನಿರ್ವಿಣ್ಣನಾಗಿಹೆನು ||೯೨೫||

ಸೌಬಲನೆ ಆ ಕೃಷ್ಣ ಶಿಶುಪಾಲ ವೀರನನು
ಸಂಹಾರ ಗೈಯ್ಯುತಿರೆ ಅರಸರಲಿ ಒಬ್ಬನೂ
ಕೃಷ್ಣನನು ದಂಡಿಸದೆ ಪಾಂಡವರ್ಗೆ ಹೆದರುತಲಿ
ಮೌನದಲಿ ಹೇಡಿಗಳ ತೆರದಲ್ಲಿ ಇರ್ದಿಹರು ||೯೨೬||

ಜಗದಖಿಲ ನೃಪರುಗಳು ಧರ್ಮಜನ ಚರಣಕ್ಕೆ
ಸಾಷ್ಟಾಂಗವೆರಗುತಲಿ ಕಪ್ಪಗಳ ಕಾಣಿಕೆಯ
ಈಯುತಿಹ ದೃಶ್ಯಗಳ ಮನದೊಳಗೆ ನೆನೆಯುತಲಿ
ಮಾತ್ಸರ್ಯದಾವಾಗ್ನಿ ಹೃದಯವನು ಸುಡುತಲಿದೆ ||೯೨೭||

ಮಾತುಲನೆ ನಾನಿನ್ನು ಜಗದೊಳಗೆ ಜೀವಿಸೆನು
ಮಾನನಿಧಿ ನಾನಿನ್ನು ಅಪಮಾನ ಸಹಿಸದಲೆ
ವಿಷವನ್ನು ಸೇವಿಸುತ ಇಲ್ಲವೇ ಅಗ್ನಿಯನು
ಧುಮುಕುತಲಿ ಪ್ರಾಣವನು ತ್ಯಜಿಸುವೆನು ಎಂದಿಹನು ॥೯೨೮॥

ನದಿಗಳಲಿ ಸಾಗರದಿ ಧುಮುಕುತಲಿ ಸಾಯುವೆನು
ಕಾನನದಿ ಹುಲಿಕರಡಿ ಬಾಯೊಳಗೆ ಬೀಳುವೆನು
ಹಾಳಾದ ಬಾವಿಯಲಿ ಬೀಳುತಲಿ ಸಾಯುವೆನು
ಎನ್ನುತಲಿ ಧೃತರಾಷ್ಟ್ರ ಭೂಪತಿಗೆ ತಿಳುಹುವುದು ॥೯೨೯॥

ಜಗವೆಲ್ಲ ಜಯಿಸುತಲಿ ಸಾರ್ವಭೌಮತ್ವವನು
ಪಡೆಯುವ ಪರಾಕ್ರಮವು ಶೌರ್ಯವದು ಎನಗಿಲ್ಲ
ನೆರವನ್ನು ಈಯುತಿಹ ನೃಪರುಗಳು ಯಾರಿಲ್ಲ
ಕಾರಣದಿ ಸಾಯಲಿಕೆ ನಿಶ್ಚಯವ ಗೈದಿಹೆನು ॥೯೩೦॥

ಕುಂತಿಯಾ ಸುತರುಗಳ ಅಭ್ಯುದಯ ನೋಡಿದೊಡೆ
ಮಾನವನ ಶೌರ್ಯಕ್ಕೆ ಸಾಹಸಕೆ ಯತ್ನಕ್ಕೆ
ಮಿಗಿಲಾಗಿ ದೈವವೇ ಆ ವಿಧಿಯು ಇರುತಿಹುದು
ವಿಧಿಲಿಖಿತ ಮೀರುವದು ಆರಿಗೂ ಅಸದಳವು ॥೯೩೧॥

ಪಾಂಡವರ ಕೊಲ್ಲಲಿಕೆ ಬೆಂಕಿಯನು ಇಕ್ಕುತಲಿ
ವಿಧವಿಧದ ಪರಿಯಲ್ಲಿ ಯತ್ನಗಳ ಗೈದಿಹೆನು
ಆವರೂ ಪಾಂಡವರು ಅಪರಿಮಿತ ಐಶ್ವರ್ಯ
ಅಭ್ಯುದಯ ಕೀರ್ತಿಯಲಿ ಮೆರೆಯುತಲಿ ಇರುತಿಹರು ॥೯೩೨॥

ನಾ ಗೈದ ಯತ್ನಗಳು ವ್ಯರ್ಥಗಳು ಆಗಿಹವು
ಕಾರಣದಿ ಮಾನವಗೆ ಮಿಗಿಲಾಗಿ ವಿಧಿಯಿಹುದು
ಪಾಂಡವರ ವೈಭವವ ನೋಡುತಲಿ ಎನ್ನಯಾ
ಹೃದಯವದು ದ್ವೇಷಾಗ್ನಿ ಕ್ಷಣಕ್ಷಣದಿ ಸುಡುತಲಿದೆ ॥೯೩೩॥

ಪಾಂಡುವಿನ ಸುತರುಗಳು ಜಗಸಾರ್ವಭೌಮರಿರೆ
ಧೃತರಾಷ್ಟ್ರ ಸುತರುಗಳು ನಿರ್ಬಲರು ಆಗಿಹರು
ಆ ಮಯನ ಸಭೆಯನ್ನು ಯಜ್ಞದಾ ವೈಭವವ
ನೋಡುತಲಿ ಹೃದಯವದು ತಳಮಳದಿ ಕುದಿಯುತಿದೆ ॥೯೩೪॥

ಪಾಂಡವರ ವಿಷಯದಲಿ ದ್ವೇಷಾಗ್ನಿ ಹೊತ್ತುತಲಿ
ಭುಗಿಲೆದ್ದು ಉರಿಯುತಲಿ ದೇಹವದು ಸುಡುತಲಿದೆ
ಧೃತರಾಷ್ಟ್ರ ರಾಯಂಗೆ ಈ ವಿಷಯವರುಹುವುದು
ಎನ್ನುತಲಿ ಕೌರವನು ಸೌಬಲಗೆ ನುಡಿದಿಹನು ॥೯೩೫॥

ಕೌರವನೆ ನೀನಿಂತು ಧರ್ಮಜನ ವಿಷಯದಲಿ
ಮತ್ಸರವ ತಾಳುತಲಿ ಚಿಂತೆಯನು ಮಾಡದಿರು
ಪಾಂಡವರ ಕೊಲ್ಲಲಿಕೆ ವಿಷ ಉರಿಯನಿಕ್ಕುತಲಿ
ಶತಯತ್ನಗೈದರೂ ಜೀವಿಸುತಲಿರುತಿಹರು ॥೯೩೬॥

ದ್ರೌಪದಿಯ ವರಿಸುತಲಿ ದ್ರುಪದನಾ ಸಖ್ಯವನು
ದೊರಕಿಸುತ ಜಗದಖಿಲ ನೃಪರನ್ನು ಜಯಿಸಿಹರು
ಹಕ್ಕಿನಲಿ ದೊರೆತಿರುವ ರಾಜ್ಯವನು ವಿಸ್ತರಿಸಿ
ರಾಜಸೂಯಾಧ್ವರವ ಗೈದಿಹರು ವೈಭವದಿ ॥೯೩೭॥

ಪಾಂಡವರ ಕಾನನವ ದಹಿಸುತಿಹ ಸಮಯದಲಿ
ಮಯನನ್ನು ರಕ್ಷಿಸುತ ಗಾಂಡಿವವ ಧನುವನ್ನು
ಅಕ್ಷಯದ ಬಾಣಗಳ ಪಡೆಯುತಲಿ ಅರ್ಜುನನು
ಜಗದಖಿಲ ರಾಜರನು ಜಯಿಸಿಹನು ಶೌರ್ಯದಲಿ ॥೯೩೮॥

ಆ ಮಯನು ಪಾಂಡವರಿಗೋಸುಗವೆ ಯಾಗಕ್ಕೆ
ಭವ್ಯಮಿಹ ಅದ್ಭುತದ ಸಭೆಯನ್ನು ರಚಿಸಿಹನು
ನೀನಿದಕೆ ಚಿಂತಿಸಲು ಕಾರಣವು ಆವುದಿದೆ
ಪಾಂಡವರು ನಿನಗೇನು ಅನ್ಯಾಯ ಮಾಡಿಹರು ॥೯೩೯॥

ಕೌರವನು ನುಡಿಯದಲೆ ಮೌನದಲಿ ಇರುತಿರಲು
ನಿನಗಾರು ಬಂಧುಮಿತ್ರರಿಲ್ಲೆನ್ನುತಿಹೆ
ನಾನೆಂದು ಇದಕೊಪ್ಪ ಅದ್ಭುತ ಪರಾಕ್ರಮಿಯ
ಶತಕೊಬ್ಬ ಕಡಿಮೆಯಾ ಬಂಧುಗಳು ನಿನಗಿಹರು ॥೯೪೦॥

ಗುರುದ್ರೋಣ ಗುರುಸುತನು ವರಕೃಪನು ಕಲಿಕರ್ಣ
ಸೋಮದತ್ತ ಮೊದಲಾದ ವೀರಾಧಿ ವೀರರು
ನನ್ನಯಾ ಬಂಧುಗಳ ಸಹಿತದಲಿ ನಾವಿಹೆವು
ನೆರವನ್ನು ಈಯುವೆವು ದಿಗ್ವಿಜಯಗೈಯ್ಯುವುದು ॥೦೪೧॥

ಕೌರವನು ಕೇಳುತಲಿ ಸಂತಸದಿ ಸೌಬಲಗೆ
ಈ ಸಕಲ ಮಿತ್ರರೊಗಳೊಡಗೂಡಿ ಸಾಗುತಲಿ
ಜಗಸಾರ್ವಭೌಮರೆಂದೆನಿಸಿರುವ ಪಾಂಡವರ
ಜಯಿಸುತಲಿ ಸಾಮ್ರಾಜ್ಯವೆಲ್ಲವನು ಕೊಳ್ಳುವೆನು ॥೯೪೨॥

ಪಾಂಡವರ ಐಶ್ವರ್ಯ ವೈಭವದ ಮಯಸಭೆಯು
ಸಾಮ್ರಾಜ್ಯವೆಲ್ಲವೂ ನನ್ನದೇ ಆಗುತಲಿ
ಜಗಸಾರ್ವಭೌಮನೆಂದೆನಿಸುತಲಿ ಮೆರೆಯುತಲಿ
ಪಾಂಡವರ ಗರ್ವವನು ಮುರಿಯುವೆನು ಎಂದಿಹನು ॥೯೪೩॥

ಕೌರವನೆ ಧರ್ಮಜಗೆ ಜೂಜಿನಾ ಹುಚ್ಚಿಹುದಂ
ಜೂಜನ್ನು ಆಡುವಾ ಹಂಬಲವು ಬಹಳಿಹುದು
ಆದೊಡೆಯು ಕೌಶಲವು ಜಾಣ್ಮೆಯದು ಎನಿತಿಲ್ಲ
ಆಟಕ್ಕೆ ಕರೆದೊಡೆಯು ತಪ್ಪದೇ ಒಪ್ಪುವನು ॥೯೪೪॥

ದ್ಯೂತದಲಿ ನಿಸ್ಸೀಮ ನಿಷ್ಣಾತನಾನಿಹೆನು
ಲೋಕದಲಿ ಎನ್ನಸಮ ಕುಶಲಮತಿ ಆರಿಲ್ಲ
ಧರ್ಮಜಗೆ ದ್ಯೂತಕ್ಕೆ ಆಮಂತ್ರಣೀಯುತಲಿ
ನಯದಿಂದ ಗಜಪುರಕೆ ಪ್ರೀತಿಯಲಿ ಕರೆಸುವುದು ॥೯೪೫॥

ದ್ಯೂತದಲಿ ನಿನ್ನಪರ ಆಡುತಲಿ ಧರ್ಮಜನ
ಸೋಲಿಸುತ ಪಾಂಡವರ ಧನಕನಕ ಐಶ್ವರ್ಯ
ಸಾಮ್ರಾಜ್ಯವೆಲ್ಲವನು ಜಯಿಸುತಲಿ ಪಾಂಡವರ
ನಿನ್ನಯಾ ಸೇವಕರ ಮಾಡುವೆನು ಎಂದಿಹನು ॥೯೪೬॥

ಮೊದಲಿಂಗೆ ಧೃತರಾಷ್ಟ್ರರಾಯಂಗೆ ವಿಷಯವನು
ಅರುಹುತಲಿ ಗೌಪ್ಯದಲಿ ಒಪ್ಪಿಗೆಯ ಪಡೆಯುವುದು
ಸಮ್ಮತಿಯ ನಿತ್ತೊಡೆಯು ಪಾಂಡವರ ರಾಜ್ಯವನು
ಜಯಿಸುತಲಿ ಖಂಡಿತದಿ ನಿನಗೀವೆನೆಂದಿಹನು ॥೯೪೭॥

ಹೇ ಮಾವ ಅಪ್ಪಂಗೆ ಈ ವಿಷಯ ತಿಳಿಸಲಿಕೆ
ಕೌಶಲವು ಚತುರತೆಯು ಎನ್ನೊಳಗೆ ಈಗಿಲ್ಲ
ನೀನೆಯೇ ಬೊಪ್ಪಂಗೆ ಯುಕ್ತಿಯಲಿ ಅರುಹುತಲಿ
ಒಪ್ಪಿಗೆಯ ಪಡೆಯುವುದು ಎಂದಿಹನು ಕೌರವನು ॥೯೪೮॥

**ಪಾಂಡವರ ವೈಭವವ ನೋಡುತಲಿ ಮನದೊಳಗೆ ।**
**ದ್ವೇಷಾಗ್ನಿ ಹೊತ್ತಿಹುದು ಎಂದಿಹನು ಕೌರವನು ॥**

ಆ ಶಕುನಿ ಕೌರವನ ಸಹಿತದಲಿ ಧೃತರಾಷ್ಟ್ರ
ರಾಯನಾ ಬಳಿಬಂದು ನಯವಾಗಿ ನಮಿಸುತಲಿ
ನಿನ್ನಯಾ ಸುಕುಮಾರ ಸುಯೋಧನ ಸುಮಮಣಿಯು
ಅವುದೋ ಚಿಂತೆಯಲಿ ಮುಳುಗುತಲಿ ತೊಳಲುತಲಿ ॥೯೪೯॥

ಮುಖವೆಲ್ಲ ಬಾಡಿಹುದು ನಿಸ್ತೇಜನಾಗಿಹುದು
ಬತ್ತಿಹುದು ಕರಗಳವು ಸೊಪ್ಪಾಗಿ ಸೊರಗಿಹನು
ನಿನಸುತನ ಚಿಂತೆಯದು ಅವುದಿದೆ ಎಂಬುದನು
ಅರಿಯುವುದು ನಿನ್ನಯಾ ಕರ್ತವ್ಯವಿರುತಿಹುದು ॥೯೫೦॥

ಎನ್ನಯಾ ಸುಕುಮಾರ ಮುದ್ದಿನ ಸುಯೋಧನನೆ
ನೀನಾವ ಚಿಂತೆಯಲಿ ಮುಳುಗುತಲಿ ಬೆಂದಿರುವೆ
ಬಾಡಿರುವೆ ಬತ್ತಿರುವೆ ಸೊರಗಿರುವೆ ಕೊರಗಿರುವೆ
ಮನದೊಳಿಹ ದುಗುಡವನು ತಿಳಿಸುವುದು ಎಂದಿಹನು ॥೯೫೧॥

ನೂರಕ್ಕೆ ಒಂದೂನ ಸೋದರರು ನಿನಗಿಹರು
ಸಕಲರೂ ನಿನ್ನನ್ನು ಪ್ರೇಮದಲಿ ನೋಡುವರು
ನೀ ಜ್ಯೇಷ್ಠಪುತ್ರನಿಹೆ ಈ ಸಕಲ ಸಾಮ್ರಾಜ್ಯ
ಐಶ್ವರ್ಯಕೆಲ್ಲಕೂ ಅಧಿಪತಿಯು ನೀನಿರುವೆ ॥೯೫೨॥

ಹೊಳೆಹೊಳೆವ ವಸ್ತ್ರಗಳ ವಜ್ರಗಳ ರತ್ನಗಳ
ಮಣಿಮುಕುಟ ಹಾರಗಳು ಧರಿಸಲಿಕೆ ನಿನಗಿಹವು
ಷಡ್ರಸದ ಪಕ್ವಾನ್ನ ಭೋಜನವ ಸವಿಯುತಿಹೆ
ಸ್ವರ್ಗದಾ ಸೌಂದರ್ಯ ಚೆಲುವೆಯರು ನಿನಗಿಹರು ॥೯೫೩॥

ವಿಹರಿಸಲು ಉದ್ಯಾನ ಮಂಡಪಗಳಿರುತಿಹವು
ಇಂದ್ರಂಗೆ ಸರಿಸಮದ ವೈಭವವು ನಿನಗಿಹುದು
ಸುಮ್ಮನೇ ಕಡುಹೀನ ದರಿದ್ರನಾ ಪರಿಯಲ್ಲಿ
ನೀನೇಕೆ ಚಿಂತಿಸುವೆ ಹೇಳೆಂದ ಧೃತರಾಷ್ಟ್ರ ॥೯೫೪॥

ಅಹುದಹುದು ಬೊಪ್ಪನೇ ಉಣ್ಣುತಲಿ ತಿನ್ನುತಲಿ
ಒಡವೆಗಳ ಧರಿಸುತಲಿ ಭೋಗಿಸುತಲಿರುತಿಹೆನು
ಆದೊಡೆಯು ಶತ್ರುಗಳ ಅಭ್ಯುದಯಐಶ್ವರ್ಯ
ವೈಭವದ ದಾವಾಗ್ನಿ ಹೃದಯವನು ಸುಡುತಿಹುದು ॥೯೫೫॥

ಧರ್ಮಜನು ಗೈದಿರುವ ಆ ರಾಜಸೂಯವನು
ನೋಡುತಲಿ ಎನ್ನಯಾ ಹೃದಯವಿದು ಕುದಿಯುತಿದೆ
ಮತ್ಸರದ ಜ್ವಾಲೆಯದು ಪ್ರಜ್ವಲಿಸಿ ಉರಿಯುತಲಿ
ದೇಹದಾ ಅಂಗಾಂಗವೆಲ್ಲವನು ದಹಿಸುತಿದೆ ॥೯೫೬॥

ಜಗದಖಿಲ ನೃಪರುಗಳು ಹೇರಳದ ಧನಕನಕ
ರತ್ನಗಳ ವಜ್ರಗಳ ಸ್ವರ್ಣದಾ ಒಡವೆಗಳ
ಸಾವಿರದ ಆನೆಗಳ ಕುದುರೆಗಳ ರಥಗಳನು
ಕಪ್ಪಗಳ ಕಾಣಿಕೆಯ ಧರ್ಮಜಗೆ ಇತ್ತಿಹರು ॥೯೫೭॥

ಲಕ್ಷೋಪಲಕ್ಷದಲಿ ಆಗಣಿತದ ದ್ವಿಜರುಗಳು
ಅರಸುಗಳು ಮಂತ್ರಿಗಳು ಪುರಜನರು ಪ್ರಜೆಗಳಾ
ಕೋಟಿಗಳ ಸಂಖ್ಯೆಯಲಿ ಮೃಷ್ಟಾನ್ನ ಭೋಜನದಿ
ನಿತ್ಯವೂ ಸವಿಯುತಲಿ ಇರ್ದಿಹುದು ಕಂಡಿಹೆನು ॥೯೫೮॥

ಸಾವಿರದ ಸ್ವರ್ಣದಾ ಕುಂಭಗಳ ತುಂಬುತಲಿ
ತಂದಿರ್ದ ಸಾಗರದ ನದಿಗಳಾ ಜಲವನ್ನು
ಶ್ರೀಕೃಷ್ಣ ಶಂಖದಲಿ ಕೊಳ್ಳುತಲಿ ಧರ್ಮಜಗೆ
ಅಭಿಷೇಕ ಗೈದುದನು ಕಣ್ಣಾರೆ ಕಂಡಿಹೆನು ॥೯೫೯॥

ಅಗಣಿತದ ತಾರೆಗಳ ಮಧ್ಯದಲಿ ಚಂದ್ರಮನು
ಶೋಭಿಸುವ ಪರಿಯಲ್ಲಿ ಅಪರಿಮಿತ ನೃಪರುಗಳ
ಮಧ್ಯದಲಿ ಸಿಂಹಾಸನಾರೂಢನಾಗುತಲಿ
ಮೆರೆದಿರುವ ಧರ್ಮಜನ ಕಣ್ಣಾರೆ ಕಂಡಿಹೆನು ॥೯೬೦॥

ಧರ್ಮಜನ ಬಳಿಯಲ್ಲಿ ನಾ ಕಂಡ ಐಶ್ವರ್ಯ
ಇಂದ್ರನಲಿ ವರುಣನಲಿ ಯಮನಲ್ಲಿ ಕುಬೇರನಲಿ
ಅನ್ಯರೊಳು ಆರಲ್ಲಿ ಎಲ್ಲಿಯೂ ನಾ ಕಾಣೆ
ನೋಡುತಲಿ ಎನ್ನಯಾ ಹೃದಯವಿದು ಉರಿಯುತಿದೆ ॥೯೬೧॥

ಧರ್ಮಜನ ವೈಭವವ ಮರುತಜನ ಹೆಮ್ಮೆಯನು
ಅರ್ಜುನನ ಗರ್ವವನು ಮಾದ್ರಿಜರ ಸಂಭ್ರಮವ
ಕಂಗಳಲಿ ನೋಡುತಲಿ ದ್ವೇಷದಾ ದಾವಾಗ್ನಿ
ಹೊತ್ತುತಲಿ ಪ್ರಜ್ವಲಿಸಿ ದೇಹವನು ಸುಡುತಲಿದೆ ॥೯೬೨॥

ಕುಂತಿಜನ ವೈಭವವ ನೋಡಿದಾ ಕ್ಷಣದಿಂದ
ಶಾಂತಿಯದು ಎನ್ನನ್ನು ತ್ಯಜಿಸುತಲಿ ಹೋಗಿಹುದು
ಸಾವಿರದ ಅಲಗುಗಳು ಹೃದಯವನು ಇರಿಯುವಾ
ಪರಿಯಲ್ಲಿ ಯಾತನೆಯ ಅನುಭವಿಸುತಿರುತಿಹೆನು ॥೯೬೩॥

**ಧರ್ಮಜನ ಕರೆಸಿದೊಡೆ ದ್ಯೂತದಲಿ ಜಯಿಸುತಲಿ।**
**ರಾಜ್ಯವನು ನಿನಗೀವೆನೆಂದಿಹನು ಆ ಶಕುನಿ ॥**

ಆ ಕ್ಷಣದಿ ಸೌಬಲನು ನೀನೇಕೆ ಚಿಂತಿಸುವೆ
ಧರ್ಮಜನ ರಾಜ್ಯವನು ಐಶ್ವರ್ಯವೆಲ್ಲವನು
ಅವುದೂ ಕಷ್ಟವದು ಇಲ್ಲದೆಯೆ ಸುಲಭದಲಿ
ಪಡೆಯುವಾ ಪರಿಯನ್ನು ಹೇಳುವೆನು ಕೇಳುವುದು ॥೯೬೪॥

ಕೌರವನೆ ದ್ಯೂತದಲಿ ಪರಿಣಿತನು ನಾನಿಹೆನು
ನನ್ನ ಸರಿ ನಿಷ್ಣಾತ ಜಗದೊಳಗೆ ಆರಿಲ್ಲ
ದಾಳವನು ಹಾಕುತಲಿ ಸೋಲನ್ನು ಗೆಲುವನ್ನು
ನಿರ್ಧರಿಪ ಕೌಶಲವು ಜಾಣ್ಮೆಯದು ಎನಗುಂಟು ॥೯೬೫॥

ಸರಿಯಾಗಿ ಕವಡೆಗಳ ಒಗೆಯುವಾ ಕೌಶಲವು
ಪಣವನ್ನು ಕಟ್ಟುವಾ ಕಟ್ಟದೇ ಇರುತಿರುವ
ಸಮಯವನು ಅರಿತಿರುವೆ ಕಣ್ಕಟ್ಟು ಮಾಟದಲಿ
ಕವಡೆಯನು ಎಸೆಯುತಲಿ ಜಯಿಸುವಾ ಬಲವುಂಟು ॥೯೬೬॥

ದ್ಯೂತದಲಿ ಧರ್ಮಜಗೆ ಹಂಬಲವು ಬಹಳುಂಟು
ಆಟಕ್ಕೆ ಕರೆದೊಡೆಯು ತಪ್ಪದೇ ಬರುತಿಹನು
ಕುಂತಿಜನ ನೀ ಕರೆಸಿ ಕೊಟ್ಟೊಡೆಯು ಆತನಾ
ರಾಜ್ಯವನು ಸರ್ವವನು ಜಯಿಸುತಲಿ ನಿನಗೀವೆ ॥೯೬೭॥

ನಿಷ್ಕಂಟಕನಾಗುತಲಿ ಪಾಂಡವರ ರಾಜ್ಯವನು
ಸಂಪದವನೆಲ್ಲವನು ಸಂತಸದಿ ಭೋಗಿಪುದು
ಎನ್ನುತಲಿ ಆ ಶಕುನಿ ನುಡಿಯುತಿರೆ ಕೌರವನು
ಧೃತರಾಷ್ಟ್ರರಾಯಂಗೆ ಧೃಢವಾಗಿ ನುಡಿದಿಹನು ॥೯೬೮॥

ಮಹರಾಜ ಎಮ್ಮ ಈ ಮಾತುಲನು ಸೌಬಲನು
ದ್ಯೂತದಲಿ ನಿಶ್ಚಯದಿ ನಿಷ್ಣಾತನಿರುತಿಹನು
ಧರ್ಮಜನ ರಾಜ್ಯವನು ಐಶ್ವರ್ಯವೆಲ್ಲವನು
ಕಷ್ಟವದು ಇಲ್ಲದೆಯೆ ಜಯಿಸುತಲಿ ನಮಗೀವ ॥೯೬೯॥

ದ್ಯೂತವನು ಆಡಲಿಕೆ ಧರ್ಮಜನ ಕರೆಸುವುದು
ಧರ್ಮಜನು ಆಡಲಿಕೆ ಸಂತಸದಿ ಒಪ್ಪುವನು
ಯುದ್ಧವದು ಇಲ್ಲದೆಯೆ ಸಾಮ್ರಾಜ್ಯ ದೊರೆಯುವುದು
ತಪ್ಪದೇ ಅಪ್ಪಣೆಯ ನೀಯುವುದು ಎಂದಿಹನು ॥೯೭೦॥

**ಬಿಡುಮಗನೆ ಕೇಡುಗರ ಮಾತುಗಳ ಕೇಳದಿರು**
**ಕುಲನಾಶ ಮಾಡದಿರು ಎಂದಿಹನು ಧೃತರಾಷ್ಟ್ರ।**

ಕೌರವನ ನುಡಿಗಳನು ಕೇಳುತಲಿ ಧೃತರಾಷ್ಟ್ರ
ಮನದೊಳಗೆ ನೋಯುತಲಿ ನವೆಯುತಲಿ ನುಡಿದಿಹನು
ಹೇ ಮಗನೆ ಬಂಧುಗಳ ಕೇಡನ್ನು ಬಗೆಯದಿರು
ಈ ಪರಿಯ ದುರ್ಬುದ್ಧಿ ನಿನಗೆಂತು ಬಂದಿಹುದು ॥೯೭೧॥

ನಿಮ್ಮವ್ವೆ ಸುವ್ರತೆಯು ಸಾಧ್ವೀ ಪತಿವ್ರತೆಯು
ಜಗದಖಿಲ ನಾರಿಯರ ಮಸ್ತಕ ಶಿರೋಮಣಿಯು
ಪಾವನಳ ಗಾಂಧಾರಿಯುದರದಲಿ ನೀನೆಂತು
ದುರ್ಬುದ್ಧಿ ಕುಲಗೆಡಿಪ ಕೊಲೆಗಡುಕ ಜನಿಸಿರುವೆ ॥೯೭೨॥

ಮನೆಮುರುಕ ದುಷ್ಟನಾ ಮಾತುಗಳ ಕೇಳುತಲಿ
ಸಕಲರಾ ಬಂಧುಗಳ ಬಾಂಧವರ ಸಹಿತದಲಿ
ನಾಶವನು ಹೊಂದುವಾ ದ್ಯೂತವನು ತ್ಯಜಿಸುವುದು
ಇಲ್ಲದಿರೆ ಕುರುಕುಲವು ನಿರ್ಮೂಲವಾಗುವುದು ॥೯೭೩॥

ಪಾಂಡುವಿನ ನಂದನರು ನಮಗನ್ಯರಿರುತಿಹರೆ
ಒಡಹುಟ್ಟಿದೆನ್ನಯಾ ಸೋದರನ ಸುತರಿಹರು
ನಿನ್ನಯಾ ಬಂಧುಗಳು ಹಕ್ಕಿನಲಿ ದೊರೆತಿರುವ
ರಾಜ್ಯವನು ಆಳಲಿಕೆ ಯೋಗ್ಯನೇ ಇರುತಿಹರು ॥೯೭೪॥

ದ್ಯೂತವಿದು ಮೊದಲಿಂಗೆ ಅಮೃತದಾ ಪರಿಯಲ್ಲಿ
ಸವಿಯಾಗಿ ಸಂತಸವ ಆನಂದವೀಯುವುದು
ಕೊನೆಯಲ್ಲಿ ಕಹಿಯಾಗಿ ವಿಷವಾಗಿ ಪರಿಣಮಿಸಿ
ಬಂಧುಗಳ ಸಹಿತದಲಿ ನಾಶವನು ಗೈಯಬ್ಯವುದು ॥೯೭೫॥

ಬಿಡುಮಗನೆ ಕೇಡಿನಾ ಜೂಜಿನಾ ಹವ್ಯಾಸ
ಶಾಸ್ತ್ರಗಳನರಿತಿರುವ ಪರಿಣಿತನು ನೀನಿರುವೆ
ಕುಲಬೇರ ಕೊಯ್ಯುವೀ ದ್ಯೂತವದು ತ್ಯಜಿಸುವುದಂ
ಎನ್ನುತಲಿ ಧೃತರಾಷ್ಟ್ರ ದೈನ್ಯದಲಿ ನುಡಿದಿಹನು ॥೯೭೬॥

ಪಾಂಡವರ ರಾಜ್ಯವನು ಅಪಹರಣ ಗೈದೊಡೆಯು
ಸ್ವರ್ಗದೊಳು ಇರುತಿರುವ ಎನ್ನಯಾ ಸೋದರನು
ಪಾಂಡುನೃಪ ನೋಯದೇ ಶಪಿಸದೇ ಇರುತಿಹನೆ
ಸರ್ವಥಾ ನಾನಿದಕೆ ಸಮ್ಮತಿಯನೀಯೆನು ॥೯೭೭॥

ಆವುದೇ ವಿಷಯವನು ವಿದುರನನು ಕೇಳದೆಯೆ
ಒಪ್ಪಿಗೆಯು ಇಲ್ಲದೆಯೆ ನಾನೆಂದು ಮಾಡದಿಹೆ
ಮುಂದಣದ ಆಗುಹೋಗುಗಳ ನರಿಯುತಲಿ
ಸಕಲರಿಗೆ ಹಿತವಿರುವ ಸಲಹೆಗಳ ನೀಡುವನು ॥೯೭೮॥

ವಿದುರನಾ ಹೆಸರನ್ನು ಧೃತರಾಷ್ಟ್ರ ನುಡಿಯುತಿರೆ
ಕೌರವನ ಆಕಾಂಕ್ಷೆ ಗೋಪುರವು ಕುಸಿಯುತಲಿ
ಜರ್ಝರಿತನಾಗುತಲಿ ಕಣ್ಣೀರ ಸುರಿಸುತಲಿ
ಗದ್ಗದಿತ ಕಂಠದಲಿ ವ್ಯಸನದಲಿ ನುಡಿದಿಹನು ॥೯೭೯॥

ಜೂಜಿಂಗೆ ಸಮ್ಮತಿಯ ನೀ ನೀಯದಿರ್ದೊಡೆಯು
ನಾ ಪ್ರಾಣ ನೀಗುವೆನು ಖಚಿತವಿದು ನಂಬುವುದು
ಸಾಗರದಿ ಬೀಳುತಲಿ ಗಂಗೆಯಲಿ ಧುಮುಕುತಲಿ
ಪ್ರಾಣವನು ತ್ಯಜಿಸುವೆನು ಎನ್ನುತಲಿ ನುಡಿದಿಹನು ॥೯೮೦॥

ಎನ್ನಯಾ ಹೆಣವನ್ನು ಕಾಣುತಲಿ ಸಂತಸದಿ
ನಿನ್ನಯಾ ಸೋದರನ ಪಾಂಡುವಿನ ಪುತ್ರರು
ಆಕಳ ಸ್ವಭಾವದಾ ಪಾಂಡವರ ಜೊತೆಯಲ್ಲಿ
ಸುಖದಿಂದ ಸಾಮ್ರಾಜ್ಯ ಭೋಗಿಪುದು ಎಂದಿಹನು ॥೯೮೧॥

ನಾವುಗಳು ಭಿಕ್ಷುಕರ ಪರಿಯಲ್ಲಿ ಅಲೆಯುತಲಿ
ಭಿಕ್ಷಾನ್ನ ತಿರಿದುಂಡು ಜೀವನವ ಸಾಗಿಪೆವು
ಇಲ್ಲದಿರೆ ಕಾನನವ ಸೇರುತಲಿ ಘೋರತರ
ಹುಲಿ ಕರಡಿ ಸಿಂಹಗಳ ಬಾಯೊಳಗೆ ಬೀಳುವೆವು ॥೯೮೨॥

ಧರ್ಮವನು ಗಿರ್ಮವನು ನೀತಿಯನು ಕೇಳಲಿಕೆ
ನಾನಿಲ್ಲಿ ಬಂದಿಲ್ಲ ಎಲ್ಲವನು ಅರಿತಿಹೆನು
ಎನಗಿಂತ ಪಾಂಡವರು ನಿಮಗತುಳ ಪ್ರಿಯರಿಹರು
ನಿಮ್ಮೊಳಗೆ ನುಡಿದಿನ್ನು ಫಲವಿಲ್ಲ ಎಂದಿಹನು ॥೯೮೩॥

ಸಾಕಿನ್ನು ಸಾಯಲಿಕೆ ಹೊರಟಿಹೆನು ನಾನಿನ್ನು
ಬೀಳುಕೊಡಿ ಎನ್ನನ್ನು ಎನ್ನುತಲಿ ಕೌರವನು
ವಿಳುತಲಿ ಧೃತರಾಷ್ಟ್ರ ಗಾಂಧಾರಿಗೆರಗುತಲಿ
ಅರಮನೆಯ ತ್ಯಜಿಸುತಲಿ ಹೊರವಂಟ ಭರದಲ್ಲಿ ॥೯೮೪॥

ಕಾದಿರುವ ಸೀಸದಾ ಎರಕವನು ಕಿವಿಯೊಳಗೆ
ಹೊಯ್ದಂತೆ ಈ ಪರಿಯ ಕೌರವನ ಘೋರತರ
ಮಾತುಗಳ ಕೇಳುತಲಿ ಧೃತರಾಷ್ಟ್ರ ಕಳವಳದಿ
ಪುತ್ರನಾ ಮೋಹದಲಿ ಸಿಲುಕುತಲಿ ನುಡಿದಿಹನು ॥೯೮೫॥

**ಸುತಮೋಹ ಜಾಲದಲಿ ಕೊಳಲುತಲಿ ಅಂಧನೃಪ ।**
**ಪಾಂಡವರ ಕರೆತರಲು ವಿದುರನನು ಕರೆಸಿದನು**

ಗಾಂಧಾರಿ ದೇವಿಯೇ ನೀಹೆತ್ತ ಕಡುಪಾಪಿ
ಕುಲನಾಶ ಗೈಯ್ಯುವಾ ನಿನ್ನಯಾ ಮಗನನ್ನು
ಕರೆಯುವುದು ಖಚಿತದಲಿ ಇಲ್ಲದಿರೆ ಸಾಯುವನು
ಅಪಕೀರ್ತಿ ನಮಗೆಂದು ಧೃತರಾಷ್ಟ್ರ ನುಡಿದಿಹನು ॥೯೮೬॥

ಕೇಳುತಲಿ ಆ ಶಕುನಿ ಕೌರವನ ಕರೆತರಲು
ಅಗಣಿತದ ಪರಿಣತರ ಶಿಲ್ಪಿಗಳ ಕರೆಸುತಲಿ
ಸಾವಿರದ ಸ್ತಂಭಗಳ ಸುಂದರದ ಭವ್ಯವಿಹ
ಸಭೆಯನ್ನು ನಿರ್ಮಿಸಲು ಆಜ್ಞೆಯನು ಇತ್ತಿಹನು ॥೯೮೭॥

ಹೊಳೆಹೊಳೆವ ಕನ್ನಡಿಯ ವಜ್ರಗಳ ರತ್ನಗಳ
ವೈಡೂರ್ಯ ಮಾಣಿಕ್ಯ ನೀಲಗಳ ಪಚ್ಚೆಗಳ
ಗೋಮೇಧಿಕಾದಿಗಳ ಕೆತ್ತಿರುವ ಭಿತ್ತಿಗಳ
ದಿವ್ಯವಿಹ ಸಭೆಯನ್ನು ನಿರ್ಮಿಸಲು ತಿಳುಹಿದನು ॥೯೮೮॥

ಪುತ್ರನಾ ಮೋಹದಾ ಬಲೆಯೊಳಗೆ ಸಿಲುಕುತಲಿ
ದ್ಯೂತಕ್ಕೆ ಧರ್ಮಜನ ಕರೆಸಲಿಕೆ ನಿಶ್ಚಯಿಸಿ
ಅಂಧನೃಪ ಧೃತರಾಷ್ಟ್ರ ಸುತನನ್ನು ಸಂತೈಸಿ
ಕಳುಹಿಸುತ ವಿದುರನನು ಕರೆಸಿದನು ಆಕ್ಷಣದಿ ॥೯೮೯॥

ವಿದುರನನು ಕೇಳದೆಯೆ ಸಮ್ಮತಿಯ ಕೊಳ್ಳದೆಯೆ
ಆವುದೇ ಕಾರ್ಯವನು ಗೈಯ್ಯದಿಹ ಧೃತರಾಷ್ಟ್ರ
ಈ ಒಂದು ವಿಷಯದಲಿ ವಿದುರನ ವಿಚಾರಿಸದೆ
ಪುತ್ರನಾ ಮೋಹದಲಿ ನಿರ್ಧಾರಗೈದಿಹನು ॥೯೯೦॥

ಆ ವಿದುರ ಬರುತಿರಲು ಧೃತರಾಷ್ಟ್ರ ನಯದಿಂದ
ಹೇ ವಿದುರ ಪಾಂಡವರು ರಾಜಸೂಯಾಧ್ವರವ
ಅದ್ದೂರಿ ವೈಭವದಿ ಮಾಡುತಲಿ ದಣಿದಿಹರು
ಅವರಿಲ್ಲಿ ಕೆಲಕಾಲ ಸುಖಿಸುವುದು ಸೂಕ್ತವಿದೆ ॥೯೯೧॥

ತಂದೆಯನು ಕಳಕೊಂಡು ತಬ್ಬಲಿಗಳಾಗಿಹರು
ಎಮ್ಮನ್ನು ಉಳಿದನ್ಯ ಬಂಧುಗಳುಯಾರಿಲ್ಲ
ಧರ್ಮಜನು ಇಲ್ಲಿಯೇ ದ್ಯೂತವನು ಆಡುತಲಿ
ಬಂಧುಗಳ ಸಹಿತದಲಿ ರಮಿಸುವುನು ಎಂದಿಹನು ॥೯೯೨॥

**ಕುರುಕುಲದ ನಾಶವನು ಗೈಯ್ಯುವುದು ದ್ಯೂತಮಿದು ।**
**ಎನ್ನುತಲಿ ವರವಿದುರ ನುಡಿದಿಹನು ಭೂಪತಿಗೆ॥**

ದ್ಯೂತದಾ ವಿಷಯವನು ಕೇಳುತಲಿ ಆ ವಿದುರ
ಕಲಿಕಾಲ ಬಂದಿಹದು ಕುರುಕುಲದ ನಾಶಕ್ಕೆ
ದ್ಯೂತಮಿದು ನಾಂದಿಯನು ಹಾಡಿದುದು ಎನ್ನುತಲಿ
ಮನದೊಳಗೆ ಚಿಂತಿಸುತ ದುಗುಡದಲಿ ನುಡಿದಿಹನು ॥೯೯೩॥

ಹೇ ನೃಪತಿ ದ್ಯೂತಮಿದು ಬಂಧುಗಳ ಕಲಹಕ್ಕೆ
ಕಾರಣವು ಎನಿಸುವುದು ನೀನರಿಯದಿರುತಿಹೆಯಾ
ಕುರುಕುಲದ ನಾಶವನು ಗೈಯ್ಯುವೀ ದ್ಯೂತವನು
ನಾನೆಂದು ಒಪ್ಪದಿಹೆ ಒಪ್ಪದಿಹೆ ಎಂದಿಹನು ॥೯೯೪॥

ಕೌರವರ ಪಾಂಡವರ ಕಲಹದಾ ಕಾರಣದಿ
ದ್ವೇಷಾಗ್ನಿ ಹೊತ್ತುತಲಿ ಕುರುಕುಲವ ನೆಲ್ಲವನು
ನಾಶವದು ಮಾಡುವೀ ಘೋರತರ ದ್ಯೂತವನು
ತಪ್ಪಿಪುದು ನಿನ್ನಯಾ ಕರ್ತವ್ಯವೆಂದಿಹನು ॥೯೯೫॥

ಚಿಂತೆಯನು ಮಾಡದಿರು ಹೇತಮ್ಮ ವಿದುರನೆ
ಎಮ್ಮಯಾ ವಿಧಿಲಿಖಿತ ಚನ್ನಾಗಿ ಇರ್ದೊಡೆಯು
ಆವುದೇ ಕಲಹವದು ಸಂಭವಿಸದಿರುತಿಹುದು
ವಿಧಿಮುನಿಯೆ ತಪ್ಪಿಸಲು ಆರಿಗೂ ಅಸದಳವು ॥೯೯೬॥

ಬ್ರಹ್ಮಾಂಡವೆಲ್ಲವಿದು ವಿಧಿವಶವು ಇರುತಿಹುದು
ವಿಧಿಯಂತೆ ಎಲ್ಲವೂ ಜಗದೊಳಗೆ ನಡೆಯುವುದು
ನಾವುಗಳು ನೀವುಗಳು ಬರಿಬೊಂಬೆ ಮಾತ್ರವು
ದೈವದಾ ಇಚ್ಛೆಯುಲಿ ಎಲ್ಲವೂ ನಡೆಯುವುದು ॥೯೯೭॥

ನಾನಿಹೆನು ಭೀಷ್ಮಾದಿ ಗುರುದ್ರೋಣರಿರುತಿಹರು
ಮಕ್ಕಳಲಿ ಆವುದೇ ಕಲಹವದು ಬಾರದಿದೆ
ನೀನೀಗ ಆ ಇಂದ್ರಪ್ರಸ್ಥಕ್ಕೆ ತೆರಳುತಲಿ
ಧರ್ಮಜನ ಕರೆತಹುದು ಎನ್ನುತಲಿ ನುಡಿದಿಹನು ॥೯೯೮॥

ಇದು ಎನ್ನ ನಿಶ್ಚಯದ ಖಂಡಿತ ಅಭಿಪ್ರಾಯವು
ಮರುಮಾತನಾಡದೆಯೆ ಧರ್ಜಜನ ಕರೆತಹುದು
ಎಲ್ಲವನು ದೈವವೇ ಮಾಡಿಸುತಲಿರುತಿಹುದು
ವಿಧಿಯನ್ನು ಮೀರುವದು ಆರಿಗೂ ಅಸದಳವು ॥೯೯೯॥

ದ್ಯೂತವಿಂದು ಯುದ್ಧಕ್ಕೆ ನಾಂದಿಯನು ಹಾಡುವುದು
ಕುರುವಂಶ ನಾಶಕ್ಕೆ ಪ್ರಾರಂಭವಾಯ್ತೆಂದು
ಚಿಂತಿಸುತ ವರವಿದುರ ಕಳವಳದಿ ದುಗುಡದಲಿ
ಭೀಷ್ಮರಾ ಬಳಿಯಲ್ಲಿ ಐತಂದು ನುಡಿದಿಹನು ॥೧೦೦೦॥

ಕೌರವರ ಜೊತೆಯಲ್ಲಿ ಜೂಜನ್ನು ಆಡಲಿಕೆ
ಧರ್ಮಜನ ಕರೆತಹುದು ಎನ್ನುತಲಿ ಅಂಧನೃಪ
ಧೃತರಾಷ್ಟ್ರ ಆದೇಶವಿತ್ತಿಹನು ಎನ್ನುತಿರೆ
ಗಾಂಗೇಯ ದಿಙ್ಮೂಢನಾಗುತಲಿ ನುಡಿದಿಹನು ॥೧೦೦೧॥

ಕುರುಕುಲಕೆ ಪ್ರಳಯದಾ ಕಾಲವಿದು ಬಂದಿಹುದು
ಕುರುವಂಶ ನಿರ್ಮೂಲವಾಗುವುದು ಖಚಿತದಲಿ
ನಾಶದಾ ಸಮಯದಲಿ ವಿಪರೀತ ಬುದ್ಧಿಯದು
ಮೊಳೆಯುವದು ಎಂಬಂತೆ ನೃಪನಾಶೆ ಆಯ್ತೆಂದ ॥೧೦೦೨॥

ನಾವುಗಳು ಕೌರವನ ಅನ್ನಕ್ಕೆ ಹಂಗಿಗರು
ಎದುರಾಗಿ ನುಡಿಯಲಿಕೆ ಸಾಮರ್ಥ್ಯವೆಮಗಿಲ್ಲ
ವಿಧಿಲಿಖಿತವಿರುವಂತೆ ಎಲ್ಲವೂ ನಡೆಯುವುದು
ಪಾಂಡವರ ಕರೆತಹುದು ಎನ್ನುತಲಿ ನುಡಿದಿಹನು ॥೧೦೦೩॥

**ನಿಜಸುತ ಸುಯೋಧನನ ಕರೆಸುತಲಿ ಧೃತರಾಷ್ಟ್ರ ।**
**ದ್ಯೂತದಾ ಆಶೆಯನು ಬಿಡುಎಂದು ನುಡಿದಿಹನು॥**

ಇತ್ತಲಾ ಧೃತರಾಷ್ಟ್ರ ಪುತ್ರನ ಸುಯೋಧನನ
ಮತ್ತೊಮ್ಮೆ ಕರೆಸುತಲಿ ಹಿತವಚನ ನುಡಿದಿಹನು
ಬಿಡುಮಗನೆ ಕೇಡಿಗರ ;ಮಾತುಗಳ ಕೇಳುತಲಿ
ದ್ಯೂತವನು ಆಡುವಾ ಹಂಬಲವ ತೊರೆಯುವುದು ॥೧೦೦೪॥

ಅನ್ಯರಾ ಐಶ್ವರ್ಯ ವೈಭವವ ನೋಡುತಲಿ
ದ್ವೇಷವನು ಮಾಡುವುದು ಸಲ್ಲದದು ಎಂದಿಗೂ
ತನ್ನಯಾ ಧನದಲ್ಲಿ ತೃಪ್ತಿಯನು ಪಡೆಯುತಲಿ
ಧರ್ಮದಲಿ ನಡೆದವಗೆ ಸುಖ ಶಾಂತಿ ದೊರೆಯುವುದು ॥೧೦೦೫॥

ಅನ್ಯರನು ದ್ವೇಷಿಸುತ ಮನದೊಳಗೆ ಕುದಿಯುತಿಹ
ಮನುಜಂಗೆ ಎಂದಿಗೂ ಸಂತಸವು ದೊರೆಯದದು
ಧನಕನಕ ಸಂಪದವು ಸ್ಥಿರವಾಗಿ ನಿಲ್ಲದದು
ಈ ಲಕ್ಷ್ಮಿಚಂಚಲಳು ಆರನ್ನುಮೆಚ್ಚಳು ॥೧೦೦೬॥

ಪಾಂಡವರ ಐಶ್ವರ್ಯ ಸಾಮ್ರಾಜ್ಯವೆಲ್ಲವನು
ಮೋಸದಲಿ ಗೆದ್ದೊಡೆಯು ಜಗವೆಲ್ಲ ನಿಂದಿಪುದು
ನಿನ್ನಯಾ ಅಪಕೀರ್ತಿಯಂಗನೆಯು ನಗ್ನದಲಿ
ಜಗನಾಟ್ಯ ರಂಗದಲಿ ನರ್ತಿಪಳು ಎಂದಿಹನು ॥೧೦೦೭॥

ಶಾಸ್ತ್ರಗಳನರಿತಿರುವ ಸುಜ್ಞಾನಿ ವರವಿದುರ
ದ್ಯೂತವನು ಆಡಲಿಕೆ ಒಪ್ಪಿಗೆಯ ನೀಯದಿಹ
ದ್ಯೂತದಲಿ ದ್ವೇಷಾಗ್ನಿ ಹೊತ್ತುತಲಿ ಉರಿಯುತಲಿ
ವಂಶದಾ ವೃಕ್ಷವನು ದಹಿಸುವುದು ಎಂದಿಹನು ॥೧೦೦೮॥

ಹೇ ಕಂದ ಮಾಕಂದ ಅಜ್ಞಾನಿ ನೀನಲ್ಲ
ಶಾಸ್ತ್ರಗಳ ನರಿತಿರುವ ಪರಿಣತನು ನೀನಿರುವೆ
ಗಾಂಧಾರಿ ದೇವಿಯಾ ಚೊಚ್ಚಲನು ಮಗನಿರುವೆ
ಗಜಪುರದ ಸಾಮ್ರಾಜ್ಯ ದೊರೆಯಾಗಿ ನೀನಿರುವೆ ॥೧೦೦೯॥

ದೇವೇಂದ್ರನರಮನೆಯ ವೈಭವವು ನಿನಗಿಹುದು
ಸ್ವರ್ಗದಾ ಸುಖವಿರಲು ಸುಖವಿಲ್ಲವೆನ್ನುತಲಿ
ಸುಮ್ಮನೆ ಚಿಂತಿಸುತ ದುಃಖದಲಿ ನವೆಯುತಿಹೆ
ನಿನ್ನಯಾ ಮನದೊಳಿಹ ಇಂಗಿತವ ಹೇಳೆಂದ ॥೧೦೧೦॥

**ಮಯಸಭೆಯೊಳನುಭವಿಸಿದಪಮಾನ ಕಷ್ಟವನು ।**
**ಕೌರವನು ಧೃತರಾಷ್ಟ್ರಗರುಹಿದನು ವಿಸ್ತರದಿ ॥**

ಹೇ ಬೊಪ್ಪ ಶತ್ರುವಿನ ಐಶ್ವರ್ಯ ನೋಡುತಲಿ
ಸುಮ್ಮನೇ ಕುಳಿತಿಹುದು ರಾಜರಿಗೆ ಶೋಭಿಸದು
ಧರ್ಮಜನ ಅದ್ಭುತದ ವೈಭವವ ನೋಡುತಲಿ
ಬದುಕಿರ್ದು ಸತ್ತಂತೆ ಆಗಿಹೆನು ಎಂದಿಹನು ॥೧೦೧೧॥

ಜಗದಖಿಲ ಮಣಿಮುಕುಟ ಮಂಡಿತದ ನೃಪರುಗಳು
ಧರ್ಮಜಗೆ ಅಪರಿಮಿತ ಕಾಣಿಕೆಯು ನೀಯುತಲಿ
ಚರಣವನು ಮುಟ್ಟುತಲಿ ಸಾಷ್ಟಾಂಗ ಗೈಯ್ಯುತಿರೆ
ನೋಡುತಲಿ ಎನ್ನಯಾ ಹೊಟ್ಟೆಯುದು ಉರಿದಿಹುದು ॥೧೦೧೨॥

ಕಾಣಿಕೆಯು ಸ್ವೀಕರಿಸಲೋಸುಗವೆ ಎನ್ನನ್ನು
ಧರ್ಮಜನು ನೇಮಕವ ಮಾಡುತಲಿ ಇರಿಸಿರ್ದ
ಪರ್ವತದ ಎತ್ತರದ ರತ್ನಗಳ ವಜ್ರಗಳ
ರಾಶಿಯನು ಕಣ್ಣಾರೆ ಕಾಣುತಲಿ ಬೆರಗಾದೆ ॥೧೦೧೩॥

ಮಯಸಭೆಗೆ ಮಿಗಿಲಾದ ಸುಂದರದ ಮಂದಿರವ
ಹದಿನಾಲ್ಕು ಲೋಕದೊಳು ಬೇರೊಂದು ನಾಕಾಣೆ
ವರಬಿಂದು ಸರಸಿಯಾ ರತ್ನಗಳ ವಜ್ರಗಳ
ರಾಶಿಯಲಿ ಭವನವನು ನಿರ್ಮಾಣಗೈದಿಹರು ॥೧೦೧೪॥

ಶಿಲ್ಪಿಗಳ ಚಾಣಕ್ಯಯನು ವರ್ಣಿಸಲು ಅಸದಳವು
ಸಾವಿರದ ಸ್ತಂಭಗಳ ಚಿತ್ರಗಳ ಭಿತ್ತಿಗಳ
ಹೊಳೆಹೊಳೆವ ರತ್ನಗಳ ವಜ್ರಗಳ ದೀಪ್ತಿಗಳ
ಮಯಸಭೆಯು ಸುರಸಭೆಗೆ ಮಿಗಿಲಾಗಿ ಮೆರೆದಿಹುದು ॥೧೦೧೫॥

ಸ್ಫಟಿಕದಾ ತೇಜದಲಿ ಜಲದಿಂದ ಹೊಳೆಯುತಿಹ
ಸುಂದರದ ಸರಸಿಗಳ ಅರಳಿರುವ ಕಮಲಗಳ
ಜೀವಂತ ದುಂಬಿಗಳ ಹಾರುತಿಹ ಹಂಸಗಳ
ಪರಿಯಲ್ಲಿ ಕಾಣುತಿಹ ಕೊಳಗಳನು ರಚಿಸಿಹರು ॥೧೦೧೬॥

ಸರಸಿಯನು ಕಾಣುತಲಿ ನಿಜಸರಸಿ ಎನ್ನುತಲಿ
ಉಟ್ಟಿರುವ ಧೋತ್ರವನು ಮೊಣಕಾಲ ಮೇಲಕ್ಕೆ
ಎತ್ತುತಿರೆ ಭೀಮಾರ್ಜುನೀರ್ವರೂ ಮತ್ತೆಯು
ಮಾದ್ರಿಜನು ನೋಡುತಲಿ ಘೊಳ್ಳೆಂದು ನಕ್ಕಿಹರು ॥೧೦೧೭॥

ಕುರುಡನಾ ಮಗನಿವನು ಕುರುಡನೇ ಆಗಿಹನು
ಕಣ್ಣಿದ್ದು ಕುರುಡನೇ ಆಗಿರುವ ಕಡುಮೂರ್ಖ
ಎನ್ನುತಲಿ ಆ ಭೀಮ ಅಪಹಾಸ್ಯಗೈಯುತಿರೆ
ಎನ್ನಯಾ ರಕುತವದು ಕತಕತನೆ ಕುದಿಹುದು ॥೧೦೧೮॥

ಎನ್ನೊಳಗೆ ಶಕ್ತಿಯದು ಇರ್ದೊಡೆಯು ಅಗಲೇ
ಭೀಮನನು ಸಂಹಾರ ಗೈಯ್ಯುತಲಿ ಇರ್ದಹೆನು
ಮರುತಜನ ಕೊಲ್ಲಲಿಕೆ ಯತ್ನಿಸುತಲಿರ್ದೊಡೆಯು
ಶಿಶುಪಾಲಗಾಗಿರುವ ಗತಿಯೆನಗೆ ಬರುತಿತ್ತು ॥೧೦೧೯॥

ಸಭೆಯನ್ನು ನೋಡುತಲಿ ಮುಂದಕ್ಕೆ ಸಾಗುತಿರೆ
ಬೇರೊಂದು ಕೊಳವನ್ನು ಕಾಣುತಲಿ ಮತ್ತೆಯು
ಮುನ್ನಣದ ಸರಸಿಯಾ ಪರಿಯಲ್ಲಿ ಕೃತಕವಿದು
ಎನ್ನುತಲಿ ಧೋತ್ರದನು ಎತ್ತದೆಯೆ ಸಾಗಿದೆನು ॥೧೦೨೦॥

ನಿಜವಾದ ಕೊಳದಲ್ಲಿ ಕಾಲನ್ನು ಇರಿಸುತಿರೆ
ಜಾರುತಲಿ ಕೊಳದಲ್ಲಿ ಭರದಲ್ಲಿ ಬಿದ್ದಿಹೆನು
ಕೃಷ್ಣಾರ್ಜುನೀರ್ವರೂ ಆ ಭೀಮ ಯಮಳರೂ
ಕರಹೊಯ್ದು ಬಿದಬಿದ್ದು ಗಹಗಹಿಸಿ ನಕ್ಕಿಹರು ॥೧೦೨೧॥

ಪಾಂಡವರ ಐವರಾ ಆ ಅರಸಿ ದ್ರೌಪದಿಯು
ದಾಸಿಯರ ಸಹಿತದಲಿ ನೋಡುತಲಿ ನಕ್ಕಿಹಳು
ನೋಡಿರೇ ದಾಸಿಯರೆ ಮಾವನವರಂತೆಯೆ
ಭಾವನವರಂಧರೇ ಎನ್ನುತಲಿ ನಕ್ಕಿಹಳು ॥೧೦೨೨॥

ಆ ಕ್ಷಣವು ಆ ಭೀಮ ಕೃಷ್ಣಾರ್ಜುನೀರ್ವರು
ದ್ರೌಪದಿಯು ನಕ್ಕಿಹುದು ಕಿವಿಯೊಳಗೆ ಮೊಳಗುತಿದೆ
ನೂರಾರು ಅಲಗುಗಳು ಎನ್ನಯಾ ಹೃದಯವನು
ಇರಿದಂತೆ ಯಾತನೆಯ ಅನುಭವಿಸುತಿರುತಿಹೆನು ॥೧೦೨೩॥

ಮತ್ಸರದದಾ ವಾಗ್ನಿ ಎನ್ನಯಾ ದೇಹವನು
ಜ್ವಾಲೆಯನು ಚಾಚುತಲಿ ಭುಗಿಲೆದ್ದು ದಹಿಸುತಿದೆ
ಈ ಪರಿಯು ಅಪಮಾನ ಸಹಿಸುತಲಿ ಜೀವಿಸುತ
ಇರುತಿರ್ದು ಫಲವೇನು ಸಾಯುವುದೆ ಲೇಸೆಂದ ॥೧೦೨೪॥

ಎಂದಿಗೂ ಈ ಪರಿಯು ಅಪಮಾನ ಅನುಭವಿಸದಿಹ
ಮಾನಧನನೆನಿಸಿರುವ ನಾನಾಗ ನೋಯುತಲಿ
ಮಯಸಭೆಯ ತ್ಯಜಿಸುತಲಿ ಹೊರಹೋಗಬೇಕೆಂದು
ಇಚ್ಛಿಸುತ ಭರದಲ್ಲಿ ಮುಂದಕ್ಕೆ ಸಾಗುತಿರೆ ॥೧೦೨೫॥

ಎದುರಿನಲಿ ದ್ವಾರದಾ ಪರಿಯಲ್ಲಿ ತೋರುತಿಹ
ಬಾಗಿಲನು ದಾಟುತಲಿ ಹೊರಹೋಗಲೆತ್ನಿಸಲು
ರತ್ನದಾ ಭಿತ್ತಿಯಿರೆ ಬಲವಾಗಿ ತಲೆತಾಗಿ
ಬಿರಿಯುತಲಿ ನೆತ್ತರವು ಬಳಬಳನೆ ಸುರಿದಿಹುದು ॥೧೦೨೬॥

ಚುರುಬುರಿಯ ತೆರದಲ್ಲಿ ಉಬ್ಬಿರುವ ಬುಗುಟೆಯಿದು
ನೆತ್ತರವು ಸುರಿದಿರುವ ಗಾಯದಾ ಚಿಹ್ನೆಯಿದು
ನೋಡೆಂದು ಕಣ್ಣೀರ ಸುರಿಸುತಲಿ ನವೆಯುತಲಿ
ಆ ಅಂಧನೃಪನಿಂಗೆ ಕೌರವನು ತೋರಿಸಿದ ॥೧೦೨೭॥

ಎನ್ನಯಾ ಸ್ಥಿತಿಯನ್ನು ಕಾಣುತಲಿ ಮಾದ್ರಿಜರು
ಐತಂದು ಬಾಗಿಲವು ಈಕಡೆಗೆ ಇಹುದೆಂದು
ತಿಳಿಸುತಲಿ ಎನ್ನಯಾ ಕೈಹಿಡಿದು ಕರಕೊಂಡು
ಸಭೆಯೊಳಗೆ ಎನ್ನನ್ನು ಸಂತೈಸಿ ನಡೆದಿಹರು ॥೧೦೨೮॥

ಆ ಭೀಮ ಎನ್ನನ್ನು ಅಪಹಾಸ್ಯಗೈಯ್ಯುತಲಿ
ಹೇ ಅಂಧ ಭೂಪತಿಯ ಧೃತರಾಷ್ಟ್ರ ಪುತ್ರನೆ
ತಂದೆಯಾ ತೆರದಲ್ಲಿ ಕುರುಡನೂ ನೀನಾದೆ
ಎನ್ನುತಲಿ ಆ ಭೀಮ ನಗುನಗುತ ನುಡಿದಿಹನು ॥೧೦೨೯॥

ಈಪರಿಯ ಅಪಮಾನ ಸಹಿಸುತಲಿ ಆವನೃಪ
ನಾಚಿಕೆಯು ಇಲ್ಲದೆಯ ಜಗದೊಳಗೆ ಜೀವಿಪನು
ಆ ಭೀಮ ದ್ರೌಪದಿಯ ಬಿರುನುಡಿಯು
ಕ್ಷಣಕ್ಷಣವು ಎನ್ನಯಾ ಹೃದಯವನು ದಹಿಸುತಿದೆ ॥೧೦೩೦॥

**ಅಧ್ವರದ ಸಡಗರವ ಪಾಂಡವರ ಸಂಪದವ ।**
**ಕೌರವನು ನೋಯುತಲಿ ಅರಸಂಗೆ ಅರುಹಿದನು ॥**

ಹೇ ಬೊಪ್ಪ ಧರ್ಮಜನ ವೈಭವವ ಕೇಳುವುದು
ಅಂಗವಂಗಾದಿಗಳು ಕಾಶ್ಮೀರ ಕುಂತಳರು
ಕಾಂಭೋಜ ಸೌರಾಷ್ಟ್ರ ಮಾಗಧ ಸಮುದ್ರರು
ಶಕಹೂಣ ಚೀನರು ಸಿಂಹಳರು ಮ್ಲೇಚ್ಛರು ॥೧೦೩೧॥

ಮೂಡಣದ ಪಡುವಣದ ಬಡಗಣದ ತೆಂಕಣದ
ಸಾಗರದ ತೀರದಾ ಸಕಲರೂ ನೃಪರಂಗಳು
ಸಾವಿರದ ಸಂಖ್ಯೆಯಲಿ ಧರ್ಮಜನ ಚರಣಕ್ಕೆ
ಎರಗುತಲಿ ಕಪ್ಪಗಳ ಕಾಣಿಕೆಯನಿತ್ತಿಹರು ॥೧೦೩೨॥

ಕುದುರೆಗಳ ಒಂಟೆಗಳ ಆನೆಗಳ ರಥಗಳನು
ಬಿಲ್ಲುಗಳ ಬಾಣಗಳ ತೋಮರವ ಖಡ್ಗಗಳ
ಪರಶುಗಳ ವಿಧವಿಧದ ಶಸ್ತ್ರಾಸ್ತ್ರವಗಣಿತವ
ಶಿರಬಾಗಿ ನಮಿಸುತಲಿ ಧರ್ಮಜಗೆ ಇತ್ತಿಹರು ॥೧೦೩೩॥

ಅಶ್ವಗಳ ಪಾಲಕರ ಗೋವುಗಳ ರಕ್ಷಕರ
ಲಕ್ಷೋಪಲಕ್ಷದಾ ಪಶುಗಳಾ ಪಾಲಕರ
ದಾಸಿಯರ ಸೇವಕರ ಸಾವಿರದ ಸಂಖ್ಯೆಯಲಿ
ಸಕಲರೂ ನೃಪರಂಗಳು ಕಾಣಿಕೆಯನಿತ್ತಿಹರು ॥೧೦೩೪॥

ಬಂಧುತ್ವ ಕಾರಣದಿ ಪಾಂಚಾಲ ಬಾಂಧವರು
ಮಿತ್ರತ್ವ ಕಾರಣದಿ ವೃಷ್ಣಿಗಳು ಅಂಧಕರು
ಕಪ್ಪಗಳ ಕಾಣಿಕೆಯು ನೀಡದಲೆ ಇರ್ದಿಹರು
ಮಿಕ್ಕಿರುವ ನೃಪರೆಲ್ಲ ಕಾಣಿಕೆಯನಿತ್ತಿಹರು ॥೧೦೩೫॥

ಧರ್ಮಜನು ಕಾಣಿಕೆಯ ನೆಲ್ಲವನು ಸ್ವೀಕರಿಸೆ
ದೇವರ್ಷಿ ನಾರದರ ದೇವಲರ ಅಸಿತರನು
ಸಹಿತದಲಿ ವರವ್ಯಾಸ ಧೌಮ್ಯರೂ ಐತಂದು
ಧರ್ಮಜನ ಮಸ್ತಕದಿ ಅಭಿಷೇಕಗೈದಿಹರು ॥೧೦೩೬॥

ಗಂಗೆಯಾ ತುಂಗೆಯಾ ಕಾವೇರಿ ಗೋದೆಯರ
ಪಾವನದ ಜಲವನ್ನು ತುಂಬಿರುವ ಸ್ವರ್ಣದಾ
ಕುಂಭಗಳ ಸುರಿಯುತಲಿ ವೇದಗಳ ಮಂತ್ರಗಳ
ಘೋಷಿಸುತ ಧರ್ಮಜಗೆ ಅಭಿಷೇಕಗೈದಿಹರು ॥೧೦೩೭॥

ಸಪ್ತರ್ಷಿ ಇಂದ್ರನನು ಮಂತ್ರಗಳ ಪಠಿಸುತಲಿ
ಹರಸುತಿಹ ಪರಿಯಲ್ಲಿ ಜಮದಗ್ನಿ ಭಾರ್ಗವರು
ಗೌತಮರು ಮೊದಲಾದ ಮುನಿವರರು ಋಷಿವರರು
ಸುತ್ತಲೂ ನಿಲ್ಲುತಲಿ ಧರ್ಮಜನ ಹರಸಿದರು ॥೧೦೩೮॥

ಸಾತ್ಯಕಿಯು ಛತ್ರವನು ಮೇಲಕ್ಕೆ ಹಿಡಿಯುತಲಿ
ಫಲುಗುಣನು ಅರ್ಜುನನು ಚಾಮರವ ಹಿಡಿಯುತಲಿ
ಮಾದ್ರಿಜರು ಸ್ವರ್ಣದಾ ಬೀಸಣಿಗೆ ಬೀಸುತಲಿ
ದ್ರುಪದದೊರೆ ನಮಿಸುತಲಿ ಸೇವಿಸುತಲಿರ್ದಿಹರು ॥೧೦೩೯॥

ಆ ಸಮಯ ಸಶರೀರನಾಗುತಲಿ ಸಾಗಿದನು
ಸ್ವರ್ಣದಾ ಸಾವಿರದ ನಾಣ್ಯಗಳ ಮೊತ್ತಯು
ಆ ವಿಶ್ವಕರ್ಮನು ಅಲಂಕಾರ ಗೈದಿರುವ
ಶಂಖವನು ಅಭಿಷೇಕ ಗೈಯ್ಯಲಿಕೆ ಇತ್ತಿಹನು ॥೧೦೪೦॥

ಆ ಕ್ಷಣದಿ ಶ್ರೀಕೃಷ್ಣ ಸುಂದರದ ಶಂಖದಲಿ
ಸ್ವರ್ಣದಾ ಕುಂಭಗಳ ಪಾವನದ ಜಲವನ್ನು
ತುಂಬುತಲಿ ಧರ್ಮಜಗೆ ಅಭಿಷೇಕ ಗೈಯ್ಯುತಿರೆ
ಆ ನೋಟ ನೋಡುತಲಿ ಮೂರ್ಛೆಯನು ಹೊಂದಿಹನು ॥೧೦೪೧॥

ಆ ರಾಜಸೂಯದಾ ಅವಭೃತದ ಸಮಯದಲಿ
ಶಂಖಗಳು ಭೇರಿಗಳು ಮಂಗಳದ ವಾದ್ಯಗಳು
ನಭಬಿರಿವ ತೆರದಲ್ಲಿ ದಶದಿಶೆಗೆ ಮೊಳಗುತಿರೆ
ರೋಮಗಳು ನಿಮಿರುತಲಿ ಗಡಗಡನೆನಡುಗಿದನು ॥೧೦೪೨॥

ಯಾಗವದು ಮುಗಿಯುತಿರೆ ಭೀಮಾರ್ಜುನಾದಿಗಳು
ಅಗಣಿತದ ರತ್ನಗಳ ವಜ್ರಗಳ ಮಾಣಿಕವ
ಪೀತಾಂಬರಾದಿಗಳ ಸಾವಿರದ ಗೋವುಗಳ
ಲಕ್ಷೋಪಲಕ್ಷದಾ ಭೂಸುರರಿಗಿತ್ತಿಹನು ॥೧೦೪೩॥

ರಾಜಸೂಯಾಧ್ವರವ ಗೈಯುತಲಿ ಧರ್ಮಜನು
ಕಲಿ ಹರಿಶ್ಚಂದ್ರರಾಯನಾ ಪರಿಯಲ್ಲಿ
ಕೀರ್ತಿಯನು ಪಡೆಯುತಲಿ ದೇವೇಂದ್ರನಂತೆಯೇ
ಚಕ್ರಾಧಿಪತಿಯೆನಿಸಿ ಜಗದೊಳಗೆ ಮೆರೆಯುತಿಹ ॥೧೦೪೪॥

ಆ ಪರಿಯ ಕೀರ್ತಿಯದು ನಾಭಾಗ ರಂತಿನೃಪ
ಆ ಯೌವ್ವನಾಶ್ವಂಗೆ ಮನುವಿಂಗೆ ಪೃಥುವಿಂಗೆ
ನಳನಹುಷ ಮಾಂಧಾತ ಭಗೀರಥ ಯಯಾತಿಗೆ
ಕುರುಕುಲದೊಳಾರಿಗೂ ದೊರೆಯದೆ ಇರ್ದಿಹುದು ॥೧೦೪೫॥

ಹರಿಶ್ಚಂದ್ರ ರಾಯಂಗೆ ಸಮನಾದ ಕೀರ್ತಿಯನು
ಪಡೆಯುತಲಿ ಮೆರೆಯುತಿಹ ಧರ್ಮಜನ ನೋಡುತಲಿ
ಪ್ರಾಣವನು ಧರಿಸುತಲಿ ನಾನಿನ್ನು ಬದುಕಿಹುದು
ಏತಕ್ಕೆ ಪ್ರಯೋಜನವು ಎನ್ನುತಲಿ ನುಡಿದಿಹನು ॥೧೦೪೬॥

ನಿನಗಿಂತ ಕಿರಿಯನಿಹ ಸೋದರನ ಮಕ್ಕಳಾ
ಪಾಂಡವರು ಅಭ್ಯುದಯ ಪಡೆಯುತಲಿ ಇರ್ದಿಹರು
ಹಿರಿಯನಿಹ ನಿನ್ನಯಾ ಸುತರುಗಳು ಜ್ಯೇಷ್ಠರು
ಹೀನರಾ ಹರಕುಗಳ ಸ್ಥಿತಿಯನ್ನು ಪಡೆದಿಹರು ॥೧೦೪೭॥

ಈ ಪರಿಯ ಕ್ಷಣಕ್ಷಣವು ಯೋಚಿಸುತ ಚಿಂತಿಸುತ
ಮಾನಸಿಕ ಶಾಂತಿಯನು ನೆಮ್ಮದಿಯ ನೀಗುತಲಿ
ಚಿಂತಾಗ್ನಿ ಕುಂಡದಲಿ ದಹಿಸುತಲಿ ಬೇಯುತಲಿ
ನೊಂದಿಹನು ಕುಂದಿಹನು ಬೆಂದಿಹನು ಎಂದಿಹನು ॥೧೦೪೮॥

**ಪಾಂಡವರ ಸಂಪದದ ರಾಜ್ಯವನು ಕೊಳ್ಳುವೆನು ।**
**ಇಲ್ಲದಿರೆ ಸಾಯುವೆನು ಎಂದಿಹನು ಕೌರವನು ॥**

ಪುತ್ರನಾ ಮತ್ಸರದ ಮಾತುಗಳ ಕೇಳುತಲಿ
ಹೇ ಮಗನೆ ಗಾಂಧಾರಿಯುದರದಲಿ ಜನಿಸುತಲಿ
ಚೊಚ್ಚಲನು ಮಗನಿರುವೆ ಸಕಲರಿಗೆ ಜ್ಯೇಷ್ಠನಿಹೆ
ಗಜಪುರದ ಸಾಮ್ರಾಜ್ಯಕೆಲ್ಲಕೂ ಒಡೆಯನಿಹೆ ॥೧೦೪೯॥

ಧರ್ಮಜಗೆ ಇರುತಿರುವ ಸಂಪದವು ನಿನಗಿಹುದು
ಬಂಧುಗಳು ನೃಪರುಗಳು ಸಖರುಗಳು ನಿನಗಿಹರು
ಮತ್ಸರವನರಿಯದಿಹ ಆಕಳದ ಗುಣವಿರುವ
ಧರ್ಮಜನ ವಿಷಯದಲಿ ದ್ವೇಷವನು ಮಾಡದಿರು ॥೧೦೫೦॥

ರಾಜಸೂಯಾಧ್ವರದ ಪರಿಯಲ್ಲಿ ನೀನುಸಹ
ಅದ್ದೂರಿ ಯಾಗವನು ಅದ್ಭುತದಿ ಮಾಡುವುದು
ಜಗದಖಿಲ ನೃಪರುಗಳು ರತ್ನಗಳ ವಜ್ರಗಳ
ಅಗಣಿತದ ಕಾಣಿಕೆಯ ನಿನಗೀವರೆಂದಿಹನು ॥೧೦೫೧॥

ಪರಧನವನಾಶಿಪುದು ದ್ವೇಷವದು ಮಾಡುವುದು
ಹೀನರಾ ಅನಾರ್ಯರಾ ನಡೆತೆಯದು ಎನಿಸುವುದು
ತಾ ಪಡೆದ ಧನದಲ್ಲಿ ತೃಪ್ತಿಯನು ಹೊಂದುತಲಿ
ತನ್ನಯಾ ಧರ್ಮದಲಿ ನಡೆವವನೆ ಸುಖಿಸುವನು ॥೧೦೫೨॥

ನಿನ್ನಯಾ ಭುಜಗಳನು ಕತ್ತರಿಪ ಪರಿಯಲ್ಲಿ!
ನಿನ್ನಯಾ ಭುಜದಂತೆ ಇರುತಿರುವ ಪಾಂಡವರ
ದ್ವೇಷಿಸುತ ದಾಯಾದಿ ಕಲಹವನು ಮಾಡುತಲಿ
ಕುಲವನ್ನು ನಿರ್ಮೂಲ ಮಾಡದಿರು ಎಂದಿಹನು ॥೧೦೫೩॥

ಈ ಪರಿಯ ಧೃತರಾಷ್ಟ್ರ ಹಿತವಚನ ನುಡಿಯುತಿರೆ
ಬೋರ್ಗಲ್ಲ ಮೇಲಕ್ಕೆ ಮಳೆನೀರು ಸುರಿದಂತೆ
ನಿಷ್ಫಲವು ಎನಿಸುತಲಿ ಕೌರವನು ಕೋಪದಲಿ
ಮುಪ್ಪಿನಲಿ ಮುದಿಹುಚ್ಚು ನಿಮಗಿಹುದು ಎಂದಿಹನು ॥೧೦೫೪॥

ನಿನ್ನಯಾ ಮಕ್ಕಳುಗಳಭ್ಯುದಯ ತಿಳಿಯದಿಹೆ
ಶತೃಗಳ ಅಭ್ಯುದಯ ಐಶ್ವರ್ಯ ನೋಡುತಲಿ
ಕೈಕಟ್ಟಿ ಕೂಡ್ರುವದು ನೃಪನೀತಿ ಎನಿಸದದು
ಅವುದೇ ರೀತಿಯಲಿ ಶತ್ರುಗಳ ಜಯಿಸುವುದು ॥೧೦೫೫॥

ಧರ್ಮದಲಿ ಇಲ್ಲವೇ ಅಧರ್ಮದಲಿ ವೈರಿಗಳ
ರಾಜ್ಯವನು ಪಡೆಯುವದು ರಾಜರಿಗೆ ಉಚಿತವದು
ಇಲ್ಲದಿರೆ ಶತ್ರುಗಳು ಮೋಸದಲಿ ಎಮ್ಮನ್ನು
ನಾಶವನು ಮಾಡುವರು ಹೇ ಬೊಪ್ಪ ಕೇಳೆಂದ ॥೧೦೫೬॥

ನಮುಚಿಯನು ನಂಬಿಸುತ ದೇವೇಂದ್ರ ಕಪಟದಲಿ
ನಮುಚಿಯಾ ಶಿರವನ್ನು ತರಿದುದನು ಅರಿಯೆಯಾ
ಶತ್ರುಗಳ ನಂಬಿಸುತ ಕಪಟದಲಿ ರಾಜ್ಯವನು
ಅಪಹರಣಗೈಯ್ಯುವುದು ತಪ್ಪಲ್ಲ ಎಂದಿಹನು ॥೧೦೫೭॥

ಶತ್ರುಗಳು ಅಲ್ಪರಿಹರೆನ್ನುತಲಿ ಬಿಟ್ಟೊಡೆಯು
ಗೆದ್ದಲಿನ ಹುಳುನಿಕರ ಗಿಡವನ್ನು ಮುತ್ತುತಲಿ
ನಾಶವನು ಗೈವಂತೆ ನಮ್ಮನ್ನು ಸಕಲರನು
ನಿರ್ಮೂಲ ಮಾಡುವರು ಹೇ ಬೊಪ್ಪ ಕೇಳೆಂದ ॥೧೦೫೮॥

ಪಾಂಡವರ ಐಶ್ವರ್ಯ ರಾಜ್ಯವನು ಎಲ್ಲವನು
ಕೊಳ್ಳದೆಯೆ ನಾನಿಂದು ಸುಮ್ಮನೆಯೆ ಇರ್ದೊಡೆಯು
ಎನ್ನಯಾ ಬದುಕಿನಲಿ ಸಂಶಯವು ಭಯಮೂಡಿ
ಸುಖಶಾಂತಿ ಇಲ್ಲದೆಯೆ ಸಾಯುವೆನು ಎಂದಿಹನು ॥೧೦೫೯॥

ಎನ್ನಯಾ ಐಶ್ವರ್ಯ ಸ್ಥಗಿತವದು ಆಗಿಹುದು
ಪಾಂಡವರ ಧನಕನಕ ದಿನದಿನದಿ ವೃದ್ಧಿಪುದು
ಶತ್ರುಗಳ ಕೀರ್ತಿಯನು ವೈಭವವ ನೋಡುತಲಿ
ಜೀವಿಸುತ ನಾನಿರ್ದು ಫಲವೇನು ಹೇಳೆಂದ ॥೧೦೬೦॥

ಪಾಂಡವರ ರಾಜ್ಯವನು ಎಲ್ಲವನು ಕೊಳ್ಳುವುದು
ಇಲ್ಲದಿರೆ ಕೊನೆಯಲ್ಲಿ ಯುದ್ಧವನು ಗೈಯ್ಯುತಲಿ
ಶೌರ್ಯದಲಿ ರಣದೊಳಗೆ ಮರಣವನು ಹೊಂದುವುದು
ಎನಗೀಗ ಉಳಿದಿರುವ ಮಾರ್ಗಗಳು ಎರಡೆಂದ ॥೧೦೬೧॥

ಆ ಕ್ಷಣದಿ ಸೌಬಲನು ಸರಿಯಾಗಿ ನುಡಿದಿಹನು
ಸುಮ್ಮನೆ ಚಿಂತೆಯನು ಮಾಡದಿರು ಕೌರವನೆ
ಈಗಲೇ ಪಾಂಡವರ ಹಸ್ತಿನೆಗೆ ಕರೆಸುವುದು
ದ್ಯೂತದಲಿ ರಾಜ್ಯವನು ಗೆಲ್ಲುತಲಿ ನಿನಗೀವೆ ॥೧೦೬೨॥

ಪಗಡೆಯಾ ಪಟ್ಟದಲಿ ಎನ್ನಯಾ ವಿಧವಿಧದ
ಪಗಡೆಯಾ ಕಾಯಿಗಳು ಬಿಲ್ಲುಗಳು ಇರುತಿಹವು
ತೀಕ್ಷ್ಣತರ ದಾಳಗಳ ಬಾಣಗಳ ನೆಸೆಯುತಲಿ
ಶತ್ರುಗಳ ಜಯಿಸುವೆನು ಎನ್ನುತಲಿ ನುಡಿದಿಹನು ॥೧೦೬೩॥

ಆಗಲಾ ಕೌರವನು ಧೃತರಾಷ್ಟ್ರ ರಾಯಂಗೆ
ಈ ಶಕುನಿ ಪಗಡೆಯಲಿ ನಿಷ್ಣಾತನಿರುತಿಹನು
ಯುದ್ಧವದು ಇಲ್ಲದೆಯೆ ಪಾಂಡವರ ನೋಯಿಸದೆ
ರಾಜ್ಯವನು ಗೆಲ್ಲುತಲಿ ನನಗೀವ ಎಂದಿಹನು ॥೧೦೬೪॥

ಇದರೊಳಗೆ ಆವುದೂ ದೋಷವನು ಒಂದಿಲ್ಲ
ನೃಪರಿಂಗೆ ದ್ಯೂತವನು ಆಡುವದು ಸಹಜವಿದೆ
ಪಾಂಡವರ ನೀನೀಗ ಹಸ್ತಿನೆಗೆ ಕರೆಸುತಲಿ
ದ್ಯೂತವನು ಆಡಲಿಕೆ ಅಪ್ಪಣೆಯ ನೀಯುವುದು ॥೧೦೬೫॥

ಈ ಪರಿಯೆ ಕೌರವನು ನುಡಿಯುತಿರೆ ಧೃತರಾಷ್ಟ್ರ
ಆವುದೇ ಕಾರ್ಯವನು ವಿದುರನನು ಕೇಳದೆಯೆ
ನಾನೆಂದು ಮಾಡದಿಹೆ ವಿದುರನನು ಕೇಳುತಲಿ
ಎನ್ನಯಾ ನಿಶ್ಚಯವ ಹೇಳುವೆನು ಎಂದಿಹನು ॥೧೦೬೬॥

ಅಪ್ಪನೇ ಈ ವಿದುರ ಸತತವೂ ಪಾಂಡವರ
ಅಭ್ಯುದಯ ಹಿತವನ್ನು ಬಯಸುತಲಿ ಇರುತಿಹನು
ಎಮ್ಮನ್ನು ಎಳ್ಳನಾ ಕಾಳಷ್ಟು ಪ್ರೀತಿಸನು
ದ್ಯೂತಕ್ಕೆ ಎಂದಿಗೂ ಅವನೊಪ್ಪದಿಹನೆಂದ ॥೧೦೬೭॥

ದ್ಯೂತವನು ಆಡಿದೊಡೆ ಯುದ್ಧದಾ ಪರಿಯಲ್ಲಿ
ಆವುದೂ ಕಷ್ಟವದು ಹಿಂಸೆಯದು ಆಗದದು
ಬೇಗನೆ ಪಗಡೆಯನು ಆಡಲಿಕೆ ಪಾಂಡವರ
ಕರೆಸುವಾ ಸಿದ್ಧತೆಯ ಮಾಡುವುದು ಎಂದಿಹನು ॥೧೦೬೮॥

ಹೇ ಮಗನೆ ಯುಕುತಿಯಲಿ ನೀನೆಷ್ಟು ಪೇಳ್ದರೂ
ನಿನ್ನಯಾ ಮಾತುಗಳು ಕಹಿ ಎನಿಸುತಿರುತಿಹವು
ಎನ್ನಯಾ ಹಿತವಚನ ನೀಗೆಸಹ ರುಚಿಸದಿವೆ
ನಿನ್ನಿಚ್ಛೆಯಂತೆಯೆ ನೀಮಾಳ್ಪುದೆಂದಿಹನು ॥೧೦೬೯॥

ನೀಗೈದ ಕಾರ್ಯಕ್ಕೆ ನೀನೆಯೇ ಮುಂದಕ್ಕೆ
ಘೋರತರ ಕಷ್ಟವನು ಭೋಗಿಪುದು ತಪ್ಪದದು
ಅಧರ್ಮದಾ ಮಾರ್ಗಗಳು ಪಾಪದಾ ಕಾರ್ಯಗಳು
ಎಂದಿಗೂ ಶ್ರೇಯವನು ಈಯದಿಹವೆಂದಿಹನು ॥೧೦೭೦॥

ಮುಂದಿನ ಭವಿಷ್ಯವನು ಕುಶಲವನು ಅರಿತಿರುವ
ಆ ವಿದುರ ನುಡಿದಿರುವ ನುಡಿಗಳವು ನಿಜವಿಹುದು
ಘೋರತರ ಪ್ರಳಯದಾ ಕುರುಕುಲದ ನಾಶವು
ಸನ್ನಿಹಿತಮಾಗಿಹುದು ಎನ್ನುತಲಿ ನುಡಿದಿಹನು ॥೧೦೭೧॥

ವಿಧಿಲಿಖಿತ ಬರೆದಂತೆ ದೈವೇಚ್ಛೆ ಇದ್ದಂತೆ
ಎಲ್ಲವೂ ನಡೆಯುವುದು ವಿಧಿಯನ್ನು ಮೀರುವುದು
ಆರಿಗೂ ಅಸದಳವು ಎನ್ನುತಲಿ ಧೃತರಾಷ್ಟ್ರ
ಪುತ್ರನಾ ಮೋಹದಲಿ ಹೆಚ್ಚಿನದು ಯೋಚಿಸದೆ ||೧೦೭೨||

ನಿಶ್ಚಯವ ಗೈಯ್ಯುತಲಿ ಸೇವಕರ ಕರೆಸುತಲಿ
ರತ್ನಗಳ ಮುತ್ತುಗಳ ವಜ್ರಗಳ ಪಚ್ಚೆಗಳ
ಸಾವಿರದ ಸ್ತಂಭಗಳ ಭವ್ಯಮಿಹ ಸುಂದರದ
ವರ ಸಭಾಮಂದಿರವ ನಿರ್ಮಿಸಲು ಹೇಳಿದನು ||೧೦೭೩||

**ಜೂಜಿನಲಿ ರಮಿಸಲಿಕೆ ಪಾಂಡವರ ಕರೆತರಲು |**
**ಧೃತರಾಷ್ಟ್ರ ಭೂಪತಿಯು ವಿದುರನನು ಕಳುಹಿದನು ||**

ಕೆಲದಿನದಿ ನಿಷ್ಣಾತ ಅಗಣಿತದ ಶಿಲ್ಪಿಗಳು
ಇಂದ್ರನಾ ಸಭೆಯಂತೆ ಶೋಭಿಸುವ ದಿವ್ಯಮಿಹ
ತೇಜದಲಿ ಹೊಳೆಯುತಿಹ ಸಭೆಯನ್ನು ರಚಿಸುತಿರೆ
ವಿದುರನನು ಕರೆಸುತಲಿ ಧೃತರಾಷ್ಟ್ರ ನುಡಿದಿಹನು ||೧೦೭೪||

ಹೇ ವಿದುರ ವರ ಇಂದ್ರ ಪ್ರಸ್ಥಕ್ಕೆ ತೆರಳುತಲಿ
ನಯಮಧುರ ವಚನದಲಿ ಹಸ್ತಿನೆಯ ನಗರಕ್ಕೆ
ಕೌರವರ ಜೊತೆಯಲ್ಲಿ ಸರಸದಲಿ ದ್ಯೂತವನು
ಆಡಲಿಕೆ ಪಾಂಡವರ ಕರೆತಹುದು ಎಂದಿಹನು ||೧೦೭೫||

ನಿನ್ನಯಾ ಮಾತುಗಳ ನಾನೆಂದು ಒಪ್ಪದಿಹೆ
ಜೂಜಿನಲಿ ಮಕ್ಕಳೊಳು ದ್ವೇಷವದು ಜನಿಸುತಲಿ
ಯುದ್ಧವದು ಸಂಭವಿಸಿ ಕುಲನಾಶವಾಗುವದು
ಖಂಡಿತವು ಎನ್ನುತಲಿ ವರವಿದುರ ನುಡಿದಿಹನು ||೧೦೭೬||

ಪುತ್ರನಾ ಮೋಹದಲಿ ಸಿಲುಕಿರುವ ಅಂಧನೃಪ
ಕೌರವನ ಮಾತುಗಳ ಮೀರುತಲಿ ನಡೆಯಲಿಕೆ
ಅಸಮರ್ಥನಾಗುತಲಿ ಆದದ್ದು ಆಗುವದು
ಬಂದದ್ದು ಭೋಗಿಪುದು ಎಂದಿಹನು ಧೃತರಾಷ್ಟ್ರ ||೧೦೭೭||

ಹೇ ವಿದುರ ದೈವವದು ಅನುಕೂಲ ವಿರ್ದೊಡೆಯು
ಆವುದೇ ಕಲಹವದು ಸಂಭವಿಸದಿರುತಿಹುದು
ದೈವವೇ ಪ್ರತಿಕೂಲವಿರ್ದೊಡೆಯು ಆರಿಗೂ
ತಪ್ಪಿಸಲು ಸಾಧ್ಯವೇ ಇಲ್ಲೆಂದು ನುಡಿದಿಹನು ||೧೦೭೮||

ಎಲ್ಲವನು ಯೋಚಿಸುತ ನಿರ್ಧಾರ ಮಾಡಿಹೆನು
ಮರುಮಾತನಾಡದೆಯೆ ಪ್ರತಿಯಾಗಿ ನುಡಿಯದಲೆ
ಈಗಲೇ ಆ ಇಂದ್ರ ಪ್ರಸ್ಥಕ್ಕೆ ತೆರಳುತಲಿ
ಪಾಂಡವರ ಕರೆತಹುದು ಎನ್ನುತಲಿ ನುಡಿದಿಹನು ||೧೦೭೯||

ಘೋರತರ ಆಜ್ಞೆಯನು ಪಡೆಯುತಲಿ ವರವಿದುರ
ಒಪ್ಪದ ಮನಸ್ಸಿನಲಿ ರಥವೇರಿ ಪಯಣದಲಿ
ಸಾಗುತಲಿ ವರಇಂದ್ರ ಪ್ರಸ್ಥಕ್ಕೆ ಐತಂದು
ಇಂದ್ರನಾ ಅರಮನೆಯ ಪರಿಯಲ್ಲಿ ಶೋಭಿಸುವ ||೧೦೮೦||

ಧರ್ಮಜನ ಅರಮನೆಯ ಒಳಗಡೆಗೆ ತೆರಳುತಿರೆ
ಸಿಂಹಾಸನಾರೂಢನಾಗುತಲಿ ಕುಳಿತಿರ್ದ
ಧರ್ಮಜನು ನೋಡುತಲಿ ಏಳುತಲಿ ಬಳಿಬಂದು
ವಿದುರನನು ಸ್ವಾಗತಿಸಿ ಸತ್ಕಾರಗೈದಿಹನು ||೧೦೮೧||

ಹೇ ವಿದುರ ಎನ್ನಯಾ ದೊಡ್ಡಪ್ಪ ಧೃತರಾಷ್ಟ್ರ
ದೊಡ್ಡವ್ವ ಗಾಂಧಾರಿ ಕೌರವರು ಬಂಧುಗಳು
ಗಾಂಗೇಯ ಗುರುದ್ರೋಣ ಗುರುಸುತನು ವರಕೃಪನು
ಸಕಲರೂ ಕುಶಲರೇ ಕ್ಷೇಮವೇ ಹೇಳೆಂದ ||೧೦೮೨||

ನಿನ್ನಯಾ ಮುಖವೇಕೊ ಬತ್ತಿಹುದು ಬಾಡಿಹುದು
ಪಯಣದಾ ಬೇಸರವೊ ಮನದೊಳಿಹ ದುಗುಡವೊ
ಆವುದೋ ಚಿಂತೆಯಲಿ ಮುಖಮ್ಲಾನವಾಗಿಹುದು
ಎನ್ನುತಲಿ ಯಮಸುತನು ವಿದುರಂಗೆ ನುಡಿದಿಹನು ||೧೦೮೩||

ಪುತ್ರಪೌತ್ರಾದಿಗಳ ಬಂಧುಗಳ ಸಹಿತದಲಿ
ಧೃತರಾಷ್ಟ್ರ ಕ್ಷೇಮದಲಿ ಸುಖವಾಗಿ ಇರುತಿಹನು
ನಮ್ಮಯಾ ಕುಶಲವನು ಸೌಖ್ಯವನು ಮೊದಲಿಂಗೆ
ಕೇಳುತಲಿ ತಿಳಿಸುವುದು ಎನ್ನುತಲಿ ನುಡಿದಿಹನು ||೧೦೮೪||

ನಿಮ್ಮಯಾ ಮಯಸಭೆಯ ಪರಿಯಲ್ಲಿ ಧೃತರಾಷ್ಟ್ರ
ಭವ್ಯಮಿಹ ಸುಂದರದ ಸಭೆಯನ್ನು ರಚಿಸಿಹನು
ರಾಜಸೂಯಾಧ್ವರವ ಗೈಯ್ಯುತಲಿ ನೀವುಗಳು
ಸಕಲರೂ ಶ್ರಮದಿಂದ ದಣಿದಿಹಿರಿ ಬಳಲಿಹಿರಿ ||೧೦೮೫||

ಕಾರಣದಿ ನೀವುಗಳ ವಿಶ್ರಾಂತಿಕೊಳ್ಳಲಿಕೆ
ಗಜಪುರಕೆ ಐತಂದು ಆ ಸಭೆಯ ನೋಡುತಲಿ
ಮನತಣಿಸಿ ಸಂತಸದಿ ಕೌರವರ ಜೊತೆಯಲ್ಲಿ
ದ್ಯೂತವನು ಆಡುವುದು ಎನ್ನುತಲಿ ತಿಳಿಸಿಹನು ||೧೦೮೬||

ದ್ಯೂತವನು ನೋಡಲಿಕೆ ಅಗಣಿತದ ನೃಪರುಗಳು
ಸಂಭ್ರಮದಿ ಸಡಗರದಿ ಹಸ್ತಿನೆಗೆ ಬಂದಿಹರು
ಆಹ್ವಾನೀಯುತಲಿ ನಿನ್ನನ್ನು ಕರೆತರಲು
ಆಜ್ಞೆಯನು ಈಯುತಲಿ ಎನ್ನನ್ನು ಕಳಿಸಿಹನು ||೧೦೮೭||

ನೀನೀಗ ಧೃತರಾಷ್ಟ್ರನಾಹ್ವಾನ ಸ್ವೀಕರಿಸಿ
ಗಜಪುರಕೆ ಐತಂದು ದ್ಯೂತದಲಿ ರಮಿಸುವುದು
ಎನ್ನುತಲಿ ವರವಿದುರ ನುಡಿಯುತಿರೆ ಧರ್ಮಜನು
ಬೆರಗಿನಲಿ ಚಿಂತೆಯಲಿ ಕಳವಳದಿ ನುಡಿದಿಹನು ॥೧೦೮೮॥

ದ್ಯೂತವಿದು ದ್ವೇಷದಲಿ ಕಲಹದಲಿ ನಾಶದಲಿ
ಕೊನೆಗೊಳ್ವುದೆಂಬುದನು ನೀನರಿಯದಿರುತಿಹೆಯಾ
ನೀ ಹಿರಿಯ ಜ್ಞಾನಿಯಿಹೆ ನಿನ್ನಯಾ ಮತವೇನು
ನಾನೇನು ಮಾಡುವುದು ಹೇಳೆಂದು ನುಡಿದಿಹನು ॥೧೦೮೯॥

ಧರ್ಮಜನೆ ದ್ಯೂತಮಿದು ದುಃಖಕ್ಕೆ ಮೂಲವಿದು
ಎಂಬುದನು ನಾಬಲ್ಲೆ ದ್ಯೂತವನು ತಪ್ಪಿಸಲು
ಪರಿಪರಿಯೆ ಹೇಳಿದೆನು ನಿಷ್ಫಲವು ಆಗಿಹುದು
ನಿನ್ನನ್ನು ಕರೆತರಲು ಆದೇಶವಿತ್ತಿಹನು ॥೧೦೯೦॥

ಧರ್ಮಜನೆ ಧರ್ಮವನು ಸರಿಯಾಗಿ ಅರಿತಿರುವೆ
ಹೆಚ್ಚಿನದು ಹೇಳಲಿಕೆ ಅಸಮರ್ಥನಾಗಿಹೆನು
ನಿನಗಿಷ್ಟವಾದುದನು ಶ್ರೇಯಸ್ಕರೆನಿಪುದನು
ನೀಗೈವುದೆನ್ನುತಲಿ ವರವಿದುರ ನುಡಿದಿಹನು ॥೧೦೯೧॥

ಹೇ ವಿದುರ ಕೌರವರನುಳಿಯುತಲಿ ಬೇರಾವ
ಜೂಜಿನಾ ನಿಪುಣರನು ಕಪಟಿಗಳ ಕುಹಕಿಗಳ
ಆಟವನು ಆಡಲಿಕೆ ಆಮಂತ್ರಣಿತ್ತಿಹನು
ಆರೊಡನೆ ನಾವುಗಳು ಆಡುವುದು ಎಂದಿಹನು ॥೧೦೯೨॥

ಜಗದೊಳಗೆ ಜೂಜಿನಲಿ ಅತಿಜಾಣನೆನಿಸಿರುವ
ಕೈಚಳಕದತಿನಿಪುಣ ಕುಶಲಮತಿ ಆ ಶಕುನಿ
ವಿವಿಂಶತಿ ಚಿತ್ರಸೇನ ಸತ್ಯವ್ರತ ಪುರುಮಿತ್ರ
ದ್ಯೂತದಲಿ ನಿಷ್ಣಾತ ಪರಿಣತರು ಇರುತಿಹರು ॥೧೦೯೩॥

ಹೇ ವಿದುರ ಕುಹಕಿಗಳ ಕಪಟಿಗಳ ವಂಚಕರ
ಜೂಜಿನಾ ಜಾಣರಾ ಜಾಲವೇ ಇರುತಿಹುದು
ಬೇಡನಾ ಬಲೆಯೊಳಗೆ ಶಿಶುಮೊಲವು ಸಿಲುಕುತಲಿ
ಕಷ್ಟವನು ಪಡುವಂತೆ ದುಃಖವದು ಕಟ್ಟಿಹುದು ॥೧೦೯೪॥

ಹೇ ವಿದುರ ಜಗವೆಲ್ಲ ವಿಧಿವಶವು ಇರುತಿಹುದು
ಹಣೆಯಲ್ಲಿ ಬರೆದಂತೆ ಎಲ್ಲವೂ ನಡೆಯುವುದು
ಧೃತರಾಷ್ಟ್ರ ತನ್ನಯಾ ಮಕ್ಕಳುಗಳಭ್ಯುದಯ
ಹಿತಕಾಗಿ ದ್ಯೂತಕ್ಕೆ ಆಮಂತ್ರಣಿತ್ತಿಹನು ॥೧೦೯೫॥

**ಚಿಕ್ಕಪ್ಪನಾ ಆಜ್ಞೆಯನು ಮೀರದಲೆ ಧರ್ಮಜನು ।
ಸೋದರರ ಸಹಿತದಲಿ ಗಜಪುರಕೆ ತೆರಳಿದನು ॥**

ದ್ಯೂತವನು ಆಡಲಿಕೆ ಎಳ್ಳನಿತು ಮನಸಿಲ್ಲ
ಆದರೂ ಚಿಕ್ಕಪ್ಪನಾ ಆಜ್ಞೆಯನು ಮೀರದಿಹೆ
ಜಗದೊಳಗೆ ಎಲ್ಲವೂ ವಿಧಿಯಂತೆ ನಡೆಯುವದು
ನಾವುಗಳು ಸೂತ್ರದಾ ಬೊಂಬೆಗಳು ಇರುತಿಹೆವು ॥೧೦೯೬॥

ತಂದೆಯನು ಕಳಕೊಂಡ ತಬ್ಬಲಿಗಳಾಗಿಹೆವು
ಧೃತರಾಷ್ಟ್ರರಾಯನೇ ತಂದೆಯೆಂದೆನ್ನುತಲಿ
ದೃಢವಾಗಿ ನಂಬಿಹೆವು ನೀರಲ್ಲಿ ಮುಳುಗಿಸಲಿ
ಇಲ್ಲವೇ ಹಾಲಲ್ಲಿ ತೇಲಿಸಲಿ ಎಂದಿಹನು ॥೧೦೯೭॥

ಆವುದೋ ಕಾಣದಿಹ ಬಲವಾದ ಶಕ್ತಿಯದು
ಎನ್ನನ್ನು ದ್ಯೂತವನು ಆಡಲಿಕೆ ಜಗ್ಗುತಿದೆ
ಹಣೆಯಲ್ಲಿ ಬರೆದದ್ದು ಆಗುವುದು ಎನ್ನುತಲಿ
ಚಿಂತಿಸುತ ಫಲವಿಲ್ಲ ಎಂದಿಹನು ಧರ್ಮಜನು ॥೧೦೯೮॥

ಆ ಕ್ಷಣದಿ ಭೃತ್ಯರನು ಕರೆಸುತಲಿ ಧರ್ಮಜನು
ಮರುದಿವಸ ಹಸ್ತಿನೆಗೆ ಪಯಣದದಲಿ ಹೊರಡಲಿಕೆ
ಸಿದ್ಧತೆಯ ಗೈಯ್ಯುವುದು ಎನ್ನುತಲಿ ತಿಳಿಸುತಲಿ
ಭೀಮಾರ್ಜುನೆಲ್ಲರಿಗೆ ವಿಷಯವನು ಅರುಹಿದನು ॥೧೦೯೯॥

ಕೃಷ್ಣನಾ ಸಲಹೆಯನು ಕೇಳದೆಯೆ ಆವುದೇ
ಕಾರ್ಯವನು ಗೈಯ್ಯದೇ ಇರುತಿರುವ ಧರ್ಮಜನು
ಮುರಹರನ ಮರೆಯುತಲಿ ಅಭಿಮತವ ಕೊಳ್ಳದೆಯೆ
ದ್ಯೂತವನು ಆಡಲಿಕೆ ನಿರ್ಧಾರಗೈದಿಹನು ॥೧೧೦೦॥

ತಲೆಬೇಳ್ವ ಎಡೆಯಲ್ಲಿ ಕಾಲುಗಳು ನಡೆವಂತೆ
ನಾಶದಾ ಕಾಲದಲಿ ವಿಪರೀತ ಬುದ್ಧಿಯದು
ಎಂಬಂತೆ ಧರ್ಮಜನು ವಿವೇಚನವಿಲ್ಲದೆಯೆ
ದ್ಯೂತವನು ಆಡಲಿಕೆ ನಿಶ್ಚಯವ ಗೈದಿಹನು ॥೧೧೦೧॥

ದಿನಕಳೆಯೆ ದಿನಪತಿಯು ಮೂಡುತಿರೆ ಮೂಡಣದಿ
ಮಜ್ಜನವ ಗೈಯ್ಯುತಲಿ ಭೂಪತಿಗೆ ಶೋಭಿಸುವ
ಪೀತಾಂಬರಾದಿಗಳ ಸ್ವರ್ಣದಾ ಒಡವೆಗಳ
ಹೊಳೆಹೊಳೆವ ರತ್ನದ ಕಿರೀಟವನು ಧರಿಸುತಲಿ ॥೧೧೦೨॥

ಮರುತಜನ ಅರ್ಜುನನ ಮಾದ್ರಿಜರ ಸಹಿತಲಿ
ರಥವೇರಿ ಕೂಡ್ರುತಲಿ ದ್ರೌಪದಿಯ ಮೊದಲಾದ
ಬಂಧುಗಳ ಬಾಂಧವರ ಅರಮನೆಯ ನಾರಿಯರ
ದಾಸಿಯರ ಸಹಿತದಲಿ ಗಜಪುರಕೆ ನಡೆದಿಹನು ॥೧೧೦೩॥

ಯಮಸುತನು ದ್ಯೂತವನು ಆಡಲಿಕೆ ಹಸ್ತಿನೆಗೆ
ತೆರಳುತಿಹ ಎನ್ನುತಲಿ ವಾರ್ತೆಯನು ಕೇಳುತಲಿ
ಆವುದೇ ಘೋರತರ ಆಪತ್ತು ಬರಲಿಹುದು
ಎನ್ನುತಲಿ ಪುರಜನರು ಬೆನ್ನಿನಲಿ ನಡೆದಿಹರು ॥೧೧೦೪॥

**ಬಂಧುಗಳ ಬಾಂಧವರ ಕಾಣುತಲಿ ಪಾಂಡವರು ।**
**ಕುಶಲಗಳ ಮಾತಿನಲಿ ಕಾಲವನು ಕಳೆದಿಹರು ॥**

ಗಜಪುರಕೆ ತೆರಳುತಲಿ ಅರಮನೆಯ ಬಳಿಬರುತ
ರಥವಿಳಿದು ಧೃತರಾಷ್ಟ್ರ ಭೂಪತಿಯ ಬಳಿಬಂದು
ಸಾಷ್ಟಾಂಗ ಗೈಯುತಿರೆ ಬಾ ಪಾಂಡು ನಂದನನೆ
ಎನ್ನುತಲಿ ಧರ್ಮಜನ ಅಪ್ಪಿದನು ಹರ್ಷದಲಿ ॥೧೧೦೫॥

ಬಳಿಕಲಾ ಧರ್ಮಜನು ಭೀಷ್ಮನನು ದ್ರೋಣರನು
ಕಾಣುತಲಿ ನಮಿಸುತಿರೆ ಧರ್ಮದಾ ಮೂರ್ತಿಯನು
ಧರ್ಮಜನ ಅಪ್ಪುತಲಿ ಧೃಢದಿಂದ ಮುದದಿಂದ
ಆನಂದ ಬಾಷ್ಪಗಳ ಸುರಿಸಿದರು ಧಾರೆಯಲಿ ॥೧೧೦೬

ದುರ್ಯೋಧನಾದಿಗಳ ಬಂಧುಗಳ ಕಾಣುತಲಿ
ಕುಶಲವನು ಕ್ಷೇಮವನು ನಸುನಗುತ ಕೇಳುತಲಿ
ಶಲ್ಯನನು ಶಕುನಿಯನು ದ್ಯೂತಕ್ಕೆ ಬಂದಿರುವ
ಸಕಲರಾ ನೃಪರುಗಳ ಕುಶಲವನು ಕೇಳಿದನು ॥೧೧೦೭॥

ಬಳಿಕಲಾ ಧರ್ಮಜನು ಭೀಮಾರ್ಜುನಾದಿಗಳ
ಸಹಿತದಲಿ ಸೌಧದಾ ಒಳಗಡೆಗೆ ತೆರಳುತಲಿ
ಅಗಣಿತದ ತಾರೆಗಳ ಮಧ್ಯದಲಿ ಹೊಳೆಯುತಿಹ
ರೋಹಿಣಿಯ ನಕ್ಷತ್ರ ಪರಿಯಲ್ಲಿ ಬೆಳಗುತಿಹ ॥೧೧೦೮॥

ಸಾಧ್ವೀಶಿರೋಮಣಿಯ ಗಾಂಧಾರಿ ದೇವಿಯರ
ಚರಣದಲಿ ಸೋದರರ ಸಹಿತದಲಿ ನಮಿಸುತಿರೆ
ನಿಮ್ಮಪ್ಪೆ ವರಕುಂತಿ ಕುಶಲಗಳೇ ಎನ್ನುತಲಿ
ಕೇಳುತಲಿ ಪಾಂಡವರ ಹರಸಿದಳು ಸಂತಸದಿ ॥೧೧೦೯

ಭೀಮಾರ್ಜುನಾದಿಗಳ ಸಹಿತದಲಿ ಧರ್ಮಜನು
ಮರಳುತಲಿ ಧೃತರಾಷ್ಟ್ರ ರಾಯನೆಡೆ ಐತಂದು
ವಿಧವಿಧದ ವಾರ್ತೆಯನು ವಿಷಯಗಳನರುಹುತಲಿ
ಕಾಲವನು ಕಳೆಯುತಿರೆ ಧೃತರಾಷ್ಟ್ರ ನುಡಿದಿಹನು ॥೧೧೧೦॥

ರಾಜಸೂಯಾಧ್ವರವ ಗೈಯ್ಯುತಲಿ ನೀವುಗಳು
ಶ್ರಮದಿಂದ ದಣಿದಿಹಿರಿ ನೀವಿಲ್ಲಿ ಕೆಲಕಾಲ
ಬಂಧುಗಳ ಜೊತೆಯಲ್ಲಿ ಸರಸದಲಿ ಆಡುತಲಿ
ವಿಶ್ರಾಂತಿಕೊಳ್ಳುವುದು ಎನ್ನುತಲಿ ನುಡಿದಿಹನು ॥೧೧೧೧॥

ತಂದೆಯಾ ಸ್ಥಾನದಲಿ ಇರುತಿರುವ ನಿಮ್ಮನ್ನು
ಎಮ್ಮಯಾ ತಂದೆಯೇ ಎನ್ನುತಲಿ ಭಾವಿಪೆವು
ಅಡ್ಡಾಗಿ ಹೆಚ್ಚುವುದು ಉದ್ದಾಗಿ ಹೆಚ್ಚುವುದು
ನಿಮ್ಮಯಾ ಮಾತನ್ನು ಮೀರದಿಹೆವೆನ್ನುತಲಿ ॥೧೧೧೨॥

ರಾಯನಾ ಅಪ್ಪಣೆಯ ಕೊಳ್ಳುತಲಿ ಧರ್ಮಜನು
ಅನುಜರಿಂದೊಡಗೂಡಿ ತಮಗಾಗಿ ನಿರ್ಮಿಸಿದ
ಸರ್ವವಿಧ ಸಾಮಗ್ರಿ ಸಲಕರಣೆಯಿಂದೆಸೆವ
ಸುಂದರದ ಭವ್ಯದಾ ಭವನಕ್ಕೆ ತೆರಳಿದನು ॥೧೧೧೩॥

ಭಾನುಮತಿ ಮೊದಲಾದ ಕೌರವರ ನೂರ್ವರಾ
ಸತಿನಿವಹ ದಿವ್ಯಾಂಬರಾಭರಣ ಧರಿಸುತಲಿ
ಅರಮನೆಯ ಬೆಡಗಿನಾ ನಾರಿಯರ ಸಹಿತದಲಿ
ದ್ರೌಪದಿಯ ನೋಡಲಿಕೆ ಕಾತುರದಿ ಬಂದಿಹರು ॥೧೧೧೪॥

ಯಜ್ಞದಾ ಕುಂಡದಲಿ ಜನಿಸಿರುವ ಪಾವನಳ
ಅಗ್ನಿಯಾ ದೀಪ್ತಿಯಲಿ ಬೆಳಗುತಿಹ ದ್ರೌಪದಿಯ
ಸೌಂದರ್ಯ ನೋಡುತಲಿ ಈಕೆಯಾ ಚೆಲುವಿನಾ
ಎಳ್ಳಷ್ಟು ಸೌಂದರ್ಯ ಎಮಗಿಲ್ಲ ಎಂದಿಹರು ॥೧೧೧೫॥

ಕಬ್ಬೊಗೆಯ ಕಪ್ಪಿನಾ ಕೇಶಗಳ ರಾಶಿಗಳ
ವಿತತದಾ ಮಸ್ತಕದ ಮಧ್ಯದಲಿ ಹೊಳೆಯುತಿಹ
ಬಾಲರವಿ ತೇಜದಾ ಕುಂಕುಮದಿ ಶೋಭಿಸುವ
ಚಂಪಕದ ನಾಸಿಕದ ದಾಡಿಮದ ಅಧರದಾ ॥೧೧೧೬॥

ನೀಳದಾ ಬಾಹುಗಳ ಕುಂಭಗಳ ಸ್ತನಯುಗದ
ತಾರುಣ್ಯ ತನಿರಸವು ತುಳುಕುತಲಿ ಹೊಳೆಯುತಿಹ
ಸಾಕ್ಷಾತ್ತು ಲಕ್ಷ್ಮಿಯಾ ರೂಪದಲಿ ಶೋಭಿಸುವ
ದ್ರೌಪದಿಯ ನೋಡುತಲಿ ಬೆರಗಾಗಿ ನಿಂದಿಹರು ॥೧೧೧೭॥

ಈಕೆಯಾ ಸೌಂದರ್ಯ ತಮಗಿಲ್ಲವೆನ್ನುತಲಿ
ಮನದೊಳಗೆ ಮತ್ಸರದ ದಾವಾಗ್ನಿ ಮೂಡಿಹುದು
ದ್ರೌಪದಿಯು ಭಾನುಮತಿ ಮೊದಲಾದ ನಾರಿಯರ
ಸತ್ಕರಿಸಿ ಕುಶಲವನು ಕೇಳುತಲಿ ಕಳುಹಿದಳು ॥೧೧೧೮॥

ಮಜ್ಜನದಿ ಭೋಜನದಿ ಹರಟೆಯ ವಿನೋದದಲಿ
ಸಂಗೀತ ನೃತ್ಯದಲಿ ಕಾಲವನು ಕಳೆಯುತಲಿ
ನಿಶೆಸುತ್ತ ಪಸರುತಿರೆ ತಮಗಾಗಿ ರಚಿಸಿರುವ
ನಿದ್ರೆಯಾ ನಿಲಯಗಳ ಹೊಕ್ಕಿಹರು ಪಾಂಡವರು ॥೧೧೧೯॥

**ಆಕಪಟಿ ಸೌಬಲನು ಇಕ್ಕಿರುವ ಜಾಲದಲಿ ।**
**ಧರ್ಮಜನು ಸಿಲುಕುತಲಿ ದ್ಯೂತವನು ಆಡಿಹನು ॥**

ಬ್ರಾಹ್ಮೀ ಮುಹೂರ್ತದಲಿ ಏಳುತಲಿ ಪಾಂಡವರು
ಸ್ನಾನವನು ಸಂಧ್ಯಾದಿ ಕರ್ಮಗಳ ಗೈಯ್ಯುತಲಿ
ಹೊಳೆಹೊಳೆವ ವಸ್ತ್ರಗಳ ಆಭರಣ ಧರಿಸುತಲಿ
ವರಸಭಾಮಂದಿರವ ಹೊಕ್ಕಿಹರು ವೈಭವದಿ ॥೧೧೨೦॥

ಬಂದಿರುವ ಅಪರಿಮಿತ ವೈಭವದ ನೃಪರುಗಳ
ಅವರವರಿಗುಚಿತದಲಿ ವಂದಿಸುತ ನಮಿಸುತಲಿ
ಹೊಳೆಹೊಳೆವ ಮಣಿಖಚಿತ ರತ್ನಗಳ ಪೀಠದಲಿ
ಐವರೂ ಪಾಂಡವರೂ ಶೋಭಿಸುತ ಕುಳಿತಿಹರು ॥೧೧೨೧॥

ಆಗಲಾ ಸೌಬಲನು ನೋಡುತಲಿ ಧರ್ಮಜನೆ
ಪ್ರೇಕ್ಷಕರ ನಿಕರದಲಿ ಸಭೆಯೆಲ್ಲ ತುಂಬಿಹುದು
ದ್ಯೂತವನು ನೋಡಲಿಕೆ ಕಾತರದಿ ಕುಳಿತಿಹರು
ಪಣವನ್ನು ನಿರ್ಧರಿಸಿ ಆಟವನು ಆಡುವುದು ॥೧೧೨೨॥

ಈ ಪರಿಯೆ ಆ ಶಕುನಿ ನುಡಿಯುತಿರೆ ಧರ್ಮಜನು
ದ್ಯೂತಮಿದು ಅಹಿತಕರ ಪಾಪಕರವೆನಿಸುವುದು
ಕ್ಷತ್ರಿಯರ ಸತ್ಯಕ್ಕೆ ಸಾಮರ್ಥ್ಯ ದರ್ಶನಕೆ
ಮೋಸದಾ ದ್ಯೂತದಲಿ ಸ್ಥಾನವೇ ಇಲ್ಲೆಂದ ॥೧೧೨೩॥

ಕಪಟದಲಿ ಮಾತ್ರವೇ ಜೂಜಿನಲಿ ಜಯವಿಹುದು
ಪಾಪದೀ ದ್ಯೂತವನು ಸಜ್ಜನರು ನಿಂದಿಪರು
ಕುಹಕಿಗಳ ಪರಿಯಲ್ಲಿ ವಂಚನೆಯ ಮಾಡುತಲಿ
ಎಮ್ಮನ್ನು ಜೂಜಿನಲಿ ಗೆಲ್ಲದಿರು ಎಂದಿಹನು ॥೧೧೨೪॥

ಕೈಚಳಕ ಮಾತ್ರದಲಿ ಲೇತ್ತಗಳು
ಇದರೊಳಗೆ ಮೋಸವದು ಎಳ್ಳನಿತು ಕಾಣದದು
ಒಂದುಸಲ ಸೋತೊಡೆಯು ಮತ್ತೊಮ್ಮೆ ಗೆಲ್ಲುವನು
ಕ್ಷತ್ರಿಯರು ವೀರರುಗಳಿದಕಂಜದಿಹರೆಂದ ॥೧೧೨೫॥

ಧರ್ಮಜನೆ ಪಣವನ್ನು ಹಚ್ಚುವದು ತಪ್ಪಲ್ಲ
ಪಣವನ್ನು ಗೆಲ್ಲುವುದು ಸೋಲುವುದು ಸಹಜಮಿದೆ
ಸೋತಾಗ ನೋಯದಲೆ ಗೆದ್ದಾಗ ಸುಖಿಸದಲೆ
ಆಟದಾ ಗೋಸ್ಕರವೆ ಆಟವನು ಆಡುವುದು ॥೧೧೨೬॥

ನೃಪರುಗಳು ಸಕಲರೂ ಕಾತರದಿ ಈ ಕ್ಷೇಪಂ
ಕಾಲವನು ಕಳೆಯದಲೆ ಪಣವನ್ನು ಘೋಷಿಪುದು
ದ್ಯೂತವನು ಪ್ರಾರಂಭಗೈಯುವುದು ಎನ್ನುತಲಿ
ಆ ಶಕುನಿ ನುಡಿಯುತಿರೆ ಧರ್ಮಜನು ನುಡಿದಿಹನು ॥೧೧೨೭॥

ಲಕ್ಷ್ಮಿಯಾ ರೂಪದಲಿ ಪೂಜೆಯನು ಕೊಳ್ಳುತಿಹ
ಧನಕನಕ ಐಶ್ವರ್ಯ ಪಣವಾಗಿ ಇರಿಸುವುದು
ಮಹಪಾಪವಿರುತಿಹುದು ಕಪಟದಲಿ ಪರದ್ರವ್ಯ
ಅಪಹರಣ ಗೈಯ್ಯುವುದು ಪಾತಕವು ಎನಿಸುವದು ॥೧೧೨೮॥

ಮೊದಲಿಂಗೆ ದ್ಯೂತಮಿದು ಸರಸದಲಿ ಮೋಜಿನಲಿ
ಪ್ರಾರಂಭವಾಗುತಲಿ ಆನಂದವೀಯುವುದು
ಕೊನೆಯಲ್ಲಿ ದ್ವೇಷದಲಿ ಈರ್ಷೆಯಲಿ ಯುದ್ಧದಲಿ
ವಂಶದಾ ನಾಶವನು ಗೈಯ್ಯುವುದು ಎಂದಿಹನು ॥೧೧೨೯॥

ಧರ್ಮಜನೆ ಆಟದಲಿ ಸೋಲುಗಳು ಗೆಲುವುಗಳು
ಯುದ್ಧದಾ ಪರಿಯಲ್ಲಿ ಸಹಜದಲಿ ಇರುತಿಹವು
ವೀರನಾ ಕ್ಷತ್ರಿಯನು ದುರ್ಬಲನ ಜಯಿಸುವನು
ಪಂಡಿತ ಅಪಂಡಿತನ ಜಯಿಸುವದು ರೂಢಿಯಿದೆ ॥೧೧೩೦॥

ಇದರೊಳಗೆ ದೋಷವನು ಎಣಿಸದೇ ಇರುತಿಹರು
ಜೂಜಿನಲಿ ನಿಷ್ಣಾತರೆನಿಸಿರುವ ಜಾಣರು
ಲೆತ್ತಗಳ ಎಸೆತದಲಿ ಜಯವನ್ನು ಗಳಿಸುವರು
ಜೂಜನ್ನು ಗೆಲ್ಲುವದೆ ಆಟದಾ ಉದ್ದೇಶ ॥೧೧೩೧॥

ದ್ಯೂತವನು ಆಡಲಿಕೆ ಆಮಂತ್ರಣತ್ತಿಹೆನು
ಎನ್ನೊಡನೆ ಆಡಲಿಕೆ ನೀನಂಜುತಿರ್ದೊಡೆಯು
ಆಟವನು ನಿಲ್ಲಿಪುದು ನೀ ಅಂಜುಬುರುಕೆಂದು
ನೃಪರುಗಳು ನಿಂದಿಪರು ಎನ್ನುತಲಿ ನುಡಿದಿಹನು ॥೧೧೩೨

ಹೇ ಶಕುನಿ ಅಂಜುಗುಳಿ ನಾನಲ್ಲ ಕೇಳುವುದು
ಎಲ್ಲವೂ ವಿಧಿವಶವು ವಿಧಿಯಂತೆ ನಡೆಯುವದು
ಎನಗಾರು ಸರಿಸಮರು ಪಣವನ್ನು ಹಚ್ಚುವರು
ಆರೊಡನೆ ಆಡುವುದು ಹೇಳೆಂದು ನುಡಿದಿಹನು ॥೧೧೩೩॥

ಆ ಕ್ಷಣದಿ ಕೌರವನು ಕೇಳುತಲಿ ಹರ್ಷದಲಿ
ಅಗಣಿತದ ರತ್ನಗಳ ವಜ್ರಗಳ ಒಡವೆಗಳ
ಪಣವಾಗಿ ನಾಸಿಡುವೆ ಮಾವನೀ ಸೌಬಲನು
ಎನ್ನಪರ ಆಟವನು ಆಡುವನು ಎಂದಿಹನು ॥೧೧೩೪॥

ಕೌರವನೆ ಒಬ್ಬನಾ ಪರವಾಗಿ ಬೇರೊಬ್ಬ
ಆಟವನು ಆಡುವುದು ನಿಯಮಕ್ಕೆ ಬಾಹಿರವು
ನಿನ್ನಯಾ ಇಚ್ಛೆಯದು ಈ ಪರಿಯೆ ಇರ್ದೊಡೆಯು
ಅದರಂತೆ ಆಡವುದು ಎಂದಿಹನು ಧರ್ಮಜನು ॥೧೧೩೫॥

ದ್ಯೂತವನು ನೋಡಲಿಕೆ ಅಪರಿಮಿತ ನೃಪರುಗಳು
ಧೃತರಾಷ್ಟ್ರ ಭೂಪತಿಯ ಸಹಿತದಲಿ ಐತಂದು
ಸಭೆಯೊಳಗೆ ಹೊಳೆಯುತಿಹ ಮಣಿರತನ ಖಚಿತದಲಿ
ಶೋಭಿಸುವ ಆಸನದ ಶ್ರೇಣಿಯಲಿ ಕುಳಿತಿಹರು ॥೧೧೩೬॥

ಗಾಂಗೇಯ ಗುರುದ್ರೋಣ ಕೃಪವಿದುರ ವಿನ್ನದಲಿ
ಧೃತರಾಷ್ಟ್ರ ಧರಣಿಪನ ಹಿಂಬದಿಗೆ ಕುಳಿತಿಹರು
ಬಂಧುಗಳ ಮಂತ್ರಿಗಳ ಪುರಜನರ ಸಹಿತದಲಿ
ಆ ಸಭೆಯು ಇಂದ್ರಸಭೆಯಲ್ಲಿ ಶೋಭಿಸಿತು ॥೧೧೩೭॥

**ಗಜತುರಗ ಶಸ್ತ್ರಾಸ್ತ್ರ ಸಂಪದವ ರಾಜ್ಯವನು ।**
**ಸಕಲವನು ಸೋತಿಹನು ಜೂಜಿನಲಿ ಧರ್ಮಜನು ॥**

ಧರ್ಮಜನೆ ಆಟವನು ಆಡಲಿಕೆ ಪಣವನ್ನು
ಹಚ್ಚುವದು ಯೋಗ್ಯವದು ಇಲ್ಲದಿರೆ ಆಟದಲಿ
ಸ್ವಾರಸ್ಯವಿಲ್ಲದೆಯೆ ನೀರಸವು ಎನಿಸುವುದು
ಹಚ್ಚು ನೀ ಪಣವನ್ನು ಎಂದಿಹನು ಸೌಬಲನು ॥೧೧೩೮॥

ಆಗಲಾ ಧರ್ಮಜನು ಕೊರಳೊಳಗೆ ಹೊಳೆಯುತಿಹ
ರತ್ನಗಳ ವಜ್ರಗಳ ವೈಡೂರ್ಯ ಮೌಕ್ತಿಕದ
ಶೋಭಿಸುವ ಹಾರವನು ತೆಗೆಯುತಲಿ ಪಣವಾಗಿ
ಸಾಗರದ ಮಥನದಲಿ ದೊರೆತಿರುವ ದಿವ್ಯಮಿಹ ॥೧೧೩೯॥

ಅಪರಿಮಿತ ಮೌಲ್ಯದಾ ಈ ಹಾರ ಹಚ್ಚುವೆನು
ಎನ್ನುತಿರೆ ಕೇಳುತಲಿ ಕೌರವನು ಎನ್ನಲ್ಲಿ
ಇರುತಿರವ ಅಗಣಿತದ ಧನಕನಕ ಒಡವೆಗಳ
ಪಣವಾಗಿ ಹಚ್ಚುವೆನು ನೀ ಗೆಲ್ಲು ಎಂದಿಹನು ॥೧೧೪೦॥

ದುಗುನವನು ತಿಗುನವನು ಛಕ್ಕವನು ದಾಳಗಳ
ಆ ಶಕುನಿ ಹಾಕಿದನು ಇಚ್ಛಿಸಿದ ರೀತಿಯಲಿ
ತೆತ್ತಗಳ ವಶದೊಳಗೆ ಇರಿಸಿರ್ದ ಸೌಬಲನು
ತಾ ಪೇಳ್ದ ಸಂಖ್ಯೆಯಲಿ ದಾಳಗಳು ಬಿದ್ದಿಹವು ॥೧೧೪೧॥

ಋಜುವಾದ ಮಾರ್ಗದಲಿ ಆಡುತಿಹ ಯಮಸೂನು
ಪಣವಿಟ್ಟ ಧನಕನಕವೆಲ್ಲವನು ಸೋಲುತಿರೆ
ಆಟವನು ಗೆದ್ದಿಹೆನು ಧನವೆಲ್ಲ ವಶವಾಯ್ತು
ಎನ್ನುತಲಿ ಆ ಶಕುನಿ ಬೊಬ್ಬಿರಿದು ಗರ್ಜಿಸಿದ ॥೧೧೪೨॥

ದುರ್ಯೋಧನಾದಿಗಳು ಹರ್ಷದಲಿ ನಗುತಲಿರೆ
ಸೌಬಲನು ಬೇರೆಯಾ ಪಣವನ್ನು ಹಚ್ಚುವುದು
ಆ ಇಂದ್ರಪ್ರಸ್ಥದಾ ಸಾಮ್ರಾಜ್ಯದಧಿಪತಿಗೆ
ಐಶ್ವರ್ಯ ಕೊರತೆಯದು ಏನಿತಿಲ್ಲ ಎಂದಿಹನು ॥೧೧೪೩॥ ಏ

ಅರವತ್ತು ಸಾವಿರದ ರತ್ನಗಳ ಹಾರಗಳ
ಮೌಕ್ತಿಕದ ಮಾಲೆಗಳ ಸ್ವರ್ಣದಾ ಒಡವೆಗಳ
ಲಕ್ಷದಾ ಸಂಖ್ಯೆಯಲಿ ಪಣವಾಗಿ ಹಚ್ಚುತಲಿ
ತಿಗುನವನು ಹಾಕುವುದು ಎಂದಿಹನು ಯಮಸೂನು ॥೧೧೪೪॥

ಬಾರಲೆಯ ತಿಗುನವೇ ಕೌರವನು ಸುಗುಣಿಯು
ತಿಗುನವೇ ಬಾರೆಂದು ಕೂಗುತಲಿ ಸೌಬಲನು
ದಾಳವನು ಒಗೆಯುತಿರೆ ತಿಗುಣವೇ ಬೀಳುತಿರೆ
ಆ ಶಕುನಿ ಕೌರವಗೆ ಜಯಜಯವು ಎಂದಿಹನು ॥೧೧೪೫॥

ಮುಂದಿನಾ ಪಣವೇನು ಎನ್ನುತಿರ ಸೌಬಲನು
ಎಂಬತ್ತು ಸಾವಿರದ ರಜತದಾ ರಥಗಳನು
ಲಕ್ಷದಾ ಸಂಖ್ಯೆಯಲಿ ಸಂಗ್ರಾಮದುದಶ್ವಗಳ
ಪಂಚಮಕೆ ಪಣವಿಟ್ಟೆ ಎಂದಿಹನು ಧರ್ಮಜನು ॥೧೧೪೬॥

ಬಾ ಬಾರೊ ಪಂಚಮವೆ ಕೌರವನ ಸಂಚಿತದ
ಭಾಗ್ಯದಾ ಫಲವೆಂದು ದಾಳವನು ಹಾಕುತಿರೆ
ಹೇಳಿದಾ ಪರಿಯಲ್ಲಿ ಪಂಚಮವು ಬೀಳುತಿರೆ
ನೀ ಸೋತೆ ಧರ್ಮಜನೆ ಎಂದಿಹನು ಸೌಬಲನೆ ॥೧೧೪೭॥

ವರಇಂದ್ರ ಪ್ರಸ್ಥದಾ ವೈಭವದ ಘನದೊರೆಗೆ
ಪಣವನ್ನು ಹಚ್ಚಲಿಕೆ ಕೊರತೆಯದು ಇರುತಿಹುದೆ
ಸೋಲಿಂಗೆ ಅಂಜುತಲಿ ಚಿಂತೆಯನು ಗೈಯ್ಯುವೆಯಾ
ಎನ್ನುತಲಿ ಖಳಶಕುನಿ ಕೊಂಕಿನಲಿ ನುಡಿದಿಹನು ॥೧೧೪೮॥

ಸೋಲಿಂಗೆ ಅಂಜುವನು ನಾನಲ್ಲ ಸೌಬಲನೆ
ಧನಕನಕ ಸಂಪದವ ಆಶಿಸುವ ನಾನಲ್ಲ
ಐವತ್ತು ಸಾವಿರದ ಶಕ್ತಿಯುತ ಆನೆಗಳ
ಸಪ್ತಮಕೆ ಪಣವಿಹುದು ಎಂದಿಹನು ಧರ್ಮಜನು ॥೧೧೪೯॥

ಬೀಳಲವೊ ಕೌರವನ ಸೌಭಾಗ್ಯ ಸಪ್ತಮವೆ
ಎನ್ನುತಲಿ ಸೌಬಲನು ದಾಳವನು ಎಸೆಯುತಿರೆ
ಸಪ್ತಮವು ಬೀಳುತಿರೆ ಧರ್ಮಜನ ಆನೆಗಳು
ಕೌರವನ ದಡ್ಡಿಯನು ಸೇರಿದವು ಆ ಕ್ಷಣದಿ ॥೧೧೫೦॥

ಧರ್ಮಜನೆ ಅಂಜುವನು ನೀನಲ್ಲ ಎಂದಿಗೂ
ಧನಕನಕ ಆಭರಣ ಆನೆಗಳು ಕುದುರೆಗಳು
ಎಲ್ಲವೂ ತೀರಿಹವು ಪಣವನ್ನು ಹಚ್ಚಲಿಕೆ
ನಿಲ್ಲ ಎನ್ನುತಲಿ ಹಿಂಜರಿಯುತಿಹೆಯಾ ॥೧೧೫೧॥

ಕೊಂಕುನುಡಿ ನುಡಿಯದಿರು ಹೇ ಶಕುನಿ ಕೇಳುವುದು
ಚಿತ್ರರಥ ಗಂಧರ್ವ ಅರ್ಜುನಗೆ ಕೊಟ್ಟಿರುವ
ಈರೈದು ಸಾವಿರದ ಸಾಹಸದ ಅಶ್ವಗಳ
ಅಷ್ಟಮಕೆ ಹಚ್ಚಿಹೆನು ಎಂದಿಹನು ಧರ್ಮಜನು ||೧೧೫೨||

ಕೌರವನ ಇಷ್ಟವೇ ಅಷ್ಟಮವೆ ಬೀಳಲವೊ
ಎನ್ನುತಲಿ ಘುಳುಘುಳಿಸಿ ಲೆತ್ತವನು ಹಾಕುತಿರೆ
ಅಷ್ಟಮವೆ ಬೀಳುತಿರೆ ಆ ಶಕುನಿ ಅಶ್ವಗಳು
ಕೌರವನ ಲಾಯಕ್ಕೆ ಸೇರಿದವು ಎಂದಿಹನು ||೧೧೫೩||

ಪಣವನ್ನು ಹಚ್ಚಲಿಕೆ ಇನ್ನಾವ ವಸ್ತು ಇದೆ
ಎಲ್ಲವನು ಕಳಕೊಂಡು ಕಡುಬಡವನಾಗಿಹೆಯಾ
ಮುಂದಿನಾ ಪಣವನ್ನು ಬೇಗನೇ ಹಚ್ಚುವದು
ಎನ್ನುತಲಿ ನಸುನಗುತ ಆ ಶಕುನಿ ನುಡಿದಿಹನು ||೧೧೫೪||

ಇದೊ ಕೋಟಿ ಸಂಖ್ಯೆಯಾ ಸ್ವರ್ಣದಾನಾಣ್ಯಗಳ
ಎನ್ನಯಾ ಮಡದಿಯರ ಹೊನ್ನಿನಾಭರಣಗಳ
ಎನ್ನಯಾ ಸೋದರರ ಚಿನ್ನದಾ ಒಡವೆಗಳ
ನವಮಕ್ಕೆ ಪಣವಿಟ್ಟೆ ಎಂದಿಹನು ಧರ್ಮಜನು ||೧೧೫೫||

ನವಮವೇ ಬೀಳಲವೊ ನಮಿಸುವೆನು ನಿನಗೆಂದು
ಸೌಬಲನು ಘುಳುಘುಳಿಸಿ ದಾಳವನು ಎಸೆಯುತಿರೆ
ನವಮವೇ ಬೀಳುತಿರೆ ಅಭರಣ ನಾಣ್ಯಗಳ
ಎಲ್ಲವನು ಸವರಿದನು ಕೌರವನ ಅರಮನೆಗೆ ||೧೧೫೬||

ರಾಜಸೂಯಾಧ್ವರವ ಗೈಯುತಲಿ ನೃಪರುಗಳ
ಕಪ್ಪಗಳ ಕಾಣಿಕೆಯ ಕೊಂಡಿರುವ ಒಡವೆಗಳು
ಧನವಿಲ್ಲ ತೀರಿಹುದು ಮುಂದಿನಾ ಪಣವೇನು
ಎನ್ನುತಲಿ ಧರ್ಮಜನ ಜರೆಯುತಲಿ ನುಡಿದಿಹನು ||೧೧೫೭||

ಈಗೊ ಎನ್ನ ಮಡದಿಯರ ಸಾವಿರದ ಕೆಳದಿಯರ
ಅರಮನೆಯ ಅಗಣಿತದ ಸಂಖ್ಯೆಯಾ ದಾಸಿಯರ
ಅಪರಿಮಿತ ಸೇವಕರ ಪಣವಾಗಿ ಇರಿಸಿಹೆನು
ದಶಮವನು ಹಾಕುವುದು ಎಂದಿಹನು ಧರ್ಮಜನು ||೧೧೫೮||

ಗಾಂಗೇಯ ಗುರುಕೃಪರು ನೋಡುತಲಿ ಮನದೊಳಗೆ
ಅಕಟಕಟ ಧರ್ಮದಾ ಮೂರ್ತಿಯಿಹ ಧರ್ಮಜಗೆ
ಈ ಪರಿಯ ಕಷ್ಟವದು ಬಂದಿಹುದೆ ಎನ್ನುತಲಿ
ಮನದೊಳಗೆ ನೊಂದಿಹರು ಬೆಂದಿಹರು ಕುಂದಿಹರು ||೧೧೫೯||

**ಕುಲನಾಶಗೈಯ್ಯುವಾ ಕಪಟದೀ ದ್ಯೂತವನು ।**
**ತ್ಯಜಿಸುವುದು ಎನ್ನುತಲಿ ವರವಿದುರ ನುಡಿದಿಹನು ॥**

ಆಗಲಾ ವರವಿದುರ ಕೋಪದಲಿ ಏಳುತಲಿ
ಧೃತರಾಷ್ಟ್ರ ಭೂಪತಿಯೆ ಮಕ್ಕಳುಗಳಾಡುತಿಹ
ಕುಲನಾಶಗೈಯ್ಯುವೀ ಆಟವನು ನೋಡುತಲಿ
ಮೋಜಿನಲಿ ಕುಳಿತಿರುವ ನೀ ಮೂರ್ಖನಿರುತಿಹೆಯಾ ||೧೧೬೦||

ಶಾಸ್ತ್ರಗಳನರಿತಿರುವ ಜ್ಞಾನಿಯಿಹೆ ವೃದ್ಧನಿಹೆ
ವಂಶದಾ ಬೇರನ್ನು ಕೊಯ್ಯುವೀ ಕೊಲೆಗಡುಕ
ದುರ್ಯೋಧನಾಡುತಿಹ ದ್ಯೂತದಲಿ ರಮಿಸುತಲಿ
ಸುಮ್ಮನೇ ಕುಳಿತಿರುವ ನೀ ಹುಚ್ಚನಿರುತಿಹೆಯಾ ||೧೧೬೧||

ನಿನ್ನಯಾ ಸೋದರನ ಪಾಂಡುವಿನ ಮಕ್ಕಳಾ
ಪಾಂಡವರ ಸರ್ವಸ್ವ ಸಂಪದವ ಧನವನ್ನು
ಅಪಹರಣ ಗೈದಿರುವ ನಿನ್ನಯಾ ಮಗನನ್ನು
ಊರಿನಾ ಹೊರಗಟ್ಟಿ ದಬ್ಬುವುದು ಎಂದಿಹನು ||೧೧೬೨||

ಗೆದ್ದಿರುವ ವಸ್ತುಗಳನೆಲ್ಲವನು ಪುನರಪಿಯು
ಪಾಂಡವರಿಗೀಯುತಲಿ ಪ್ರೀತಿಯಲಿ ಸಂತೈಸು
ಇಲ್ಲದಿರೆ ದಾಯಾದಿ ಮತ್ಸರದಿ ಕುರುಕುಲವ
ಯುದ್ಧದಲಿ ಭಸ್ಮವದು ಆಗುವುದು ಎಂದಿಹನು ||೧೧೬೩||

ವಂಶವನು ರಕ್ಷಿಸಲು ಮಗನನ್ನು ತೊರೆಯುವುದು
ಊರನ್ನು ರಕ್ಷಿಸಲು ಕುಲವನ್ನು ತ್ಯಜಿಸುವುದು
ದೇಶವನು ರಕ್ಷಿಸಲು ಊರನ್ನು ತೊರೆಯುವುದು
ಆತ್ಮದಾ ಉನ್ನತಿಗೆ ಪೃಥ್ವಿಯನು ತ್ಯಜಿಸುವುದು ||೧೧೬೪||

ಇದು ಶುಕ್ರ ನೀತಿಯಿದೆ ನಿನ್ನಯಾ ದುಷ್ಟಮಗ
ಪಾಂಡವರ ಐಶ್ವರ್ಯ ರಾಜ್ಯವನು ಗೆಲ್ಲಲಿಕೆ
ಆಡುತಿಹ ಕಪಟದಾ ದ್ಯೂತದಲಿ ಸಿಲುಕುತಲಿ
ಕೊನೆಯಲ್ಲಿ ನೀವೆಲ್ಲ ನಿರ್ನಾಮರಾಗುವಿರಿ ||೧೧೬೫||

ಪಾಂಡವರು ಸಾಮಾನ್ಯರೆನ್ನುತಲಿ ಬಗೆದಿಹೆಯಾ
ಕಲಿಭೀಮ ಫಲುಗುಣನು ಕೋಪವದು ತಾಳಿದರೆ
ಹರಿಹರ ಬ್ರಹ್ಮಾದಿ ಸುರರುಗಳು ಅಂಜುವರು
ಕುರುಕುಲವ ದಹಿಸುತಲಿ ಭಸ್ಮವನು ಮಾಡುವರು ||೧೧೬೬||

ಮೊದಲಿಂಗೆ ದ್ಯೂತಮಿದು ಅಮೃತದಾ ಪರಿಯಲ್ಲಿ
ಸವಿಯಾಗಿ ಸಂತಸವ ಆನಂದವೀಯುವುದು
ಕೊನೆಯಲ್ಲಿ ಕಹಿಯಾಗಿ ವಿಷವಾಗಿ ಪರಿಣಮಿಸಿ
ಸಕಲರಾ ಪ್ರಾಣಗಳ ಕೊಳ್ಳುವುದು ಎಂದಿಹನು ||೧೧೬೭||

ಎತ್ತಣದ ಭರತಕುಲ ಘನಮಹಿಮ ನೃಪರುಗಳು
ಎತ್ತಣದ ಈ ಶಕುನಿ ಕಪಟಧಲಿ ಲೆತ್ತದಲಿ
ಪಾಂಡವರ ಐಶ್ವರ್ಯ ಅಪಹರಣ ಗೈದಿಹುದು
ಸರ್ವಜನ ಸಮ್ಮತವೆ ಯೋಗ್ಯವೇ ಹೇಳೆಂದ ॥೧೧೬೮॥

ಧೃತರಾಷ್ಟ್ರ ಭೂಪತಿಯೆ ನಿನ್ನಯಾ ಕಣ್ಣುಗಳು
ಕುರುಡಾಗಿ ಇರ್ದೊಡೆಯು ಬುದ್ಧಿಯೂ ಕುರುಡಾಯ್ತೆ
ಕುಲನಾಶಗೈಯ್ಯುವಾ ನಿನ್ನಯಾ ಕುವರಂಗೆ
ಬುದ್ಧಿಯನು ಹೇಳಲಿಕೆ ಅಸಮರ್ಥನಾಗಿಹೆಯಾ ॥೧೧೬೯॥

ಜಗದೊಳಗೆ ಕೀರ್ತಿಯಲಿ ಮೆರೆದಿರುವ ಶ್ರೇಷ್ಠರಾ
ವರಪುರುವು ನಳ ನಹುಷ ಮಾಂಧಾತ ದುಷ್ಯಂತ
ಕುರುನೃಪನು ಸಂವರಣ ಯಯಾತಿಯಾ ವಂಶದಲಿ
ಕುಲನಾಶಗೈಯುವಾ ನೀನೆಂತು ಜನಿಸಿರುವೆ ॥೧೧೭೦॥

ಸೌಬಲನ ಸ್ನೇಹದಲಿ ನಿನ್ನ ಮಗ ಕೆಟ್ಟಿಹನು
ಕುಹಕದಲಿ ಮೋಸದಲಿ ನಿಸ್ಸೀಮ ನಿಪುಣನಿಹ
ಈ ಶಕುನಿ ಕುರುಕುಲದ ಸಂತತಿಯನೆಲ್ಲವನು
ಮೃತ್ಯುವಿನ ಬಾಯೊಳಗೆ ಬಲಿಕೊಡುತಲಿರುತಿಹನು ॥೧೧೭೧॥

ಮಂದಮತಿ ಮಕ್ಕಳುಗಳಾಡುತಿಹ ದ್ಯೂತದಲಿ
ಮೂರ್ಖರಾ ಪರಿಯಲ್ಲಿ ಸಂತಸವ ಪಡುತಲಿಹೆ
ನಗೆಹೋಗಿ ಹೊಗೆಯಾಗಿ ದಾವಾಗ್ನಿ ಪ್ರಜ್ವಲಿಸಿ
ಕುರುಕುಲದ ವನವನ್ನು ದಹಿಸುವದ ಬಲ್ಲೆಯಾ ॥೧೧೭೨॥

ಈ ಕ್ಷಣದಿ ಆ ಕಪಟ ಕುಹಕಿಯನು ಶಕುನಿಯನು
ರಾಜ್ಯದಾ ಹೊರಗಡೆಗೆ ದೂರದಲಿ ಅಟ್ಟುವುದು
ಇಲ್ಲದಿರೆ ಭೀಮಾರ್ಜುನೀರ್ವರೂ ಯುದ್ಧದಲಿ
ಕುರುಕುಲವ ನಿರ್ಮೂಲ ಮಾಡುವರು ಎಂದಿಹನು ॥೧೧೭೩॥

ದುರ್ಯೋಧನಾಲಿಸುತ ರೋಷದಲಿ ಕುದಿಯುತಲಿ
ಹೇ ವಿದುರ ನಿನ್ನಯಾ ಮನವನ್ನು ನಾ ಬಲ್ಲೆ
ನಮ್ಮನ್ನು ದ್ವೇಷಿಸುತ ಪಾಂಡವರ ಪ್ರೀತಿಸುವ
ನಿನ್ನಯಾ ತನುವಿಲ್ಲಿ ಮನವಲ್ಲಿ ಎಂದಿಹನು ॥೧೧೭೪॥

ಎಮ್ಮಯಾ ಆಶ್ರಯದ ನೆರಳನ್ನು ಪಡೆಯುತಲಿ
ನಮ್ಮಮನೆಯನ್ನವನು ಉಣ್ಣುತಲಿ ನಮ್ಮಯಾ
ವೈರಿಗಳ ಪಾಂಡವರ್ಗೆ ಬೆಂಬಲವ ಕೊಡುತಿರುವ
ನೀ ಪರಮದ್ರೋಹಿ ಇಹೆ ಕೃತಘ್ನನಿಹನೆಂದಿಹನು ॥೧೧೭೫॥

ಉಂಡಮನೆಗೆರಡನ್ನು ಬಗೆಯುತಿಹ ನೀಚನಿಹೆ
ಹಿತವಚನ ನುಡಿಯುವಾ ನೆಪದಲ್ಲಿ ಮೋಸದಲಿ
ಎಮ್ಮಯಾ ಬೆನ್ನಿನಲಿ ಕ್ರೂರಲಗನಿಕ್ಕುತಿಹೆ
ಈ ಕ್ಷಣದಿ ಬೇರೆಡೆಗೆ ನೀ ಹೋಗು ಎಂದಿಹನು ॥೧೧೭೬॥

ಗಾಂಗೇಯ ಗುರುದ್ರೋಣ ಅಶ್ವತ್ಥ ಕೃಪರುಗಳು
ತುಟಿಗಳನು ಅಗಲಿಸದೆ ಮೌನದಲಿ ಕುಳಿತಿಹರು
ನೀ ಪರಮ ಜ್ಞಾನಿಯಿಹೆ ಎನ್ನುತಲಿ ತಿಳಿದಿಹೆಯಾ
ನೀ ದಾಸಿಪುತ್ರನಿಹೆ ಹೋಗೆಂದು ನುಡಿದಿಹನು ॥೧೧೭೭॥

ಕೌರವನೆ ಕಪಟಿಗಳು ಸವಿನುಡಿಯ ನುಡಿಯುತಲಿ
ನಿನ್ನಯಾ ಕೊರಳನ್ನು ಕೂಡಲಲಿ ಕೊಯ್ಯುವರು
ಹಿತವನ್ನು ಬಯಸುತಿಹ ಸಜ್ಜನರು ಹೇಳುವಾ
ಸತ್ಯವದು ಅಪ್ರಿಯವು ಕರ್ಕಶವು ಎನಿಸುವುದು ॥೧೧೭೮॥

ಸರಸದಲಿ ಮೋಜಿನಲಿ ಆಡುತಿಹ ದ್ಯೂತಮಿದು
ಘೋರತರ ಆಪತ್ತು ಕಷ್ಟವನು ತರಲಿಹುದು
ದಾಯಾದಿ ದ್ವೇಷದಲಿ ಯುದ್ಧವದು ಸಂಭವಿಸಿ
ಸಕಲರೂ ನಾಶವನು ಹೊಂದುವರು ಎಂದಿಹನು ॥೧೧೭೯॥

ಕಲಿಭೀಮನೋರ್ವನೇ ಕೌರವರನೂರ್ವರನು
ಕಡಿಕಡಿದು ಬಲಿಕೊಡುವ ಮೃತ್ಯುವಿನ ದೇವತೆಗೆ
ಫಲುಗುಣನು ನಿಮ್ಮಯಾ ಶಿರಗಳನು ನಭಕೆಸೆವ
ಖಚಿತಮಿದು ಎನ್ನುತಲಿ ಆ ವಿದುರ ನುಡಿದಿಹನು ॥೧೧೮೦॥

ನಿನ್ನಯಾ ಹಿತವಚನ ಉಪದೇಶ ಕೇಳಲಿಕೆ
ನಾವುಗಳು ನಿನ್ನನ್ನು ಕರೆಸಿಲ್ಲ ತಿಳಿಯುವುದು
ಎಮ್ಮಯಾ ಹಿತವನ್ನು ನಾವುಗಳು ಅರಿತಿಹೆವು
ಸುಮ್ಮನೇ ನೀನಿಹುದು ಎಂದಿಹನು ಕೌರವನು ॥೧೧೮೧॥

ಆಗಲಾ ಸೌಬಲನು ಧರ್ಮಜಗೆ ನುಡಿದಿಹನು
ನಿನ್ನಯಾ ವಸ್ತುಗಳನೆಲ್ಲವನು ಕಳಕೊಂಡೆ
ಇನ್ನಾವ ವಸ್ತುಗಳು ನಿನ್ನಬಳಿ ಇರ್ದೊಡೆಯು
ಬೇಗನೆ ಪಣವನ್ನು ಹಚ್ಚುವುದು ಎಂದಿಹನು ॥೧೧೮೨॥

ಹೇ ಶಕುನಿ ಎನ್ನಯಾ ಭಂಡಾರದೊಳಗಿರುವ
ಅರ್ಬುದದ ಸಂಖ್ಯೆಯಾ ಸ್ವರ್ಣದಾ ನಾಣ್ಯಗಳ
ಕೋಟಿಗಳ ರತ್ನಗಳ ವಜ್ರಗಳ ಹಾರಗಳ
ಸರ್ವಸ್ವ ಭಂಡಾರ ಪಣವಾಗಿ ಒಡ್ಡಿಹೆನು ॥೧೧೮೩॥

ಈ ತನಕ ಕಳಕೊಂಡ ವಸ್ತುಗಳನೆಲ್ಲವನು
ಈ ಪಣವಗೆಲ್ಲುತಲಿ ನಾಮತ್ತೆ ಪಡೆಯುವೆನು
ಸೋಲುವುದು ನೀ ಖಚಿತ ಹಾಕುವದು ದಶಮವನು
ಎನ್ನುತಲಿ ಧರ್ಮಜನು ಸೌಬಲಗೆ ನುಡಿದಿಹನು ॥೧೧೮೪॥

ಬಾ ಬಾರೆ ಧರ್ಮಜನ ಸಂಪದದ ಲಕುಮಿಯೇ
ಕೌರವನ ಅರಮನೆಯು ಭಂಡಾರ ಸೇರುವುದು
ಎನ್ನುತಲಿ ಜೂಜಿನಾ ಕುಶಲಮತಿ ಆ ಶಕುನಿ
ಲೆತ್ತವನು ಎಸೆಯುತಿರೆ ದಶಮವೇ ಬಿದ್ದಿಹುದು ॥೧೧೮೫॥

ಧರ್ಮಜನೆ ನಿನ್ನ ನುಡಿ ಹೊಳ್ಳಾಯ್ತು ಹುಸಿಯಾಯ್ತು
ಸರ್ವಸ್ವ ಸಿರಿತೊಲಗಿ ಭಿಕ್ಷುಕನು ನೀನಾದೆ
ಮುಂದಿನಾ ಪಣವನ್ನು ಹಚ್ಚುವದು ಇಲ್ಲದಿರೆ
ಸೋಲನ್ನು ಒಪ್ಪುವುದು ಎಂದಿಹನು ಸೌಬಲನು ॥೧೧೮೬॥

ಕ್ಷತ್ರಿಯರು ಎಂದಿಗೂ ಸೋಲನ್ನು ಒಪ್ಪದೇ
ಮುಂದಿಟ್ಟ ಹೆಜ್ಜೆಯನು ಹಿಂದಕ್ಕೆ ತೆಗೆಯದೇ
ಅಪಮಾನ ಸಹಿಸುತಲಿ ಬದುಕಿರುವಕಿಂತಲೂ
ಪ್ರಾಣವನು ನೀಗುವರು ಎಂದಿಹನು ಧರ್ಮಜನು ॥೧೧೮೭॥

ಇಗೊ ಇಂದ್ರಪ್ರಸ್ಥದಾ ರಾಜ್ಯವನು ಎಲ್ಲವನು
ಗಜತುರಗ ರಥಗಳನು ಶಸ್ತ್ರಾಸ್ತ್ರ ಕೋಟಿಯನು
ಚತುರಂಗಬಲ ಸಹಿತ ಪಣಕಾಗಿ ಒಡ್ಡಿಹೆನು
ಹಾಕುವದು ಅಷ್ಟಮವನೆಂದಿಹನು ಧರ್ಮಜನು ॥೧೧೮೮॥

ಅಕಟಕಟ ದೈವವೇ ಧರ್ಮಜಗೆ ಮುನಿದಿರಲು
ವಿಧಿಲಿಖಿತ ವಿಪರೀತ ರೀತಿಯಲಿ ಬರೆದಿರಲು
ಆ ಶಕುನಿ ಘುಳುಘುಳಿಪ ನಾದದಲಿ ಘುಳುಘುಳಿಸಿ
ಲೆತ್ತವನು ಎಸೆಯುತಿರೆ ಸಕಲರೂ ನೋಡುತಿರೆ ॥೧೧೮೯॥

ಧರ್ಮಜನ ಕೀರ್ತಿಯಾ ಕಳಸವೇ ಬಿದ್ದಂತೆ
ವರಇಂದ್ರ ಪ್ರಸ್ಥದಾ ಶ್ರೀಲಕುಮಿ ತೊರೆದಂತೆ
ಅಷ್ಟಮವೆ ಬೀಳುತಿರೆ ಅತಿಅಟ್ಟಹಾಸದಲಿ
ಸೌಬಲನು ಕುಪ್ಪಳಿಸಿ ಕುಪ್ಪಳಿಸಿ ಕುಣಿದಿಹನು ॥೧೧೯೦॥

ದುರ್ಯೋಧನಾದಿಗಳು ಕರ್ಣನು ಜಯದ್ರಥನು
ಕೇಕೆಯನು ಹಾಕುತಲಿ ಕರಹೊಯ್ದು ನಕ್ಕಿಹರು
ಗಾಂಗೇಯ ಗುರುದ್ರೋಣ ಅಶ್ವತ್ಥ ವರಕೃಪರು
ಮೊದಲಾಗಿ ಸಕಲರೂ ಮರಮರನೆ ಮರುಗಿದರು ॥೧೧೯೧॥

ಆ ರಾಹು ತುಡುಕಿರುವ ಚಂದ್ರನಾ ಪರಿಯಲ್ಲಿ
ಧರ್ಮಜನ ಮುಖಕಮಲ ನಿಸ್ತೇಜವಾಗಿಹುದು
ಹಿಮಸುರಿಯೆ ಬಾಡಿರುವ ಕಮಲದಾ ಪರಿಯಲ್ಲಿ
ಧರ್ಮಜನ ಮುಖಕಮಲ ಬಾಡಿಹುದು ಕುಂದಿಹುದು ॥೧೧೯೨॥

ಎತ್ತಣದ ಈ ದ್ಯೂತ ಎತ್ತಣದ ಈ ಶಕುನಿ
ಎತ್ತಣದ ದ್ಯೂತಮಿದು ಎತ್ತಣದ ಆಟವಿದು
ಶಕುನಿಯಾ ಕತ್ತನ್ನು ಕತ್ತರಿಸುವ ವೀರರು
ಸಭೆಯೊಳಗೆ ಇಲ್ಲವೇ ಎಂದಿಹರು ಸಕಲರು ॥೧೧೯೩॥

ಸರ್ವವನು ನೀಗುತಲಿ ಭಿಕ್ಷುಕನು ನೀನಾದೆ
ಈಗಾವ ಪಣವನ್ನು ಹಚ್ಚುತಿಹೆ ಹೇಳುವುದು
ಸರ್ವರೂ ಆಟವನು ಕಾತರದಿ ನೋಡುವರು
ತಳುವದಲೆ ಬೇಗನೆ ಹೇಳೆಂದ ಸೌಬಲನು ॥೧೧೯೪॥

**ಸೋದರರ ನಾಲ್ವರನು ಪಣವಾಗಿ ಹಚ್ಚುತಲಿ ।**
**ಯಮಸುತನು ಸೋತಿಹನು ಕುಹಕದಾ ದ್ಯೂತದಲಿ ॥**

ಆಗಲಾ ಯಮಸುತನು ಮನದೊಳಗೆ
ರಾಜ್ಯವನು ಐಶ್ವರ್ಯವೆಲ್ಲವನು ಕಳಕೊಂಡೆ
ಎನ್ನಯಾ ಪ್ರಾಣಗಳ ಪರಿಯಲ್ಲಿ ಇರುತಿರುವ
ಸೋದರರು ಮಾತ್ರವೇ ಇರುತಿಹರು ಎನ್ನುತಲಿ ॥೧೧೯೫॥

ಕಳಕೊಂಡ ವಸ್ತುಗಳನೆಲ್ಲವನು ನಾ ಪಡೆವೆ
ಹೇ ಶಕುನಿ ಸಹದೇವ ಸೋದರನ ಹಚ್ಚಿಹೆನು
ಸಪ್ತಮವ ಹಾಕುವದು ಎನ್ನುತಲಿ ಧರ್ಮಜನು
ನುಡಿಯುತಿರೆ ಸಪ್ತಮವೆ ಹಾಕಿಹನು ಸೌಬಲನು ॥೧೧೯೬॥

ಒಳಿಕಲಾ ಯಮಸೂನು ನಕುಲನನು ನವಮಕ್ಕೆ
ಹಚ್ಚಿಹೆನು ಎನ್ನುತಿರೆ ಆ ಶಕುನಿ ನಸುನಗುತ
ದಾಳಗಳ ಘುಳುಘುಳಿಸಿ ಎಸೆಯುತಿರೆ ಆ ಕ್ಷಣದಿ
ನವಮವೇ ಬೀಳುತಿರೆ ನಗುನಗುತ ನಲಿದಿಹನು ॥೧೧೯೭॥

ಧರ್ಮಜನೆ ಮೊದಲಿಂಗೆ ನಿನ್ನಯಾ ಸೋದರರ
ಭೀಮಾರ್ಜುನೀರ್ವರರನು ಹಚ್ಚದೆಯೆ ಪರದೇಶಿ
ಆ ನಕುಲ ಸಹದೇವರೀರ್ವರರನು ಹಚ್ಚಿರುವೆ
ಇದು ನಿನ್ನ ಸೋದರರ ಪ್ರೀತಿಯನು ತೋರುವುದು ॥೧೧೯೮॥

ಎನ್ನುತಲಿ ಆ ಶಕುನಿ ನುಡಿಯುತಿರೆ ಧರ್ಮಜನು
ದುಷ್ಟರಿಗೆ ದುರ್ಬುದ್ಧಿ ಲೋಕದೊಳು ಸಹಜವಿದು
ನಾಲ್ವರೂ ಸೋದರರು ಎನ್ನಯಾ ಪ್ರಾಣಗಳು
ಎಮ್ಮೊಳಗೆ ಬೇಧವನು ನೀಉಂಟು ಮಾಡುತಿಹೆ ॥೧೧೯೯॥

ಈಗಲೇ ನೋಡು ಪಣಕಾಗಿ ಮೂಲೋಕ ಗಂಡನನ
ಭುಜಬಲ ಪರಾಕ್ರಮನ ತ್ರೈಲೋಕ್ಯವೀರನನ
ಫಲುಗುಣನ ಚೌಗುಣಕೆ ಧನವಾಗಿ ಹಚ್ಚಿಹೆನು
ಎಸೆಯುವುದು ದಾಳವನು ಎಂದಿಹನು ಧರ್ಮಜನು ॥೧೨೦೦॥

ಅಕಟಕಟ ಧರ್ಮಜನ ಪ್ರಾಣವದು ತೊಲಗಿರುವ
ಪರಿಯಲ್ಲಿ ಲೆತ್ತವದು ಚೌಗುನದಿ ಬೀಳುತಿರೆ
ಧರ್ಮಜನ ತನುವೆಲ್ಲ ಬೆವರಿನಲಿ ನನೆಯುತಲಿ
ಸುಟ್ಟಿರುವ ಹಪ್ಪಳದ ಪರಿಯಲ್ಲಿ ಕುಂದಿಹನು ॥೧೨೦೧॥

ಕಲಿಮಲದಿ ಕಲುಷಿತವು ಆಗಿರುವ ಮನದಿಂದ
ಆವೇಶಪೂರಿತದಿ ಅಪ್ರತಿಮ ಬಲಯುತನ
ಜಗದೊಳಗೆ ಸರಿಸಾಟಿ ಇಲ್ಲದಿಹ ಮಲ್ಲನನ
ಭೀಮನನು ನವಮಕ್ಕೆ ಹಚ್ಚಿಹನು ಧರ್ಮಜನು ॥೧೨೦೨॥

ಸಭೆಯೊಳಗೆ ಕುಳಿತಿರ್ದ ನೃಪರುಗಳು ಪುರಜನರು
ಸಕಲರೂ ಕಾತರದಿ ಕಳವಳದಿ ನೋಡುತಿರೆ
ಸೌಬಲನು ಘುಳುಘುಳಿಸಿ ಲೆತ್ತವನು ಎಸೆಯುತಿರೆ
ನವಮವೇ ಬೀಳುತಿರೆ ಸಭೆಎಲ್ಲ ಮರುಗಿಹುದು ॥೧೨೦೩॥

ಸೋದರರ ಸಹಿತದಲಿ ಸರ್ವಸ್ವ ಕಳಕೊಂಡು
ಧರ್ಮಜನೆ ಕಡುಬಡವ ಭಿಕ್ಷುಕನು ನೀನಾದೆ
ಸೋಲನ್ನು ಒಪ್ಪುತಲಿ ಆಟವನು ತ್ಯಜಿಸುವುದು
ಇಲ್ಲದಿರೆ ಪಣವೇನು ಎಂದಿಹನು ಆ ಶಕುನಿ ॥೧೨೦೪

ಸೌಬಲನೆ ಎನ್ನನ್ನು ಪಣವಾಗಿ ಒಡ್ಡಿಹೆನು
ಈ ಒಂದು ಆಟದಲಿ ಸರ್ವಸ್ವ ಜಯಿಸುವೆನು
ಈ ಆಟ ಎನ್ನದಿದೆ ಹಾಕುವದು ಅಷ್ಟಮವ
ಎನ್ನುತಲಿ ಧರ್ಮಜನು ಸೌಬಲಗೆ ನುಡಿದಿಹನು ॥೧೨೦೫॥

ಕಪಟಿಗಳು ರಚಿಸಿರುವ ಕಪಟದಾ ತಂತ್ರದಲಿ
ಸಿಲುಕದಾ ನೃಪರುಗಳು ಆರಿಹರು ಜಗದೊಳಗೆ
ಬೀಳಲವೊ ಅಷ್ಟಮವೆ ಎನ್ನುತಿರೆ ಆ ಶಕುನಿ
ದಾಳವದು ಉರುಳುತಲಿ ಅಷ್ಟಮದಿ ಬಿದ್ದಿಹುದು ॥೧೨೦೬॥

ನೀ ಸೋತೆ-ನೀಸೋತೆ ಕೌರವಗೆ ಧರ್ಮಜನೆ
ಕೌರವನ ದಾಸಾದೆ ಕಸಗುಡಿಸ ಆಳಾದೆ
ಎನ್ನುತಲಿ ಆ ಶಕುನಿ ಕೇಕೆಯನು ಹಾಕುತಿರೆ
ದುರ್ಯೋಧನಾದಿಗಳು ಹರ್ಷದಲಿ ಕುಣಿದಿಹರು ॥೧೨೦೭॥

ಕೌರವನ ದಾಸಾನು ದಾಸನೇ ಧರ್ಮಜನೆ
ಪಣವಿಡಲು ಇನ್ನಾವ ಧನವಿಹುದು ನಿನ್ನಲ್ಲಿ
ಮುಂದಿನಾ ಪಣಧನವ ಹೇಳುವುದು ಎನ್ನುತಲಿ
ಸೌಬಲನು ಧರ್ಮಜಗೆ ಹಂಗಿಸುತ ನುಡಿದಿಹನು ॥೧೨೦೮॥

**ಅಕಟಕಟ ಸಾಧ್ವಿಯಳ ದ್ರೌಪದಿಯನೊಡ್ಡುತಲಿ ।**
**ಧರ್ಮಜನು ಸೋತಿಹನು ಶಕುನಿಯಾ ತಂತ್ರದಲಿ ॥**

ಕುಹಕಮತಿ ಹೇ ಶಕುನಿ ಗರ್ವದಲಿ ನುಡಿಯದಿರು
ಕಪಟದಲಿ ಗೆದ್ದಿರುವ ಎಲ್ಲವನು ಗೆಲ್ಲುವೆನು
ಎಮ್ಮೈವರೊಲುಮೆಯಾ ಪ್ರಾಣದಾ ದ್ರೌಪದಿಯ
ಪಂಚಮಕೆ ಒಡ್ಡಿಹೆನು ಎಂದಿಹನು ಧರ್ಮಜನು ॥೧೨೦೯॥

ಕೈಚಳಕದತಿನಿಪುಣ ಆ ಜಾಣ ವಂಚಕನು
ಆ ಶಕುನಿ ಲೆತ್ತವನು ಸರಿಯಾಗಿ ಜೋಡಿಸುತ
ಮೊಣಕಾಲನೂರುತಲಿ ಘುಳುಘುಳಿಪ ನಾದದಲಿ
ಬಾಬಾರೆ ಕೌರವರ ಸೌಭಾಗ್ಯನಿಧಿಯೇ ॥೧೨೧೦॥

ಬೀಳಲವೊ ಪಂಚಮವೆ ಎನ್ನುತಲಿ ಆ ಶಕುನಿ
ದಾಳಗಳನೆಸೆಯುತಿರೆ ಹೇಳಿದಾ ಪರಿಯಲ್ಲಿ
ಬರಸಿಡಿಲು ಎರಗಿದಾ ಪರಿಯಲ್ಲಿ ದಾಳಗಳು
ಪಂಚಮದಿ ಬೀಳುತಿರೆ ಸಭೆ ಎಲ್ಲ ಮರುಗಿದುದು ॥೧೨೧೧॥

ದುರ್ಯೋಧನಾದಿಗಳು ಕಲಿಕರ್ಣ ಜಯದ್ರಥನು
ಮನದೊಳಗೆ ಉಬ್ಬುತಲಿ ಸಂತಸವು ಉಕ್ಕುತಲಿ
ಗರ್ವದಲಿ ಮೀಸೆಗಳ ಹುರಿಮಾಡಿ ತೀಡುತಲಿ
ಶಿರಗಳನು ತೂಗುತಲಿ ಕೇಕೆಯನು ಹಾಕಿದರು ॥೧೨೧೨॥

ಅಕಟಕಟ ಕುರುಕುಲವ ನಾಶವನು ಮಾಡುವರು
ಪ್ರಳಯದಾ ಕಾಲವಿದು ಸನ್ನಿಹಿತವಾಗಿಹುದು
ಎನ್ನುತಲಿ ಗಾಂಗೇಯ ಗುರುದ್ರೋಣ ವರವಿದುರ
ಕಳವಳದಿ ದುಗುಡದಲಿ ಮೌನದಲಿ ಇರ್ದಿಹರು ॥೧೨೧೩॥

ಜಗವನ್ನು ನಡುಗಿಸುವ ಗಜಶಕ್ತಿ ಕಲಿಭೀಮ
ತ್ರೈಲೋಕ್ಯ ಲಯಗೊಳಿಪ ಅರ್ಜುನ ಪರಾಕ್ರಮಿಯು
ಮಾದ್ರಿಜರು ಬೆರಗಿನಲಿ ಬೆರಳನಾ ಮೂಗಿನಲಿ
ನೆಲವನ್ನು ನೋಡುತಲಿ ಅಲುಗದೆಯೆ ಕುಳಿತಿಹರು ॥೧೨೧೪॥

ಒಳಗೊಳಗೆ ಮಗಗೆಲಿದನೆಂಬುವಾ ಸಂತಸದಿ
ಆನಂದ ಗರ್ವದಲಿ ಉಬ್ಬುತಲಿ ಹರ್ಷದಲಿ
ಹೊರಗಡೆಗೆ ಖಿನ್ನದಾ ವದನವನು ತೋರಿಸುತ
ಆ ಕುಹಕಿ ಕುರುಡುನೃಪ ಧೃತರಾಷ್ಟ್ರನಿದ್ದಿಹನು ॥೧೨೧೫॥

ನಾವುಗಳು ಆಟವನು ನ್ಯಾಯದಲಿ ಆಡಿದೆವು
ಸೋದರರ ಸಹಿತದಲಿ ನೀವುಗಳು ಸೋತಿಹಿರಿ
ನಂತರದಿ ನಿಮ್ಮಯಾ ಮಡದಿಯನು ಸೋತಿಹಿರಿ
ಇವರೊಳಗೆ ನಮ್ಮಲ್ಲಿ ಆವುದೂ ತಪ್ಪಿಲ್ಲ ॥೧೧೧೬॥

ಕೌರವಗೆ ಕೊಟ್ಟಿರುವ ವಚನದಾ ಪರಿಯಲ್ಲಿ
ನಿಮ್ಮಯಾ ಸಂಪದವ ರಾಜ್ಯವನು ಎಲ್ಲವನು
ನಿಮ್ಮಯಾ ಸತಿಸಹಿತ ಐವರನು ಗೆಲ್ಲುತಲಿ
ಕೌರವಗೆ ಕೊಟ್ಟಿಹೆನು ಎಂದಿಹನು ಆ ಶಕುನಿ ॥೧೨೧೭॥

ಕೌರವನು ಇಚ್ಛಿಸಿದ ರೀತಿಯಲಿ ಆಡಿಹೆವು
ಎಮ್ಮನ್ನು ವಿಪರೀತ ಭಾವದಲಿ ನೋಡದಿರಿ
ಕಪಟವನು ಮೋಸವನು ನಾವೆಂದು ಅರಿಯೆವು
ಎಮ್ಮೊಳಗೆ ಲವಲೇಶ ತಪ್ಪಿಲ್ಲ ಎಂದಿಹನು ॥೧೨೧೮॥

ಆಗಲಾ ಸೌಬಲನು ಕಣ್ಸನ್ನೆ ಮಾಡುತಿರೆ
ಕೌರವನು ವಿದುರಂಗೆ ಬಾ ವಿದುರ ಬಾರಯ್ಯ
ಎಮ್ಮಯಾ ಅರಮನೆಯ ಆಳಾದ ಸೇವಕಿಯ
ದ್ರೌಪದಿಯ ನೀಗಲೇ ಎಳತಹುದು ಎಂದಿಹನು ॥೧೨೧೯॥

ಮೃತ್ಯುವಿನ ಬಾಯೊಳಗೆ ನರ್ತಿಸಲು ಯತ್ನಿಪೆಯಾ
ನಾಗರದ ಹೆಡೆಯನ್ನು ತುಳಿಯಲಿಕೆ ಇಚ್ಛಿಪೆಯಾ
ಘೋರ ಹಾಲಾಹಲ ಕುಡಿಯಲಿಕೆ ಆಶಿಪೆಯಾ
ಕೌರವನೆ ನೀಮೂರ್ಖ ಎಂದಿಹನು ವರವಿದುರ ॥೧೨೨೦॥

ಮಾನನಿಧಿ ದ್ರೌಪದಿಯ ನೀನೆಳೆದು ತರಿಸಿದೊಡೆ
ಕಲಿಭೀಮ ನೋರ್ವನೇ ನಿಮ್ಮನ್ನು ನೂರ್ವರನು
ಯಮಸದನ ಕಟ್ಟುತಲಿ ನಿಮ್ಮಯ ಸತಿಯರ್ಗೆ
ವೈಧವ್ಯ ದೀಕ್ಷೆಯನು ಕೊಡಿಸುವನು ಎಂದಿಹನು ॥೧೨೨೧॥

ಕೌರವನೆ ಅವಿವೇಕಿ ಈ ಹುಚ್ಚ ಮೂರ್ಖನನು
ಮನೆಮುರುಕ ವಿದುರನನು ನಂಬುತಲಿ ನೀಕೆಟ್ಟೆ
ಪಾಂಡವರ ಪ್ರೀತಿಸುತ ನಿನ್ನನ್ನು ದ್ವೇಷಿಸುತ
ನಾಶವನು ಮಾಡುವನು ಎಂದಿಹನು ಕಲಿಕರ್ಣ ॥೧೨೨೨॥

**ಹೇ ಪ್ರಾತಿಕಾಮಿಕನೆ ಬೇಗನೇ ತೆರಳುತಲಿ ।**
**ದ್ರೌಪದಿಯ ನೆಳತಹುದು ಎಂದಿಹನು ಕೌರವನು॥**

ವಿಶ್ವಾಸಘಾತುಕನು ಈ ವಿದುರನಿರುತಿಹನು
ಎನ್ನಯಾ ಬೆನ್ನಿನಲಿ ಆಲುಗನ್ನು ಇರಿಯುವನು
ಹೇ ಪ್ರಾತಿಕಾಮಿಕನೆ ನೀನೀಗ ತೆರಳುತಲಿ
ದ್ರೌಪದಿಯ ನೆಳತಹುದು ವಿಂದಿಹನು ಕೌರವನು ॥೧೨೨೩॥

ಆ ಪ್ರಾತಿಕಾಮಿಕನು ಭರದಿಂದಲೈತಂದು
ಬಂದಿರುವ ಕಾರಣವ ಭೃತ್ಯರಿಗೆ ಅರುಹುತಲಿ
ದ್ರೌಪದಿಯ ಕಾಣಲಿಕೆ ಸಮ್ಮತಿಯ ಪಡೆಯುತಲಿ
ಅರಮನೆಯ ದ್ವಾರಗಳ ದಾಂಟುತಲಿ ಹೊಕ್ಕಿಹನು ॥೧೨೨೪॥

ಶರದೃತು ನಿರ್ಮಲದ ನೀಲದಾ ಗಗನದಲಿ
ಅಗಣಿತದ ತಾರೆಗಳ ಮಧ್ಯದಲಿ ಶೋಭಿಸುವ
ಪೌರ್ಣಮಿಯ ಚಂದ್ರನಾ ಕಾಂತಿಯಲಿ ಶೋಭಿಸುವ
ದ್ರೌಪದಿಯ ಕಂಡಿಹನು ಸಖಿಯರಾ ವೃಂದದಲಿ ॥೧೨೨೫॥

ವೀಣೆಗಳ ವಾದ್ಯಗಳ ಸುಮಧುರದ ಸುಸ್ವನದಿ
ಹಾಡುತಿಹ ಸಖಿಯರಾ ಸಂಗೀತ ಕೇಳಂತಲಿ
ಮಣಿಖಚಿತರತ್ನದಾ ಮಂಚದಲಿ ಸರಸದಲಿ
ಉಯ್ಯಾಲೆ ಆಡುತಿಹ ದ್ರೌಪದಿಯ ಕಂಡಿಹನು ॥೧೨೨೬॥

ಸುತ್ತಲು ವಿನೋದದಲಿ ಸಲ್ಲಾಪ ಗೈಯ್ಯುತಿಹ
ಸಾವಿರದ ಚೆಲುವೆಯರ ಸಖಿಯರಾ ಮಧ್ಯದಲಿ
ಜಗದಖಿಳ ನಾರಿಯರ ಮಸ್ತಕದಿ ಶಿರೋಮಣಿಯ
ಸಾಧ್ವಿ ಪತಿವ್ರತೆಯ ದ್ರೌಪದಿಯ ಕಂಡಿಹನು ॥೧೨೨೭॥

ಸನಿಹದಲಿ ಬರಲಿಕ್ಕೆ ಭಯಭೀತನಾಗುತಲಿ
ಶಿರವನ್ನು ಬಾಗುತಲಿ ಕರಗಳನು ಮುಗಿಯುತಲಿ
ಬಿಗಿದಿರುವ ಕಂಠದಲಿ ಕಂಪಿಸುವ ಸ್ವರದಲ್ಲಿ
ಆ ದೂತ ಪ್ರಾತಿಕನು ದ್ರೌಪದಿಗೆ ನುಡಿದಿಹನು ॥೧೨೨೮॥

ದೇವಿಯರೆ ನಿಮ್ಮದೊರೆ ಧರ್ಮಜನು ದ್ಯೂತದಲಿ
ಸರ್ವಸ್ವ ರಾಜ್ಯವನು ಐಶ್ವರ್ಯವೆಲ್ಲವನು
ಸೋದರರ ಸಹಿತದಲಿ ತನ್ನನ್ನು ಸೋಲುತಲಿ
ನಿಮ್ಮನ್ನು ಕೌರವಗೆ ಸೋತಿಹನು ಎಂದಿಹನು ॥೧೨೨೯॥

ಹಿಮಮಳೆಗೆ ಬಾಡಿರುವ ಕಮಲಗಳ ಪರಿಯಲ್ಲಿ
ಮೋಡಗಳು ಮುಸುಕಿರುವ ಚಂದ್ರಮನ ಪರಿಯಲ್ಲಿ
ಸಖಿಯರಾ ಮುಖಕಮಲ ವೆಲ್ಲವು ಬಾಡಿಹವು
ಎಲ್ಲೆಡೆಗೆ ನೀರವದ ಮೌನವದು ಪಸರಿದುದು ॥೧೨೩೦॥

ಹೇದೂತ ಧರ್ಮಜನೇ ಜೂಜನ್ನು ಆಡಿದನೆ
ಸೋದರರ ಸಹಿತದಲಿ ತನ್ನನ್ನು ಸೋತಿಹನೆ
ಅಕಟಕಟ ಆ ಶಕುನಿ ಕೌರವರ ಕುಹುಕಿಗಳ
ಜಾಲದಲಿ ಸಿಲುಕುತಲಿ ಧರ್ಮಜನು ಸೋತನೇ ॥೧೨೩೦॥

ಆವ ಪರಿ ನಿರ್ಮಲನು ಧರ್ಮಜನು ದ್ಯೂತದಲಿ
ಸೋದರರ ಸಹಿತದಲಿ ಎನ್ನನ್ನು ಸೋತಿಹನು
ಎಂಬುದನು ಹೇಳುವುದು ಎನ್ನುತಿರೆ ದ್ರೌಪದಿಯು
ಆ ಪ್ರಾತಿಕಾಮಿಕನು ನುಡಿದಿಹನು ವಿಶದದಲಿ ॥೧೨೩೨॥

ಹೇ ತಾಯೆ ಸರ್ವಸ್ವ ಸಂಪದವ ರಾಜ್ಯವನು
ಸೋದರರ ನಾಲ್ವರನು ಮೊದಲಿಂಗೆ ಸೋಲುತಲಿ
ಬಳಿಕಿನಲಿ ತನ್ನನ್ನು ಸೋಲುತಲಿ ಆ ಮೇಲೆ
ನಿಮ್ಮನ್ನು ಸೋತಿಹನು ಎಂದಿಹನು ಪ್ರಾತಿಕನು ॥೧೨೩೩॥

ಹೇ ದೂತ ಹೇಳುವುದು ಮುನ್ನಿನಲಿ ಧರ್ಮಜನು
ತನ್ನನ್ನು ಸೋಲುತಲಿ ನಂತರದಿ ಎನ್ನನ್ನು
ಪಣವೊಡ್ಡಿ ಸೋತಿಹನೆ ತಾ ಸೋತ ನಂತರವೆ
ಎನ್ನನ್ನು ಸೋತಿಹನೆ ಎಂದಿಹಳು ದ್ರೌಪದಿಯು ॥೧೨೩೪॥

ಅಹುದಹುದು ತಾಯಿಯೇ ತಾ ಸೋತ ನಂತರವೆ
ನಿಮ್ಮನ್ನು ಸೋತಿಹನು ನಿಮ್ಮನ್ನು ಕರೆತರಲು
ಕೌರವನು ಎನ್ನನ್ನು ಇಲ್ಲಿಗೇ ಕಳಿಸಿಹನು
ನೀವುಗಳು ಬರಲಹುದು ಎಂದಿಹನು ಪ್ರಾತಿಕನು ॥೧೨೩೫॥

ಅಕಟಕಟ ದುರ್ಯೋಧನಾದಿಗಳು ಖಳರುಗಳು
ಒಡ್ಡಿರುವ ಕಪಟದಾ ತಂತ್ರದಾ ಆಟವಿದು
ದೈವವೇ ಮುನಿದಿಹುದು ನಾ ಬರುವೆ ನೀ ತೆರಳು
ಒಂದು ಸಲ ಈ ಮಾತ ಆ ಸಭೆಗೆ ಹೇಳುವುದು ॥೧೨೩೬॥

ಧರ್ಮಜನು ತಾ ಸೋತ ಬಳಿಕೆನ್ನ ಸೋತಿಹನು
ಇದು ನ್ಯಾಯಸಮ್ಮತವೆ ಶಾಸ್ತ್ರಕ್ಕೆ ಅನುಗುಣವೆ
ಎಂಬುದನು ಸುಜ್ಞಾನಿ ಪಂಡಿತರು ಹೇಳುತಲಿ
ಎನ್ನನ್ನು ಮೆಚ್ಚಿಸಲು ನಾಬಹೆನು ಎಂದಿಹಳು ॥೧೨೩೭॥

ಈ ಪ್ರಶ್ನೆಗುತ್ತರವ ಸರಿಯಾಗಿ ನೀಡುತಲಿ
ಎನ್ನನ್ನು ಒಪ್ಪಿಸಲು ನಾ ಬಹೆನು ಎನ್ನುತಲಿ
ಆ ಸಭೆಗೆ ಹೇಳುವುದು ಎನ್ನುತಲಿ ದ್ರೌಪದಿಯು
ಆ ಪ್ರಾತಿಕಾಮಿಯನು ತಿಳುಹುತಲಿ ಕಳುಹಿದಳು ॥೧೨೩೮॥

ಭಯದಿಂದ ನಡುಗುತಲಿ ಕೌರವನ ಬಳಿಬಂದು
ಜೀಯರೇ ದೇವಿಯರು ಈಪರಿಯೆ ನುಡಿದಿಹರು
ಧರ್ಮಜನು ತನ್ನನ್ನು ಸೋಲುತಲಿ ನಂತರದಿ
ಎನ್ನನ್ನು ಸೋತಿಹನು ಇದು ನ್ಯಾಯಸಮ್ಮತವೆ ॥೧೨೩೯॥

ಇದು ಧರ್ಮಕನುಗುಣವೆ ಶಾಸ್ತ್ರಕ್ಕೆ ಒಪ್ಪಿಗೆಯೆ
ಎಂಬುದನು ಸುಜ್ಞಾನಿ ಸುವಿವೇಕ ಹಿರಿಯರು
ಯೋಚಿಸುತ ಎನ್ನಯಾ ಪ್ರಶ್ನೆಯನು ಉತ್ತರಿಸಿ
ಎನ್ನನ್ನು ಒಪ್ಪಿಪಿದು ಎಂದಿಹಳು ದ್ರೌಪದಿಯು ॥೧೨೪೦॥

ಈ ಪರಿಯೆ ಆ ದೂತ ನುಡಿಯುತಿರೆ ಕೌರವನು
ಕೇಳುತಲಿ ಕೋಪದಲಿ ವಾಯುಜನು ತನ್ನನ್ನು
ಕೊಲ್ಲುವನು ಎಂಬುವಾ ಭೀತಿಯಲಿ ಮರುಮಾತ
ನುಡಿಯದಲೆ ಬಂದಿಹನು ಅಂಜುತಲಿ ಎಂದಿಹನು ॥೧೨೪೧॥

ಧರ್ಮಜನು ದ್ಯೂತದಲಿ ಪಣವೊಡ್ಡಿ ಸೋತಿಹನು
ದ್ರೌಪದಿಯ ದರದರನೆ ಎಳೆತಂದು ನಮ್ಮಯಾ
ಅರಮನೆಯ ದಾಸಿಯರ ಮಧ್ಯದಲಿ ಇರಿಸುವೆವು
ನಮ್ಮಲ್ಲಿ ಅನ್ಯಾಯವೆನಿತಿಲ್ಲ ಎಂದಿಹನು ॥೧೨೪೨॥

**ದುಶ್ಶಾಸನನುಜನೇ ಎಮ್ಮಯಾ ಸೇವಕಿಯ ।**
**ದ್ರೌಪದಿಯ ನೆಳೆತಹುದು ಎಂದಿಹನು ಕೌರವನು ॥**

ದುಶ್ಶಾಸನನುಜನೇ ನೀ ಬೇಗ ತೆರಳುತಲಿ
ನಾವುಗಳು ಗೆದ್ದಿರುವ ಸೌಭಾಗ್ಯ ನಿಧಿಯನ್ನು
ದ್ರೌಪದಿಯ ತುರುಬನ್ನು ಜಗ್ಗುತಲಿ ಎಳೆಯುತಲಿ
ಈ ಸಭೆಗೆ ತಹುದೆಂದು ಕೌರವನು ಗರ್ಜಿಸಿದ ॥೧೨೪೩॥

ಉರಿಯುತಿಹ ಜ್ವಾಲೆಯಲಿ ಗಾಳಿಯದು ಬೆರೆತಂತೆ
ಕೌರವನ ನುಡಿಗಳನು ಕೇಳುತಲಿ ಆ ದುರುಳ
ದುಶ್ಶಾಸನಾಕ್ಷಣದಿ ಬಿರುಗಾಳಿ ತೆರದಲ್ಲಿ
ಭರದಲ್ಲಿ ಬೀದಿಯಲಿ ಕರಿಹರಿದು ಧಾವಿಸುತ ॥೧೨೪೪॥

ಚಂದ್ರಮನ ತುಡುಕುವಾ ರಾಹುವಿನ ಪರಿಯಲ್ಲಿ
ಓಡುತಲಿ ಅರಮನೆಯ ಬಾಗಿಲದ ಬಳಿಬಂದು
ಸೇವಕರು ತಡೆಯುತಿರೆ ಖಡ್ಗದಲಿ ಇರಿಯುತಲಿ
ಒಳಹೊಕ್ಕು ದ್ರೌಪದಿಯೆ ಎದುರಿನಲಿ ನಿಲ್ಲುತಲಿ ॥೧೨೪೫॥

ಎಲೆಹುಚ್ಚಿ ದ್ರೌಪದಿಯೆ ಬಿಡುನಿನ್ನ ಜಂಭವನು
ನೀನೀಗ ಎಮ್ಮಯಾ ಅರಮನೆಯ ತೊತ್ತಿರುವೆ
ಹಿಂದಿನಾ ಗರ್ವವನು ಬಿಂಕವನು ಬಿಟ್ಟುಬಿಡು
ನೀನೀಗ ಕೌರವನ ಚರಣದಾ ದಾಸಿಯಿಹೆ ॥೧೨೪೬॥

ನೀನೀಗ ನಮ್ಮಯಾ ಭೋಗ್ಯದಾ ವಸ್ತುವಿಹೆ
ಆ ರತ್ನ ಮಂಚವನು ಇಳಿಯುತಲಿ ಈಕ್ಷಣದಿ
ಕುರುರಾಜ ಭವನಕ್ಕೆ ದಡೆಯುವುದು ಎನ್ನುತಲಿ
ದುಶ್ಶಾಸನಾ ಖಳನು ನುಡಿದಿಹನು ದ್ರೌಪದಿಗೆ ॥೧೨೪೭॥

ಹೇ ಕೌರವನೆ ಅನುಜನೇ ನೀನೆನಗೆ ಮೈದುನನು
ಧರ್ಮಜನು ತಾ ಸೋತ ಬಳಿಕೆನ್ನ ಸೋತಿಹನು
ಅನ್ಯರಾ ಧನವನ್ನು ಅನ್ಯ ತಾ ಸೋತೊಡೆಯು
ನ್ಯಾಯವೇ ಎಂಬುದನು ಉತ್ತರವನೀಯುವುದು ॥೧೨೪೮॥

ಮೇಲಾಗಿ ನಾನೀಗ ಪುಷ್ಪವತಿಯಾಗಿರುವೆ
ಸಭೆಯೊಳಗೆ ಬರುವದಿದು ಅನುಚಿತವು ಎನಿಸುವುದು
ಗುರುಹಿರಿಯರಾಸಭೆಯು ಅಪವಿತ್ರವಾಗುವದು
ಎನ್ನುತಲಿ ದ್ರೌಪದಿಯು ನುಡಿದಿಹಳು ದುರುಳನಿಗೆ ॥೧೨೪೯॥

ಉದ್ಧಟಳೆ ದ್ರೌಪದಿಯೆ ಮರುಮಾತನಾಡದಿರು
ಈಗಳೆಯು ಪುಷ್ಪವತಿಯಾಗುತಲಿ ಇರ್ದೊಡೆಯು
ನೀ ನೀಗ ತೆರಳುತಲಿ ಕುರುರಾಜಭವನದಲಿ
ಪುತ್ರವತಿಯಾಗೆಂದು ಆ ದುಷ್ಟ ನುಡಿದಿಹನು ॥೧೨೫೦॥

ನಿನ್ನಯಾ ಗಂಡಂದಿರೈವರೂ ಸೋತಿಹರು
ನಿನ್ನಯಾ ಪ್ರಶ್ನೆಯನು ನ್ಯಾಯವನು ಎಲ್ಲವನು
ಅಲ್ಲಿಯೇ ಕೇಳುವುದು ನಡೆ ಎಂದು ಗರ್ಜಿಸುತ
ದ್ರೌಪದಿಯ ತುರುಬಿಂಗೆ ಕೈಯನ್ನು ಇಕ್ಕಿಹನು ॥೧೨೫೧॥

ರಾಜಸೂಯಾಧ್ವರದಿ ಪುಣ್ಯನದಿ ಜಲದಿಂದ
ಮುನಿನಿಕರ ಅಭಿಷೇಕಗೈದಿರುವ ಪಾವನದ
ದ್ರೌಪದಿಗೆ ಸಿರಿಮುಡಿಗೆ ದುಶ್ಶಾಸನಾ ನೀಚ
ಕಡುಪಾಪಿ ಕೈಯನ್ನು ಇಕ್ಕಿದನು ಭರದಲ್ಲಿ ॥೧೨೫೨॥

**ಬೀದಿಯಲಿ ಸಿರಿಮುಡಿಯ ಹಿಡಿಯುತಲಿ ದ್ರೌಪದಿಯ ।**
**ದರದರನೆ ಎಳೆತಂದ ದುಶ್ಶಾಸನಾ ಸಭೆಗೆ ॥**

ಧೃಢವಾಗಿ ಶ್ರೀಮುಡಿಯ ಹಿಡಿಯುತಲಿ ಜಗ್ಗುತಿರೆ
ಕೊರಲಸರ ಮುತ್ತುಗಳು ರತ್ನಗಳು ವಜ್ರಗಳು
ಹೊಳೆಹೊಳೆವ ಓಲೆಗಳು ಆಭರಣವೆಲ್ಲವೂ
ತಾರೆಗಳು ಬೀಳ್ವಂತೆ ಕೊಸರುತಲಿ ಬಿದ್ದಿಹವು ॥೧೨೫೩॥

ಅಕಟಕಟ ಎತ್ತಣದ ಈ ಖೂಳ ಬಂದಿಹನು
ಎನ್ನುತಲಿ ಸಖಿನಿಕರ ಕೂಗುತಲಿ ರೋದಿಸುತ
ದ್ರೌಪದಿಯ ಬಿಡು ಎಂದು ಅಡ್ಡಾಗಿ ಬೀಳುತಿರೆ
ಸಖಿಯರನು ತುಳಿಯುತಲಿ ಮೇಲ್ವಾಯ್ದು ನಡೆದಿಹನು ॥೧೨೫೪॥

ಕೇಶದಾ ಪಾಶವನು ಧೃಢವಾಗಿ ಹಿಡಿಯುತಲಿ
ಜಗ್ಗುತಲಿ ದ್ರೌಪದಿಯ ದರದರನೆ ಎಳಯುತಲಿ
ಬೀದಿಯಲಿ ಸಾಗುತಿರೆ ದುರುಳನಾಕ್ರೈಯಿಂದ
ಬಿಡಿಸಿರೇ ಎನ್ನುತಲಿ ಆಕ್ರೋಶಗೈದಿಹಳು ॥೧೨೫೫॥

ಬಾಳೆಯಾ ಸ್ತಂಭವನು ಎಳೆಯುವಾ ಪರಿಯಲ್ಲಿ
ಕೋಮಲ ಲತಾಂಗಿಯನು ಎಳೆಯುತಲಿ ಸಾಗಿರಲು
ಕೊರಲಸರ ಕಂಕಣದ ನೂಪುರದ ಗೆಜ್ಜೆಗಳ
ಝಣಝಣದ ನಾದವದು ಸುತ್ತಲೂ ಪಸರಿದುದು ॥೧೨೫೬॥

ಪಾಂಚಾಲ ನಂದಿನಿಯ ಆಕ್ರಂದನಾ ಧ್ವನಿಯು
ಮುಗಿಲನ್ನು ಭೇದಿಸುವ ಆಕ್ರೋಶದಾಸ್ವನವ
ಕೇಳುತಲಿ ಪುರಜನರು ಹೊರಬಂದು ಬೀದಿಯಲಿ
ದುಶ್ಶಾಸನೆಳೆಯುತಿಹ ದ್ರೌಪದಿಯ ಕಂಡಿಹರು ॥೧೨೫೭॥

ಅಕಟಕಟ ಜಗದಖಿಲ ನೃಪರುಗಳ ಜಯಿಸಿರುವ
ಮೂಲೋಕವೀರರಾ ಪಾಂಡವರ ಸತಿಯಳಿಗೆ
ಈ ಪರಿಯ ಕಷ್ಟವದು ಬಂದಿಹುದೆ ಎನ್ನುತಲಿ
ಪುರದೊಳಿಹ ಸಕಲಜನ ಮರಮರನೆ ಮರುಗಿದರು ॥೧೨೪೯॥

ತನ್ನಯಾ ಮೃತ್ಯುವನು ಬರಮಾಡಿಕೊಂಡಂತೆ
ಆ ಕಾಲ ಯಮನಂಗೆ ಆಮಂತ್ರಣಿತ್ತಂತೆ
ಮೃತ್ಯುವಿನ ಬಾಯೊಳಗೆ ಇಳಿದಂತೆ ಆ ಖಳನು
ದ್ರೌಪದಿಯನೆಳೆಯುತಲಿ ಸಭೆಯನ್ನು ಹೊಕ್ಕಿಹನು ॥೧೨೫೯॥

**ಕೌರವರು ನಲಿದಿಹರು ಪುರಜನರು ಮರುಗಿದರು ।**
**ಪಾಂಡವರು ನೋಯುತಲಿ ಕೆಂಡವನು ಕಾರಿದರು ॥**

ಅಕಟಕಟ ಪಾಂಡವರ ಪಟ್ಟದಾ ಸಾಮ್ರಾಜ್ಞಿ
ಪಾಂಚಲನಂದಿನಿಗೆ ಈ ಪರಿಯ ವಿಧಿಯಾಯ್ತೆ
ಬರಸಿಡಿಲು ಎರಗುತಲಿ ದುಶ್ಶಾಸನೀಖಳನ
ನಾಶವನು ಮಾಡದೇ ಎಂದಿಹರು ಪುರಜನರು ॥೧೨೬೦॥

ಅರಮನೆಯ ಹೊಸ್ತಿಲನು ದಾಂಟುತಲಿ ಹೊರಬಂದು
ಸೂರ್ಯನಾ ಬಿಸಿಲನ್ನು ಕಾಣದಿಹ ಕೋಮಲೆಗೆ
ಜಗದಖಿಲ ನಾರಿಯರ ಮಸ್ತಕ ಶಿರೋಮಣಿಗೆ
ಪಾವನ ಪತಿವ್ರತೆಗೆ ಸುವ್ರತೆಗೆ ಸಾಧ್ವಿಗೆ ॥೧೨೬೧॥

ಘೋರತ ಗತಿಯಾಯ್ತೆ ಇದು ವಿಧಿಯ ಲೀಲೆಯಿದೆ
ದೈವವೇ ಪ್ರತಿಕೂಲವಾಗುತಲಿ ಮುನಿದಿರಲು
ಇನ್ನಾರು ಕಾಯುವರು ಎನ್ನುತಲಿ ಸಭೆಯೊಳಗೆ
ನೆರೆದಿರ್ದ ಸಕಲರೂ ಮಿಡುಕುತಲಿ ನೊಂದಿಹರು ॥೧೨೬೨॥

ದುರ್ಯೋಧನಾ ಶಕುನಿ ಕರ್ಣನು ಜಯದ್ರಥನು
ಚಾಂಡಾಲ ಚೌಕುಳಿಯು ಹರ್ಷದಲಿ ನಲಿದಿಹರು
ಕೆಲಕೆಲರು ವಸ್ತ್ರದಲಿ ಮುಖವನ್ನು ಮರೆಮಾಚಿ
ತಪ್ತದಾ ಹೃದಯದಲಿ ಬಿಕ್ಕುತಲಿ ಅತ್ತಿಹರು ॥೧೨೬೩॥

ಗಾಂಗೇಯ ಗುರುದ್ರೋಣ ಅಶ್ವತ್ಥ ಕೃಪವರರು
ದ್ರೌಪದಿಯ ಕಷ್ಟವನು ನೋಡುತಲಿ ಮರುಗುತಲಿ
ಕೌರವನು ಇಕ್ಕಿರುವ ಅನ್ನದಾ ಹಂಗಿನಲಿ
ಮನದೊಳಗೆ ಮಿಡುಕುತಲಿ ಮೌನದಲಿ ಕುಳಿತಿಹರು ॥೧೨೬೪॥

ಈ ಪರಿಯ ಪಾಪದಾ ಘೋರತರ ದೃಶ್ಯವನು
ಕಾಂಬುವಾ ಕಣ್ಣುಗಳು ನಮಗೇಕೆ ಇರುತಿಹವೊ
ಈ ತೆರದ ರೋದನವ ಕೇಳುತಿಹ ಕಣ್ಣಗಳು
ನಮಗೇಕೆ ಇರುತಿಹವೊ ಎಂದಿಹರು ಸಭಿಕರು ॥೧೨೬೫॥

ದ್ರೌಪದಿಯು ಪಡುತಿರುವ ಸಂಕಟವ ಬವಣೆಯನು
ದುಶ್ಶಾಸನಾಖಳನ ದುಶ್ಚೇಷ್ಟೆ ದುರ್ನಡತೆ
ಹರ್ಷದಲಿ ನಲಿಯುತಿಹ ದುರ್ಯೋಧನಾ ಕರ್ಣ
ಜಯದ್ರಥಾದ್ಯರನು ನೋಡುತಲಿ ಕೋಪದಲಿ ॥೧೨೬೬॥

ಕಲಿಭೀಮ ಫಲಗುಣನು ನೆಲಮುಗಿಲ ವ್ಯಾಪಿಸುತ
ಉರಿಯುತಿಹ ಶಿಖಿಯಂತೆ ಕೆಂಡವನು ಕಾರುತಲಿ
ಮನದೊಳಗೆ ಕೌರವರ ನೂರ್ವರನು ಹಿಂಡುತಲಿ
ರಕುತವನು ಹೀರುತಲಿ ಸಿಪ್ಪೆಯನು ಮಾಡಿಹನು ॥೧೨೬೭॥

ಮಾದ್ರಿಜರು ಕ್ರೋಧದಲಿ ಮನದೊಳಗೆ ಕುದಿಯುತಲಿ
ಕೌರವರ ವಧಿಸಲಿಕೆ ನಿಶ್ಚಯವ ಗೈದಿಹರು
ಪೂರ್ವದಾ ಪಾಪದಾ ಫಲವಿದುವು ಎನ್ನುತಲಿ
ಧರ್ಮಜನು ಸ್ಥಿತಪ್ರಜ್ಞನಾಗುತಲಿ ಇರ್ದಿಹನು ॥೧೨೬೮॥

ಇತ್ತಲಾ ಪಾಂಡವರು ಸೋತಿರುವ ವಾರ್ತೆಯದು
ಹಸ್ತಿನದ ಪುರಹೊರಗೆ ಪಸರುತಲಿ ಹಬ್ಬುತಿರೆ
ಆ ವೀರ ಅಭಿಮನ್ಯು ಪಾಂಡವರ ಸುತರುಗಳು
ಸೈನ್ಯದಾ ಸಹಿತದಲಿ ಗಜಪುರವ ಮುತ್ತಿದರು ॥೧೨೬೯॥

**ಕುರುರಾಜ ಭವನಕ್ಕೆ ತೆರಳುತಲಿ ಕೌರವನ ।**
**ಕರವಿಡಿದು ಸುಖಿಸುವುದು ಎಂದಿಹನು ಖಳಕರ್ಣ ॥**

ಕೇಳುವುದು ಜನಮೇಜಯ ಕ್ಷಿತಿಪ ಬಳಿಕಿನಲಿ
ದುರ್ಯೋಧನಾ ದುಷ್ಟ ಗಹಗಹಿಸಿ ನಗುನಗುತ
ನಿನ್ನರಸ ನಿನ್ನನ್ನು ಲೆತ್ತದಲಿ ಸೋತಿಹನು
ನೀನೀಗ ಎಮ್ಮಯಾ ತೊತ್ತಿರುವೆ ಸೊತ್ತಿರುವೆ ॥೧೨೭೦॥

ಸುಮ್ಮನೇ ಅತ್ತೊಡೆಯು ಅವುದೂ ಫಲವಿಲ್ಲ
ನಡೆನಮ್ಮ ಅರಮನೆಯ ತೊತ್ತಿರಾ ಹಿಂಡಿನಲಿ
ನಮ್ಮಯಾ ಚರಣಗಳ ಸೇವೆಯನು ಗೈಯ್ಯುವದು
ಎನ್ನುತಲಿ ಕೌರವನು ನುಡಿದಿಹನು ದ್ರೌಪದಿಗೆ ॥೧೨೭೧॥

ಸುವಿವೇಕ ಸುಜ್ಞಾನಿ ಸಜ್ಜನರೆ ಸುಗುಣಿಗಳೆ
ವೇದಗಳ ಶಾಸ್ತ್ರಗಳ ನ್ಯಾಯಗಳ ಪಂಡಿತರೆ
ಎನ್ನಯಾ ನುಡಿಗಳನು ಚೆನ್ನಾಗಿ ಆಲಿಸುತ
ನ್ಯಾಯವನು ಹೇಳುವುದು ಎಂದಿಹಳು ದ್ರೌಪದಿಯು ॥೧೨೭೨॥

ಮೊದಲಿಂಗೆ ಧರ್ಮಜನು ತನ್ನನ್ನು ಸೋಲುತಲಿ
ಬಳಿಕಿನಲಿ ಎನ್ನನ್ನು ಪಣವೊಡ್ಡಿ ಸೋತಿಹನು
ಮೊದಲಿಂಗೆ ತಾ ಸೋತು ಅನ್ಯತಾನಾಗುತಲಿ
ಅನ್ಯರಾ ಧನವನ್ನು ಎನ್ನನ್ನು ಸೋತಿಹನು ॥೧೨೭೩॥

ಅನ್ಯತಾನಾಗುತಲಿ ಅನ್ಯರಾ ಧನವನ್ನು
ಅನ್ಯತಾ ಸೋತೊಡೆಯು ಸಮ್ಮತದಿ ನ್ಯಾಯದಲಿ
ತಾ ಸೋತ ಬಳಿಕೆನ್ನ ಒಡ್ಡಲಿಕೆ ಅಧಿಕಾರ
ನೃಪನಿಂಗೆ ಎಲ್ಲಿಹುದು ಎಂದಿಹಳು ದ್ರೌಪದಿಯು ॥೧೨೭೪॥

ಮಂದಮತಿ ಹೆಂಗುಸಳು ಇವಳೆಂದು ನಿಂದಿಸದೆ
ತಾತ್ಸಾರವಮಾಡದಲೆ ಎನ್ನಯಾ ಮಾತಿಂಗೆ
ಗುರುಹಿರಿಯ ಜ್ಞಾನಿಗಳು ಉತ್ತರವನೀಯುವುದು
ಎನ್ನುತಲಿ ನುಡಿದಿಹಳು ದ್ರೌಪದಿಯು ಆ ಸಭೆಗೆ ॥೧೨೭೫॥

ಸಭೆಯೊಳಗೆ ಒಬ್ಬರೂ ನುಡಿಯದಲೆ ಮೌನವಿರೆ
ಶಾಸ್ತ್ರವನು ಧರ್ಮವನು ನ್ಯಾಯವನು ನೀತಿಯನು
ಅರಿತಿರುವ ಸುವಿವೇಕ ಸುಜ್ಞಾನಿ ಇಲ್ಲದಿಹ
ಈ ಸಭೆಯು ಸಭೆಯಲ್ಲ ಮೂರ್ಖರಾಕೂಟವಿದು ॥೧೨೭೬॥

ಹೆಂಗುಸಿನ ಪ್ರಶ್ನೆಯನು ಉತ್ತರಿಸದಿರುತಿಹ
ಬಾಯನ್ನು ಮುಚ್ಚುತಲಿ ಮೌನದಲಿ ಕುಳಿತಿರುವ
ಗುರುಹಿರಿಯರೀಸಭೆಯು ಮೂರ್ಖರಾ ಸಭೆಯಿಹುದು
ಎನ್ನುತಲಿ ಜರೆಯುತಲಿ ದ್ರೌಪದಿಯು ನುಡಿದಿಹಳು ॥೧೨೭೭॥

ಒಬ್ಬನೇ ಗಂಡನಿಗೆ ಬಹುಸತಿಗಳಿರುತಿಹುದು
ಜಗದೊಳಗೆ ರೂಢಿಯಿದು ಒಬ್ಬಳೇ ಹೆಂಡತಿಗೆ
ಬಹುಪತಿಗಳಿರುತಿಹುದು ವಿಪರೀತವಾಗಿಹುದು
ನಾವೆಂದ ಕೇಳಿಲ್ಲ ಎಂದಿಹನು ಕೌರವನು ॥೧೨೭೮॥

ಐವರೂ ಪಾಂಡವರು ನಿನ್ನನ್ನು ಭೋಗಿಪರು
ಗಂಡಂದಿರೆಂಬುದನು ಜಗವೆಲ್ಲ ಅರಿತಿಹುದು
ಇದು ನ್ಯಾಯ ಸಮ್ಮತವೆ ಧರ್ಮಕ್ಕೆ ಒಪ್ಪಿಗೆಯೆ
ಹೆಂಗಸಿನ ಬುದ್ಧಿಯನು ಜಾಣ್ಮೆಯನು ತೋರದಿರು ॥೧೨೭೯॥

ಕುರುರಾಜಭವನಕ್ಕೆ ತೆರಳುತಲಿ ಸಂತಸದಿ
ರಾಣೀನಿವಾಸದಲಿ ಕೌರವನ ಉಪಚರಿಸಿ
ರತ್ನದಾ ಶಯ್ಯೆಯಲಿ ಸೌಖ್ಯವನು ಅನುಭವಿಸಿ
ಎನ್ನುತಲಿ ವಿಕಟಮತಿ ಖಳಕರ್ಣ ನುಡಿದಿಹನು ॥೧೨೮೦॥

ಅಹುದಹುದು ಕರ್ಣ ನೀ ನುಡಿದಿಹುದು ನಿಜವಿಹುದು
ದ್ರೌಪದಿಯೆ ನೀನೀಗ ಕೌರವನ ದಾಸಿಯಿಹೆ
ಕೌರವನ ಭವನದಲಿ ಕೌರವನ ಸೇವಿಸುತ
ಸಂಪದವ ಭೋಗಿಪುದು ಎಂದಿಹನು ಸೌಬಲನು ॥೧೨೮೧॥

**ಭೀಮಾರ್ಜುನೀರ್ವರೂ ಕೌರವರುನೂರ್ವರಾ ।**
**ಶಿರಗಳನು ತರಿಯುವರು ಎಂದಿಹನು ಗಾಂಗೇಯ ॥**

ನಿನ್ನಯಾ ಕುರುರಾಜ ಭವನದಾ ಸಂಪದಕೆ
ಐಶ್ವರ್ಯ ಸೌಖ್ಯಕ್ಕೆ ಬೆಂಕಿಯನು ಹಚ್ಚುವುದು
ಅವಳಿತ್ತ ಪ್ರಶ್ನೆಯನು ಉತ್ತರಿಸಲಾರದೆಯೆ
ಬೊಗಳುತಿಹೆ ಏತಕ್ಕೆ ಎಂದಿಹನು ಗಾಂಗೇಯ ॥೧೨೮೨॥

ಧರ್ಮವನು ಸತ್ಯವನು ವೀರದಲೆ ತೊರೆಯದಲೆ
ಸುಮ್ಮನೇ ಧರ್ಮಜನು ಸಹಿಸುತಲಿ ಕುಳಿತಿಹನು
ಅಣ್ಣನಿಗೆ ಅಪಕೀರ್ತಿ ಬಹುದೆಂಬ ಶಂಕೆಯಲಿ
ಸೋದರ ಚತುಷ್ಟಯರು ಮೌನದಲಿ ಕುಳಿತಿಹರು ॥೧೨೮೩॥

ತ್ರೈಲೋಕ್ಯ ಜಯಿಸುವಾ ಅದ್ಭುತ ಪರಾಕ್ರಮದ
ಭೀಮಾರ್ಜುನೀರ್ವರೂ ಕೌರವರ ನೂರ್ವರಾ
ಶಿರಗಳನು ಅಗಸಕೆ ತೋರಣವ ಕಟ್ಟುವರು
ದ್ರೌಪದಿಯ ನೀ ಬಿಡುವುದೆಂದಿಹನು ಗಾಂಗೇಯ ॥೧೨೮೪॥

ಮುಪ್ಪಿನಲಿ ಮುದಿಹುಚ್ಚು ಮರುಳುತನ ಸೇರಿಹುದು
ದ್ಯೂತದಲಿ ಧರ್ಮಜನು ದ್ರೌಪದಿಯ ಸೋತಿಹನು
ಇವಳೆಮ್ಮ ಅರಮನೆಯ ಕಸಗುಡಿಪ ತೊತ್ತಿಹಳು
ನೀವುಗಳು ಸುಮ್ಮನಿರಿ ಎಂದಿಹನು ಕೌರವನು ॥೧೨೮೫॥

**ದ್ಯೂತವನು ಆಡಿರುವ ಧರ್ಮಜನ ಕರಗಳನು ।**
**ಕತ್ತರಿಪೆ ಎನ್ನುತಲಿ ಕಲಿಭೀಮ ಎದ್ದಿಹನು ॥**

ಕಲಿಭೀಮ ಕೇಳುತಲಿ ಮನದೊಳಗೆ ಕುದಿಯುತಲಿ
ಕೋಪದಾ ಸಾಗರವು ಉಕ್ಕುತಲಿ ಮಿಕ್ಕುತಲಿ
ಲೆತ್ತವನು ಆಡಿರುವ ಧರ್ಮಜನ ಕರಗಳನು
ಕತ್ತರಿಪೆ ಎನ್ನುತಲಿ ಗರ್ಜಿಸುತ ಎದ್ದಿಹನು ॥೧೨೮೬॥

ಮಾದ್ರಿಜರು ನೋಡುತಲಿ ವಾಯುಜನ ನಿಲ್ಲಿಸುತ
ನಮಗೀಗ ಆಪತ್ತು ಸಂಕಟದ ಸಮಯವಿದೆ
ಕೋಪಕ್ಕೆ ಹೊತ್ತಲ್ಲ ಮುಂದಕ್ಕೆ ಕೌರವರ
ನಾಯಿಗಳ ಕೊಲ್ಲುವುದು ಎಂದಿಹರು ಮಾದ್ರಿಜರು ॥೧೨೮೭॥

ಈ ರಾಜ್ಯ ಸಂಪದವು ದ್ರೌಪದಿಯು ಎಲ್ಲವೂ
ಧರ್ಮಜನಕಿಂತಲೂ ದೊಡ್ಡದೆಂದೆನಿಸುವುದೇ
ಎಮ್ಮಯಾ ಪ್ರಾಣವೇ ಇರುತಿರುವ ಧರ್ಮಜನ
ಕೊಲ್ಲಲಿಕೆ ಯತ್ನಿಪೆಯಾ ಎಂದಿಹನು ಕಲಿಪಾರ್ಥ ॥೧೨೮೮॥

ಈ ಗೊಡ್ಡು ನುಡಿಗಳನು ನುಡಿಯದಿರು ಫಲಗುಣನೆ
ದ್ರೌಪದಿಯು ಪಡುತಿರುವ ಬವಣೆಯನು ಹಿಂಸೆಯನು
ನೋಡುತಲಿ ಸಹಿಸುವುದು ನನಗಿದು ಅಸಾಧ್ಯವಿದೆ
ನರಕದಾಯಾತನೆಯ ಕಷ್ಟವನು ಕೊಡುತಿಹರು ॥೧೨೮೯॥

ಕೌರವರನೂರ್ವರನ ಇರಿಯುತಲಿ ನರಕಕ್ಕೆ
ಅಟ್ಟದೇ ಇರುತಿರುವ ಎನ್ನಯಾ ನಿಷ್ಫಲದ
ದೇಹವನು ಅಗ್ನಿಯಲಿ ಅರ್ಪಿಸುತ ಸಾಯುವೆನು
ಎನ್ನುತಲಿ ಕಲಿಭೀಮ ಮಿಡುಕುತಲಿ ನುಡಿದಿಹನು ॥೧೨೯೦॥

ಅಕಟಕಟ ಕೈಹಿಡಿದ ಪಾಂಡವರು ಐವರೂ
ಧರ್ಮದಾ ಕಟ್ಟೆಯಲಿ ಎನ್ನನ್ನು ಮಾರುತಲಿ
ಸತಿಗಿಂತ ಧರ್ಮವೇ ಶ್ರೇಷ್ಠವದು ಎನ್ನುತಲಿ
ಎನ್ನನ್ನು ಮೃತ್ಯುವಿನ ಬಾಯೊಳಗೆ ಕೊಟ್ಟಿಹರು ॥೧೨೯೧॥

ಹೇ ಭೀಷ್ಮ ದ್ರೋಣರೇ ಅಶ್ವತ್ಥ ಕೃಪವರರೇ
ಜ್ಞಾನಿಗಳೆ ಪಂಡಿತರೆ ಮುನಿವರರೆ ಪರಿಣತರೆ
ಎನ್ನಯಾ ಪ್ರಶ್ನೆಯನು ಉತ್ತರಿಪುದೆನ್ನುತಲಿ
ಪಾಂಚಾಲಿ ನುಡಿದಿಹಳು ಸಕಲರಿಗೆ ಸಭಿಕರಿಗೆ ೧೨೯೨॥

ಒಳಗೊಳಗೆ ನೋಯುತಲಿ ಗಾಂಗೇಯ ಗುರುದ್ರೋಣ
ಅನ್ನದಾ ಹಂಗಿನಲಿ ಮೌನದಲಿ ಇರ್ದಿಹರು
ನಿಜವನ್ನು ನುಡಿದೊಡೆಯು ಎಮ್ಮನ್ನು ವಧಿಸುವನು
ಎನ್ನುತಲಿ ಸಕಲರೂ ಮೌನದಲಿ ಇರ್ದಿಹರು ॥೧೨೯೩॥

ಶಾಸ್ತ್ರಗಳ ನ್ಯಾಯಗಳ ಅರಿತಿರುವ ಪಂಡಿತರು
ತುಂಬಿರುವ ಸಭೆಯೊಳಗೆ ದ್ರೌಪದಿಯ ನುಡಿಗಳಿಗೆ
ಉತ್ತರವನೀಯಲಿಕೆ ಒಬ್ಬರೂ ಇಲ್ಲವೇ
ಎನ್ನುತಲಿ ಆ ವಿಕರ್ಣನೆದ್ದಿಹನು ಸಭೆಯೊಳಗೆ ॥೧೨೯೪॥

**ಸೋತಿರುವ ಧರ್ಮಜನು ದ್ರೌಪದಿಯ ಸೋತಿಹನು ।**
**ಇದು ನ್ಯಾಯ ಸಮ್ಮತವೆ ಎಂದಿಹ ವಿಕರ್ಣನು ॥**

ಧರ್ಮಸುತ ಮೊದಲಿಂಗೆ ತನ್ನನ್ನು ಸೋತಿಹನು
ನಂತರದಿ ದ್ರೌಪದಿಯ ಪಣಹಚ್ಚಿ ಸೋತಿಹನು
ತನ್ನನ್ನು ಸೋಲುತಲಿ ಅನ್ಯತಾನಾಗುತಲಿ
ದ್ರೌಪದಿಯ ಹಚ್ಚಲಿಕೆ ಅಧಿಕಾರವೆಲ್ಲಿಹುದು ॥೧೧೯೫॥

ಅನ್ಯರಾ ಧನವನ್ನು ಅನ್ಯ ತಾ ಸೋತೊಡೆಯು
ಇದು ನ್ಯಾಯ ಸಮ್ಮತವೆ ಜಗದೊಳಗೆ ಯೋಗ್ಯವೇ
ಆ ಹುಚ್ಚ ಶಕುನಿಯಾ ಅತಿಕುಹಕ ಬುದ್ಧಿಯಲಿ
ನೀವುಗಳು ಹುಚ್ಚರೇ ಆಗಿಹಿರಿ ಎಂದಿಹನು ॥೧೨೯೬॥

ಹೇ ಮೂರ್ಖ ವಿಕರ್ಣನೆ ನಿನಗೇಕೆ ಈ ಚಿಂತೆ
ಆ ಭೀಷ್ಮ ಗುರುಕೃಪರು ನೃಪರುಗಳು ಪಂಡಿತರು
ಗುರುಹಿರಿಯರೆಲ್ಲರೂ ಸುಮ್ಮನೇ ಇರುತಿರಲು
ಧರ್ಮದ ವಿಚಾರವನು ನೀನೇಕೆ ನುಡಿಯುತಿಹೆ ॥೧೨೯೭॥

ಒಬ್ಬನಿಗೆ ಗಂಡನಿಗೆ ಹೆಂಡತಿಗಳನೇಕರು
ಇರುತಿಹುದು ರೂಢಿಯಿದು ಶಾಸ್ತ್ರಕ್ಕೆ ಸಮ್ಮತವು
ಒಬ್ಬಳೇ ಹೆಂಡತಿಗೆ ಗಂಡಂದಿರೈವರು
ಇರುವದನು ನಾವೆಂದು ಕಂಡಿಲ್ಲ ಕೇಳಿಲ್ಲ ॥೧೨೯೮॥

ಒಬ್ಬಳೇ ದ್ರೌಪದಿಗೆ ಐವರೂ ಪಾಂಡವರು
ಗಂಡಂದಿರೆಂಬುದನು ಜಗವೆಲ್ಲ ಅರಿತಿಹುದು
ಇದು ಆವ ಶಾಸ್ತ್ರಕ್ಕೆ ಸಮ್ಮತವು ಎನಿಸುವುದು
ಪಾಂಡವರು ಧರ್ಮಕ್ಕೆ ಬಾಹಿರರು ಎಂದಿಹನು ॥೧೨೯೯॥

ಎಮ್ಮಯಾ ಕುಲದೊಳಗೆ ನೀನೆಂತು ಹುಟ್ಟಿರುವೆ
ನೀನಿಂತು ನುಡಿಯುತಲಿ ಅಪಮಾನ ಗೈದಿರುವೆ
ಎಮ್ಮೊಡನೆ ಹುಟ್ಟಿರುವ ಕಾರಣದಿ ಬಿಟ್ಟಿಹೆನು
ಇಲ್ಲದಿರೆ ನಿನ್ನನ್ನು ಕೊಲ್ಲುತಲಿ ಇರ್ದಿಹೆನು ॥೧೩೦೦॥

ಈ ಪರಿಯೆ ಕುರುರಾಯ ಗರ್ಜಿಸುತ ನುಡಿಯುತಿರೆ
ತಲೆಮಾಂಸ ಹಾರದಿಹ ಬಾಲಕನು ಈತನಿಹ
ತಿಳಿಯದಲೆ ನುಡಿದಿರುವ ವಿಕರ್ಣನಾ ಮಾತುಗಳ
ಮನಸಿಂಗೆ ತಾರದಿರು ಎಂದಿಹನು ಕಲಿಕರ್ಣ ॥೧೩೦೧॥

ಹೇ ದುಶ್ಶಾಸನನುಜನೆ ಇನ್ನೇಕೆ ತಡವೇಕೆ
ಹೊಳೆಹೊಳೆವ ಈ ಕರ್ಣ ಕುಂಡಲ ಕಿರೀಟಗಳು
ರತ್ನಗಳ ವಜ್ರಗಳ ಮೌಕ್ತಿಕದ ಹಾರಗಳು
ಉಂಗುರವು ಕಂಕಣವು ಒಡ್ಯಾಣನೂಪುರವು ॥೧೩೦೨॥

**ದ್ರೌಪದಿಯ ಆಭರಣ ಪೀತಾಂಬರಾದಿಗಳ ।**
**ಸೆಳೆಯುವುದು ಎಂದಿಹನು ಅನುಜನಿಗೆ ಕೌರವನು ॥**

ವಿಧವಿಧದ ಆಭರಣ ಪೀತಾಂಬರಾದಿಗಳು
ಎಮ್ಮಯಾ ಸೇವಕಿಗೆ ದ್ರೌಪದಿಗೆ ಏತಕ್ಕೆ
ಎಲ್ಲವನು ಸೆಳೆಯುತಲಿ ಬಿಸುಡುವುದು ಎನ್ನುತಲಿ
ಕೌರವನು ಬೆಸಸಿದನು ದುಶ್ಶಾಸನನುಜನಿಗೆ ॥೧೩೦೩॥

ಶಿರದೊಳಿಹ ಹೊಳೆಹೊಳೆವ ರತ್ನದ ಕಿರೀಟವನು
ಕೊರಳೊಳಿಹ ವಜ್ರಗಳ ಮೌಕ್ತಿಕದ ಹಾರಗಳ
ವರಮಕರ ಕುಂಡಲವ ಆಭರಣ ವೆಲ್ಲವನು
ತೆಗೆಯುತಲಿ ಒಗೆದಿಹರು ಪಾಂಡವರು ಐವರೂ ॥೧೩೦೪॥

ಕೆದರಿರುವ ಕೇಶಗಳ ಉರಿಯುಗುಳ್ವ ಕಣ್ಣುಗಳ
ಹುರಿಗೈದ ಮೀಸೆಗಳ ಬಿಗಿದಿರುವ ಅಧರಗಳ
ಯಮದೂತನಂತಿರುವ ದುಶ್ಶಾಸನಾ ಖಳನು
ಧಾವಿಸುತ ದ್ರೌಪದಿಯ ಸೆರಗನ್ನು ಹಿಡಿದಿಹನು ॥೧೩೦೫॥

ಗಾಂಗೇಯ ಗುರುದ್ರೋಣ ಮೋರೆಗಳ ತಿರುಹುತಲಿ
ಅಕಟಕಟ ಈ ಪರಿಯ ನೋಟವನು ನೋಡುವಾ
ಕಂಗಳುಗಳೇತಕ್ಕೊ ಹಂಗಾಗಿ ಜೀವಿಸುತ
ನಾವಿದ್ದು ಫಲವೇನು ಎನ್ನುತಲಿ ಮರುಗಿದರು ॥೧೩೦೬॥

**ದುಶ್ಶಾಸನಾ ದುರುಳ ದ್ರೌಪದಿಯ ಸೀರೆಯನು ।**
**ಸೆಳೆಯುತಿರೆ ವಿಧವಿಧದ ಪರಿಯಲ್ಲಿ ಹಲುಬಿದಳು ॥**

ಭರದಲ್ಲಿ ಆ ನೀಚ ದ್ರೌಪದಿಯ ಸೆರಗನ್ನು
ಸೆಳೆಯುತಿರೆ ನಡುನಡುಗಿ ಕಂಪಿಸುತ ಆ ಬಾಲೆ
ತೋಳ್ಗಳಲಿ ಕುಚಗಳನು ಮುಚ್ಚುತಲಿ ಬೆಚ್ಚುತಲಿ
ಬೆವರುತಲಿ ಕಳವಳದಿ ಕಂಬನಿಯ ಸುರಿಸುತಲಿ ॥೧೩೦೭॥

ಧರ್ಮಜನ ವಾಯುಜನ ಅರ್ಜುನನ ಮಾದ್ರಿಜರ
ದೈನ್ಯದಲಿ ನೋಡುತಿರೆ ಐವರೂ ಪಾಂಡವರು
ಮುಖಗಳನು ಕೆಳಮಾಡಿ ನೆಲವನ್ನು ನೋಡುತಲಿ
ಸುಮ್ಮನೇ ಕುಳಿತಿರಲು ಹಾಹಾರಿ ನಿಂದಿಹಳು ॥೧೩೦೮॥

ಗಾಂಗೇಯ ಗುರುದ್ರೋಣ ಅಶ್ವತ್ಥ ಕೃಪವರರೆ
ಎನ್ನಯಾ ತಂದೆಯರೆ ಮಗಳನ್ನು ರಕ್ಷಿಸಿರಿ
ಎನ್ನಯಾ ಮಾವಯ್ಯ ಧೃತರಾಷ್ಟ್ರ ಭೂಪತಿಯೆ
ನಿಮಸೊಸೆಯ ಮಾನವನು ರಕ್ಷಿಪುದು ಎಂದಿಹಳು ॥೧೩೯೯॥

ಎನ್ನಯಾ ಅತ್ತೆಯರೆ ಗಾಂಧಾರಿ ದೇವಿಯರ
ಆ ಭಾನುಮತಿಯಂತೆ ನಾ ನಿಮಗೆ ಸೊಸೆಯಲ್ವೆ
ನಿಮಸೊಸೆಯ ಮಾನಾಪಹರಣವನು ನಿಲ್ಲಿಪುದು
ಎನ್ನುತಲಿ ಪಾಂಚಾಲಿ ದೈನ್ಯದಲಿ ಬೇಡಿದಳು ॥೧೩೦೦॥

ಭಾನುಮತಿ ದೇವಿಯರೆ ಸೋದರಿಯು ನಾನಲ್ವೆ
ನಿನಪತಿಯು ಮೈದುನನು ಎನ್ನಯಾ ಮಾನವನು
ಸಭೆಯೊಳಗೆ ತೆಗೆಯುವರು ಬುದ್ಧಿಯನು ಹೇಳುತಲಿ
ಹೇ ಅಕ್ಕ ಎನ್ನನ್ನು ರಕ್ಷಿಪುದು ಎಂದಿಹಳು ॥೧೩೧೧॥

ಸೈಂಧವನ ರಾಣಿಯೇ ನೀನೆಗೆ ನಾದಿನಿಯು
ನಿನ್ನಯಾ ಸೋದರನ ದುಷ್ಕೃತ್ಯ ತಡೆಯುವದು
ಎನ್ನಯಾ ಬಂಧುಗಳೆ ಬಾಂಧವರೆ ಆಪ್ತರೇ
ಎನ್ನಯಾ ಮಾನವನು ರಕ್ಷಿಸಿರಿ ಎಂದಿಹಳು ॥೧೩೧೨॥

ಅರಮನೆಯ ನಾರಿಯರೆ ನೆರೆದಿರುವ ಮಹಿಳೆಯರೆ
ಹೇ ಅಕ್ಕತಂಗಿಯರೆ ತಾಯಿಯರೆ ಸಕಲರೇ
ಹೆಣ್ಣುಗಳ ದು:ಖವನು ಹೆಣ್ಣುಗಳೆ ಬಲ್ಲವರು
ನೀವೆನ್ನ ಮಾನವನು ಕಾಯುವದು ಎಂದಿಹಳು ॥೧೩೧೩॥

ನೃಪರುಗಳೆ ಮಂತ್ರಿಗಳೆ ಅಧಿಕಾರಿ ವರ್ಗಗಳೆ
ನಿಮ್ಮಯಾ ಎದುರಿನಲಿ ಬಡಹೆಂಗುಸೊಬ್ಬಳನು
ಎಳೆತಂದು ಸಭೆಯೊಳಗೆ ಸೀರೆಯನು ಕಳಚುವುದು
ನಿಮಗಿದುವೆ ಯೋಗ್ಯವೇ ಸಮ್ಮತವೆ ಎಂದಿಹಳು ॥೧೩೧೪

ಈ ಕುರುಡ ಮಾವಂಗೆ ಬುದ್ಧಿಯದು ಕುರುಡಾಯ್ತು
ಗಾಂಧಾರಿ ಅತ್ತೆಯರ್ಗೆ ಮಗನಾಟ ಸೊಗಸಾಯ್ತು
ಭಾನುಮತಿ ದೇವಿಯರ್ಗೆ ಪತಿಯಾಟ ಚೆಲುವಾಯ್ತು
ಕೌರವರ್ಗೆ ಚೆಲ್ಲಾಟವಾಯ್ತೆಂದು ನುಡಿದಿಹಳು ॥೧೩೧೫॥

ಗಂಡಂದಿರೈವರೂ ಎನ್ನನ್ನು ಮಾರಿದರು
ಬಂಧುಗಳು ಬಾಂಧವರು ಗುರುಹಿರಿಯರೆಲ್ಲರೂ
ಕೈಕಟ್ಟಿ ಸುಮ್ಮನೇ ನೋಡುತಲಿ ಕುಳಿತಿಹರು
ಎನಗಾರು ಗತಿಯಿಲ್ಲ ಎನ್ನುತಲಿ ಒರಲಿದಳು ॥೧೩೧೬॥

**ಎನ್ನಯಾ ಮಾನವನು ಕಾಯುವುದು ಎನ್ನುತಲಿ ।**
**ದ್ರೌಪದಿಯು ಕಳಕಳದಿ ಕೃಷ್ಣನನು ಸ್ತುತಿಸಿದಳು ॥**

ನಂಬಿರ್ದ ಕೈಹಿಡಿದ ಗಂಡಂದಿರೈವರೂ
ನಡು ನೀರೊಳೆನ್ನಯಾ ಕೈಯನ್ನು ಬಿಟ್ಟಿಹರು
ನಾಥರುಗಳೆನಗಿಲ್ಲ ಅನಾಥರಾ ಬಂಧುವಿಹೆ
ಹೇ ಕೃಷ್ಣ ರಕ್ಷಿಪುದು ಎನ್ನುತಲಿ ಒದರಿದಳು ॥೧೩೧೭॥

ನೀನಲ್ಲದಿನ್ನಾರು ಗತಿಯಿಲ್ಲ ಎನಗೀಗ
ನಂಬಿರುವ ಭಕುತರನು ಸಲಹುವಾ ಬಿರುದನ್ನು
ಹೊತ್ತಿರುವ ಭಕುತಜನ ಕರುಣಾಳು ಹೇ ಕೃಷ್ಣ
ಎನ್ನಯಾ ಮಾನವನು ಕಾಯುವದು ಎಂದಿಹಳು ॥೧೩೧೮॥

ದುರುಳ ಆ ಖಳಕಂಸ ಸೆರೆಯೊಳಗೆ ಇರಿಸಿರ್ದ
ವಸುದೇವ ದೇವಕಿಯ ಬಂಧನವ ಬಿಡಿಸಿರುವೆ
ಶಕಟನನ್ನು ಧೇನುಕನ ಚಾಣೂರ ಮುಷ್ಟಿಯನು
ಕೇಶಿಯನು ಪೂತನಿಯ ಕೊಂದಿರುವೆ ರಕ್ಷಿಪುದು ॥೧೩೧೯॥

ಬೆರಳಿನಲಿ ಗೋವರ್ಧನಾಗಿರಿಯನೆತ್ತುತಲಿ
ಗೋವುಗಳ ಗೋಪಿಯರ ಗೋಕುಲವ ರಕ್ಷಿಸಿದೆ
ಯಮುನೆಯಾ ನದಿಯೊಳಗೆ ಕಾಳಿಂಗ ಸರ್ಪವನು
ಮರ್ದಿಸುತ ನರ್ತಿಸಿದ ಹೇ ಕೃಷ್ಣ ರಕ್ಷಿಪುದು ॥೧೩೨೦॥

ಕ್ರೂರನಾ ರಕ್ಕಸನ ನರಕನನನಿರಿಯುತಲಿ
ಸೆರೆಯೊಳಗೆ ಇರಿಸಿರ್ದ ಹದಿನಾರು ಸಾವಿರದ
ಸ್ತ್ರೀಯರಾ ಬಂಧನವ ಬಿಡಿಸುತಲಿ ರಕ್ಷಿಸಿದೆ
ಎನ್ನಯಾ ಮಾನವನು ಕಾಯುವದು ಎಂದಿಹಳು ॥೧೩೨೧॥

ಸುರನಿಕರ ಅಸುರಕುಲ ಮಂದರದ ಪರ್ವತವ
ಸಾಗರದಿ ಮಥಿಸುತಿರೆ ಕೂರ್ಮದಾ ರೂಪದಲಿ
ಪರ್ವತವನೆತ್ತುತಲಿ ಬೆನ್ನಿನಲಿ ಧರಿಸುತಲಿ
ರಕ್ಷಿಸಿದ ಹೇ ವಿಷ್ಣು ನರಯಣನೆ ರಕ್ಷಿಪುದು ॥೧೩೨೨॥

ರಕ್ಕಸ ಹಿರಣ್ಯಾಕ್ಷ ಮೇದಿನಿಯಕೊಳ್ಳುತಲಿ
ಕಡಲೊಡಲ ಹೊಕ್ಕಿರಲು ವರಾಹದಾ ರೂಪದಲಿ
ದುಷ್ಟನನು ಕೊಲ್ಲುತಲಿ ಕೋರೆಯಾ ಹಲ್ಲಿನಲಿ
ಮೇದಿನಿಯ ತಂದಿರುವ ನರಯಣನೆ ರಕ್ಷಿಪುದು ॥೧೩೨೩॥

ತಂದೆಯಾ ಆಜ್ಞೆಯಲಿ ತಾಯಿಯಾ ಶಿರವನ್ನು
ಆ ಪರಶುಧರರಾಮ ಕೊಡಲಿಯಲಿ ಕತ್ತರಿಸಿ
ಮಹತಾಯಿ ಎಲ್ಲಮ್ಮ ರೇಣುಕೆಯ ರಕ್ಷಿಸಿದ
ಕಾರುಣ್ಯಮೂರ್ತಿಯೆ ನರಯಣನೆ ರಕ್ಷಿಪುದು ॥೧೩೨೪॥

ಯಜ್ಞವನು ಗೈಯ್ಯುತಿಹ ಬಲಿಚಕ್ರವರ್ತಿಯನು
ಮೂರಡಿಯ ಭೂಮಿಯನು ದಾನವನು ಕೇಳುತಲಿ
ನೆಲಮುಗಿಲ ವ್ಯಾಪಿಸುತ ಬಲಿಯನ್ನು ಮೆಟ್ಟಿರುವ
ವಾಮನ ತ್ರಿವಿಕ್ರಮನೆ ಶ್ರೀವಿಷ್ಣು ರಕ್ಷಿಪುದು ॥೧೩೨೫॥

ಪ್ರಹ್ಲಾದ ಬಾಲಕನ ಹಿಂಸೆಯನು ಗೈಯ್ಯುತಿರೆ
ಕಂಭದಲಿ ಮೂಡುತಲಿ ಆ ಹಿರಣ್ಯಕಶ್ಯಪು
ಕರಳುಗಳ ನಖದಿಂದ ಬಗಿಯುತಲಿ ವಧಿಸಿರುವ
ನರಸಿಂಹ ನರಹರಿಯೆ ನರಯಣನೆ ರಕ್ಷಿಪುದು ॥೧೩೨೬॥

ದುರುಳನಾ ದಶಶಿರನು ಜಾನಕಿಯನಪಹರಿಸೆ
ಸಾಗರಕೆ ಸೇತುವೆಯ ಕಟ್ಟುತಲಿ ದಾಂಟುತಲಿ
ದಶಶಿರನ ದಶಶಿರವ ತರಿಯುತಲಿ ಪೊರೆದಿರುವ
ಹೇ ಜಾನಕೀರಮಣ ಶ್ರೀರಾಮ ರಕ್ಷಿಪುದು ॥೧೩೨೭॥

ನೀರಿನೊಳು ಮೊಸಳೆಯದು ಕಾಲನ್ನು ಹಿಡಿಯುತಿರೆ
ಗಜರಾಜ ಆರ್ತದಲಿ ನಾರಾಯಣನೆ ಎನ್ನುತಲಿ
ಕೂಗುತಿರೆ ರಕ್ಷಿಸುತ ಮೋಕ್ಷವನು ಇತ್ತಿರುವ
ಕರುಣಾಳು ನಾರಾಯಣನೆ ಶ್ರೀಕೃಷ್ಣ ರಕ್ಷಿಪುದು ॥೧೩೨೮॥

ಅಡವಿಯಲಿ ನಿನ್ನನ್ನು ಹುಡುಕುತಲಿ ಬಳಲಿರುವ
ಧ್ರುವನಿಂಗೆ ಶಾಶ್ವತದ ಪದವಿಯನು ಇತ್ತಿರುವೆ
ಕಾರುಣ್ಯಸಿಂಧುವೇ ಅನಾಥರಾ ಬಂಧುವೇ
ಹೇ ಕೃಷ್ಣ ಎನ್ನಯಾ ಮಾನವನು ರಕ್ಷಿಪುದು ॥೧೩೨೯॥

ಆ ವೇದಕನ್ಯೆಯರ ಕಷ್ಟವನು ಕಳೆದಿರುವೆ
ದಿವಿಜರಾ ತಾಯಿಯನು ಅದಿತಿಯನು ಸಲುಹಿರುವೆ
ಶಿಲೆಯಾದಹಲ್ಯೆಯನು ಉದ್ಧಾರಗೈದಿರುವೆ
ಅಬಲೆಯನು ಎನ್ನನ್ನು ಸಲುಹುವುದು ಎಂದಿಹಳು ॥೧೩೩೦॥

ಮೊಲವನ್ನು ಹಿಂಸಿಸುವ ಹುಲಿಯನ್ನು ಬಡಿಸುವುದು
ಗಿಳಿಯನ್ನು ತಿನ್ನುತಿಹ ಗಿಡುಗನನು ಬಡಿಸುವುದು
ಚಿಗರೆಯನು ಹಿಂಸಿಸುವ ಸಿಂಹವವನು ಓಡಿಪುದು
ಈ ನೀಚನಿಂದೆನ್ನ ಬಿಡಿಸುವುದು ಎಂದಿಹಳು ॥೧೩೩೧॥

ಯಮದೂತ ಎನ್ನಯಾ ಪ್ರಾಣವನು ಸೆಳೆವಂತೆ
ಈ ಖಳನು ಎನ್ನಯಾ ಸೀರೆಯನು ಕಳಚುತಿಹ
ಮಾನವನು ಕಳಕೊಂಡು ಬದುಕಿರುವಕಿಂತಲೂ
ಸಾಯುವದೆ ಲೇಸೆಂದು ಹಲುಬಿದಳು ಲಲಿತಾಂಗಿ ॥೧೩೩೨॥

ಸಿರಿಯೊಡನೆ ಸರಸದಲಿ ನೀನಿರಲು ಭೃಗುಮುನಿಯು
ಎದೆಯನ್ನು ಒದೆಯುತಿರೆ ಪದವಿಯನು ಇತ್ತಿರುವೆ
ದೈನ್ಯದಲಿ ಕೂಗುತಿಹ ಆರ್ತದಲಿ ಪ್ರಾರ್ಥಿಸುವ
ಎನ್ನಯಾ ಮಾನವನು ಕಾಯುವದು ಎಂದಿಹಳು ॥೧೩೩೩॥

ಆ ದುಷ್ಟ ಭರದಲ್ಲಿ ಸೀರೆಯನು ಜಗ್ಗುತಿರೆ
ನಡುಗಂಟು ಬಿಚ್ಚುತಲಿ ಸಡಿಲುತಿರೆ ನಡುನಡುಗಿ
ಒಂದುಕರ ಸೀರೆಯನು ಧೃಢವಾಗಿ ಹಿಡಿಯುತಲಿ
ಮತ್ತೊಂದು ಕರವೆತ್ತಿ ಕೃಷ್ಣನನು ಕೂಗಿದಳು ॥೧೩೩೪॥

ಹೇ ಕೃಷ್ಣ ಕೇಶವ ಜನಾರ್ದನನೆ ಅಚ್ಯುತನೆ
ನಾರಾಯಣನೆ ಮಾಧವನೆ ವಾಮನ ತ್ರಿವಿಕ್ರಮನೆ
ದೇವಕೀನಂದನನೆ ಕಂಸರಿಪು ಮರ್ದನನೆ
ಎನ್ನಯಾ ಮಾನವನು ಕಾಯುವದು ಎಂದಿಹಳು ॥೧೩೩೫॥

ಎನ್ನತ್ತೆ ದೇವಿಯರ ಕುಂತಿಯರ ಸೋದರನ
ವಸುದೇವನಾತ್ಮಜನೆ ದೇವಕಿಯ ಪುತ್ರನೇ
ಎನ್ನಣ್ಣ ದೇವನೇ ನಿನ್ನಯಾ ಸೋದರಿಯು
ಮಾನವನು ರಕ್ಷಿಪುದು ಎನ್ನುತಲಿ ಒರಲಿಧಳು ॥೧೩೩೬॥

ಎನ್ನತ್ತೆ ಕುಂತಿಯರ ದೇವಿಯರ ಸೋದರನ
ವಸುದೇವನನುಗನೇ ಶ್ರೀಕೃಷ್ಣ ಯಾದವನೆ
ಸೋದರಿ ಸುಭದ್ರೆಯಾ ಸೋದರನೆ ಕೃಷ್ಣನೇ
ಎನ್ನಯಾ ಅಣ್ಣನೇ ರಕ್ಷಿಪುದು ಎಂದಿಹಳು ॥೧೩೩೭॥

ಎನ್ನಯಾ ಮಾನಾಪಮಾನಗಳು ನಿನ್ನವಿವೆ
ನಿನಗೆನ್ನ ಸರ್ವಸ್ವ ಅರ್ಪಣೆಯ ಗೈದಿಹೆನು
ಎನ್ನುತಲಿ ದೇಹಾಭಿಮಾನವನು ತೊರೆಯುತಲಿ
ಕರವೆರಡ ಮೇಲಕ್ಕೆ ಎತ್ತುತಲಿ ಕೂಗಿದಳು ॥೧೩೩೮॥

ಹೇ ಕೃಷ್ಣ ಮಾಧವನೆ ಗೋವಿಂದ ಮುಕುಂದನೆ
ದೇವಕಿಯ ನಂದನನೆ ಯಶೋದೆಯ ಕಂದನೆ
ರುಕ್ಮಿಣಿಯ ಭಾಮೆಯರ ಹೃದಯಾರವಿಂದನೆ
ರಕ್ಷಿಪುದು ರಕ್ಷಿಪುದು ಎನ್ನುತಲಿ ಕೂಗಿದಳು ॥೧೩೩೯॥

ಸಕಲ ಸಚರಾಚರದ ವಿಶ್ವವನು ನೀನೆಲ್ಲ
ವ್ಯಾಪಿಸಿಹೆ ಎನ್ನುತಲಿ ಶೃತಿನಾಲ್ಕು ಸಾರುತಿವೆ
ಸಭೆಯೊಳಗೆ ಎನ್ನಯಾ ಸೀರೆಯನು ಸೆಳೆಯುವುದು
ನಿನಗದುವೆ ಕಾಣಿಸದೆ ಇರುತಿಹುದೆ ಎಂದಿಹಳು ॥೧೩೪೦॥

ನಿನ್ನನ್ನು ಮರೆತಿಹೆನು ಎನ್ನುತಲಿ ಕೋಪದಲಿ
ನೀನಿನ್ನು ಕರುಣೆಯನು ತೋರದೇ ಇರುತಿಹೆಯಾ
ದೀನಳಾ ಸ್ತ್ರೀಯಳನು ತಾತ್ಸಾರ ಮಾಡದಲೆ
ಬೇಗೆನ್ನ ರಕ್ಷಿಪುದು ಎನ್ನುತಲಿ ಕೂಗಿದಳು ॥೧೩೪೧॥

ಆ ದುಷ್ಟ ದುಶ್ಶಾಸನಾವೇಶ ಗೊಳ್ಳುತಲಿ
ವಸ್ತ್ರವನು ಜಗ್ಗುತಿರೆ ಕೈಕೊಸರಿ ಕಳಚುತಿರೆ
ಸುಡಲಿನ್ನು ದೇಹದಾ ಅಭಿಮಾನವೇತಕ್ಕೆ
ಎನ್ನುತಲಿ ಕರವೆರಡ ಮೇಲೆತ್ತಿ ಕೂಗಿದಳು ॥೧೩೪೨॥

ಸಿಂಹದಾ ಬಾಯೊಳಗೆ ಸಿಲುಕಿರುವ ಮೃಗದಂತೆ
ಬಲೆಯೊಳಗೆ ಸಿಲುಕಿದಾ ಚಿಗರೆಯಾ ಮರಿಯಂತೆ
ಎಚ್ಚರವು ಅಳಿಯುತಲಿ ಭೀತಿಯಲಿ ಕಳವಳಿಸಿ
ಕಂಗಳನು ಮುಚ್ಚುತಲಿ ಕೋಮಲೆಯು ಕೂಗಿದಳು ॥೧೩೪೩॥

ಕರುಣಾಳು ಮೂರ್ತಿಯೆ ಕಾರುಣ್ಯಸಿಂಧುವೇ
ಕರುಣೆಯಾ ಸಾಗರನೆ ವಾತ್ಸಲ್ಯದಾಗರನೆ
ದೈನ್ಯದಲಿ ಹಲುಬುತಿಹ ಆರ್ತಳನು ದೀನಳನು
ಎನ್ನನ್ನು ಕರುಣೆಯಲಿ ರಕ್ಷಿಪುದು ಎಂದಿಹಳು ॥೧೩೪೪॥

ಸಭೆಯೊಳಗೆ ಈಗೆನ್ನ ಮಾನವದು ತೊಲಗುವುದು
ಆ ಕ್ಷಣದಿ ಎನ್ನಯಾ ಪ್ರಾಣವದು ಹಾರುವುದು
ಖಚಿತದಲಿ ಸಾಯುವೆನು ಹೇ ಅಣ್ಣ ಕಾಯುವುದು
ಎನ್ನುತಲಿ ಆರ್ತದಲಿ ಕೂಗಿದಳು ಆ ಬಾಲೆ ॥೧೩೪೫॥

**ದ್ರೌಪದಿಯ ಆರ್ತದಾ ಕೂಗನ್ನು ಕೇಳುತಲಿ ।**
**ಶ್ರೀಕೃಷ್ಣ ಅಕ್ಷಯವು ಎಂದಿಹನು ಕರುಣೆಯಲಿ ॥**

ಹೇ ತಂದೆ ಹೇ ಕೃಷ್ಣ ಎನ್ನುತಲಿ ದೈನ್ಯದಲಿ
ಕರವೆರಡನೆತ್ತುತಲಿ ಮೊಗವೆತ್ತಿ ಕೂಗುತಿರೆ
ದ್ರೌಪದಿಯ ರೋದನದ ಘೋರಸ್ವರ ಪಸರುತಲಿ
ದ್ವಾರಕೆಯ ಕೃಷ್ಣನಾ ಹೃದಯಕ್ಕೆ ತಾಗಿದುದು ॥೧೩೪೬॥

ಸರಸದಲಿ ರುಕ್ಮಿಣಿಯ ಭಾಮೆಯರ ಸಹಿತದಲಿ
ಲೆತ್ತವನು ಆಡುತಿಹ ಕೃಷ್ಣನಾ ಹೃದಯಕ್ಕೆ
ಬರಸಿಡಿಲು ಎರಗಿದಾ ಪರಿಯಲ್ಲಿ ಸ್ವರತಾಗೆ
ಅಕ್ಷಯವು ಎಂದಿಹನು ಕಮಲಾಕ್ಷನಾಕ್ಷಣದಿ ॥೧೩೪೭॥

ರುಕ್ಮಿಣಿಯು ಆಶ್ಚರ್ಯಗೊಳ್ಳುತಲಿ ಕೌತುಕದಿ
ಆಟದಲಿ ಅಕ್ಷಯವು ಏನೆಂದು ನುಡಿದಿಹಿರಿ
ಲೆತ್ತಗಳು ಅಕ್ಷಯವೆ ಎನ್ನುತಲಿ ಕೇಳುತಿರೆ
ದೃಗುಜಲವ ಮಿಡಿಯುತಲಿ ಶ್ರೀಕೃಷ್ಣ ನುಡಿದಿಹನು ॥೧೩೪೮॥

ಎನ್ನಯಾ ಪ್ರಾಣಗಳ ಪರಿಯಲ್ಲಿ ಇರುತಿರುವ
ಪಾಂಡವರು ಕೌರವರ ಜ್ಯೊತೆಯಲ್ಲಿ ದ್ಯೂತವನು
ಆಡುತಿರೆ ಧರ್ಮಜನು ರಾಜ್ಯವನು ಎಲ್ಲವನು
ಸೋದರರ ಸಹಿತದಲಿ ದ್ರೌಪದಿಯ ಸೋಲುತಿರೆ ॥೧೩೪೯॥

ದುಶ್ಶಾಸನಾಖಳನು ದ್ರೌಪದಿಯ ಸೀರೆಯನು
ಸಭೆಯೊಳಗೆ ಸೆಳೆಯುತಿರೆ ದೈನ್ಯದಲಿ ಆರ್ತದಲಿ
ಹೇ ಅಣ್ಣ ಶ್ರೀ ಕೃಷ್ಣ ಎನ್ನುತಲಿ ಕೂಗುತಿರೆ
ಅಕ್ಷಯವು ಎಂದಿಹೆನು ಎನ್ನುತಲಿ ನುಡಿದಿಹನು ॥೧೩೫೦॥

ದ್ರೌಪದಿಯ ಆರ್ತದಾ ನಾದವದು ತಾಗುತಿರೆ
ಸಾವಿರದ ಅಲಗುಗಳು ಎನ್ನದೆಯನಿರಿದಂತೆ
ಮನದೊಳಗೆ ಕಳವಳಿಸಿ ತಳಮಳಿಸಿ ನೋಯುತಲಿ
ಅಕ್ಷಯವು ಎಂದಿಹೆನು ಎನ್ನುತಲಿ ನುಡಿದಿಹನು ॥೧೩೫೧॥

ತನ್ನನ್ನು ನಂಬಿರುವ ಭಕ್ತರನು ಸಲಹುತಿಹ
ಭಕ್ತರಾಸುರಧೇನು ಭಕ್ತರಾ ಕಲ್ಪತರು
ಎಂಬುವಾ ಬಿರುದನ್ನು ಹೊತ್ತಿರುವ ಕರುಣಾಳು
ಶ್ರೀಕೃಷ್ಣರಾಯನಾ ಕರುಣೆಯದು ಎಂತುಟವೊ ॥೧೩೫೨॥

ಆ ಖಳನು ವಸ್ತ್ರವನು ಎಳೆದೆಳೆದು ಒಟ್ಟುತಿರೆ
ಎಳೆದಷ್ಟು ಸೀರೆಯದು ವರ್ಧಿಸುತ ಬೆಳೆಯುತಿರೆ
ಹಣಗುತಲಿ ತಿಣುಕುತಲಿ ಕರವೆರಡು ಸೋಲುತಲಿ
ತನುಬೆವರಿ ತೊಳಲುತಲಿ ಬಳಲಿದನು ಉಬ್ಬಸದಿ ॥೧೩೫೩॥

ಸೀರೆಯನು ತೆಗೆತೆಗೆದು ಪರ್ವತದ ಪರಿಯಲ್ಲಿ
ನೆಲಮುಗಿಲನೆತ್ತರದಿ ಕೆಲದಲ್ಲಿ ಇಟ್ಟಿಹರು
ನೀರಿನಾ ಸೆಲೆಯಂತೆ ಬತ್ತದಿಹ ವಸ್ತ್ರವನು
ನೋಡುತಲಿ ಸಕಲರೂ ಆಶ್ಚರ್ಯಗೊಂಡಿಹರು ॥೧೩೫೪॥

ದೈವವೇ ವಸ್ತ್ರವನು ದ್ರೌಪದಿಗೆ ಈಯುತಿದೆ
ಎಂದಿಗೂ ಸತ್ಯವನು ಧರ್ಮವನು ತೊರೆಯದಲೆ
ಚರಿಸುತಿಹ ನುತಚರಿತ ಸಜ್ಜನರ ಪಾಂಡವರ
ಪರಿಭವವ ಗೊಳಿಸಲಿಕೆ ಈ ಖಳರಿಗಸದಳವು ॥೧೩೫೫॥

ಮಮಪ್ರಾಣ ಪಾಂಡವರು ಎಂಬುವಾ ಬಿರುದನ್ನು
ಹೊತ್ತಿರುವ ಭಕುತಜನವತ್ಸಲನು ಕರುಣಾಳು
ಶ್ರೀಕೃಷ್ಣರಾಯನಾ ನಾಮವೇ ರಕ್ಷಿಸಿತು
ಸಕಲಜನ ಎನ್ನುತಲಿ ನುಡಿದಿಹರು ಬೆರಗಿನಲಿ ॥೧೩೫೬॥

ದ್ರೌಪದಿಯ ಸೀರೆಯನು ಸೆಳೆದುದನು ನೋಡುತಲಿ
ಮನದೊಳಗೆ ನೋಯುತಲಿ ಮತ್ತೆ ಆ ವಸ್ತ್ರವದು
ಬೆಳೆಯುತಿರೆ ಗಾಂಗೇಯ ಗುರುದ್ರೋಣ ವಿದುರರು
ಖೇದಮುದ ಮಿಶ್ರಿತದ ಸ್ಥಿತಿಯೊಳಗೆ ಇರ್ದಿಹರು ॥೧೩೫೭॥

ಕುರುಪತಿಯೆ ಪಾಂಡವರ ಸೋಲಿಪುದು ಅಸದಳವು
ದ್ರೌಪದಿಯ ಮಾನವನು ಕಳೆಯಲಿಕೆ ಯತ್ನಿಸಿದೆ
ದೈವಬಲ ಧರ್ಮಬಲ ಪಾಂಡವರಿಗಿರುತಿಹುದು
ನಿನ್ನಯಾ ಕಪಟದಾ ಯತ್ನಗಳು ನಿಷ್ಫಲವು ॥೧೩೫೮॥

ಬಿಡು ನೀನು ಪಾಂಡವರ ಮಾನಿನಿಯ ದ್ರೌಪದಿಯ
ಇಲ್ಲದಿರೆ ಭೀಮಾರ್ಜುನೀರ್ವರೂ ನಿಮ್ಮನ್ನು
ನೂರ್ವರನು ಕಡಿಕಡಿದು ದಿಗುಬಲಿಯನಿಕ್ಕುವರು
ಎನ್ನುತಲಿ ಆ ವಿದುರ ನುಡಿದಿಹನು ಕೌರವಗೆ ॥೧೩೫೯॥

ಹೇ ವಿದುರ ನಿನ್ನಯಾ ಧರ್ಮದ ಅಧರ್ಮದಾ
ಗೊಡ್ಡಿನ ವಿಚಾರವನು ಮರ್ಮವನು ನಿಲ್ಲಿಪುದು
ಪಾಂಡವರ ಹಿತವನ್ನು ಮನದೊಳಗೆ ಬಯಸುತಲಿ
ಮೋಸದಲಿ ನಮ್ಮನ್ನು ಬೆನ್ನಿನಲಿ ಇರಿಯುತಿಹೆ ॥೧೨೬೦॥

ಹೇಕರ್ಣ ವಿದುರನಾ ಮಾತುಗಳ ನಂಬದಿರು
ಈಗಲೇ ಈಕೆಯನು ಎಮ್ಮಯಾ ಅರಮನೆಯ
ಕಸಗುಡಿಪ ದಾಸಿಯರ ಹಿಂಡಿನಲಿ ಸೇರಿಪುದು
ಮಿಂಡರೂಗಳೀಕೆಯನು ಭೋಗಿಸಲಿ ಎಂದಿಹನು ॥೧೩೬೧॥

ಈ ದುಷ್ಟೆ ಎಮ್ಮನ್ನು ಸ್ವಯಂವರದ ಸಭೆಯೊಳಗೆ
ವರಿಸದಲೆ ಹೀನದಲಿ ಅಪಮಾನ ಗೊಳಿಸಿಹಳು
ಆ ಮಯನ ಸಭೆಯೊಳಗೆ ಬೀಳುತಿರೆ ನೋಡುತಲಿ
ಗಹಗಹಿಸಿ ನಕ್ಕಿಹಳು ಎಂದಿಹನು ಕೌರವನು ॥೧೩೬೨॥

ಗಾಂಗೇಯ ಗುರುದ್ರೋಣ ಹಿರಿಯರೇ ಯೋಚಿಪುದು
ಸೋತಿರುವ ಧರಣಿಪನು ಎನ್ನನ್ನು ಸೋಲುತಿರೆ
ಇದು ನ್ಯಾಯ ಸಮ್ಮತವೆ ಎಂಬುದನು ಹೇಳುವದು
ಈ ಸಭೆಯು ದುರ್ಜನನ ಕೂಟವಿದೆ ಎಂದಿಹಳು ॥೧೩೬೩॥

ಮಾತಿನಾ ಚಾಣ್ಕ್ಯಯನು ತೋರದಿರು ಹೇ ಹೆಣ್ಣೆ
ನಿನ್ನಯಾ ಗಂಡನೇ ಧರ್ಮಸುತ ನಿನ್ನನ್ನು
ಪಣಒಡ್ಡಿ ಸೋತಿಹನು ನೀನೆಮ್ಮತೊತ್ತಿರುವೆ
ನಮ್ಮದೇ ನ್ಯಾಯವಿದೆ ಎಂದಿಹನು ಕೌರವನು ॥೧೩೬೪॥

ಧರ್ಮಸುತ ಎಂದಿಗೂ ಸತ್ಯವನು ನುಡಿಯುವನು
ಎಂಬುವದು ನಿಜವಿರ್ದಾದೊಡೆಯು ನಿನ್ನನ್ನು
ತಾ ಸೋತುದಿಲ್ಲೆಂದು ಸಭೆಯೊಳಗೆ ಹೇಳುವುದು
ಎನ್ನುತಲಿ ನುಡಿದಿಹನು ದುರ್ಮತಿಯು ಕೌರವನು ॥೧೩೬೫॥

ಇವಳೊಡನೆ ಮಾತೇಕೆ ಕೌರವ ಮಹೇಶ್ವರನೆ
ಹೆಂಗುಸರು ಮಾತಿನಲಿ ಜಾಣೆಯರು ಇರುತಿಹರು
ಈ ಕ್ಷಣದಿ ಇವಳನ್ನು ನಿನ್ನಯಾ ಅರಮನೆಯ
ತೊತ್ತಾಗಿ ಸೇರಿಪುದು ಎಂದಿಹನು ಕಲಿಕರ್ಣ ॥೧೩೬೬॥

ದ್ರೌಪದಿಯೆ ನಿನ್ನಯಾ ಗರ್ವವನು ತೊರೆಯುತಲಿ
ದಾಸರೀ ಪಾಂಡವರ ಐವರನು ಮರೆಯುತಲಿ
ಕೌರವನ ಕೈಹಿಡಿದು ಸರಸದಲಿ ಸೌಧದಲಿ
ಸುಖವಾಗಿ ಭೋಗಿಪುದು ಎಂದಿಹನು ಕಲಿಕರ್ಣ ॥೧೩೬೭॥

ರೋಷದಾ ಜ್ವಾಲೆಯದು ಹೊತ್ತುತಲಿ ಭುಗಿಲೆನುತ
ಸುಡುಸುಡಲಿ ನಿನ್ನಯಾ ಹೀನತರ ಮಡಿಗಳಿವು
ನಿನ್ನಯಾ ಸಹಿತದಲಿ ಕೌರವರನೂರ್ವರನು
ಕಲಿಭೀಮ ಕೊಲ್ಲುವನು ಎಂದಿಹಳು ಯಜ್ಞಜೆಯು ॥೧೩೬೮॥

ಉಟ್ಟಿರುವ ವಸ್ತ್ರವನು ಮೇಲಕ್ಕೆ ಎತ್ತುತಲಿ
ತೊಡೆಯನ್ನು ತೋರಿಸುತ ಕೌರವನು ಕೋಪದಲಿ
ನಿನ್ನಯಾ ಗಂಡನನು ಭೀಮನನು ಮೆಟ್ಟುತಲಿ
ಯಮಸದನಕಟ್ಟುವೆನು ಎನ್ನುತಲಿ ನುಡಿದಿಹನು ॥೧೩೬೯॥

ಕಲಿಭೀಮ ನೋಡುತಲಿ ಆರಕ್ತ ನಯನದಲಿ
ಕೋಪದಾ ಕೆಂಡಗಳ ಕಿಡಿಗಳನು ಸೂಸುತಲಿ
ಭಾರಿಯಾ ಗದೆಯನ್ನು ಎತ್ತುತಲಿ ಏಳುತಿರೆ
ಫಲುಗುಣನು ಭೀಮನಾ ಕರಗಳನು ಹಿಡಿದಿಹನು ॥೧೩೭೦॥

ಕೋಪಕಿದು ಹೊತ್ತಲ್ಲ ತಾಳ್ಮೆಯನು ತಾಳುವುದು
ಧರ್ಮಜನ ಧರ್ಮತರು ಧರೆಗುರುಳಿ ಬೀಳುವುದು
ಧರ್ಮಜನ ಪ್ರಾಣವೇ ಹಾರುವದು ಎನ್ನುತಲಿ
ಅರ್ಜುನನು ನುಡಿಯುತಲಿ ಭೀಮನನು ತಡೆದಿಹನು ॥೧೩೭೧॥

ನಿನ್ನಯಾ ಗಂಡಂದಿರೈವರೂ ಸೋಲುತಲಿ
ಎನ್ನಯಾ ಭೃತ್ಯರುಗಳಾಗುತಲಿ ಕುಳಿತಿಹರು
ಮುಪ್ಪಾದ ಹುಲಿಯಂತೆ ಹಲ್ಮುರಿದ ಹಾವಂತೆ
ಅಸಮರ್ಥರಾಗುತಲಿ ತೆಪ್ಪಗೆಯೆ ಕುಳಿತಿಹರು ॥೧೩೭೨॥

ಹೇ ದುಶ್ಯಾಸನನುಜನೇ ತಡಮಾಡದೀಕ್ಷಣದಿ
ನಾಯಿಯನು ಎಳೆವಂತೆ ಈ ದುಷ್ಟ ದ್ರೌಪದಿಯ
ದರದರನೆ ಎಳೆಯುತಲಿ ಕೊಂಡೊಯ್ದು ಅರಮನೆಯ
ದಾಸಿಯರೊಳಿರಿಸಿವುದು ಎಂದಿಹನು ಕೌರವನು ॥೧೩೭೩॥

ದುಃಶ್ಯಾಸನಾಕ್ಷಣದಿ ಧಾವಿಸುತ ಅಕಟಕಟ
ದ್ರೌಪದಿಯ ತುರುಬಿಂಗೆ ಕೈಯನ್ನು ಇಕ್ಕುತಲಿ
ಭರದಿಂದ ಜಗ್ಗುತಿರೆ ಪ್ರಾಣವದು ತೊರೆದಂತೆ
ದಶದಿಶೆಯು ಬಿರಿವಂತೆ ಆರ್ತದಲಿ ಕೂಗಿದಳು ॥೧೩೭೪॥

ಹೇ ಗಿರಿಜೆ ಪಾರ್ವತಿಯೆ ಹೇ ಗೌರಿ ಶಾಂಭವಿಯೆ
ಹೇ ಆದಿಶಕ್ತಿಯೇ ಹೇ ಲಕುಮಿ ಸರಸತಿಯೆ
ಹೇ ಚಂಡಿ ಚಾಮುಂಡಿ ಹೇ ಮಹಿಷಮರ್ದಿನಿಯೆ
ನೀಚ ನೀ ರಕ್ಕಸನ ವಧಿಸುವುದು ಎಂದಿಹಳು ॥೧೩೭೫॥

ದೇವೇಂದ್ರ ನೀನೆನಗೆ ಓರಿಯನಿಹ ಮಾವನಿಹೆ
ಈ ಮಾವನೊಬ್ಬನು ಕುರುಡಾಗಿ ಇರ್ದೊಡೆಯು
ನಿನ್ನಯಾ ಸೊಸೆಯುಳೀ ಭಂಗವನು ನೋಡುತಲಿ
ಸುಮ್ಮನೆ ಕುಳಿತಿಹೆಯಾ ರಕ್ಷಿಪುದು ಎಂದಿಹಳು ॥೧೩೭೬॥
ಜಗದೊಳಗೆ ಜೀವಿಗಳ ಪ್ರಾಣದಾ ಉಸಿರಾಗಿ
ಚಲಿಸುತಿಹ ಹೇ ವಾಯು ನೀನೆನಗೆ ಮಾವನಿಹೆ
ಎನ್ನ ಈ ಕಷ್ಟವನು ನೋಡುತಲಿ ದುಷ್ಟನನು
ಎತ್ತಿಕೊಂಡೊಯ್ಯುತಲಿ ಬಿಸ ಡುವುದು ಎಂದಿಹಳು ॥೧೩೭೭॥
ಸತ್ಯವನು ಧರ್ಮವನು ಎಂದಿಗೂ ತೊರೆಯದಿ ಪ
ನಿನ್ನಯಾ ಐವರೂ ಬಂಧನದಿ ಸಿಲುಕಿಹರು
ಸಮಯದಲಿ ಕಲಿಭೀಮ ಕೌರವರ ವಧಿಸುವನು
ಧೈರ್ಯವನು ಹಿಡಿಯುವದು ಎಂದಿಹನು ವರವಿದುರ ॥೧೩೭೮॥
**ಕೌರವನು ದ್ರೌಪದಿಗೆ ತೊಡೆಗಳನು ತೋರಿಸಲು ।**
**ನಿನ್ನಯಾ ಮರಣವದು ತೊಡೆಗಳಲಿ ಎಂದಿಹಳು ॥**
ತೊಟ್ಟಿರುವ ಧೋತ್ರವನು ಸರಿಸುತಲಿ ಕೌರವನು
ಮಾನಿನಿಗೆ ದ್ರೌಪದಿಗೆ ತೊಡೆಗಳನು ತೋರಿಸುತ
ಕೈಯಿಂದ ಚಪ್ಪರಿಸಿ ಗರ್ಜಿಸುತ ಅರ್ಭಟಿಸಿ
ಭೀಮನನು ಸಂಹಾರ ಗೈಯ್ಯುವೆನು ಎಂದಿಹನು ॥೧೩೭೯॥
ನೀ ತೋರ್ದ ತೊಡೆಗಳನು ಕಲಿಭೀಮ ಖಚಿತದಲಿ
ಗದೆಯಿಂದ ಅಪ್ಪಳಿಸಿ ಸೀಳುತಲಿ ಪುಡಿಗೈದು
ದಿಗುಬಲಿಯನೀಯುವನು ನಿನ್ನಯಾ ಮರಣವದು
ತೊಡೆಗಳಲಿ ಸಂಭವಿಪುದೆಂದಿಹಳು ದ್ರೌಪದಿಯು ॥೧೩೮೦॥
**ಕ್ರೋಧದಲಿ ಕಲಿಭೀಮ ಕೌರವನ ಕೊಲ್ಲಲಿಕೆ ।**
**ಗದೆಯನ್ನು ತಿರುಹುತಲಿ ಮೇಲಕ್ಕೆ ಎದ್ದಿಹನು ॥**
ಕಡಲೊಳಗೆ ಅಡಗಿರುವ ವಡಬಾನಲೇಳ್ವಂತೆ
ಮೋಡಗಳನೊಡೆಯುತಲಿ ಘುಡುಘುಡಿಪ ಸಿಡಿಲಂತೆ
ಕಲಿಭೀಮ ಕೇಳುತಲಿ ಕ್ರೋಧದಲಿ ಕುದಿಯುತಲಿ
ಗದೆಯನ್ನು ತಿರುಹುತಲಿ ಸಭೆಯೊಳಗೆ ಎದ್ದಿಹನು ॥೧೩೮೧॥
ಆ ಪ್ರಳಯ ಕಾಲದಾ ರುದ್ರನಂತೆಸೆಯುತಿಹ
ಕ್ರೋಧದಾ ಕಿಡಿಗಳನು ಸೂಸುತಿಹ ಕಂಗಳಲಿ
ರೌದ್ರದಾ ರೂಪದಲಿ ಗದೆಯನ್ನು ತಿರುಹುತಲಿ
ಬರುತಲಿಹ ಯಮಸದೃಶಭೀಮನನು ಕಾಣುತಲಿ ॥೧೩೮೨॥
ದುಶ್ಯಾಸನಾಖಿಳನು ಹೆಳಲನ್ನು ತೊರೆಯುತಲಿ
ಸಿಂಹವದು ಬರುತಿರಲು ಹೀನ ನರಿ ಭೀತಿಯಲಿ
ಓಡುವಾ ಪರಿಯಲ್ಲಿ ಪ್ರಾಣದಾ ಭಯದಲ್ಲಿ
ಓಡುತಲಿ ಕೌರವನ ಬೆನ್ನಿನಲಿ ನಿಂದಿಹನು ॥೧೩೮೩॥

ಆ ರಾಹು ತೊಲಗಿದಾ ಚಂದ್ರಮನ ಪರಿಯಲ್ಲಿ
ದ್ರೌಪದಿಯು ಆನಂದಗೊಳ್ಳುತಲಿ ಹರ್ಷದಲಿ
ಗಂಡರೊಳು ಐವರಲಿ ಕಲಿಭೀಮನೋರ್ವನೆ
ಗಂಡು ಇಹೆ ಎನ್ನುತಲಿ ಹರ್ಷಾಶ್ರು ಸುರಿಸಿದಳು ॥೧೩೮೪॥
ಧರ್ಮಜನ ಧರ್ಮವನು ಮರ್ಮವನು ಗಿರ್ಮವನು
ಕೊಂಬುವನು ನಾನಲ್ಲ ಅಂಜುವನು ನಾನಲ್ಲ
ಕೌರವರ ನಿರ್ಮೂಲ ಮಾಡುವೆನು ಎನ್ನುತಲಿ
ಪ್ರಳಯದಾ ಸಿಡಿಲಂತೆ ಗರ್ಜನೆಯು ಗೈದಿಹನು ॥೧೩೮೫॥
ದುರುಳನೀ ಕೌರವನ ತೊಡೆಗಳನು ಎರಡನ್ನು
ಗದೆಯಿಂದ ಅಪ್ಪಳಿಸಿ ಸೀಳುತಲಿ ಪುಡಿಗೈದು
ಹೃದಯವನು ಘಾತಿಸುತ ಯಮಸದನಕಟ್ಟುವೆನು
ಎನ್ನುತಲಿ ಕಲಿಭೀಮ ಗರ್ಜಿಸಿದ ಕೋಪದಲಿ ೧೩೮೬॥
ಕೌರವರ ನೂರ್ವರನು ಕಡಿಯುತಲಿ ಕೊಚ್ಚುತಲಿ
ಬೇರಿನಾ ಸಹಿತದಲಿ ಕೌರವರ ವಂಶವನು
ನಾಶವನು ಮಾಡದಿರೆ ಕಲಿಭೀಮ ತಾನಲ್ಲ
ಎನ್ನುತಲಿ ಭೀಮ ಪ್ರತಿಜ್ಞೆಯನು ಗೈದಿಹನು ॥೧೩೮೭॥
**ಕೌರವರ ಸಕಲರನು ಸಂಹಾರ ಗೈಯ್ಯುವೆವು ।**
**ಎನ್ನುತಲಿ ಪಾಂಡವರು ಪ್ರತಿಜ್ಞೆಯನು ಗೈದಿಹರು ॥**
ಸಕಲ ದಿಕ್ಪಾಲಕರೆ ಚರಾಚರದ ವಸ್ತುಗಳೆ
ಎನ್ನಯಾ ಭಾಷೆಯನು ಬರೆದಿಟ್ಟುಕೊಳ್ಳುವುದು
ಕೌರವರ ನೂರ್ವರನು ನಿರ್ನಾಮಗೈಯ್ಯುವೆನು
ಎನ್ನುತಲಿ ಕಲಿಭೀಮ ಗರ್ಜನೆಯು ಗೈದಿಹನು ॥೧೩೮೮॥
ಬಾಯಿಯಲಿ ಬಂದಂತೆ ಮನಸಾರೆ ಬೊಗಳಿರುವ
ಈ ನಾಯಿ ಕರ್ಣನಾ ಶಿರವನ್ನು ತರಿಯುತಲಿ
ಬಾನಿಂಗೆ ತೋರಣವ ಕಟ್ಟುವೆನು ಎನ್ನುತಲಿ
ಫಲುಗುಣನು ಘೋರ ಪ್ರತಿಜ್ಞೆಯನು ಗೈದಿಹನು ॥೧೩೮೯॥
ಆಗಲಾ ಸಹದೇವ ಕಪಟದಲಿ ಮೋಸದಲಿ
ದ್ಯೂತದಲಿ ಧರ್ಮಜನ ಗೆದ್ದಿರುವ ಶಕುನಿಯನು
ಸಮರದಲಿ ಸಂಹಾರ ಗೈಯ್ಯುವೆನು ಎನ್ನುತಲಿ
ಘೋರ ಪ್ರತಿಜ್ಞೆಯನು ಗೈದಿಹನು ಕ್ರೋಧದಲಿ ॥೧೩೯೦॥
**ಕುರುಕುಲದ ನಾಶವನು ಸಾರುತಿಹ ಪರಿಯಲ್ಲಿ ।**
**ಘೋರತರ ಅಪಶಕುನವಾಗಿಹವು ಇಭಪುರದಿ ॥**
ಜನಮೇಜಯಕ್ಷಿತಿಪ ಕೇಳುವದು ಆ ಸಮಯ
ಬಿರುಗಾಳಿ ಬೀಸಿದುದು ಭೂಮಿಯದು ಕಂಪಿಸಿತು
ಪರ್ವತದ ಶಿಖರಗಳು ಉರುಳುತಲಿ ಬಿದ್ದಿಹವು
ಬೇರಿನಾ ಸಹಿತದಲಿ ತರುನಿಕರ ಕೆಡೆಹಿದುದು ॥೧೩೯೧॥

ಕಡಲುಕ್ಕಿ ಹರಿದಿಹುದು ದಿಗ್ದಂತಿ–ಚೀರಿದವು
ಶುಕಪಿಕವು ಹಕ್ಕಿಗಳು ಆರ್ತದಲಿ ಕೂಗಿದವು
ಹುಲಿಕರಡಿ ಚಿಗರೆಗಳು ದಿಕ್ಕೆಟ್ಟು ಓಡಿದವು
ಎಲ್ಲೆಡೆಗೆ ಚೀತ್ಕಾರ ಘೋರದನಿ ಪಸರಿದುದು ॥೧೩೯೨॥

ಹಗಲಿನಲಿ ಗಾಢಾಂಧಕಾರವದು ಕವಿಯುತಲಿ
ಗಗನದಲಿ ನಕ್ಷತ್ರ ಮಾಲೆಗಳು ತೋರಿದವು
ರಕ್ತದಾ ಮಾಂಸಗಳ ಮಜ್ಜೆಗಳ ಕರಣೆಗಳು
ಧಾರೆಯಲಿ ಸುರಿದಿಹವು ಗಜಪುರದ ಬೀದಿಯಲಿ ॥೧೩೯೩॥

ಕೋಟಿಗಳ ಸೂರ್ಯಪ್ರಕಾಶದಲಿ ಹೊಳೆಯುತಿಹ
ಸಾವಿರದ ಮಿಂಚುಗಳು ಥಳಥಳನೆ ಬೆಳಗುತಿರೆ
ಪ್ರಳಯದಾ ಸಿಡಿಲಂತೆ ಲೋಕವನು ನಡುಗಿಸುತ
ಧಿಗಿಧಿಟಿಲು ಎನ್ನುತಲಿ ಸಿಡಿಲೆರಗಿತಾಸಭೆಗೆ ॥೧೩೯೪॥

ಅಕಟಕಟ ಪ್ರಳಯವೇ ಸನ್ನಿಹಿತವಾಗಿಹುದು
ದುಷ್ಟನೀ ದ್ರೌಪದಿಯ ಹಿಂಸಿಸಿದ ಕಾರಣದಿ
ಕುರುಕುಲದ ನಾಶದಾ ಸಮಯವಿದು ಬಂದಿಹುದು
ಎನ್ನುತಲಿ ಕಳವಳದಿ ಸಕಲಜನ ನುಡಿದಿಹರು ॥೧೩೯೫॥

**ಜಗದಖಿಲನಾರಿಯರ ಮಾನ್ಯಳಾ ದ್ರೌಪದಿಯ ।**
**ಸಂತೈಸು ಎಂದಿಹನು ಗಾಂಗೇಯ ಭೂಪತಿಗೆ ॥**

ಮಕ್ಕಳನು ಮುಂದಕ್ಕೆ ಮಾಡುತಲಿ ನೋಡುತಲಿ
ಚಕ್ಕಂದವಾಡುತಿಹ ಧೃತರಾಷ್ಟ್ರ ಭೂಪತಿಯೆ
ಕುರುಕುಲದ ನಾಶವದು ಬಂದಿಹುದು ಮರುಳನೇ
ಮಹಿಳೆಯನು ಸಂತೈಸು ಎಂದಿಹನು ವರಭೀಷ್ಮ ॥೧೩೯೬॥

ದ್ರೌಪದಿಯು ಸಾಮಾನ್ಯಳೆನ್ನುತಲಿ ತಿಳಿದಿಹೆಯಾ
ಯಜ್ಞದೊಳು ಉದಿಸಿರುವ ವರಯಾಜ್ಞಸೇನಿಯಳು
ಜಗದಖಿಲ ನಾರಿಯರ ಮಸ್ತಕ ಶಿರೋಮಣಿಯು
ಲೋಕೈಕ ಪಾವನಳು ಸುವ್ರತೆಯು ಎಂದಿಹನು ॥೧೩೯೭॥

ನಾರಿಯರ ಪೂಜಿಸುವ ತಾಣದಲಿ ಸುರರುಗಳು
ದೇವತೆಗಳೊಲಿಯುತಲಿ ರಮಿಸುವರು ಶೃತಿವಾಕ್ಯ
ನಾರಿಯರು ಕಂಬನಿಯ ಸುರಿಸುವಾ ಸ್ಥಳದಲ್ಲಿ
ಕುಲನಾಶವಾಗುವದು ಖಂಡಿತವು ಎಂದಿಹನು ॥೧೩೯೮॥

ದ್ರೌಪದಿಯು ಸುರಿಸುತಿಹ ಒಂದುಹನಿ ಕಂಬನಿಗೆ
ನೂರ್ಮಡಿಯ ಮಿಗಿಲಾಗಿ ಕೌರವರನೂರ್ವರಾ
ಪತ್ನಿಯರ ಕಂಬನಿಯ ಹೊಳೆಯನ್ನು ಗಜಪುರದಿ
ಭೀಮಾರ್ಜುನೀರ್ವರೂ ಹರಿಸುವರು ಎಂದಿಹನು ॥೧೩೯೯॥

ನಿನ್ನಯಾ ಸುತರುಗಳು ಗೈದಿರುವ ತಪ್ಪಿಂಗೆ
ದ್ರೌಪದಿಯ ಕಾಲಿಂಗೆ ಎರಗುತಲಿ ನಮಿಸುತಲಿ
ದೈನ್ಯದಲಿ ಪ್ರಾರ್ಥಿಸುತ ಕ್ಷಮೆಯನ್ನು ಕೇಳುವುದು
ಎನ್ನುತಲಿ ಗಾಂಗೇಯ ನುಡಿದಿಹನು ಭೂಪತಿಗೆ ॥೧೪೦೦॥

**ಬಿಡುಮಗಳೆ ದ್ರೌಪದಿಯೆ ಸುತರುಗಳ ದುಷ್ಕೃತ್ಯ ।**
**ಮರೆಯುತಲಿ ಮನ್ನಿಪುದು ಎಂದಿಹನು ಅಂಧನೃಪ ॥**

ಧೃತರಾಷ್ಟ್ರ ದ್ರೌಪದಿಯ ಬಳಿಯಲ್ಲಿ ಐತಂದು
ನಿ ಎನ್ನ ಮಗಳಿರುವೆ ಮುದ್ದಿನಾ ಸೊಸೆಯಿರುವೆ
ಎನ್ನಯಾ ಕಡುಮೂರ್ಖ ದುಷ್ಟರೀ ಸುತರುಗಳು
ನಿನ್ನನ್ನು ಹಿಂಸಿಸುತ ಕಷ್ಟಗಳ ಕೊಟ್ಟಿಹರು ॥೧೪೦೧॥

ಸುತರುಗಳು ಗೈದಿರುವ ಪಾಪದೀಕೃತ್ಯವನು
ಮುಪ್ಪಿನಲಿ ನರಳುತಿಹ ಎನ್ನಯಾ ಮುಖನೋಡಿ
ನಿನ್ನಯಾ ಹೊಟ್ಟೆಯಲಿ ಹಾಕುತಲಿ ಮರೆಯುತಲಿ
ಎನ್ನನ್ನು ಕ್ಷಮಿಸುವುದು ಎಂದಿಹನು ದೈನ್ಯದಲಿ ॥೧೪೦೨॥

ದ್ರೌಪದಿಯೆ ನೀನೆನಗೆ ಅನ್ಯಳೇ ಬಾಹಿರಳೆ
ಎನ್ನಯಾ ಮಗಳಾದ ದುಶ್ಶಳೆಯ ಪರಿಯಲ್ಲಿ
ಪ್ರೀತಿಯಾ ಮಗಳಿರುವೆ ಆ ಭಾನುಮತಿಯಂತೆ
ಮುದ್ದಿನಾ ಸೊಸೆಯಿರುವೆ ಎನ್ನುತಲಿ ನುಡಿದಿಹನು ॥೧೪೦೩॥

ನಿನ್ನಲ್ಲಿ ಎಳ್ಳನಿತು ಭೇದವದು ಎನಗಿಲ್ಲ
ಎನ್ನಯಾ ಸೋದರನ ಪಾಂಡುವಿನ ನಂದನರ
ಮೋಹದಾ ಮಡದಿಯಿಹೆ ಸಾಮ್ರಾಜ್ಞಿ ನೀರುವೆ
ಎನ್ನಲ್ಲಿ ಮತ್ಸರವು ಲವಲೇಶವಿಲ್ಲೆಂದ ॥೧೪೦೪॥

ನೀವುಗಳು ಸತ್ಯದಲಿ ಧರ್ಮದಲಿ ನಡೆವವರು
ಸಜ್ಜನರು ಪಾವನರು ನುತಚರಿತ ಮಾನ್ಯರು
ಎನ್ನಯಾ ಸುತರುಗಳು ಕಪಟಿಗಳು ಪಾಪಿಗಳು
ದುರ್ನಡತೆ ದುರ್ಜನರು ಚಾರಿತ್ರ್ಯಹೀನರು ॥೧೪೦೫॥

ಎನ್ನಯಾ ಸುತರುಗಳು ಗೈದಿರುವ ಕೃತ್ಯವನು
ಮರೆಯುತಲಿ ಕರುಣೆಯಲಿ ಎನ್ನನ್ನು ಕ್ಷಮಿಸುವುದು
ನೀನೊಲಿದು ಇಚ್ಛಿಸಿದ ಬೇಡಿಕೆದ ನೀಯುವೆನು
ಎನ್ನುತಲಿ ಧೃತರಾಷ್ಟ್ರ ದೈನ್ಯದಲಿ ಪ್ರಾರ್ಥಿಸಿದ ॥೧೪೦೬॥

ಮಾವಯ್ಯ ನಿಮ್ಮಯಾ ಮಾತುಗಳು ಸೊಗಸಿಹವು
ಆದೊಡೆಯು ನಿಮ್ಮಯಾ ಮಗನಿಂಗೆ ನಾನೇನು
ಶಾಕಿನಿಯೊ ಡಾಕಿನಿಯೊ ಆ ಕಾಲಕೂಟದಾ
ವಿಷವಿಹೆನೊ ಎಂಬುದನು ಕೇಳುವುದು ಎಂದಿಹಳು ॥೧೪೦೭॥

ಬಿಡುಮೊಗಳೆ ದ್ರೌಪದಿಯೆ ದುರುಳರಾ ಮಾತೇಕೆ
ಎನ್ನಯಾ ಸುತರೆಲ್ಲ ಶತ್ರುಗಳು ಇರುತಿರಲಿ
ಖೂಳರಾ ಕೃತ್ಯವನು ಮರೆಯುತಲಿ ಮನ್ನಿಪುದು
ವರವನ್ನು ಬೇಡುವುದು ಈಯುವೆನು ಎಂದಿಹನು ॥೧೪೦೮॥

**ಬಂಧನವ ಕಳೆಯುತಲಿ ರಾಜ್ಯವನು ಈಯುತಲಿ ।**
**ಪಾಂಡವರ ಸಾಂತ್ವನವಗೊಳಿಸಿದನು ಭೂಪತಿಯು ॥**

ಮಾವಯ್ಯ ನೀವುಗಳು ವರವನ್ನು ಈಯುವೊಡೆ
ಎನ್ನಯಾ! ಗಂಡಂದಿರೈವರಾ ಪಾಂಡವರ
ದಾಸ್ಯತ್ವ ಕಳೆಯುವುದು ಎನ್ನುತಿರೆ ದ್ರೌಪದಿಯು
ಕೊಟ್ಟಿಹೆನು ಮತ್ತೊಂದು ವರಬೇಡು ಎಂದಿಹನು ॥೧೪೦೯॥

ಎರಡನೆಯ ವರದಲ್ಲಿ ವರಭೀಮ ಅರ್ಜುನಗೆ
ಆ ನಕುಲಸಹದೇವ ವೀರರಿಗೆ ಗಜತುರಗ
ಶಸ್ತ್ರಾಸ್ತ್ರ ರಥಗಳನು ವಿಧವಿಧದ ಆಯುಧವ
ಅಗಣಿತವ ನೀಯುವುದು ಎಂದಿಹಳು ದ್ರೌಪದಿಯು ॥೧೪೧೦॥

ನೀ ಕೇಳ್ವುದಿತ್ತೆನು ಮೂರನೆಯ ವರವನ್ನು!
ಕೇಳುವುದು ಎನ್ನುತಿರೆ ಧೃತರಾಷ್ಟ್ರ ಭೂಪತಿಯು
ವೈಶ್ಯರಿಗೆ ಒಂದುವರ ನೃಪಸತಿಗೆ ಎರಡುವರ
ನೃಪರಿಂಗೆ ಮೂರುವರ ಭೂಸುರರ್ಗೆ ನೂರುವರ ॥೧೪೧೧॥

ಎನ್ನುತಲಿ ಶಾಸ್ತ್ರವದು ಸಾರುತಿದೆ ವಿದಿತವಿದೆ
ಅತಿಆಸೆ ಗತಿಗೆಡಿಸಿತೆಂಬಂತೆ ಸಾಕಿನ್ನು
ಭಾರವಿದು ಎನ್ನಿಸದೆ ನಿಮ್ಮ ಮನ ಒಪ್ಪುವೊಡೆ
ವರವೆರಡನೀಯುವುದು ಎಂದಿಹಳು ದ್ರೌಪದಿಯು ॥೧೪೧೨॥

ಭಾರವದು ಎಲ್ಲಿಯದು ಹೇ ಮಗಳೆ ದ್ರೌಪದಿಯೆ
ನೀವೆಮಗೆ ಬಾಹಿರರೆ ಒಂದೆಲತೆ ಕುಸುಮಗಳು
ಹಿಂದಣದ ಎಲ್ಲವನು ದ್ವೇಷವನು ಮರೆಯುತಲಿ
ಬಂಧುಗಳ ಪ್ರೇಮದಲಿ ಮೆರೆಯುವುದು ಎಂದಿಹನು ॥೧೪೧೩॥

ಹೇ ಮಾಟಗಾರ್ತಿಯೇ ಮೋಹಿನಿಯೆ ದ್ರೌಪದಿಯೆ
ಆ ಐಂದ್ರ ಜಾಲದಾ ಮೋಹಿನಿಯ ವಿದ್ಯೆಯಲಿ
ಕುರುಡನೀ ನೃಪನನ್ನು ಮರುಳಾಗಿ ಮಾಡುತಲಿ
ಬಲೆಯೊಳಗೆ ಸಿಲುಕಿರ್ದ ಹುಲಿಗಳನು ಬಿಡಿಸಿರುವೆ ॥೧೪೧೪॥

ಗಾಳದಲಿ ಸಿಲುಕಿರ್ದ ಮೀನುಗಳ ಬಿಡಿಸಿರುವೆ
ಒಣಗಿರುವ ಮರಗಳನು ಮತ್ತೆ ನೀ ಚಿಗುರಿಸಿದೆ
ನಿನ್ನಯಾ ಮಾನವನು ನೀನುಳಿಸಿಕೊಂಡಿರುವೆ
ನೀ ಜಾದುಗಾರ್ತಿಯಿಹೆ ಎಂದಿಹನು ಕಲಿಕರ್ಣ ॥೧೪೧೫॥

ಕೋಪದಲಿ ಕೆಂಡಗಳ ಕಿಡಿಗಳನು ಕಾರುತಲಿ
ತಾಪದಲಿ ಭುಸುಗುಡುವ ಸರ್ಪದಾ ಪರಿಯಲ್ಲಿ
ನೀಳುಸಿರ ಸೂಸುತಲಿ ತಳಮಳದಿ ಕುದಿಯುತಲಿ
ಗದೆಯನ್ನು ತಿರುಹುತಲಿ ಕಲಿಭೀಮ ಎದ್ದಿಹನು ॥೧೪೧೬॥

ಧರ್ಮಸುತ ಕೈಹಿಡಿದು ದುಡುಕದಿರು ಸೋದರನೆ
ಕರ್ಣನಾ ಮಾತುಗಳ ಲೆಕ್ಕಕ್ಕೆ ತಾರದಿರು
ಹೀನನಾ ನಾಲಗೆಯು ಹೀನಕುಲ ತೋರಿವುದು
ಈ ಕರ್ಣ ಸೂತಸುತ ಎಂಬುದನು ಅರಿಯೆಯಾ ॥೧೪೧೭॥

ಕೌರವರು ಶತ್ರುಗಳೆ ಎಮ್ಮಯಾ ಬಂಧುಗಳು
ಅವರೊಳಿಹ ಕಾಮವದು ಮದಮತ್ಸರಾದಿಗಳು
ಅವರನ್ನು ಕುಣಿಸುತಿಹ ಎಮ್ಮಯಾ ಶತ್ರುಗಳು
ತಮ್ಮಯಾ ಕರ್ಮವನು ಭೋಗಿಪರು ಎಂದಿಹನು ॥೧೪೧೮॥

ಎಮ್ಮಯಾ ಧರ್ಮಮಯ ತರುವನ್ನು ಕೆಡುಹದಿರು
ಶ್ವಾನ ತಾ ಬೊಗಳಿದೊಡೆ ಆನೆತಾನಳುಕುವುದೆ
ಎಮ್ಮಯಾ ಭಾಷೆಗಳ ಬೀಜಗಳು ಮೊಳೆಯುತಲಿ
ಮರವಾಗಿ ಫಲಿಸುವುದು ನೀಸಹಿಸು ಎಂದಿಹನು ॥೧೪೧೯॥

ಬಾ ತಮ್ಮ ಕಲಿಭೀಮ ಬಾರಯ್ಯ ಫಲುಗುಣನೆ
ಸಹದೇವ ನಕುಲರೇ ಸೋದರರೆ ಬನ್ನಿರಿ
ಹೇ ಸತಿಯೆ ದ್ರೌಪದಿಯೆ ನೀ ಬರ್ಪುದೆನ್ನುತಲಿ
ಧರ್ಮಜನು ಧೃತರಾಷ್ಟ್ರ ನೆಡೆಯಲ್ಲಿ ಬಂದಿಹನು ॥೧೪೨೦॥

ನೀವೆಮಗೆ ದೈವದಾ ಅಧಿಪತಿಯು ದೇವರಿಹೆ
ನೀವೆಮ್ಮ ತಂದೆಯಿಹೆ ಗುರುಹಿರಿಯರಿರುತಿಹಿರಿ
ನಿಮ್ಮಯಾ ಆಜ್ಞೆಯನು ನಾವುಗಳು ಪಾಲಿಪೆವು
ತಿಳುಹುವುದು ಎನ್ನುತಲಿ ಧರ್ಮಜನು ನುಡಿದಿಹನು ॥೧೪೨೧॥

ಹೇ ಪಾಂಡುನಂದನನೆ ಹೇ ಕಂದ ಮಾಕಂದ
ಮಕ್ಕಳುಗಳವರಲ್ಲ ಎನ್ನಯಾ ಶತ್ರುಗಳು
ನೀವುಗಳು ಐವರೂ ಎನ್ನಯಾ ಕಂದಗಳು
ನಿಮ್ಮೊಳಗೆ ತಪ್ಪಿಲ್ಲ ಎಂದಿಹನು ಧೃತರಾಷ್ಟ್ರ ॥೧೪೨೨॥

ದುರುಳನಾ ಮನೆಮುರಕ ಸೌಬಲನ ಸಂಗದಲಿ
ಕರ್ಣನಾ ಗೆಳತನದಿ ಕೌರವನು ಕೆಟ್ಟಿಹನು
ಎನ್ನಯಾ ಸುತರುಗಳ ಕೃತ್ಯವನು ಕ್ಷಮಿಸುವುದು
ನೀವುಗಳು ನಿರ್ದೋಷರೆಂದಿಹನು ಭೂಪತಿಯು ॥೧೪೨೩॥

ಕುರುಡಿನಲಿ ಮುಪ್ಪಿನಲಿ ನರಳಿತಿಹ ನನ್ನನ್ನು
ನೋಡುತಲಿ ನೀವುಗಳು ಕರುಣೆಯುಲಿ ಕ್ಷಮಿಸುವುದು
ನೀವುಗಳು ಸತ್ಕರ್ಮ ಸುಚರಿತರು ಮಾನ್ಯರು
ಎನ್ನಯಾ ಸುತರುಗಳು ಪಾಪಿಗಳು ಹೀನರು ||೧೪೨೪||

ಜಗದೊಳಗೆ ಖ್ಯಾತಮಿಹ ರಾಜಸೂಯಾಧ್ವರವ
ವೈಭವದಿ ಗೈಯ್ಯುತಲಿ ನರಕದೊಳಿಹ ಪಾಂಡುವನು
ಸ್ವರ್ಗದೊಳು ಸೇರಿಸಿದೆ ನಿನ್ನಸಮ ಸುತಚರಿತ
ಧರ್ಮಿಷ್ಟ ನೃಪತಿಯನು ಕುರುಕುಲದಿ ನಾಕಾಣೆ ||೧೪೨೫||

ಮಕ್ಕಳುಗಳಾಡಿರುವ ಕಪಟದೀ ದ್ಯೂತವನು
ಖೂಳರೀ ಸುತರುಗಳು ನುಡಿದಿರುವ ನುಡಿಗಳನು
ಮನದೊಳಗೆ ತಾರದೆಯೆ ಸಕಲವನು ಮರೆಯುತಲಿ
ಮುನ್ನಿನಾ ಪರಿಯಲ್ಲಿ ಪ್ರೇಮದಲಿ ಮೆರೆಯುವುದು ||೧೪೨೬||

ಹೇ ಮಗನೆ ಧರ್ಮಜನೆ ಕುರುಕುಲ ಶಿರೋಮಣಿಯೆ
ವರ ಇಂದ್ರಪ್ರಸ್ಥದಾ ರಾಜ್ಯವನು ಆಳುವುದು
ಪ್ರಜೆಗಳಾ ಕಣ್ಮಣಿಯು ಎನಿಸುತಲಿ ರಾಜ್ಯವನು
ಧರ್ಮದಲಿ ಪ್ರೇಮದಲಿ ಪಾಲಿಪುದು ಎಂದಿಹನು ||೧೪೨೭||

ಹೊಳೆಹೊಳೆವ ಪೀತಾಂಬರಾದಿಗಳ ಸೀರೆಗಳ
ಸ್ವರ್ಣದಾ ಒಡವೆಗಳ ರತ್ನಗಳ ದ್ರೌಪದಿಗೆ
ಮುತ್ತುಗಳ ವಜ್ರಗಳ ಹಾರಗಳ ಪಾಂಡವರ್ಗೆ
ಈಯುತಲಿ ಸಕಲರನು ಕಳುಹಿದನು ಭೂಪತಿಯು ||೧೪೨೮||

**ಧರ್ಮಜನು ತನ್ನಯಾ ಐವರಾ ಮೇಳದಲಿ |**
**ಪುನರಪಿಯು ವರಇಂದ್ರ ಪ್ರಸ್ಥಕ್ಕೆ ತೆರಳಿದನು ||**

ಧರ್ಮಜನು ಸೋದರರ ಮತ್ತೆ ಆ ದ್ರೌಪದಿಯ
ಸಹಿತದಲಿ ಗಾಂಧಾರಿ ಬಳಿಯಲ್ಲಿ ಐತಂದು
ಸಾಷ್ಟಾಂಗ ಗೈಯ್ಯುತಿರೆ ಮಹತಾಯಿ ಗಾಂಧಾರಿ
ದೃಗುಜಲವ ಸುರಿಸುತಲಿ ಗದ್ಗದದಿ ನುಡಿದಿಹಳು ||೧೪೨೯||

ನಾ ಹಡೆದ ಸುತರುಗಳು ನಿಮಗಿತ್ತ ಕಷ್ಟವನು
ಮರೆಯುತಲಿ ನನ್ನನ್ನು ಕರುಣೆಯಲಿ ಕ್ಷಮಿಸುವುದು
ಅವರುಗಳು ಗೈದಿರುವ ಪಾಪದಾ ಕೃತ್ಯಕ್ಕೆ
ಲೋಕವೇ ನೊಂದಿಹದು ಶಪಿಸಿಹುದು ಎಂದಿಹಳು ||೧೪೩೦||

ಬಾ ಮಗಳೆ ದ್ರೌಪದಿಯೆ ಎನ್ನಯಾ ಸುತರುಗಳು
ಅಪರಿಮಿತ ಹೀನತರ ಹಿಂಸೆಯನು ಕೊಟ್ಟಿಹರು
ಹೇ ತಾಯೆ ತಾಯಿಯಾ ಪರಿಯಲ್ಲಿ ಮರೆಯುತಲಿ
ಎನ್ನನ್ನು ಕ್ಷಮಿಸುವುದು ಎನ್ನುತಲಿ ಅಪ್ಪಿದಳು ||೧೪೩೧||

ಅತ್ತೆಯರೆ ನೀವೆಮಗೆ ತಾಯಿಯ ಸಮಾನರು
ಮನದೊಳಗೆ ನೋಯದಿರಿ ಇದು ವಿಧಿಯ ಲೀಲೆಯಿರೆ
ನಮ್ಮಯಾ ಪೂರ್ವದಾ ಪ್ರಾರಬ್ಧ ಕರ್ಮವಿದು
ಭೋಗಿಸಿದೆವೆನ್ನುತಲಿ ನುಡಿದಿಹಳು ದ್ರೌಪದಿಯು ||೧೪೩೨||

ಗೋವಿಂದನರಯಣನ ಮಾಧವ ಜನಾರ್ದನನ
ನಾಮವನು ನೆನೆಯುತಲಿ ಕಷ್ಟವನು ನೀಗಿದೆವು
ಎಮ್ಮನ್ನು ಹರಸುತಲಿ ಬೀಳ್ಕೊಡುವುದೆನ್ನುತಲಿ
ದ್ರೌಪದಿಯು ಗಾಂಧಾರಿದೇವಿಯರ್ಗೆ ಎರಗಿದಳು ||೧೪೩೩||

ಹೇ ಮಗಳೆ ಐವರೂ ಗಂಡಂದಿರೊಡಗೂಡಿ
ಪ್ರೇಮದಲಿ ಸರಸದಲಿ ಸುಖವಾಗಿ ಬಾಳುವುದು
ನಿಮಗೆಲ್ಲ ಶುಭವಾಗಲೆನ್ನುತಲಿ ಹರಸುತಲಿ
ವರಸಾಧ್ವಿ ಗಾಂಧಾರಿ ಸಕಲರನು ಕಳುಹಿದಳು ||೧೪೩೪||

ಗಜತುರುಹ ಶಸ್ತ್ರಾಸ್ತ್ರ ರಥನಿಕರ ಸಹಿತದಲಿ
ತನ್ನಯಾ ಐವರಾ ಮೇಳದಲಿ ಧರ್ಮಜನು
ದ್ವಾರಕಾಧೀಶನಾ ಶ್ರೀಕೃಷ್ಣನೊಲುಮೆಯಲಿ
ನಿಜಪುರದ ವರಇಂದ್ರಪ್ರಸ್ಥವನು ಹೊಕ್ಕಿಹನು ||೧೪೩೫||

**ಎಮ್ಮನ್ನು ಕಾನನಕೆ ಅಟ್ಟುತಲಿ ಸುಖವಾಗಿ |**
**ಪಾಂಡವರ ಜೋಕೆಯಲ್ಲಿ ಸುಖಿಸುವುದು ಎಂದಿಹನು ||**

ಜನಮೇಜಯ ಕ್ಷಿತಿಪ ಕೇಳುವುದು ಇತ್ತಲಾ
ಪಾಂಡವರು ಪರಿವಾರ ಸಹಿತದಲಿ ತೆರಳುತಿರೆ
ಕುಹಕಿಗಳ ಕಪಟಿಗಳ ಕೌರವರ ಹೃದಯದಲಿ
ಕಳವಳವು ತಳಮಳವು ಮತ್ಸರವು ಮೂಡಿಹವು ||೧೪೩೬||

ಆರಕ್ತ ಬಾಲರವಿ ಮೂಡಣದಿ ಮೂಡುತಿರೆ
ಆರಕ್ತನಯನದಾ ಆ ಕ್ರೂರ ಖಳತಿಲಕ
ದುಶ್ಯಾಸನಾ ದುರುಳ ಕೌರವನ ಅರಮನೆಗೆ
ಐತಂದು ರಾಧೇಯ ಶಕುನಿಯರ ಕರೆಸಿದನು ||೧೪೩೭||

ಹಾವನ್ನು ಸಾಯುವಾ ಪರ್ಯಂತ ಬಡಿಯುವುದು
ಅರ್ಧದಲಿ ನೋಯಿಸಲು ಶತವರುಷ ಪರ್ಯಂತ
ದ್ವೇಷವನು ತಾಳುತಲಿ ವಿಷವನ್ನು ಕಾರುತಲಿ
ಕಚ್ಚುತಲಿ ಕೊಲ್ಲುವದು ಎಂದಿಹನು ಆ ಶಕುನಿ ||೧೪೩೮||

ಇಭಪುರಿಯ ಸುಡುವಂತೆ ಉರಿಯುತಿಹ ಕಂಗಳಲಿ
ಆ ಭೀಮ ದುರದುರನೆ ನೋಡುತಲಿ ತೆರಳಿದನು
ಫಲಗುಣನು ತರುಗಳನು ತರಿಯುತಲಿ ತೆರಳಿದನು
ಕುರುಕುಲವ ನಾಶವನು ಮಾಡುವರು ಎಂದಿಹನು ||೧೪೩೯||

ಮಲಗಿರುವ ಹುಲಿಯನ್ನು ತುಡುಕುತಲಿ ಎಬ್ಬಿಸಿದೆ
ಪಾಂಡವರ ಪಟ್ಟದಾ ರಾಣಿಯಾ ದ್ರೌಪದಿಯ
ಹೆಳಲನ್ನು ಹಿಡಿಯುತಲಿ ಬೀದಿಯಲಿ ಎಳೆದಿರುವೆ
ಅವಳುಟ್ಟ ಸೀರೆಯನು ಸಭೆಯೊಳಗೆ ಸೆಳೆಸಿರುವೆ ॥೧೪೪೦॥

ನಿಮ್ಮನ್ನು ನೂರ್ವರನು ಯಮಸದನಕಟ್ಟುವೆನು
ಎನ್ನುತಲಿ ಆ ಭೀಮ ಆಣೆಯನು ಮಾಡಿಹನು
ಶತ್ರುಗಳ ಅರ್ಧದಲಿ ಹಿಂಸಿಸುತ ಬಿಟ್ಟಿಹುದು
ಘೋರತರ ತಪ್ಪೆಂದು ನುಡಿದಿಹನು ಕಲಿಕರ್ಣ ॥೧೪೪೧॥

ಅಹುದಹುದು ಕರ್ಣನೇ ಭೀಮನಾ ಸೊಕ್ಕನ್ನು
ಅರ್ಜುನನ ಗರ್ವವನು ಮಣ್ಣನ್ನು ಮುಕ್ಕಿಸಿದೆ
ಆದೊಡೆಯು ಎನ್ನಪ್ಪ ಹುಚ್ಚಪ್ಪ ಭೂಪತಿಯು
ವರಗಳನು ಈಯುತಲಿ ಕೆಡಿಸಿದನು ಎಂದಿಹನು ॥೧೪೪೨॥

ಶತ್ರುವಿಗೆ ದಯೆಯನ್ನು ಕರುಣೆಯನು ತೋರುವುದು
ಹಾವಿಂಗೆ ಹಾಲನ್ನು ಕುಡಿಸುವುದು ಸಲ್ಲದದು
ಹಾಲಿದುವೆ ವಿಷವಾಗಿ ಆ ಹಾವು ಕಚ್ಚುವದು
ಎನ್ನುತಲಿ ಆ ಶಕುನಿ ನುಡಿದಿಹನು ಕೌರವಗೆ ॥೧೪೪೩॥

ಈ ಕ್ಷಣದಿ ನಿಮ್ಮಪ್ಪ ಧೃತರಾಷ್ಟ್ರ ಭೂಪತಿಯು
ಬಳಿಯಲ್ಲಿ ಸಾಗುತಲಿ ನಿನ್ನಯಾ ಅಳಲನ್ನು
ದುಗುಡವನು ತೋಡುತಲಿ ಮನವನು ಶಿದ್ಧುವುದು
ಇಲ್ಲದಿರೆ ನಿನನಾಶ ಖಂಡಿತವು ಎಂದಿಹನು ॥೧೪೪೪॥

ಮನದೊಳಗೆ ಕುಹಕದಾ ತಂತ್ರವನು ನೆನೆಯುತಲಿ
ನಾಲ್ವರಾ ಖಳರುಗಳು ಭೂಪತಿಯ ಬಳಿಬಂದು
ಗುಪಿತದಲಿ ಅರಮನೆಯ ಸೇವಕರನಟ್ಟುತಲಿ
ಗಾಂಧಾರಿ ದೇವಿಯನು ಕರೆಸಿದರು ಭವನದಲಿ ॥೧೪೪೫॥

ಧರಣಿಪನೆ ನಾವುಗಳು ಗೆದ್ದಿರುವ ಪಾಂಡವರ
ದಾಸ್ಯತ್ವ ಕಳೆಯುತಲಿ ರಾಜ್ಯವನು ಈಯುತಲಿ
ನಿಮ್ಮಯಾ ಪಾಂಡವರ ಪ್ರೀತಿಯನು ತೋರಿದಿರಿ
ನಾವುಗಳು ಕೇಳುತಲಿ ಸಂತಸವಗೊಂಡಿಹೆವು ॥೧೪೪೬॥

ಧರ್ಮದಲಿ ನೀತಿಯಲಿ ನಡತೆಯಲಿ ಮೆರೆದಿಹಿರಿ
ಪಾಂಡವರ ಸೋಲಿಸುತ ಅವರುಗಳ ಮಡದಿಯನು
ಸಭೆಯೊಳಗೆ ಎಳೆತಂದು ಅಪಮಾನ ಗೈದಿಹೆವು
ನಾವುಗಳು ಪಾಪಿಗಳು ಎಂದಿಹನು ಕುರುರಾಯ ॥೧೪೪೭॥

ಪಾಂಡವರು ನಿಮ್ಮಯಾ ಸೋದರನ ಸುತರುಗಳು
ನಿಮ್ಮಯಾ ಪ್ರಾಣಗಳು ನಾವುಗಳು ಬಾಹಿರರು
ನಿಮ್ಮೊಳಗೆ ತಪ್ಪಿಲ್ಲ ನಿಮ್ಮಯಾ ಉದರದಲಿ
ನಾವುಗಳು ಜನಿಸಿಹುದು ತಪ್ಪೆಂದ ಕುರುರಾಯ ॥೧೪೪೮॥

ನಿಮ್ಮಯಾ ನೆಚ್ಚಿನಾ ಪಾಂಡವರ ಕರೆಸುತಲಿ
ಹಸ್ತಿನೆಯ ಸಾಮ್ರಾಜ್ಯವೆಲ್ಲವನು ಈಯುತಲಿ
ಸಂತೋಷಸಾಗರದಿ ತೇಲಾಡಿ ಮುಳುಗುವುದು
ನಾವುಗಳು ಕಾನನದ ಸಾಮ್ರಾಜ್ಯವಾಳುವೆವು ॥೧೪೪೯॥

ಎಮ್ಮನ್ನು ನೂರ್ವರನು ಕಾನನಕ್ಕೆ ತಳ್ಳುತಲಿ
ಹಿಡಿನೀನು ಪಾಂಡವರ ಐವರನು ನಂಬುತಲಿ
ಇಲ್ಲದಿರೆ ಎಮ್ಮನ್ನು ನೂರ್ವರನು ಹಿಡಿಯುವದು
ಎನ್ನುತಲಿ ಕುರುರಾಯ ನುಡಿದಿಹನು ಧರಣಿಪಗೆ ॥೧೪೫೦॥

ನೀವುಗಳು ಮಹತಾಯಿ ಗಾಂಧಾರಿ ದೇವಿಯರು
ಪಾಂಡವರ ಜೊತೆಯಲ್ಲಿ ಸುಖವಾಗಿ ಜೀವಿಪುದು
ನಾವುಗಳು ನೂರ್ವರೂ ಪ್ರಾಣವನು ನೀಗುವೆವು
ಎಮ್ಮನ್ನು ಕಳುಹುವುದು ಎನ್ನುತಲಿ ಎರಗಿದನು ॥೧೪೫೧॥

ಹೇ ಸತಿಯೆ ಗಾಂಧಾರಿ ಘೋರ ವಿಷಪೂರಿತದ
ಪಿಂಡದೀ ಮಗನನ್ನು ಹಡೆಯುತಲಿ ನೀ ಕೆಟ್ಟೆ
ಕುರುಕುಲವನೆಲ್ಲವನು ನರಕದೊಳು ಇಳಿಸುವನು
ಕುಲಘಾತುಕೀತನಿಹ ಎಂದಿಹನು ಧೃತರಾಷ್ಟ್ರ ॥೧೪೫೨॥

ಹೇ ಮಗನೆ ಪಾಂಡವರು ನಮಗನ್ಯರಿರುತಿಹರೆ
ಸರಿಅರ್ಧ ರಾಜ್ಯಕ್ಕೆ ಭಾಗಿಗಳು ಅವರಿಹರು
ಭೀಮಾರ್ಜುನೀರ್ವರಾ ಸಾಹಸಕೆ ಶೌರ್ಯಕ್ಕೆ
ಸುರರುಗಳು ಅಂಜುವರು ನರರುಗಳ ಪಾಡೇನು ॥೧೩೫೩॥

ಸತ್ಯವನು ಧರ್ಮವನು ಎಂದಿಗೂ ತೊರೆಯದಿಹ
ಪಾಂಡವರು ಸಜ್ಜನರು ಋಷಿಸದೃಶ ಸುಚರಿತರು
ಮತ್ಸರವ ತೊರೆಯುತಲಿ ಪಾಂಡವರ ಜೊತೆಯಲ್ಲಿ
ಪ್ರೇಮದಲಿ ಜೀವಿಪುದು ಕ್ಷೇಮವದು ಎಂದಿಹನು ॥೧೪೫೪॥

ಭೀಮನಾ ಆರ್ಭಟೆಯ ಸೊಕ್ಕಿನಾ ನುಡಿಗಳನು
ಅರ್ಜುನನ ಅಬ್ಬರದ ಗರ್ವದಾ ವಚನವನು
ಕೇಳುತಲಿ ಜಗದೊಳಗೆ ಜೀವಿಸುತ ನಾನಿರೆನು
ಪ್ರಾಣವನು ತೊರೆಯುವೆನು ಎಂದಿಹನು ಕುರುರಾಯ ॥೧೪೫೫॥

ನಾವುಗಳು ಕಪಟಿಗಳು ಕುಹಕಿಗಳು ಪಾಪಿಗಳು
ಅವರುಗಳು ಸಜ್ಜನರು ಸುಚರಿತರು ಪಾವನರು
ನಮ್ಮನ್ನು ಕಳುಹುವುದು ನಾವಿನ್ನು ಹೊರಡುವೆವು
ಎನ್ನುತಲಿ ಕುರುರಾಯ ಹೊರಗಡೆಗೆ ಹೊರಟಿಹನು ॥೧೪೫೬॥

ಗಾಂಧಾರಿ ಕರೆ ನಿನ್ನ ದುರುಳನಾ ಮಗನನ್ನು
ಎನ್ನುತಿರೆ ಭೂಪತಿಯು ಆ ಶಕುನಿ ರಾಧೇಯ
ಕೌರವನ ಕರೆತರಲು ಧೃತರಾಷ್ಟ್ರನಪ್ಪುತಲಿ
ನಿನ್ನನ್ನು ತೊರೆಯುತಲಿ ನಾನೆಂತು ಜೀವಿಪೆನು ॥೧೪೫೭॥

ಹೇ ಮಗನೆ ಪಾಂಡವರು ನಿನ್ನಯಾ ಸೋದರರು
ಬಂಧುಗಳ ಜೊತೆಯಲ್ಲಿ ಹಗೆತನವು ಸಲ್ಲದದು
ದಾಯಾದಿ ಮತ್ಸರದ ದಾವಾಗ್ನಿ ಹೊತ್ತುತಲಿ
ಕುಲವನವ ದಹಿಸುವದು ಎಂದಿಹನು ಅಂಧನೃಪ ॥೧೪೫೮॥

ನಿನ್ನೊಬ್ಬನಿಷ್ಟಕ್ಕೆ ನೀ ಕುಣಿವುದಾದೊಡೆಯು
ಮುಂದಕ್ಕೆ ಕಷ್ಟವದು ಕಟ್ಟಿಟ್ಟ ಬುತ್ತಿಯದು
ನಿನ್ನಯಾ ಸಹಿತದಲಿ ಬಂಧುಗಳು ಬಾಂಧವರು
ಸಕಲರೂ ನಿರ್ನಾಮವಾಗುವರು ಎಂದಿಹನು ॥೧೪೫೯॥

**ದ್ಯೂತವನು ಆಡಲಿಕೆ ಮತ್ತೆ ನೀ ಪಾಂಡವರ ।**
**ಕರೆಸಿಕೊಡು ಎಂದಿಹನು ಕೌರವನು ಅರಸಂಗೆ ॥**

ನೀವುಗಳು ಒಪ್ಪುವೊಡೆ ಮನಸಿಂಗೆ ಬಂದೊಡೆಯು
ಗಜಪುರಕೆ ಪಾಂಡವರ ನೀ ಮತ್ತೆ ಕರೆಸುವುದು
ಜೂಜಿನಲಿ ರಾಜ್ಯವನು ಸಂಪದವ ಗೆಲ್ಲುತಲಿ
ಹನ್ನೆರಡು ವರುಷಗಳ ವನವಾಸಕಟ್ಟುವೆವು ॥೧೪೬೦॥

ಮೇಲೊಂದು ವರುಷದಾ ಅಜ್ಞಾತವಾಸದಲಿ
ನಾವುಗಳು ಅರಿತೊಡೆಯು ಮತ್ತೊಂದು ಬಾರಿಯಲಿ
ಹನ್ನೆರಡು ವರುಷಗಳ ವನವಾಸಕೋಸುಗವೆ
ಪಾಂಡವರನಟ್ಟುವೆವು ಎಂದಿಹನು ಕುರುರಾಯ ॥೧೪೬೧॥

ಗಾಂಗೇಯ-ವಿದುರರಾ ಮಾತುಗಳ ಕೇಳದಿರು
ನಮ್ಮ ಮನೆಯನ್ನವನು ಉಣ್ಣುತಲಿ ತೇಗುತಲಿ
ಪಾಂಡವರ ಹಿತವನ್ನು ಮನದೊಳಗೆ ಬಯಸುವರು
ಇವರನ್ನು ನಂಬುತಲಿ ನೀ ಕೆಟ್ಟೆ ಎಂದಿಹನು ॥೧೪೬೨॥

ಎಮ್ಮಯಾ ಮಾತುಗಳು ನಿಮಗಹುದು ಎನಿಸಿದರೆ
ಚರರನ್ನು ಕಳಿಸುತಲಿ ಪಾಂಡವರ ಕರೆಸುವುದು
ಎಮ್ಮೊಳಗೆ ಕಪಟವದು-ಮೋಸವದು ಇರ್ದೊಡೆಯು
ಎಮ್ಮನ್ನು ಕಾನನಕೆ ಕಳುಹುವುದು ಎಂದಿಹನು ॥೧೪೬೩॥

**ಪುತ್ರನಾ ಮೋಹದಲಿ ಪಾಂಡವರ ಕರೆತರಲು ।**
**ಆ ಪ್ರಾತಿಕಾಮಿಕನ ಕಳುಹಿದನು ಧೃತರಾಷ್ಟ್ರ ॥**

ನೀ ಹೋದೊಡೆನ್ನಯಾ ಜೀವವದು ತೊಲಗುವುದು
ಗಾಂಧಾರಿದೇವಿಯಾ ಪ್ರಾಣವದು ಹಾರುವುದು
ಈಗಲೇ ಸೇವಕರ ಕಳಿಸುತಲಿ ಪಾಂಡವರ
ಕರೆಸುವೆನು ಎನ್ನುತಲಿ ಧೃತರಾಷ್ಟ್ರ ನುಡಿದಿಹನು ॥೧೪೬೪॥

ಬಾ ಪ್ರಾತಿಕಾಮಿಕನೆ ವರಇಂದ್ರ ಪ್ರಸ್ಥಕ್ಕೆ
ನೀನೀಗ ತೆರಳುತಲಿ ಧರ್ಮಜನ ಕಾಣುತಲಿ
ನಯಮಧುರ ನುಡಿಗಳಲಿ ಸೋದರರ ಸಹಿತದಲಿ
ಕರಕೊಂಡು ಬಹುದೆಂದು ನುಡಿದಿಹನು ಧೃತರಾಷ್ಟ್ರ ॥೧೪೬೫॥

ಶೀಘ್ರದಲಿ ಪಯಣದಲಿ ಸಾಗುತಲಿ ನಡೆತಂದು
ವರಇಂದ್ರಪ್ರಸ್ಥದಾ ಅರಮನೆಯ ಬಳಿಬಂದು
ತಾ ಪ್ರಾತಿಕಾಮಿಯು:ಹೆ ಧೃತರಾಷ್ಟ್ರ ಭೂಪತಿಯು
ಸಂದೇಶ ತಂದಿಹೆನು ಎಂದಿಹನು ಪ್ರಾತಿಕಾಮಿ ॥೧೪೬೬॥

ದ್ವಾರದಾ ಪಾಲಕರು ಅನುಮತಿಯನೀಯುತಿರೆ
ಒಳಗಡೆಗೆ ತೆರಳುತಲಿ ಸಿಂಹಾಸನಸ್ಥನನ
ಧರ್ಮಜನ ಕಾಣುತಲಿ ಸಾಷ್ಟಾಂಗವೆರಗುತಲಿ
ಭೂಪತಿಯು ಸಂದೇಶ ತಂದಿಹೆನು ಎಂದಿಹನು ॥೧೪೬೭॥

ದ್ಯೂತದಲಿ ವಿರಸದಲಿ ನೊಂದಿಹಿರಿ ಬಳಲಿಹಿರಿ
ಹಿಂದಿನದು ಎಲ್ಲವನು ಮರೆಯುತಲಿ ಪ್ರೇಮದಲಿ
ಇಭಪುರಕೆ ಐತಂದು ನೀವುಗಳು ಕೌರವರು
ಸರಸದಲಿ ದ್ಯೂತದಲಿ ರಮಿಸುವುದು ಎನ್ನುತಲಿ ॥೧೪೬೮॥

ಧೃತರಾಷ್ಟ್ರ ಭೂಪತಿಯು ನಿಮ್ಮನ್ನು ಕರೆತರಲು
ಅಜ್ಞೆಯನು ಈಯುತಲಿ ಎನ್ನನ್ನು ಕಳುಹಿದನು
ನೀವುಗಳು ಸೋದರರ ಸಹಿತದಲಿ ಐತಂದು
ಜೂಜಿನಲಿ ರಮಿಸುವುದು ಎಂದಿಹನು ಪ್ರಾತಿಕಾಮಿ ॥೧೪೬೯॥

ಜೂಜಿನಲಿ ಮಾನಿನಿಯ ಮಾನವನು ಕಳೆಯುತಲಿ
ಜಗದೊಳಗೆ ಎಂದಿಗೂ ಮಾಡದಿಹ ಅನುಚಿತದ
ಕಾರ್ಯಗಳನೆಲ್ಲವನು ಮಾಡುತಲಿ ಮತ್ತೆ ಈ
ಜೂಜನ್ನು ಆಡಲಿಕೆ ಕರೆದಿಹನೆ ಭೂಪತಿಯು ॥೧೪೭೦॥

ನಟ್ಟನಡು ಬೀದಿಯಲಿ ಮಾನವನು ಕಳೆಯುತಲಿ
ಮನೆಯೊಳಗೆ ಕಾಲಿಂಗೆ ಎರಗಿದಾ ಪರಿಯಲ್ಲಿ
ಸಭೆಯೊಳಗೆ ಅಪಮಾನ ಗೈದಿರುವ ಕೌರವರ
ನಂಬುವದು ಸಾಧ್ಯವದು ಇಲ್ಲೆಂದ ಕಲಿಭೀಮ ॥೧೪೭೧॥

ಧೃತರಾಷ್ಟ್ರ ಭೂಪತಿಯು ಎಮ್ಮನ್ನು ಕರೆದಿಹನೆ
ಇಲ್ಲವೇ ಕೌರವನು ಆ ಶಕುನಿ ರಾಧೇಯು
ನಮ್ಮನ್ನು ನಾಶವನು ಮಾಡಲಿಕೆ ಹೂಡಿರುವ
ಕುತಂತ್ರವೊ ಹೇಳೆಂದು ನುಡಿದಿಹನು ಕಲಿಭೀಮ ॥೧೪೭೨॥

ಒಂದು ಸಲ ಜಾರುತಲಿ ಬಿದ್ದಿರುವ ಎಡೆಯಲ್ಲಿ
ಮತ್ತೊಮ್ಮೆ ಬೀಳಲಿಕೆ ಕಡುಮೂರ್ಖರಾವಲ್ಲ
ಕರೆಯಲಿಕೆ ಬಂದಿರುವ ನೀವುಗಳು ಮೂರ್ಖರೋ
ಬರುವುದಕೆ ನಾವುಗಳು ಮೂರ್ಖರೋ ಹೇಳೆಂದ ॥೧೪೭೩॥

ಮನದೊಳಗೆ ಮಕ್ಕಳುಗಳಭ್ಯುದಯ ಬಯಸುತಲಿ
ಸಭೆಯೊಳಗೆ ಸುತರುಗಳ ದುಷ್ಕೃತ್ಯ ಖಂಡಿಸದೆ
ಮೌನದಲಿ ಕುಳಿತಿರ್ದ ಭೂಪತಿಯ ಹೃದಯದಲಿ
ಘೋರವಿಷ ತುಂಬಿಹುದು ಎಂದಿಹನು ಕಲಿಭೀಮ ॥೧೪೭೪॥

ಹೇ ಅಣ್ಣ ಧರ್ಮಜನೆ ಖುಲ್ಲರುಗಳೊಡ್ಡಿರುವ
ಜಾಲದಲಿ ಮತ್ತೊಮ್ಮೆ ಸಿಲುಕುತಲಿ ನರಳದಿರು
ಆ ಕಾಳಕೂಟದಾ ವಿಷಕುಡಿಕೆಯಂತಿರುವ
ಭೂಪತಿಯು ನಂಬದಿರು ಎಂದಿಹನು ಕಲಿಭೀಮ ॥೧೪೭೫॥

ಅಹುದಹುದು ಅಣ್ಣನೇ ಬೆಳ್ಳಗಿಹುದೆಲ್ಲವೂ
ಹಾಲಿಹುದು ಎನ್ನುತಲಿ ನಂಬುವುದು ಸಲ್ಲದದು
ಸರಸಿಯೊಳು ಇರುತಿರುವ ಮೊಸಳೆಗಳ ಪರಿಯಲ್ಲಿ
ಕೌರವರು ಹಿಂಸಿಪರು ಎಂದಿಹನು ಅರ್ಜುನನು ॥೧೪೭೬॥

ಭೀಮಾರ್ಜುನೀರ್ವರೂ ನುಡಿದಿರುವ ನುಡಿಗಳವು
ನಿಜವಿಹುದು ಮತ್ತೊಮ್ಮೆ ಜೂಜನ್ನು ಆಡದಿರು
ಆಡಿದರೆ ಕೇಡಹುದು ಕಾಡಿಂಗೆ ಅಟ್ಟುವನು
ಎನ್ನುತಲಿ ಆ ನಕುಲ ಸಹದೇವ ನುಡಿದಿಹರು ॥೧೪೭೭॥

ಸೋದರರೆ ಧೃತರಾಷ್ಟ್ರ ಪಾಂಡವಲಿ ಭೇದವೇ
ಪಾಂಡುವಿನ ಸ್ಥಾನದಲಿ ಧೃತರಾಷ್ಟ್ರನಿರುತಿಹನು
ಆ ತಂದೆ ಎಂದಿಗೂ ಕೇಡನ್ನು ಬಯಸದಲೆ
ಹಿತವನ್ನು ಮಾಡುವನು ಎಂದಿಹನು ಯಮಸೂನು ॥೧೪೭೮॥

ನಾವುಗಳು ನಮ್ಮಯಾ ಪ್ರಾರಬ್ಧ ಭೋಗಿಪೆವು
ನಿಮಿತ್ತ ಮಾತ್ರದಲಿ ನರರುಗಳು ಕಾರಣವು
ದೈವವೇ ಪ್ರತಿಕೂಲವಿರ್ದೊಡೆಯು ಆರಿಗೂ
ಮೀರಲಿಕೆ ಅಸದಳವು ಎಂದಿಹನು ಧರ್ಮಜನು ॥೧೪೭೯॥

ಪಿತೃವಿನಾ ಸಮವಿರುವ ಭೂಪತಿಯ ಆಜ್ಞೆಯನು
ಮೀರುವುದು ಅನುಚಿತವು ಎನ್ನಮನ ಒಪ್ಪದದು
ನಿಮ್ಮಯಾ ಅಭಿಮತವನುಸುರುವುದು ಎನ್ನುತಲಿ
ಧರ್ಮಜನು ನುಡಿದಿಹನು ಸೋದರ ಚತುಷ್ಟಯಕೆ ॥೧೪೮೦॥

ಪ್ರಾಣವನು ಇಂದ್ರಿಯಾಗಳಾಶ್ರಯಿಪ ಪರಿಯಲ್ಲಿ
ಎಮ್ಮಯಾ ಪ್ರಾಣಗಳು ನಿನ್ನನ್ನೆ ನಂಬಿಹವು
ನಿನ್ನಯಾ ಬೆನ್ನಿನಲಿ ನೆರಳಂತೆ ಬಹೆವೆಂದು
ನಾಲ್ವರೂ ಸೋದರರು ಧರ್ಮಜಗೆ ನುಡಿದಿಹರು ॥೧೪೮೧॥

ದಳಪತಿಗೆ ನಾಯಕರ್ಗೆ ಅಧಿಕಾರಿ ಸಚಿವರಿಗೆ
ಬಂಧುಗಳು ಬಾಂಧವರ್ಗೆ ಪರಿವಾರಕೆಲ್ಲಕೆ
ಗಜಪುರಕೆ ಸಕಲರೂ ತೆರಳುವುದು ಎನ್ನುತಲಿ
ಸಿದ್ಧತೆಯ ಗೈಯ್ಯಲಿಕೆ ಧರ್ಮಜನು ತಿಳುಹಿದನು ॥೧೪೮೨॥

ಸುತರುಗಳು ಸೋದರರು ಮಂತ್ರಿಗಳು ಬುಧಜನರು
ಭೂಸುರರು ಜೋಯಿಸರು ದ್ಯೂತವನು ಆಡಲಿಕೆ
ಗಜಪುರಕೆ ತೆರಳುವುದು ತಪ್ಪೆಂದು ನುಡಿದಿಹರು ॥೧೪೮೩॥

ಅಕಟಕಟ ಕುಹಕಗಳಕು ಕೌರವರು ಬೀಸಿರುವ
ಮೋಸದಾ ಬಲೆಯೊಳಗೆ ಧರ್ಮಜನು ಸಿಲುಕಿದನೆ
ಹಿಂದಿನಾ ಅನುಭವವ ಮರೆಯುತಲಿ ತೆರಳುತಿಹ
ಧರ್ಮಜನು ಮರುಳನೇ ಎಂದಿಹರು ಪುರಜನರು ॥೧೪೮೪॥

**ಕೌರವರ ದುಷ್ಕೃತ್ಯ ಮರೆಯುತಲಿ ಧರ್ಮಜನು ।
ಪರಿವಾರ ಸಹಿತದಲಿ ಗಜಪುರಕೆ ತೆರಳಿದನು ॥**

ತಲೆಬೀಳ್ವ ತಾಣಕ್ಕೆ ಕಾಲೆಳೆವ ಪರಿಯಲ್ಲಿ
ತನ್ನಯಾ ಐವರಾ ಸಹಿತದಲಿ ಧರ್ಮಜನು
ಬಂಧುಗಳು ಸ್ನೇಹಿತರ ಮಂತ್ರಿಗಳ ನಾಯಕರ
ಸಕಲರಾ ಸಹಿತದಲಿ ಹಸ್ತಿನೆಗೆ ನಡೆದಿಹನು ॥೧೪೮೫॥

ವರಇಂದ್ರಪ್ರಸ್ಥದಾ ಪುಣ್ಯವೇ ತೆರಳಿದುದೊ
ರಾಜ್ಯದಾ ಸಂಪದವು ಸಿರಿತೊಲಗಿ ಹೋಯಿತೋ
ಎಂಬಂತೆ ಧರ್ಮಜನು ಪುರತೊಲಗಿ ನಡೆಯುತಿರೆ
ಸಕಲರೂ ಪುರಜನರು ಕಂಬನಿಯ ಮಿಡಿದಿಹರು ॥೧೪೮೬॥

ಪಯಣದಲಿ ಸಾಗುತಲಿ ಗಜಪುರದ ಬಳಿಬರುತ
ಪುರದ ಹೊರ ಬಾಹೆಯಲಿ ವಿಸ್ತರದ ಬಯಲಿನಲಿ
ಗಜತುರಗ ರಥಗಳನು ಸೈನ್ಯವನು ನಿಲ್ಲಿಸುತ
ಬೀಡಾರ ಹೂಡುತಿರೆ ವಾದ್ಯಗಳು ಮೊಳಗಿದವು ॥೧೪೮೭॥

ದಶದಿಶೆಯು ಕಂಪಿಸುವ ಭೇರಿಗಳ ಕಹಳೆಗಳ
ಘೋರತರ ನಿನದವನು ಕೇಳುತಲಿ ಪುರಜನರು
ಮತ್ತೆ ಆ ಪಾಂಡವರು ಯುದ್ಧಕ್ಕೆ ಇಲ್ಲದಿರೆ
ಸಂಧಾನಕೋಸುಗವೆ ಬಂದಿಹರೊ ಎಂದಿಹರು ॥೧೪೮೮॥

ಪರಿಮಿತದ ಜನಸಹಿತ ಧರ್ಮಜನು ನಗರದಲಿ
ಆ ರಾಜಬೀದಿಯಲಿ ನಡೆದಿರಲು ವಾದ್ಯದಲಿ
ಕಪಟಿಗಳ ಕೌರವರ ಜಾಲದಲಿ ಸಿಲುಕುತಲಿ
ಮತ್ತೇಕೆ ಬಂದಿಹನೊ ಎಂದಿಹುದು ನಗರಜನ ॥೧೪೮೯॥

ಕೌರವನು ಅಧ್ವರ್ಯು ಆ ಕರ್ಣ ಶಕುನಿಗಳು
ಋತ್ವಿಜರು ಆಗಿರುವ ದ್ಯೂತದಾ ಯಜ್ಞಕ್ಕೆ
ಯಜ್ಞದಾ ಪಶುವಾಗಿ ಧರ್ಮಸುತ ಬಂದಿಹನು
ಎನ್ನುತಲಿ ನಗರಜನ ನುಡಿದಿಹುದು ಗುಜುಗುಜಿಸಿ ॥೧೪೯೦॥

ವಿಧವಿಧದ ಪರಿಯಲ್ಲಿ ಪುರಜನರು ನುಡಿಯುತಿಹ
ಕಟುನುಡಿಗಳಾಲಿಸುತ ಸೋದರರ ಸಹಿತದಲಿ
ಧರ್ಮಜನು ಭರದಿಂದ ಅರಮನೆಗೆ ಐತಂದು
ಧೃತರಾಷ್ಟ್ರ ಭೂಪತಿಯ ಚರಣಕ್ಕೆ ಎರಗಿದನು ॥೧೪೯೧॥

ಮುನ್ನಿನಲಿ ದ್ಯೂತದಲಿ ಸೋಲುತಲಿ ಮರಳಿದಿರಿ
ಬಳಲಿದಿರಿ ಬೆಂದಿಹಿರಿ ನೋಯುತಲಿ ಮರಳಿದಿರಿ
ಎಲ್ಲವನು ಮರೆಯುತಲಿ ನೀವುಗಳು ಕೌರವರು
ಒಂದಾಗಿ ಬೆರೆಯುತಲಿ ಸರಸದಲಿ ಬಾಳುವುದು ॥೧೪೯೧॥

ನೀವುಗಳು ಕೌರವರು ಕೂಡಿಯೇ ಪ್ರೇಮದಲಿ
ಸ್ನಾನವನು ಮಾಡುತಲಿ ಭೋಜನವಗೈಯ್ಯುವುದು
ಕಪಟವದು ಇಲ್ಲದೆಯೆ ದ್ಯೂತವನು ಆಡುತಲಿ
ಸುಖವಾಗಿ ರಮಿಸುವುದು ಎಂದಿಹನು ಧೃತರಾಷ್ಟ್ರ ॥೧೪೯೩॥

ಸಕ್ಕರೆಯ ಲೇಪಿಸಿದ ವಿಷಗುಳಿಗೆಯಂತಿರುವ
ಘೋರಹಾಲಾಹಲದ ವಿಷತುಂಬಿ ತುಳುಕುತಿಹ
ಧೃತರಾಷ್ಟ್ರ ಭೂಪತಿಯ ಸವಿಮಧುರ ನುಡಿಗಳನು
ನಿರ್ಮಲದ ಮನಸಿನಾ ಧರ್ಮಜನು ಎಂತರಿವ ॥೧೪೯೪॥

ಭೂಪತಿಯ ಅಪ್ಪಣೆಯ ಕೊಳ್ಳುತಲಿ ಧರ್ಮಜನು
ಪಯಣದಾ ಶ್ರಮವನ್ನು ನೀಗಲಿಕೆ ಬಳಿಕಿನಲಿ
ಸೋದರರ ಸಹಿತದಲಿ ವಿಶ್ರಾಂತಿ ನಿಲಯಕ್ಕೆ
ತೆರಳುತಲಿ ಅಂದಿನಾ ದಿನವನ್ನು ಕಳೆದಿಹನು ॥೧೪೯೫॥

**ಆ ದುಷ್ಟ ಚೌಕುಳಿಯ ಜಾಲದಲಿ ಸಿಲುಕುತಲಿ ।**
**ಧರ್ಮಜನು ಮತ್ತೆ ಆ ದ್ಯೂತವನು ಆಡಿಹನು ॥**

ಇಂದು ಕುಲತಿಲಕನೀ ಧರ್ಮಜನು ನೃಪವರನು
ಇಂದಿನೀ ದಿವಸದಲಿ ದ್ಯೂತವನು ಆಡುವನು
ಎನ್ನುತಲಿ ಕಳವಳಿಸಿ ನಿಸ್ತೇಜ ಮ್ಲಾನರವಿ
ಮೋಡಾ ಮರೆಯಲ್ಲಿ ಮೂಡಿಹನದು ಮೂಡಣದಿ ॥೧೪೯೬॥

ಅಕಟಕಟ ಧರ್ಮವೇ ಪೈವೆತ್ತಿದಂತಿರುವ
ಧರ್ಮಜನು ದ್ಯೂತವನು ಆಡುವನೆ ಎನ್ನುತಲಿ
ಕೊಳದೊಳಗೆ ಕಮಲಗಳು ಕುಂದುತಲಿ ಬಾಡಿಹವು
ಮಾರುತನು ಗಂಧವನು ಬೀರದೆಯೆ ನಿಂದಿಹನು ॥೧೪೯೭॥

ನದಿಕೆರೆಯು ಬೆರಗಿನಲಿ ಸ್ತಬ್ಧದಲಿ ನಿಂದಿಹವು
ದುಂಬಿಗಳು ಝೇಂಕಾರ ರವವನ್ನು ತೊರೆದಿಹವು
ವಿಪರೀತ ಕಾಲವಿದು ಸನ್ನಿಹಿತಮಾಗಿಹುದು
ಎನ್ನುತಲಿ ಜಗವೆಲ್ಲ ನೋಯುತಲಿ ನೊಂದಿಹುದು ॥೧೪೯೮॥

ಭವ್ಯವಿಹ ಸಭೆಯೊಳಗೆ ಒಂದೆಡೆಗೆ ಧರ್ಮಜನು
ಬೆನ್ನಿನಲಿ ಸೋದರರು ದ್ರೌಪದಿಯು ವರಕುಂತಿ
ಎದುರಿನಲಿ ಸೌಬಲನು ಕೌರವನು ಕಲಿಕರ್ಣ
ದುಶ್ಶಾಸನಾದಿಗಳು ಗಾಂಧಾರಿ ಕುಳಿತಿಹರು ॥೧೪೯೯॥

ಗಾಂಗೇಯ ಗುರುಕೃಪರು ವರವಿದುರ ಸೃಂಜಯರು
ಬಾಹ್ಲಿಕನು ವಿಕರ್ಣನು ಭೂರಿಶ್ರವಾದಿಗಳು
ಮಂತ್ರಿಗಳು ನಾಯಕರು ಬುಧಜನರು ಪುರಜನರು
ದ್ಯೂತವನು ನೋಡಲಿಕೆ ಸಂದಣಿಸಿ ಕುಳಿತಿಹರು ॥೧೫೦೦॥

ಧರ್ಮಜನ ತಲೆಗಿಲೆಯು ಕೆಟ್ಟಿಹುದೂ ಭ್ರಮೆಯಾಯ್ತೆ
ಹಿಂದಣದ ದ್ಯೂತದಾ ಅನುಭವವ ಮರೆತಿಹನೆ
ಮತ್ತೊಮ್ಮೆ ಜೂಜನ್ನು ಆಡುವಾ ಮನವೆಂತು
ಬಂದಿಹುದೊ ಎನ್ನುತಲಿ ಸಕಲರೂ ನುಡಿದಿಹರು ॥೧೫೦೧॥

ಹೊಳೆಹೊಳೆವ ಲೆತ್ತಗಳ ತರಿಸುತಲಿ ಆ ಶಕುನಿ
ಧರ್ಮಜನೆ ಪಣವನ್ನು ಒಡ್ಡುತ ವಿನೋದದಲಿ
ಆಟವನು ಆಡುವುದು ಕಪಟತನ ಮೋಸವದು
ಎಮ್ಮೊಳಗೆ ಲವಲೇಶವಿಲ್ಲೆಂದು ನುಡಿದಿಹನು ॥೧೫೦೨॥

ಆಟದಲಿ ಎನ್ನಯಾ ಚಾಣ್ಮೆಯನು ನೋಡುವುದು
ಜಗದೊಳಗೆ ಜೂಜಿನಲಿ ಎನಗಾರು ಸಮರಿಲ್ಲ
ಒಂದು ಸಲ ಲೆತ್ತವನು ಹಾಕುತಲಿ ಎಲ್ಲವನು
ಗೆಲ್ಲುವೆನು ಎನ್ನುತಲಿ ಆ ಶಕುನಿ ನುಡಿದಿಹನು ॥೧೫೦೩॥

**ಧರ್ಮಜನು ಜೂಜಿನಲಿ ಸಾಮ್ರಾಜ್ಯವೆಲ್ಲವನು ।**
**ನೀಗುತಲಿ ಕಾನನದ ಸಾಮ್ರಾಜ್ಯಕೊಂಡಿಹನು ॥**

ಧರ್ಮಜನೆ ಕೇಳುವುದು ನಿನ್ನಯಾ ರಾಜ್ಯವನು
ಮತ್ತೆ ಈ ಕೌರವನ ಸಾಮ್ರಾಜ್ಯ ಸಕಲವೂ
ಪಣವಿಹವು ಇದರೊಳಗೆ ಸೋತಿರುವ ಧರಣಿಪನು
ಹನ್ನೆರಡುವರುಷಗಳ ವನವಾಸ ಭೋಗಿಸುತ ॥೧೫೦೪॥

ಮೇಲೊಂದು ವರುಷದಾ ಅಜ್ಞಾತವಾಸವನು
ಭೋಗಿವುದು ಅಜ್ಞಾತವಾಸದಲಿ ಅರಿತೊಡೆಯು
ಪುನರಪಿಯು ಹನ್ನೆರಡು ವರುಷದಾ ವನವಾಸ
ಅಜ್ಞಾತವಾಸವನು ಭೋಗಿಪುದು ಎಂದಿಹನು ॥೧೫೦೫॥

ಈ ಜೂಜು ಈ ಪಣವು ಅಲ್ಲದಿದು ಸಲ್ಲದಿದು
ಖುಲ್ಲರೀ ಆಟವನು ನಿಲ್ಲಿಪುದು ಎನ್ನುತಲಿ
ಗಾಂಗೇಯ ಗುರುದ್ರೋಣ ಗುರುಸುತನು ವರವಿದುರ
ಕೋಪದಲಿ ಕಳವಳದಿ ಗರ್ಜಿಸುತ ನುಡಿದಿಹರು ॥೧೫೦೬॥

ಕಲಿಭೀಮ ಫಲಗುಣನು ಮಾದ್ರಿಜರು ಮನದೊಳಗೆ
ಕತಕತನೆ ಕುದಿಯುತಲಿ ಕಡಲಿನಾ ತೆರೆಯಂತೆ
ಉಕ್ಕುತಿಹ ರೋಷವನು ಒಳಗೊಳಗೆ ಅದಮುತಲಿ
ತಡೆಹಿಡಿದು ಉರಿಗಣ್ಣನೋಟದಲಿ ಕುಳಿತಿಹರು ॥೧೫೦೭॥

ಮುಂದಿಟ್ಟ ಹೆಜ್ಜೆಯನು ಹಿಂದಕ್ಕೆ ಸರಿಸುವದು
ನೃಪನೀತಿಗನುಚಿತವು ಕ್ಷತಿಯರ್ಗೆ ಶೋಭಿಸದು
ವಿಧಿಲಿಖಿತ ತಪ್ಪಿಸುವದಾರಿಗೂ ಅಸದಳವು
ಎನ್ನುತಲಿ ಧರ್ಮಸುತ ಆಡಲಿಕೆ ಕುಳಿತಿಹನು ॥೧೫೦೮॥

ಧರ್ಮಜನ ಎಡಗಣ್ಣು ಎಡಭುಜವು ಹಾರಿದವು
ಸೋದರ ಚತುಷ್ಟಯರ ಎಡಗಣ್ಣು ಅಲುಗಿದವು
ದ್ರೌಪದಿಯ ಬಲಗಣ್ಣು ಬಲಭುಜವು ಅಲುಗಿದುದು
ಧರ್ಮಜನ ರಾಜ್ಯದಾ ಸಿರಿಲಕುಮಿ ನಡುಗಿದಳು ॥೧೫೦೯॥

ಲೆತ್ತಗಳ ಘುಳುಘುಳಿಸಿ ಧರ್ಮಜನು ಎಸೆಯುತಿರೆ
ದುಗುನವದು ಬೀಳುತಿರೆ ಆ ಶಕುನಿ ಭರದಲ್ಲಿ
ಬಾ ಎನ್ನ ಕೌರವನ ಭಾಗ್ಯದಾ ನಿಧಿಯೇ
ಬೀಳೆಲವೊ ಚೌಗುನವೆ ತಪ್ಪದೇ ಎನ್ನುತಲಿ ॥೧೫೧೦॥

ಜೂಜಿನಾ ಬ್ರಹ್ಮನಿಹ ಆ ಶಕುನಿ ನುಡಿಯುತಲಿ
ಘುಳುಘುಳಿಸಿ ನಾದದಲಿ ಲೆತ್ತಗಳನೆಸೆಯುತಿರೆ
ಚೌಗುನವೆ ಬೀಳುತಿರೆ ಧರ್ಮಜನು ಸೋತಿಹನು
ನಾಗೆದ್ದೆ ನಾಗೆದ್ದೆ ಎನ್ನುತಲಿ ಗರ್ಜಿಸಿದ ॥೧೫೧೧॥

ಹಿಮಮಳೆಯು ಸುರಿಯುತಿರೆ ಅರಳಿರುವ ಕಮಲಗಳು
ಬಾಡುತಲಿ ನಿಸ್ತೇಜವಾಗುವಾ ಪರಿಯಲ್ಲಿ
ಧರ್ಮಜನ ಮುಖಕಮಲ ಕಗ್ಗನೆಯ ಕಪ್ಪಾಗಿ
ಗಾಣದಲಿ ಸಿಕ್ಕಿರುವ ಕಬ್ಬಿನಾ ಗಣೆಯಂತೆ ॥೧೫೧೨॥

ಧರ್ಮಜನ ಎಡಗಣ್ಣು ಎಡಭುಜವು ಅಲುಗಿದವು
ಸೋದರ ಚತುಷ್ಟಯರ ಎಡಗಣ್ಣು ಹಾರಿದವು
ದ್ರೌಪದಿಯು ಬಲಗಣ್ಣು ಹಾರಿದುದು
ಧರ್ಮಜನ ರಾಜ್ಯದಾ ಸಿರಿಲಕುಮಿ ನಡುಗಿದಳು ॥೧೫೧೩॥

ಒಳಗೊಳಗೆ ಉಕ್ಕುತಿಹ ದುಗುಡಗಳ ದುಮ್ಮಾನ
ಕಡಲಿನಾ ತೆರೆಗಳನು ಹತ್ತಿಕ್ಕಿ ಹಿಡಿಯುತಲಿ
ಸುಡಲೆಮ್ಮ ಭುಜಬಲದ ಮೂಲೋಕ ಶೌರ್ಯವದು
ಎನ್ನುತಲಿ ಭೀಮಾರ್ಜುನಾದಿಗಳು ನೊಂದಿಹರು ॥೧೫೧೪॥

ದೊಡ್ಡಪ್ಪನೀತನಿಹ ತಂದೆಸಮ ಎನ್ನುತಲಿ
ಭಾವಿಸುತ ಬಂದುದಕೆ ನಿಮ್ಮಯಾ ರಾಜ್ಯವನು
ನುಂಗುತಲಿ ಕಾನನದ ಸಾಮ್ರಾಜ್ಯವೀಯುತಲಿ
ಭಿಕ್ಷೆಯಾ ಪಾತ್ರೆಯನು ಉಡುಗೊರೆಯ ಕೊಟ್ಟಿಹನು ॥೧೫೧೫॥

ಚಿಗರೆಯಾ ಚರ್ಮವನು ಹೊದೆಯುತಲಿ ವನದೊಳಗೆ
ಗಡ್ಡೆಯನು ಗೆಣಸನ್ನು ತಿನ್ನುತಲಿ ಜೀವಿಸುವ
ಗತಿಯಾಯ್ತು ದೊಡ್ಡಪ್ಪ ಕಾರುಣಿಕನಿರುತಿಹನು
ಎನ್ನುತಲಿ ದ್ರೌಪದಿಯು ಹಂಗಿಸುತ ನುಡಿದಿಹಳು ॥೧೫೧೬॥

ದ್ಯೂತವದು ಬೇಡೆಂದು ಕೈಯೊಳಗೆ ಕಡ್ಡಿಯನು
ಈಯುತಲಿ ನುಡಿದರೂ ಎನ್ನಯಾ ಮಾತನ್ನು
ಕೇಳದೆಯೆ ಜೂಜನ್ನು ಆಡುತಲಿ ಎನ್ನಯಾ
ಗೋಣನ್ನು ಕೊಯ್ದುಹಿರಿ ಎಂದಿಹಳು ದ್ರೌಪದಿಯು ॥೧೫೧೭॥

ಕೊರಳೊಳಗೆ ಧರಿಸಿರ್ದ ರತ್ನದಾ ಹಾರಗಳ
ಪದಕಗಳ ಸರಗಳನು ಕಿತ್ತೆಸೆದು ಚೆಲ್ಲಿದಳು
ಮಸ್ತಕದ ಆಭರಣ ಕರ್ಣಗಳ ಲೋಲಕವ
ಕಂಕಣವ ಒಡ್ಯಾಣ ನೂಪುರಗಳೆಸೆದಿಹಳು ॥೧೫೧೮॥

ಎಲೆ ಹುಚ್ಚಿ ದ್ರೌಪದಿಯೆ ಭಿಕ್ಷುಕರ ಪಾಂಡವರ
ತೊರೆಯುತಲಿ ಕೌರವ ಮಹೀಶ್ವರನ ಕೈಹಿಡಿದು
ಸಿಂಹಾಸನೇರುತಲಿ ಸಾಮ್ರಾಜ್ಞಿಯಾಗುತಲಿ
ರಮಿಸುವುದು ಎಂದಿಹನು ದುಶ್ಶಾಸನಾಖಿಳನು ॥೧೫೧೯॥

ಹೇ ನಾಯಿಕುನ್ನಿಯೇ ನಿನ್ನಯಾ ಹೃದಯವನು
ಬಗಿಯುತಲಿ ಎನ್ನಯಾ ಕೇಶವನು ರಕುತದಲಿ
ಅದ್ದುತಲಿ ನಿನ್ನಯಾ ದಂತದಲಿ ಬಾಚುತಲಿ
ಮುಡಿಯನ್ನು ಕಟ್ಟುವನು ಕಲಿಭೀಮ ಎಂದಿಹಳು ॥೧೫೨೦॥

**ಗದೆಯನ್ನು ಅಪ್ಪಳಿಸಿ ಕೌರವರ ನೂರ್ವರನು ।**
**ವಧಿಸುವೆನು ಎನ್ನುತಲಿ ಗರ್ಜಿಸಿದ ಕಲಿಭೀಮ ॥**

ಕೌರವನ ತೊಡೆಗಳನು ಗದೆಯಿಂದ ಅಪ್ಪಳಿಸಿ
ಪುಡಿಪುಡಿಯಗೈಯ್ಯುತಲಿ ಸಂಹಾರಗೈಯ್ಯುವನು
ನಿಮ್ಮನ್ನು ನೂರ್ವರನು ಯಮಸದನಕಟ್ಟುವನು
ಫಡಹೋಗು ದುಷ್ಟಾತ್ಮ ಎಂದಿಹಳು ದ್ರೌಪದಿಯು ॥೧೫೨೧॥

**ದುಶ್ಶಾಸನಾಖಳನ ನಿರಿಯುತಲಿ ರುಧಿರದಲಿ ।**
**ದ್ರೌಪದಿಯ ಕೇಶವನು ಕಟ್ಟುವೆನು ಎಂದಿಹನು ॥**

ಎಲವೆಲವೊ ಕುನ್ನಿಯೇ ದುರುಳದುಶ್ಶಾಸನನೆ
ನಿನ್ನಯಾ ಎದೆಯನ್ನು ಗದೆಯಿಂದ ಘಾತಿಸುತ
ರಕುತದಾ ಬುಗ್ಗೆಯನು ಮೇಲಕ್ಕೆ ಚಿಮ್ಮಿಸುತ
ದ್ರೌಪದಿಯ ಕೇಶವನು ರುಧಿರದಲಿ ಅದ್ದುತಲಿ ॥೧೫೨೨॥

ನಿನ್ನಯಾ ದಂತಗಳ ಬಾಚಣಿಗೆ ಗೈಯ್ಯುತಲಿ
ಬಾಚುತಲಿ ದ್ರೌಪದಿಯ ತುರುಬನ್ನು ಕಟ್ಟುವೆನು
ನಿಮ್ಮಯಾ ನೂರ್ವರನು ಯಮನಿಲಯಕಟ್ಟುವೆನು
ಎನ್ನುತಲಿ ಕಲಿಭೀಮ ಗರ್ಜಿಸುತ ನುಡಿದಿಹನು ॥೧೫೨೩॥

ನೀಚನಾ ಕೌರವನ ತೊಡೆಗಳನು ಸೀಳುತಲಿ
ನಿಮ್ಮನ್ನು ನೂರ್ವರನು ಖಡುಗದಲಿ ತರಿಯುತಲಿ
ಶಾಕಿನಿಗೆ ಡಾಕಿನಿಗೆ ಬಲಿಯನ್ನು ಈಯುವೆನು
ಎನ್ನುತಲಿ ಕಲಿಭೀಮ ಕೋಪದಲಿ ಗರ್ಜಿಸಿದ ॥೧೫೨೪॥

**ಕರ್ಣನಾ ಶಿರವನ್ನು ತರಿಯುತಲಿ ಬಾನಿಂಗೆ ।**
**ತೋರಣದ ಕಟ್ಟುವೆನು ಎಂದಿಹನು ಫಲಗುಣನು ॥**

ಹದಿಮೂರು ವರುಷಗಳ ಕಳೆಯುತಲಿ ಐತಂದು
ನಾಯಿಯಾ ಪರಿಯಲ್ಲಿ ಬಾಯೊಳಗೆ ಬಂದಂತೆ
ಬೊಗಳಿರುವ ಕರ್ಣನಾ ಶಿರವನ್ನು ತರಿಯುತಲಿ
ಮುಗಿಲಿಂಗೆ ಕಟ್ಟುವೆನು ಎಂದಿಹನು ಫಲಗುಣನು ॥೧೫೨೫॥

ಹೊಳೆಹೊಳೆವ ವಿಲಸಿತದ ರತ್ನಗಳ ಹಾರಗಳ
ಧಳಥಳಿಪ ಮೌಕ್ತಿಕದ ಸರಗಳನು ಬಿಸುಡುತಲಿ
ಪೀತಾಂಬರಾದಿಗಳ ವಸ್ತ್ರಗಳ ತೆಗೆಯುತಲಿ
ವಲ್ಕಲಪ ಧರಿಸುತಲಿ ಪಾಂಡವರು ನಿಂದಿಹರು ॥೧೫೨೬॥

ಅಕಟಕಟ ಈ ಪರಿಯ ಪಾಂಡವರ ದುಸ್ಥಿತಿಯ
ನೋಡುವುದು ಎಮ್ಮಯಾ ಹಣೆಯೊಳಗೆ ಬರೆದಿತ್ತೆ
ಎನ್ನುತಲಿ ಗಾಂಗೇಯ ಗುರುದ್ರೋಣ ವರವಿದುರ
ಮನದೊಳಗೆ ಮರುಗುತಲಿ ಕಂಬನಿಯ ಮಿಡಿದಿಹರು ॥೧೫೨೭॥

ಅಣ್ಣನೇ ಸಾಕಿನ್ನು ದುರುಳರೀ ಸಹವಾಸ
ಕುಹಕಿಗಳು ಮಾಡಿರುವ ಉಪಕಾರ ಸಾಲದೇ
ನಡೆಬೇಗ ಭೂಪತಿಯ ಅಪ್ಪಣೆಯ ಕೊಳ್ಳುತಲಿ
ತೆರಳುವುದು ಎನ್ನುತಲಿ ಮರುತಜನು ನುಡಿದಿಹನು ॥೧೫೨೮॥

ಎಮ್ಮಯಾ ಪ್ರಾಣಗಳ ಮಮತೆಯಾ ಮಾತೆಯನು
ಮುಪ್ಪಿನಲಿ ಬಳಲುತಿಹ ಮಹತಾಯಿ ಕುಂತಿಯನು
ಕಾಣುತಲಿ ಚರಣಕ್ಕೆ ಸಾಷ್ಟಾಂಗ ವೆರಗುತಲಿ
ತೆರಳೋಣ ಎಂದಿಹನು ಪವನಜನು ಧರ್ಮಜಗೆ ॥೧೫೨೯॥

ಯಮಸುತನು ಸೋದರರ ಸಹಿತವಲಿ ಐತಂದು
ಭೂಪತಿಯ ಚರಣದಲಿ ಸಾಷ್ಟಾಂಗವೆರಗುತಲಿ
ಎಮ್ಮನ್ನು ಹರಸುತಲಿ ಬೀಳ್ಕೊಡುವುದೆನ್ನುತಲಿ
ಧರ್ಮಜನು ನುಡಿದಿಹನು ಧೃತರಾಷ್ಟ್ರ ಭೂಪತಿಗೆ ॥೧೫೩೦॥

ಮಕ್ಕಳೋಪಾದಿಯಲಿ ಇರುತಿರುವ ನಿಮ್ಮನ್ನು
ತೊರೆಯುತಲಿ ನಾನೆಂತು ಜೀವಿಪೆನು ಎನ್ನುತಲಿ
ಮೊಸಳೆಯಾ ಕಣ್ಣೀರ ಸುರಿಸಿದನು ಧೃತರಾಷ್ಟ್ರ
ಕಪಟಿಗಳ ಹೃದಯವನು ಆ ಶಿವನೆ ಬಲ್ಲವನು ॥೧೫೩೧॥

**ಧರ್ಮಜನು ಸೋದರರು ದ್ರೌಪದಿಯು ಐತಂದು ।**
**ಕುಂತಿಯಾ ಚರಣಕ್ಕೆ ಸಾಷ್ಟಾಂಗವೆರಗಿದರು ॥**

ಯಮಸೂನು ಸತಿಸಹಿತ ಸೋದರರನೊಡಗೂಡಿ
ಕುಂತಿಯಾ ಬಳಿಬಂದು ಸಾಷ್ಟಾಂಗವೆರಗುತಿರೆ
ದುಃಖದಾ ಕಡಲುಕ್ಕಿ ಹರಿಯುವದೊ ಎಂಬಂತೆ
ಕಂಬನಿಯ ಧಾರೆಯನು ಸುರಿಸಿದಳು ಆ ಕುಂತಿ ॥೧೫೩೨॥

ಎನ್ನಯಾ ಕಂದಗಳೆ ಕೌರವನ ದೆಸೆಯಿಂದ
ನಿಮಗಿಂದು ಈ ಪರಿಯ ಕಷ್ಟವದು ಬಂದಿಹುದು
ಹದಿಮೂರು ವರುಷಗಳ ಪರ್ಯಂತ ಕಾನನದಿ
ನೀವೆಂತು ವನವಾಸ ಭೋಗಿಪಿರಿ ಎಂದಿಹಳು ॥೧೫೩೩॥

ಆ ಕಾಲ ಪರ್ಯಂತ ಜೀವಿಸುತ ನಾನಿರ್ದು
ನಿಮ್ಮಯಾ ಮುಖಗಳನು ಮತ್ತೆ ನಾ ಕಾಣುವೆನೆ
ಎನ್ನಪತಿ ಪಾಂಡುನೃಪ ಬದುಕಿರ್ದೊಡೀ ಸಮಯ
ಈ ದುಃಖ ಸಂಭವಿಸುತಿರಲಿಲ್ಲವೆಂದಿಹಳು ॥೧೫೩೪॥

ಪೂರ್ವದಾ ಜನ್ಮದಲಿ ತಾಯಿಯನು ಮಕ್ಕಳನು
ಅಗಲಿಸಿದ ಪಾಪದಾ ಕಾರಣದಿ ನಾನೀಗ
ಮಕ್ಕಳನು ಅಗಲುತಲಿ ದುಃಖವನು ಭೋಗಿಪುದು
ಬಂದಿಹುದು ಎನ್ನುತಲಿ ದೃಗುಜಲವ ಪಿಡಿದಿಹಳು ॥೧೫೩೫॥

ಹೇ ಮಗಳೆ ದ್ರೌಪದಿಯೆ ಪಾಂಡವರ ಕೈಪಿಡಿದು
ಕಷ್ಟವನು ಭೋಗಿಸಲು ಸೊಸೆಯಾಗಿ ಬಂದಿರುವೆ
ಕಾನನದಿ ಕಲ್ಲನ್ನು ಮುಳ್ಳನ್ನು ತುಳಿಯುತಲಿ
ನೀನೆಂತು ವನವಾಸ ಭೋಗಿಸುವೆ ಎಂದಿಹಳು ॥೧೫೩೬॥

ಮೂಲೋಕ ಜಯಿಸುವಾ ವಿಕ್ರಮದ ಸಾಹಸದ
ಐವರೂ ಗಂಡಂದಿರೆನ್ನಯಾ ಜೊತೆಯಲ್ಲಿ
ಇರುತಿರಲು ಕೊದಲೆಳೆ ಕೊಂಕದದು ಮಿಸುಕದದು
ಎನ್ನುತಲಿ ದ್ರೌಪದಿಯು ನುಡಿದಿಹಳು ಕುಂತಿಯಲಿ ॥೧೫೩೭॥

ಮಕ್ಕಳೇ ಕಡುಹೀನ ದುರ್ಭಾಗ್ಯೆ ನಾನಿಹೆನು
ಮುನ್ನಿನಲಿ ಪತಿಯನ್ನು ಕಳಕೊಂಡು ನಿಮ್ಮನ್ನು
ನೋಡುತಲಿ ಜೀವಿಸುತ ಇರುತಿರ್ದ ನನಗಿಂದು
ಅಗಲುತಲಿ ಜೀವಿಪುದು ಬಂದಿಹುದು ಎನ್ನುತಲಿ ॥೧೪೩೮॥

ಕಣ್ಣುಗಳ ಎರಡರಲಿ ಕಣ್ಣೀರ ಸುರಿಸುತಲಿ
ಘೋರತರ ಸ್ವರದಲ್ಲಿ ರೋದನವಗೈಯ್ಯುತಿರೆ
ಅಳಬೇಡ ಹೇ ತಾಯಿ ನಿನ್ನಯಾ ರೋದನಕೆ
ಎಮ್ಮೆದೆಯು ಬಿರಿಯುವದು ಎಂದಿಹರು ಪಾಂಡವರು ॥೧೫೩೯॥

**ವನವಾಸ ಕಳೆಯುತಲಿ ಕೌರವರ ವಧಿಸುತಲಿ ।**
**ಸಿಂಹಾಸನೇರುವೆವು ಎಂದಿಹರು ಪಾಂಡವರು ॥**

ಹದಿಮೂರು ವರುಷಗಳ ವನವಾಸ ಕಳೆಯುತಲಿ
ಮರಳುತಲಿ ನಿನ್ನಯಾ ಚರಣಕ್ಕೆ ಎರಗುತಲಿ
ಕೌರವರ ಸಂಹರಿಸಿ ಸಿಂಹಾಸನೇರುವೆವು
ಚಿಂತೆಯನು ಮಾಡದಿರು ಎಂದಿಹರು ಪಾಂಡವರು ॥೧೫೪೦॥

ನೀ ಸುರಿವ ಕಂಬನಿಗೆ ನೂರ್ಮಡಿಯು ಮಿಗಿಲಾಗಿ
ಗಾಂಧಾರಿ ದೇವಿಯಾ ಕಣ್ಣೀರ ಹೊಳೆಯನ್ನು
ಗಜಪುರದ ಬೀದಿಯಲಿ ಹರಸುವೆವು ಖಂಡಿತದಿ
ಎಮ್ಮನ್ನು ಹರಸುತಲಿ ಬೀಳ್ಕೊಡುವುದೆಂದಿಹರು ॥೧೫೪೧॥

ಹೇ ಸುತರೆ ನಿಮ್ಮನ್ನು ದೇವರೇ ರಕ್ಷಿಸಲಿ
ಆಪತ್ತು ಅಡಸಿದೊಡೆ ನಿಮ್ಮಯಾ ಮಾವನನು
ದ್ವಾರಕಾಧೀಶನನ ಕೃಷ್ಣನನ ನೆನೆಯುವುದು
ನಿಮಗೆಲ್ಲ ಶುಭವಾಗಲೆನ್ನುತಲಿ ಹರಸಿದಳು ॥೧೫೪೨॥

ಚಿಂತೆಯನು ಮಾಡದಿರು ಹೇ ಕುಂತಿದೇವಿಯೇ
ನಿನ್ನಯಾ ಸುತರುಗಳು ಕೌರವರ ವಧಿಸುತಲಿ
ಗಜಪುರದ ಸಿಂಹಾಸನೇರುವರು ಖಂಡಿತದಿ
ಎನ್ನುತಲಿ ಕುಲಗುರುವು ವರಧೌಮ್ಯ ನುಡಿದಿಹನು ॥೧೫೪೩॥

ಬಳಿಕಲಾ ಪಾಂಡವರು ವೃದ್ಧಳಾ ಕುಂತಿಯನು
ವಿದುರನಾ ಮನೆಯೊಳಗೆ ಇರಿಸುತಲಿ ವಿದುರಂಗೆ
ವನವಾಸ ಕಳೆಯುತಲಿ ನಾವು ಬಹ ಪರ್ಯಂತ
ಕುಂತಿಯನು ಸಲಹುವುದು ಎನ್ನುತಲಿ ನುಡಿದಿಹರು ॥೧೫೪೪॥

**ಮೂಲೋಕ ಗಂಡಂದಿರೆಂದೆನಿಸುತಿಹ ಪಾಂಡವರು।**
**ಕಾನನಕೆ ನಡೆದಿಹರು ನರಯಣನ ನೆನೆಯುತಲಿ ॥**

ಗಜತುರಗ ರಥಗಳನು ಶಸ್ತ್ರಾಸ್ತ್ರ ಸೈನ್ಯವನು
ಭಂಡಾರ ಸಹಿತದಲಿ ವರಇಂದ್ರಪ್ರಸ್ಥದಾ
ರಾಜ್ಯವನು ಕೌರವನಿಗೊಪ್ಪಿಸುತ ಧರ್ಮಜನು
ಐವರಾಮೇಳದಲಿ ಹೊರಟಿಹನು ಕಾನನಕೆ ॥೧೫೪೫॥

ಅರಮನೆಯೊಳಂಧನೃಪ ಕೌರವರನುಳಿಯುತಲಿ
ಗಾಂಗೇಯ ಗುರುಕೃಪರು ವರವಿದುರ ಸೃಂಜಯರು
ಸಕಲರೂ ಪುರಜನರು ತಂಡೋಪತಂಡದಲಿ
ಐತಂದು ಧರ್ಮಜನ ಬೆನ್ನಿನಲಿ ನಡೆದಿಹರು ॥೧೫೪೬॥

ಆ ರಾಜಪಥದೊಳಗೆ ಪಾಂಡವರು ಬರುತಲಿರೆ
ಎಡಬಲದಿ ಸೌಧದಲಿ ಮನೆಮನೆಯ ಮೇಲಿನಲಿ
ಎಲ್ಲೆಡೆಗೆ ಲಕ್ಷೋಪಲಕ್ಷಜನ ನಿಲ್ಲುತಲಿ
ಶೋಕಿಸುತ ಕಂಬನಿಯ ಕೋಡಿಯನು ಹರಸಿದರು ॥೧೫೪೭॥

ಮುಂದಿನಲಿ ಅರ್ಜುನನು ಬೆನ್ನಿನಲಿ ಧರ್ಮಜನು
ಆತನಾ ಹಿಂದಿನಲಿ ಆ ನಕುಲ ಸಹದೇವ
ಅವರುಗಳ ಹಿಂದುಗಡೆ ಆವರರಸಿ ದ್ರೌಪದಿಯು
ಕೊನೆಯಲ್ಲಿ ಕಲಿಭೀಮ ಎಂದಿಹರು ಪುರಜನರು ॥೧೬೪೮॥

ಹರಿಹರವಿರಂಚಿಗಳ ಸಾಮರ್ಥ್ಯವುಳ್ಳವರ್ಗೆ
ಮೂಲೋಕ ಗಂಡಂದಿರೆಂದೆನಿಸುತಿಹ ವೀರರಿಗೆ
ಈ ಪರಿಯ ವಿಧಿಯಾಯ್ತೆ ಹಣೆಬರಹ ಬರೆದಿರುವ
ಬ್ರಹ್ಮಂಗೆ ಬುದ್ಧಿಯದು ಇಲ್ಲೆಂದು ನುಡಿದಿಹರು ॥೧೫೪೯॥

ಊರಹೊರ ಅಂಚಿನಲಿ ಕೊಳದಬಳಿ ಬರುತಿರಲು
ಗಾಂಗೇಯ ಗುರುಕೃಪರು ವರವಿದುರ ಬಾಂಧವರು
ಪಾಂಡವರ ಹರಸುತಲಿ ದುಗುಡದಲಿ ಬೀಳ್ಕೊಂಡು
ಮರುಗುತಲಿ ತಮ್ಮಯಾ ಭವನಗಳ ಸೇರಿದರು ॥೧೫೫೦॥

ಅಗಣಿತದ ಜನಸ್ತೋಮ ನೋಡುತಲಿ ಧರ್ಮಜನು
ನಿಮ್ಮಯಾ ನಂಬುಗೆಗೆ ಕೃತಜ್ಞನಾನಿಹೆನು
ಈಗಲೀ ಕೌರವನು ನಿಮ್ಮಯಾ ಅರಸನಿಹ
ನೀವುಗಳು ಮನೆಗಳಿಗೆ ತೆರಳುವುದು ಎಂದಿಹನು ॥೧೫೫೧॥

ಕೆಲಕೆಲರು ತೆರಳುತಿರೆ ಇನ್ನುಳಿದ ಹಲವುಜನ
ನೀ ನಿರದ ಪುರವೆಮಗೆ ಮಸಣದಾ ಸಮವಿಹುದು
ದುರುಳರಾ ಕೌರವರ ಸಹವಾಸ ಸಾಕೆಮಗೆ
ನಿನ್ನಯಾ ಜೊತೆಯಲ್ಲಿ ಬಹೆವೆಂದು ನಡೆದಿಹರು ॥೧೫೫೨॥

ನಿನ್ನನ್ನು ಕೇಳದೆಯೆ ದ್ಯೂತವನು ಆಡುತಿರೆ
ಈ ಪರಿಯ ಕಷ್ಟವದು ಒದಗಿಹುದು ಎನ್ನುತಜ
ದ್ವಾರಕಾಧೀಶನನ ಶ್ರೀಕೃಷ್ಣ ನರಯಣನ
ಧರ್ಮಜನು ಮನದೊಳಗೆ ನೆನೆಯುತಲಿ ನಡೆದಿಹನು ॥೧೫೫೩॥

ಇತಿ ಶ್ರೀ ಜೋಶಿಕುಲ ಸಂಭೂತ ವಿರುಪಾಕ್ಷಸುತ
ಕವಿವರ ಲಕ್ಷ್ಮಣ ಕುಮಾರವ್ಯಾಸ ಕುಮಾರ ವಿರಚಿತಮಪ್ಪ
ಶ್ರೀಕೃಷ್ಣ ಕರುಣಾಮೃತ ಪಾನಪುಷ್ಟ ಲಲಿತಪದ ವಿನ್ಯಾಸ ವಿಲಾಸ ವಿಸ್ತರದ
ಸರಸ ಚೌಪದಿ ನಿಕಾಯಮಪ್ಪ ಶ್ರೀ ಮನ್ಮಹಾಭಾರತ ಕಾವ್ಯದೊಳ್
-ಸಭಾಪರ್ವಂ ಸಮಾಪ್ತವಾದುದು-

---

# ರಚನಕಾರರನ್ನು ಕುರಿತು



**ಶ್ರೀ ಲಕ್ಷ್ಮಣ ವಿರೂಪಾಕ್ಷ ಜೋಶಿ,** ಇವರು ಹುಬ್ಬಳ್ಳಿಯಲ್ಲಿ ಜನಿಸಿದವರು. ಕನ್ನಡ ಮತ್ತು ಸಂಸ್ಕೃತವನ್ನು ಬಲ್ಲವರು. ಬಾಲ್ಯದಿಂದಲೂ ಸಾಹಿತ್ಯದಲ್ಲಿ ಅಭಿರುಚಿಯುಳ್ಳವರು. ವಿಶೇಷವಾಗಿ ಹಳಗನ್ನಡ ಕಾವ್ಯಗಳಲ್ಲಿ ಆಸಕ್ತಿಯುಳ್ಳವರು. ಇವರು 'ಕಾವ್ಯ ರಾಮಾಯಣ' ಎಂಬ ೬೨೦೦ ಪದ್ಯಗಳ ಮಹಾಕಾವ್ಯವನ್ನು ಬರೆದು ೩ ಬೃಹತ್ ಸಂಪುಟಗಳಲ್ಲಿ ಪ್ರಕಟಿಸಿದ್ದಾರೆ. ಮೊದಲನೆಯ ಭಾಗಕ್ಕೆ ಹಿರಿಯ ಕವಿಗಳಾದ ಶ್ರೀ ಪು. ತಿ. ನರಸಿಂಹಾಚಾರ ಮತ್ತು ೨ ನೆಯ ೩ ನೆಯ ಭಾಗಗಳಿಗೆ ಖ್ಯಾತ ಸಾಹಿತಿಗಳಾದ. ಶ್ರೀ ಎನ್ಕೆ ಕುಲಕರ್ಣಿ ಅವರು ಮುನ್ನುಡಿಗಳನ್ನು ಬರೆದು ಮುಕ್ತಕಂಠದಿಂದ ಪ್ರಶಂಸಿಸಿದ್ದಾರೆ. ಹಿರಿಯ ಸಾಹಿತಿಗಳಾದ ಡಾ॥ ವಿ. ಕೃ. ಗೋಕಾಕ, ಡಾ॥ ಮುಗಳಿ, ಪ್ರೊ. ಚೆನ್ನವೀರ ಕಣವಿ. ಪ್ರೊ. ಕೆ.ಎಸ್.ನಾರಾಯಣಾಚಾರ್ ಮೊದಲಾದ ವಿದ್ವಾಂಸರಿಂದ ಕಾವ್ಯರಾಮಾಯಣವು ಪ್ರಶಂಸಿಸಲ್ಪಟ್ಟಿದೆ. ಇವರು ೮ ಉಪನಿಷತ್ತುಗಳನ್ನು ಈಶ, ಕೇನ, ಕಠ, ಪ್ರಶ್ನ, ಐತರೇಯ, ಮುಂಡಕ, ಮಾಂಡುಕ್ಯ ಮತ್ತು ಶ್ವೇತಾಶ್ವತರಗಳನ್ನು ಕನ್ನಡದಲ್ಲಿ ಪದ್ಯರೂಪದಲ್ಲಿ ಅನುವಾದ ಮಾಡಿ 'ಅಷ್ಟೋಪನಿಷತ್ತುಗಳು' ಎಂಬ ಗ್ರಂಥವನ್ನು ಪ್ರಕಟಿಸಿದ್ದಾರೆ ಮತ್ತು ಕೆಲವು ಅಧ್ಯಾತ್ಮಿಕ ಖಂಡ ಕಾವ್ಯಗಳನ್ನು ಸಂಸ್ಕೃತದಿಂದ ಕನ್ನಡಕ್ಕೆ ಅನುವಾದ ಮಾಡಿದ್ದಾರೆ.

ಈಗ ಇವರು 'ಶ್ರೀಮನ್ಮಹಾಭಾರತ' ವನ್ನು ಪದ್ಯರೂಪದಲ್ಲಿ ಬರೆಯುತ್ತಿದ್ದಾರೆ, ಇವರು ಬರೆದ ಆದಿಪರ್ವದ ೧೬೦೦ ಪದ್ಯಗಳನ್ನು ಮತ್ತು ಸಭಾಪರ್ವದ ೧೫೦೦ ಪದ್ಯಗಳನ್ನು ಈ ಗ್ರಂಥದಲ್ಲಿ ಪ್ರಕಟಿಸಲಾಗಿದೆ, ಪಂಡಿತರಿಗೂ ಜನಸಾಮಾನ್ಯರಿಗೂ ಅರ್ಥವಾಗುವಂತೆ ಬಹು ಸರಳವಾದ, ಲಲಿತವಾದ, ಚಿತ್ತಾಕರ್ಷಕವಾದ ಶೈಲಿಯಲ್ಲಿ ಬರೆಯಲ್ಪಟ್ಟಿದೆ. ಯಾವ ಶಬ್ದಕೋಶದ ಸಹಾಯವಿಲ್ಲದೆ ಓದಬಹುದಾಗಿದೆ. ಇದಕ್ಕೂ ಸಹ ಸುಪ್ರಸಿದ್ಧ ಸಾಹಿತಿಗಳಾದ ಶ್ರೀ ಎನ್ಕೆ ಕುಲಕರ್ಣಿಯವರು ಮುನ್ನುಡಿಯನ್ನು ಬರೆದು ಪ್ರಶಂಸಿಸಿದ್ದಾರೆ. ಇದು ಕನ್ನಡ ಕಾವ್ಯಪ್ರಪಂಚಕ್ಕೆ ಒಂದು ಅತ್ಯಮೂಲ್ಯವಾದ ಕಾಣಿಕೆ ಎಂದು ಹೇಳಬಹುದು, ಕನ್ನಡದ ಮಹಾಜನರು, 'ಕಾವ್ಯ ರಾಮಾಯಣ' ವನ್ನು ಓದಿ ಆನಂದಿಸಿದಂತೆಯೇ ಈ 'ಶ್ರೀಮನ್ಮಹಾಭಾರತ ಕಾವ್ಯ' ವನ್ನು ಓದಿ ದೈವಿಕ ಆನಂದವನ್ನು ಪಡೆಯಲಿ ಎಂದು ಹಾರೈಸುತ್ತೇವೆ.